# ಕನ್ನಡ ಸಾಹಿತ್ಯ ದರ್ಶನ



ಎಸ್. ಟಿ. ಶ್ರೀನಿವಾಸರಾವ್

# ಕನ್ನಡ ಸಾಹಿತಿ ದರ್ಶನ

(ಪ್ರಾಚೀನ, ಅರ್ವಾಚೀನ ಕನ್ನಡ ಸಾಹಿತಿಗಳ ಕಿರುಪರಿಚಯ)

ಎಸ್. ವಿ. ಶ್ರೀನಿವಾಸರಾವ್, ಎಂ. ಎ.

ಪ್ರಕಾಶಕರು
ಸೌರಭ ಪ್ರಕಾಶನ
430, 17ನೇ ಮುಖ್ಯರಸ್ತೆ,
ಶ್ರೀನಗರ, ಬೆಂಗಳೂರು-50

"KANNADA SAHITHI DARSHANA" A collection of brief sketches of Kannada writers by S. V. Srinivasa Rao. Published by Sowrabha Prakashana, No. 430, 17th Main, Srinagar, Bangalore-560 050 and Printed at Sri Lakshmi Printers, Kathariguppe, Banashaṅkari 3rd Stage, Bangalore-560 085. Pages : 480+xxiv, Copies : 1000. First Edition : 1989.



ಪ್ರಥಮ ಮುದ್ರಣ : 1989

ಸಾದಾಪ್ರತಿ ರೂ. 70–00
ಉತ್ತಮಪ್ರತಿ ರೂ. 85–00

ಮುದ್ರಕರು :
ಶ್ರೀಲಕ್ಷ್ಮೀ ಪ್ರಿಂಟರ್ಸ್
ಕತ್ತರಗುಪ್ಪೆ, ಬನಶಂಕರಿ 3ನೇ ಹಂತ
ಬೆಂಗಳೂರು-560 085

# ಮುನ್ನುಡಿ

ನನ್ನ ತರುಣಮಿತ್ರರಾದ ಶ್ರೀ ಪೆಸ್.ವಿ. ಶ್ರೀನಿವಾಸರಾಯರು ಕನ್ನಡ ಸಾಹಿತಿ ದರ್ಶನದಲ್ಲಿ ಮಾಡಿರುವ ಕೆಲಸ ಮೇಲುನೋಟಕ್ಕೆ ಸುಲಭವಾಗಿ ಕಾಣುವಂತಹದು. ಆದರೆ ಅಸಾಧಾರಣ ಶ್ರದ್ಧೆ, ಶ್ರಮಗಳಿಲ್ಲದೆ ಇಂತಹ ಕೆಲಸ ಸಂಪೂರ್ಣವಾಗಲಾರದು. ನೂರಾರು ವರ್ಷಗಳ ಹಿಂದಿನ ಸಾಹಿತಿಗಳ ವಿಷಯವಿರಲಿ, ನಿನ್ನೆ, ಮೊನ್ನೆಯ ಸಾಹಿತಿಗಳನ್ನು ಕುರಿತು ಖಚಿತವಾಗಿ ವಿವರಗಳನ್ನು ಸಂಗ್ರಹಿಸುವುದೂ ನಮ್ಮ ದೇಶದಲ್ಲಿ ಕಷ್ಟದ ವಿಷಯವೇ. ಶ್ರೀ ಶ್ರೀನಿವಾಸರಾಯರು ಇಷ್ಟೊಂದು ವಿಷಯವನ್ನು ಸಂಗ್ರಹಿಸಿ ಅದಕ್ಕೊಂದು ಆಕರ್ಷಕ ರೂಪಕೊಟ್ಟು ಮಕ್ಕಳಿಗೆ ಒದಗಿಸಿಕೊಟ್ಟಿದ್ದಾರೆ. ಸಾಹಿತ್ಯ ಚರಿತ್ರೆಯ ಓದು ಸಾಹಿತ್ಯದ ಓದಲ್ಲ, ನಿಜ. ಆದರೆ ಓದಬೇಕೆನಿಸಿದಾಗ ಏನ್ನನ್ನು ಓದಬೇಕು ಎಂದು, ಅದನ್ನು ಬರೆದವರು ಯಾರು ? ಎಂದು ಮಕ್ಕಳು ಸಹಜವಾಗಿ ಪ್ರಶ್ನಿಸುತ್ತಾರೆ. ಶ್ರೀ ಶ್ರೀನಿವಾಸರಾಯರ ಈ ಪುಸ್ತಕ ಮಕ್ಕಳಿಗೆ, ಅವರ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದ ದೊಡ್ಡವರಿಗೆ ತುಂಬಾ ಉಪಯುಕ್ತ ಎಂದು ನಾನು ಭಾವಿಸಿದ್ದೇನೆ. ಮಕ್ಕಳನ್ನು ಬೆದರಿಸುವ ಗಾತ್ರದ ಪುಸ್ತಕವನ್ನು ರಚಿಸದೆ, ನೂರಾರು ಮಂದಿ ಬರಹಗಾರರ ಪರಿಚಯವನ್ನು ಮಕ್ಕಳಿಗೆ ಮಾಡಿಕೊಡುವಾಗ ಸಹಜವಾಗಿ ಲೇಖಕರು ಖಚಿತವಾಗಿ ಬೆಲೆಕಟ್ಟುವ ಅಥವಾ ಕಡೆಯ ತೀರ್ಮಾನಗಳನ್ನು ಮಾಡುವ ಗೋಜಿಗೆ ಹೋಗುವಂತಿಲ್ಲ. ಕನ್ನಡವನ್ನು ಶ್ರೀಮಂತಗೊಳಿಸಿರುವವರನ್ನು ಸ್ಪಷ್ಟವಾದ ಕೆಲವು ವಿಭಾಗಗಳ ಚೌಕಟ್ಟಿನಲ್ಲಿ ತಂದಿರುವುದು ಒಂದು ಬಹು ಉಪಯುಕ್ತ ಹಿನ್ನಲೆಯನ್ನು ಒದಗಿಸುತ್ತದೆ. ಸಾಮಾನ್ಯವಾಗಿ ಈ ಕ್ಷೇತ್ರದಲ್ಲಿನ ಸಂದರ್ಭಗ್ರಂಥಗಳು ಕೊಡುವ ಮಾಹಿತಿಯಷ್ಟೇ ಅಲ್ಲದೆ ಸಾಹಿತಿಗಳ ಪರಿಚಯ ಇಲ್ಲಿ ಲಭ್ಯವಾಗುತ್ತದೆ. ಅಕಾರಾದಿಯನ್ನು ಕೊಟ್ಟಿರುವುದು ಪುಸ್ತಕದ ಉಪಯೋಗವನ್ನು ಸುಲಭಗೊಳಿಸಿದೆ. ಲೇಖಕರು ಯೋಜನಾಬದ್ಧವಾಗಿ ಕೃತಿಯನ್ನು ಎಲ್ಲ ರೀತಿಗಳಲ್ಲಿ ಉಪಯುಕ್ತಮಾಡಿದ್ದಾರೆ. ಒಬ್ಬರೇ ಲೇಖಕರು ಇಷ್ಟೊಂದು ಕೆಲಸ ಸಾಧಿಸರೆಂಬುದು ಅವರ ಶ್ರದ್ಧೆ, ಶ್ರಮ, ಸಾಮಾರ್ಥ್ಯಗಳಿಗೆ ಸಾಕ್ಷಿ. ಕನ್ನಡ ಸಾಹಿತ್ಯದ ದರ್ಶನವೂ ಇಲ್ಲಿದೆ. ಎಳೆಯರೂ ದೊಡ್ಡವರು ಮತ್ತೆ ಮತ್ತೆ ಬಳಸುವ ಪುಸ್ತಕ ಇದು ಎಂದು ನನ್ನ ನಂಬಿಕೆ. ಶ್ರೀ ಶ್ರೀನಿವಾಸರಾಯರಿಗೆ ಕನ್ನಡ ಓದುಗರ ಅಭಿನಂದನೆ ಸಲ್ಲಬೇಕು.

ಎಲ್. ಎಸ್. ಶೇಷಗಿರಿರಾವ್

ಜ್ಯೋತಿ, 267
ಮೂರನೆಯ ಬ್ಲಾಕ್,
ಜಯನಗರ, ಬೆಂಗಳೂರು.

## ಅರಿಕೆ.

'ಕನ್ನಡ ಸಾಹಿತಿ ದರ್ಶನ' ಒಂದು ದಶಕದ ನನ್ನ ಅವಿಶ್ರಾಂತ ಶ್ರಮದ ಫಲ. ಈ ಕೃತಿಯನ್ನು ತಮ್ಮ ಮುಂದಿಡಲು ನನಗೆ ಬಹಳ ಸಂತೋಷವಾಗುತ್ತಿದೆ. ಇದರಲ್ಲಿ ಕನ್ನಡ ಸಾಹಿತ್ಯ ಸಂಪನ್ನಗೊಳಿಸಿರುವ ಹಿರಿಯ, ಕಿರಿಯ ಬಹಳಷ್ಟು ಸಾಹಿತಿಗಳ ದರ್ಶನ ಮಾಡಿಸಲು ಪ್ರಯತ್ನಿಸಿದ್ದೇನೆ. ಹಲವೆಡೆ ಈ ಸಾಹಿತಿಗಳ ಕೃತಿಗಳ ಕಿಂಚಿತ್ತು ಪರಿಚಯ ಸಹ ಮಾಡಿಸಿದ್ದೇನೆ. ಅಂದರೆ ಈ ಮೂಲಕ ನಾನೊಂದು ಸಾಹಿತ್ಯ ಚರಿತ್ರೆಯನ್ನು ಬರೆದು ತಮ್ಮ ಮುಂದಿಡುತ್ತಿದ್ದೇನೆಂದು ಭಾವಿಸಬೇಕಾಗಿಲ್ಲ. ಇದು ಖಂಡಿತ ಸಾಹಿತ್ಯ ಚರಿತ್ರೆಯಲ್ಲ. ಹಿಂದಿನ ಸಾಹಿತ್ಯ ಚರಿತ್ರೆಕಾರರು ಹಾಕಿಕೊಂಡ ಅಥವಾ ಅನುಸರಿಸಿದ ಯಾವ ನಿಯಮಗಳನ್ನೂ ನಾನು ಅನುಸರಿಸ ಹೋಗಿಲ್ಲ. ಸಾಹಿತಿಗಳ ದರ್ಶನ ಮಾಡಿಸುವ ಈ ಪ್ರಯತ್ನ ಒಂದು ವಿಧದಲ್ಲಿ ಹೊಸದು. ಇದಕ್ಕೆ ನನ್ನದೇ ಆದ ಕ್ರಮವನ್ನು ಅನುಸರಿಸಿದ್ದೇನೆ. ಕನ್ನಡದ ಎಲ್ಲ ಸಾಹಿತಿಗಳನ್ನು ಅವರು ರಚಿಸಿರುವ ಮುಖ್ಯಕೃತಿಗಳ ಆಧಾರದ ಮೇಲೆ ವಿಂಗಡಣೆ ಮಾಡಿಕೊಂಡು ಪರಿಚಯಿಸಿದ್ದೇನೆ. ಇದಕ್ಕಾಗಿ ನಾನು ಮಾಡಿಕೊಂಡಿರುವ ಪ್ರಮುಖ ವಿಭಾಗಗಳು. 1. ಪೌರಾಣಿಕ ಮತ್ತು ಧಾರ್ಮಿಕ ಸಾಹಿತ್ಯ ರಚನಕಾರರು (ಮಹಾಭಾರತ, ರಾಮಾಯಣ, ವೈದಿಕಪುರಾಣ, ಜೈನಪುರಾಣ, ವೀರಶೈವಪುರಾಣ) 2. ಭಕ್ತಕವಿಗಳು (ಶಿವಶರಣರು, ಹರಿದಾಸರು) 3. ಶಾಸ್ತ್ರೀಯ ಸಾಹಿತ್ಯ ರಚನಕಾರರು (ಲಕ್ಷಣಶಾಸ್ತ್ರ, ಸಂಕೀರ್ಣಗ್ರಂಥ, ಶಾಸನಶಾಸ್ತ್ರ) 4. ಕನ್ನಡವನ್ನು ಉದ್ಧರಿಸಿದ ಪುಣ್ಯಪುರುಷರು (ಹಳೆಯ ತಲೆಮಾರಿನ ದಿಗ್ಗಜರುಗಳು) 5. ಹೊಸಗನ್ನಡ ಕಟ್ಟಲು ಶ್ರಮಿಸಿದ ಬಹುಮುಖ ಪ್ರತಿಭಾವಂತರು (ಕವಿ, ಕತೆ/ಕಾದಂಬರಿಕಾರ, ನಾಟಕಕಾರ, ವಿಮರ್ಶೆ/ಸಂಪಾದನೆ/ಸಂಶೋಧನೆ ನಿಪುಣರು, ಪತ್ರಿಕೋದ್ಯಮಿ, ಶಿಶುಸಾಹಿತ್ಯ ರಚನಕಾರ, ಪ್ರಬಂಧಕಾರ, ಪ್ರವಾಸ ರಚನಕಾರ, ಸಂಕೀರ್ಣವಿಭಾಗ ಸಂಪನ್ನ ಗೊಳಿಸಿರುವವರು)

ಈ ವಿಭಾಗಗಳಡಿಯಲ್ಲಿ ಸುಮಾರು 1500 ಜನರನ್ನು ಪರಿಚಯಿಸಲು ಪ್ರಯತ್ನಿಸಿದ್ದೇನೆ. ನಿರೂಪಣೆ ಪ್ರವಚನ/ಚರ್ಚೆಯ ಧಾಟಿಯಲ್ಲಿರುವುದರಿಂದ ಸಾಹಿತಿಗಳ ಜನ್ಮವಿವರ ಹಾಗೂ ಪ್ರಸಕ್ತ ವಿಷಯಕ್ಕೆ ಸಂಬಂಧಪಡದ ಇತರ ವಿಷಯಗಳನ್ನು ಅಡಿಟಿಪ್ಪಣಿ (ಫುಟ್‌ನೋಟ್) ಯಲ್ಲಿ ಕೊಟ್ಟಿದ್ದೇನೆ.

ಈ ಕೃತಿಯ ಮುಖ್ಯಉದ್ದೇಶ ಮಕ್ಕಳು ಹಾಗೂ ವಿದ್ಯಾರ್ಥಿಗಳಿಗೆ ಸಾಹಿತಿ ಸಮೂಹದ ಒಂದು ವಿಹಂಗಮ ದರ್ಶನ ಮಾಡಿಸುವುದೇ ಆಗಿದೆ. ಕೃತಿಗಳ

ಬಗ್ಗೆಯಾಗಲಿ, ಕರ್ತೃಗಳ ಕಾಲ, ದೇಶಗಳ ಬಗ್ಗೆಯಾಗಲೀ ನಾನು ಇಲ್ಲಿ ವಿಮರ್ಶೆ ಮಾಡಿರುವುದಿಲ್ಲ.

ಈ ಕೃತಿಯಲ್ಲಿ ಬರುವ ಇಷ್ಟು ಅಧಿಕ ಸಂಖ್ಯೆಯ ಸಾಹಿತಿಗಳ ವಿವರ ಹಾಗೂ ಕೃತಿಗಳ ವಿವರಗಳನ್ನು ಸಂಗ್ರಹಿಸಲು ನಾನು ಪಟ್ಟಿರುವ ಶ್ರಮ ಅವರ್ಣನೀಯ. ಈ ಕೃತಿ ಓದಿದರೆ ತಮಗೇ ಅದು ವೇದ್ಯವಾಗುತ್ತದೆ. ಇದಕ್ಕಾಗಿ ನಾನು ಸಾವಿರಾರು ಪುಸ್ತಕಗಳನ್ನು ಅವಲೋಕಿಸಿದ್ದೇನೆ. ಟಿಪ್ಪಣಿ ಮಾಡಿಕೊಂಡಿದ್ದೇನೆ. ಹಲವಾರು ಮಿತ್ರರುಗಳೊಡನೆ ಪರಾಮರ್ಶಿಸಿದ್ದೇನೆ. ನೂರಾರು ಜನರಿಗೆ ಪತ್ರಬರೆದು ವಿಷಯ ಸಂಗ್ರಹಿಸಲು ಹೆಣಗಿದ್ದೇನೆ. ಆದರೂ ವಿಷಯ ಸಂಗ್ರಹಣೆಯಲ್ಲಿ ನಾನು ಸಾಕಷ್ಟು ಯಶಸ್ಸುಗಳಿಸಿಲ್ಲ. ಈ ಅಸಮರ್ಥತೆಯನ್ನು ನಾನು ಒಪ್ಪಿಕೊಳ್ಳಲೇಬೇಕು. ನನ್ನ ಪತ್ರದ ಬೇಡಿಕೆಗೆ ಓಗೊಟ್ಟು ಇತ್ತೀಚಿನ ಸಾಹಿತಿಗಳು ಸಹಕರಿಸಿದ್ದರೆ ಇನ್ನಷ್ಟು ಜನರ ಮಾಹಿತಿಯನ್ನು ಕೊಡಲು ಸಾಧ್ಯವಾಗುತ್ತಿತ್ತು. ಈ ಕೊರತೆಯನ್ನು ಸಾಧ್ಯವಾದರೆ, ಈ ಕೃತಿಯ ಎರಡನೆ ಮುದ್ರಣ ಮುಂದೆ ನಾನೇ ತರುವಂತಾದರೆ ಅದರಲ್ಲಿ ಹೋಗಲಾಡಿಸಲು ಶ್ರಮಿಸುತ್ತೇನೆ. ಅಥವಾ ಇನ್ನೂ ಯಾರಾದರೂ ನಾನು ಬಿಟ್ಟಿರುವ ಕೆಲಸವನ್ನು ಮುಂದುವರಿಸಿ ಇದಕ್ಕೆ ಒಂದು ಪೂರ್ಣತೆಯನ್ನು ತಂದುಕೊಡಬಹುದು.

ಇಂತಹ ಕೃತಿರಚನೆ ನಿಜವಾಗಿ ಶ್ರಮದಾಯಕ. ನನ್ನಶ್ರಮದ ಫಲ ತಮ್ಮ ಮುಂದಿದೆ. ಅದರ ಮೌಲ್ಯ ನಿರ್ಣಾಯಕರು ತಾವು.

ಈ ಕೃತಿಯನ್ನು ಕೂಲಂಕಷವಾಗಿ ಓದಿ ಅಮೂಲ್ಯ ಸಲಹೆಗಳನ್ನಿತ್ತುದಲ್ಲದೆ ಎಲ್ಲ ರೀತಿಯ ಸಹಕಾರ ನೀಡಿ ಉಪಕರಿಸಿದ ಸನ್ಮಾನ್ಯರುಗಳಾದ ಪ್ರೊ॥ ಎಲ್.ಎಸ್. ಶೇಷಗಿರಿ ರಾವ್ ಹಾಗೂ ಡಾ॥ ಶ್ರೀನಿವಾಸ ಹಾವನೂರ್ ಅವರುಗಳ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸಾಲದು. ಅವರುಗಳಿಗೆ ನಾನು ಚಿರಋಣಿ. ಶ್ರೀ ಶೇಷಗಿರಿರಾಯರು ನನ್ನ ಮೇಲೆ ಅಭಿಮಾನವಿಟ್ಟು ಈ ಕೃತಿಗೆ 'ಮುನ್ನುಡಿ'ಯ ಕಳಸ ಇಟ್ಟಿದ್ದಾರೆ. ಇದಕ್ಕಾಗಿ ಅವರಿಗೆ ನನ್ನ ಹಾರ್ದಿಕ ವಿಶೇಷ ಕೃತಜ್ಞತೆಗಳು.

ವಿಷಯಸಂಗ್ರಹಣೆ, ರಚನೆ, ವಿನ್ಯಾಸ ಮುಂತಾದವುಗಳ ಬಗ್ಗೆ ಸೂಕ್ತ ಸಲಹೆಗಳನ್ನು ಕೃತಿರಚನೆಯುದ್ದಕ್ಕೂ ನೀಡುತ್ತಾ ಬಂದಿರುವ ಸನ್ಮಿತ್ರರುಗಳಾದ ಪ್ರೊ॥ ಹೆಚ್.ಆರ್. ದಾಸೇಗೌಡ, ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ, ಡಾ॥ ಹಂಪನಾ, ಡಾ॥ ಸೂರ್ಯನಾಥ ಕಾಮತ್, ಶ್ರೀಮತಿ ನಿರುಪಮಾ, ಪ್ರೊ॥ ಅ.ರಾ. ಮಿತ್ರ, ಪ್ರೊ॥ ಎಂ.ಹೆಚ್. ಕೃಷ್ಣಯ್ಯ, ಶ್ರೀ ಕೆ.ಆರ್. ಕಮಲೇಶ್ ('ಯುವ ಕರ್ನಾಟಕ' ಸಂಪಾದಕರು), ಶ್ರೀ ವೇಣುಗೋಪಾಲ್, (ಉಪನ್ಯಾಸಕರು ಕಾಳಿದಾಸ ಕಾಲೇಜು, ತುಮಕೂರು), ಅವರುಗಳಿಗೆ ನಾನು ತುಂಬಾ ಆಭಾರಿ.

ಗ್ರಂಥ ಇನ್ನೂ ರಚನೆಯ ಹಂತದಲ್ಲಿದ್ದಾಗಲೇ ಆಸಕ್ತಿಯಿಂದ ಓದಿ ಅಮೂಲ್ಯ ಅಭಿಪ್ರಾಯ ಸೂಚಿಸಿದ್ದ ದಿವಂಗತರುಗಳಾದ ಜಯತೀರ್ಥರಾಜಪುರೋಹಿತ, ಮಾ.ನ. ಚೌಡಪ್ಪ, ಹೆಚ್.ವಿ. ನಾರಾಯಣ್ ಹಾಗೂ ಹಲವಾರು ಸಾಹಿತಿಗಳ ಬಗ್ಗೆ ಮಾಹಿತಿ ನೀಡಿ ಉಪಕರಿಸಿದ್ದ ಟಿ. ಚಂದ್ರರಾಜಶೆಟ್ಟಿ ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಈ ಗ್ರಂಥವನ್ನು ಆಮೂಲಾಗ್ರವಾಗಿ ಅವಲೋಕಿಸಿ ಅಮೂಲ್ಯ ಅಭಿಪ್ರಾಯ ನೀಡುವ ಕೃಪೆ ಮಾಡಿರುವ ಸಾಹಿತ್ಯ ದಿಗ್ಗಜರುಗಳಾದ ಪೂಜ್ಯ ಶ್ರೀ ರಂ. ಶ್ರೀಮುಗಳಿ ತ. ಸು. ಶಾಮರಾವ್, ಡಾ॥ ಸಿದ್ಧಯ್ಯ ಪುರಾಣಿಕ್, ಡಾ॥ ದೇ. ಜ.ಗೌ, ಡಾ॥ ಸಿ.ಪಿ.ಕೆ., ಡಿ. ವೀರೇಂದ್ರ ಹೆಗ್ಗಡೆ, ಕರ್ನಾಟಕದ ಶಿಕ್ಷಣ ಸಚಿವರಾದ ಸನ್ಮಾನ್ಯ ಶ್ರೀ ಎಂ. ಚಂದ್ರಶೇಖರ್, ಪತ್ರಿಕಾ ಅಕಾಡೆಮಿ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ, ನಾಟಕ ಅಕಾಡೆಮಿ ಅಧ್ಯಕ್ಷರಾದ ಶ್ರೀ ಬಿ.ವಿ. ವೈಕುಂಠರಾಜು. ಪ್ರೊ॥ ಹೆಚ್.ಆರ್. ದಾಸೇಗೌಡ, ಅವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು.

ಕಥೆ ಕಾದಂಬರಿಗಳಿಗಾದರೆ ಪ್ರಕಾಶಕರು ದೊರೆಯುತ್ತಾರೆ. ಇಂತಹ ಸಾಹಿತ್ಯಿಕ ಕೃತಿ ಪ್ರಕಟಣೆಗೆ ಯಾರು ಮುಂದೆ ಬರಲಾರರು. ಆದ್ದರಿಂದ ನಾನೇ ಇದನ್ನು ಹೊರ ತರುವ ಸಾಹಸ ಮಾಡಬೇಕಾಗಿದೆ. ಇದುವರೆವಿಗೆ ಬಂದಿರುವ ಯಾವ ಸಾಹಿತ್ಯ ಚರಿತ್ರೆಯಲ್ಲಾಗಲಿ ಅಥವಾ ಸಂಪಾದಿತ ಮತ್ತಾವ ಸಂಕಲದನಲ್ಲೇ ಆಗಲಿ ಇಷ್ಟು ಸಂಖ್ಯೆಯಲ್ಲಿ ಸಾಹಿತಿಗಳ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಈ ಕೊರತೆ ನೀಗಲು ನನ್ನ ಈ ಕೃತಿ ಸ್ವಲ್ಪವಾದರೂ ನೆರವಾದರೆ ನನಗೆ ಸಮಾಧಾನ.

ಈ ಗ್ರಂಥ ರಚನೆಗೆ ನಾನು ಹಲವಾರು ಗ್ರಂಥಗಳಿಂದ ನೆರವು ಪಡೆದಿದ್ದೇನೆ. ಈ ಎಲ್ಲ ಗ್ರಂಥಕರ್ತರು, ಸಂಪಾದಕರುಗಳಿಗೆ ನನ್ನ ಕೃತಜ್ಞತಾ ಪೂರ್ವಕ ವಂದನೆಗಳು.

ಲೇಖಕರ ವರ್ಣಾನುಕ್ರಮಣಿಕೆ ನಿರ್ಮಿಸಿಕೊಟ್ಟಿದ್ದಲ್ಲದೆ ಈ ಕೃತಿಯ ಪ್ರಕಟಣೆಯ ಹೊಣೆ ಸಹ ಹೊತ್ತಿರುವ ನನ್ನ ಪತ್ನಿ ಶ್ರೀಮತಿ ಅನುಸೂಯಾರಾವ್ ಅವರಿಗೆ ನನ್ನ ಹಾರ್ದಿಕ ಅಭಿನಂದನೆಗಳು.

ಈ ಕೃತಿಯನ್ನು ಸಹೃದಯ ಓದುಗರು ಆದರದಿಂದ ಸ್ವೀಕರಿಸುತ್ತೀರೆಂದು ನಂಬಿದ್ದೇನೆ. ಈ ಕೃತಿಯಲ್ಲಿ ಹೆಸರು ಬರದಿರುವ ಸಾಹಿತಿ ಮಿತ್ರರುಗಳು ತಮ್ಮ ಹಾಗೂ ಸಾಹಿತ್ಯಕೃಷಿಯ, ವಿವರಗಳನ್ನು ನನಗೆ ಕಳುಹಿಸಿಕೊಡುವುದಲ್ಲದೆ ಇದರಲ್ಲಿರುವ ಲೋಪ ದೋಷಗಳನ್ನು ತಿಳಿಸಿದರೆ ಈ ಗ್ರಂಥದ ಪರಿಷ್ಕರಣಕ್ಕೆ ನೆರವು ನೀಡಿದಂತಾಗುತ್ತದೆ. ಈ ಬಗ್ಗೆ ಸಹಕರಿಸಬೇಕೆಂದು ಸವಿನಯ ಪ್ರಾರ್ಥನೆ.

ಈ ಪುಸ್ತಕವನ್ನು ಅಚ್ಚುಗಟ್ಟಾಗಿ ಮುದ್ರಿಸಿಕೊಟ್ಟ ಶ್ರೀ ಲಕ್ಷ್ಮೀ ಪ್ರಿಂಟರ್ಸ್ ರವರಿಗೂ ಮತ್ತು ಮುಖಚಿತ್ರ ನಿರ್ಮಿಸಿಕೊಟ್ಟ ಕಲಾವಿದ ಶ್ರೀ ನಾಗರಾಜ್ ರವರಿಗೂ ನನ್ನ ಹೃತ್ಪೂರ್ವಕ ನಮನಗಳು. ಈ ಗ್ರಂಥ ಮುದ್ರಣಕ್ಕೆ ರಿಯಾಯಿತಿ ದರದಲ್ಲಿ ಕಾಗದ ಒದಗಿಸಿದ ಕರ್ನಾಟಕ ಸರ್ಕಾರಕ್ಕೆ ನನ್ನ ಕೃತಜ್ಞತೆ ಸಲ್ಲುತ್ತದೆ.

ತಮ್ಮ ಅಮೂಲ್ಯ ಅಭಿಪ್ರಾಯ ಹಾಗೂ ಸಲಹೆಗಳಿಗೆ ಸುಸ್ವಾಗತ.

430, ಸೌರಭ
17ನೇ ಮುಖ್ಯರಸ್ತೆ
ಶ್ರೀನಗರ
ಬೆಂಗಳೂರು–560 050

ಎಸ್. ವಿ. ಶ್ರೀನಿವಾಸರಾವ್

# ಪರಿವಿಡಿ

## ೫. ಹೊಸಗನ್ನಡ ಕಟ್ಟಲು ಶ್ರಮಿಸಿದ ಬಹುಮುಖ ಪ್ರತಿಭಾವಂತರು

# ಶುಭಹಾರೈಕೆ

'ಕನ್ನಡ ಸಾಹಿತಿ ದರ್ಶನ' ಇದು ಶ್ರೀ ಎಸ್.ವಿ. ಶ್ರೀನಿವಾಸರಾಯರು ಪರಿಶ್ರಮ ಪೂರ್ವಕವಾಗಿ ಸಿದ್ಧಪಡಿಸಿದ ಒಂದು ವಿಶಿಷ್ಟ ಸಂದರ್ಭಗ್ರಂಥ. ಇದರಲ್ಲಿ ಹಳೆಯ ಮತ್ತು ಹೊಸ ಕನ್ನಡ ಸಾಹಿತಿಗಳ ಸಂಕ್ಷಿಪ್ತ ಪರಿಚಯವಿದೆ. ಇಷ್ಟು ವ್ಯಾಪಕವಾದ ವಿಷಯಸಂಗ್ರಹ ಮತ್ತು ನಿರೂಪಣೆ ಈವರೆಗೆ ಆಗಿರಲಿಲ್ಲ. ಹಳೆಯ ಸಾಹಿತ್ಯದ ವಿಸ್ತಾರವಾದ ಪರಿಚಯವು ಆರ್. ನರಸಿಂಹಾಚಾರ್ಯರ 'ಕವಿಚರಿತೆ'ಯ ಮೂರು ಸಂಪುಟಗಳಲ್ಲಿ ಮೊಟ್ಟಮೊದಲಿಗೆ ಉಪಲಬ್ಧವಾಯಿತು: ಆಮೇಲೆ ಕನ್ನಡಸಾಹಿತ್ಯ ಚರಿತ್ರೆಗಳಲ್ಲಿ ಹೆಚ್ಚಿನ ಚಾರಿತ್ರಿಕ ಸಾಮಗ್ರಿಯನ್ನು ಉಪಯೋಗಿಸಿ ವಿಮರ್ಶೆಯ ನಿಕಷಕ್ಕೆ ಒಡ್ಡಿ ರಚಿತವಾದುವು. ಹೊಸ ಸಾಹಿತ್ಯ ಮತ್ತು ಹೊಸ ಸಾಹಿತಿಗಳ ಅವಲೋಕನಗಳು ಮತ್ತು ಪರಿಚಯಗಳು ಪ್ರತ್ಯೇಕವಾಗಿ ಪ್ರಕಟಗೊಂಡಿವೆ. ಹಳೆಯ ಮತ್ತು ಹೊಸ ಸಾಹಿತಿಗಳ ಸಮಗ್ರ ಪರಿಚಯವನ್ನು ಒಳಗೊಂಡ ಒಂದೇ ಒಂದು ಪುಸ್ತಕವು ಯಾವುದೂ ಇರಲಿಲ್ಲ. ಈ ಗ್ರಂಥಕರ್ತರು ಈ ಹೆಬ್ಬೊತ್ತಿಗೆಯಲ್ಲಿ ಅಂಥ ಸಾಹಸಕ್ಕೆ ಕೈಹಾಕಿ ಅನೇಕ ಮೂಲಗಳಿಂದ ಮತ್ತು ಸಾಹಿತಿಗಳಿಂದ ವಿಷಯಗಳನ್ನು ಸಂಗ್ರಹಿಸಿ ಒಂದೆಡೆಗೆ ತಂದಿರುವುದು ಮೆಚ್ಚುವಂತ ವಿಷಯ. ಈ ಗ್ರಂಥವು ನೀರಸವಾಗಬಾರದೆಂದು ಒಂದು ಕೌಟುಂಬಿಕ ಪರಿಸರದಲ್ಲಿ ನಡೆದಿರುವ ಸಂವಾದದ ಚೌಕಟ್ಟನ್ನು ಇದಕ್ಕೆ ಒದಗಿಸಲಾಗಿದೆ. ಅಲ್ಲದೆ ಹಳೆಯ ಸಾಹಿತಿಗಳ ಪರಿಚಯ ಸಂದರ್ಭದಲ್ಲಿ ಪೌರಾಣಿಕ ಮತ್ತು ಧಾರ್ಮಿಕ ಸಾಹಿತ್ಯರಚನಕಾರರು, ಭಕ್ತಕವಿಗಳು, ಶಾಸ್ತ್ರೀಯ ಸಾಹಿತ್ಯರಚನಕಾರರು, ಮುಂತಾದ ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ಹೊಸ ಸಾಹಿತಿಗಳಲ್ಲಿ ಕವಿಗಳು, ಕತೆಗಾರರು, ಕಾದಂಬರಿಕಾರರು, ನಾಟಕಕಾರರು, ವಿಮರ್ಶಕರು, ಮುಂತಾಗಿ ವಿಭಾಗಿಸಿ ಪರಿಚಯ ಕೊಡಲಾಗಿದೆ.

ಕನ್ನಡಿಗರಿಂದ ಇದಕ್ಕೆ ತಕ್ಕ ಪ್ರೋತ್ಸಾಹವು ದೊರೆಯಲಿ ಎಂದು ಹಾರೈಸುತ್ತೇನೆ.

ರಂ. ಶ್ರೀ. ಮುಗಳಿ

# ಶ್ಲಾಘನೀಯ ಕೃತಿ

ಈಗ ಸುಮಾರು ಹತ್ತು ಶತಮಾನಗಳಿಂದಲೂ ಬೆಳೆದು ಬಂದಿರುವ ನಮ್ಮ ಕನ್ನಡ ಸಾಹಿತ್ಯ ಕ್ರಿ. ಶ. ಇಪ್ಪತ್ತನೆಯ ಶತಮಾನದ ವೇಳೆಗೆ ನೂತನಯುಗವೊಂದರಲ್ಲಿ ಕಾಲಿಟ್ಟಿತು. ಆಗ ಆರಂಭದಲ್ಲಿ ಪಾಶ್ಚಾತ್ಯ ವಿದ್ಯಾಭ್ಯಾಸದ ಪ್ರಭಾವದಿಂದ ಕನ್ನಡ ಮೂಲೆ ಗುಂಪಾಯಿತು. ಮತ್ತೆ ಬಹುಬೇಗ ಅದೇ ಇಂಗ್ಲಿಷ್ ವಿದ್ಯಾಭ್ಯಾಸದ ಫಲವಾಗಿಯೇ ನಮ್ಮಲ್ಲಿ ಸ್ವಾಭಿಮಾನ, ಸ್ವಭಾಷಾಭಿಮಾನಗಳು ಉಕ್ಕಿ ನಮ್ಮ ಹಳೆಯ ಸಾಹಿತ್ಯದ ಸತ್ವದೊಡನೆ ಪಾಶ್ಚಾತ್ಯ ಸಾಹಿತ್ಯಾಭ್ಯಾಸದಿಂದ ಬಂದ ನೂತನ ಭಾವನೆಗಳನ್ನು ಅಳವಡಿಸಿಕೊಂಡ 'ಆಧುನಿಕ ಕನ್ನಡ ಸಾಹಿತ್ಯ' ಸೃಷ್ಟಿಯಾಯಿತು. ಹಲವಾರು ಕಾರಣಗಳಿಂದ ಇದು ವಿಪುಲವಾಗಿ ಬೆಳೆದಿರುವುದಲ್ಲದೆ ವೈವಿಧ್ಯಮಯವಾಗಿಯೂ ಇದೆ. ಹುಲುಸಾಗಿ ಬೆಳೆದಿರುವಷ್ಟೇ ಕಳೆಯಿಂದಲೂ ಕೂಡಿದೆ. ಜೊಳ್ಳನ್ನು ತೂರಿ, ಗಟ್ಟಿಕಾಳನ್ನು ಶೇಖರಿಸುವ ಕಾರ್ಯ ಕಾಲಪುರುಷನಿಗೆ ಸೇರಿದುದು.

'ಕನ್ನಡ ಸಾಹಿತಿ ದರ್ಶನ'ದ ಕರ್ತೃ ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರು ಆಧುನಿಕ ಕನ್ನಡ ಸಾಹಿತ್ಯ ಸೃಷ್ಟಿಕರ್ತರೂ ಸೇರಿರುವಂತೆ ಇಡೀ ಕನ್ನಡ ಸಾಹಿತ್ಯದ ಬರಹಗಾರರನ್ನೆಲ್ಲ ಇಲ್ಲಿ ನಮಗೆ ಪರಿಚಯ ಮಾಡಿಸಿಕೊಡ ಹೊರಟಿದ್ದಾರೆ. ಅನೇಕರು ಸೇರಿ. ಹಲವಾರು ವರ್ಷಗಳ ದುಡಿಮೆಯಿಂದ ಸಾಧಿಸಬಹುದಾದ ಕಾರ್ಯ ಒಬ್ಬ ವ್ಯಕ್ತಿಯ ಶ್ರದ್ಧೆ, ನಿಷ್ಠೆ, ಪರಿಶ್ರಮಗಳಿಂದ ರೂಪುಗೊಂಡಿರುವುದು ಅತ್ಯಂತ ಶ್ಲಾಘನೀಯವಾದುದೇ ಸರಿ. ಅದರಲ್ಲೂ ಅರ್ಥಪೂರ್ಣವಾದ ಹೆಸರಿನ ವ್ಯಕ್ತಿಗಳ ಕಥೆಯೊಂದರ ಚೌಕಟ್ಟಿನಲ್ಲಿ ಇದನ್ನು ಹೆಣೆದು, ನಿರೂಪಣೆಗೊಂದು ಆಕರ್ಷಣ ಶಕ್ತಿಯನ್ನು ಅಳವಡಿಸಿರುವುದು ಗ್ರಂಥಕರ್ತರ ಜಾಣ್ಮೆಯನ್ನು ಸೂಚಿಸುತ್ತದೆ.

ತ. ಸು. ಶಾಮರಾಯ

# ನಾನು ಮೆಚ್ಚಿರುವ ಮೌಲಿಕ ಕೃತಿ

ಶ್ರೀ ಎಸ್. ವಿ. ಶ್ರೀನಿವಾಸರಾಯರ ಮಕ್ಕಳ ಸಾಹಿತ್ಯವನ್ನು ಮೊದಲಿನಿಂದಲೂ ಮೆಚ್ಚಿದ್ದ ನನಗೆ ಅವರ ಇತ್ತೀಚಿನ ಉದ್ಗ್ರಂಥ 'ಕನ್ನಡ ಸಾಹಿತಿ ದರ್ಶನ' ಬಹಳ ಸಂತೋಷವನ್ನು ನೀಡಿದೆ. ಮಕ್ಕಳ ಸಾಹಿತಿಗಳನ್ನು ಮಕ್ಕಳಿಗೆ ಪರಿಚಯಿಸಿದ ಅವರು ಈಗ ಪ್ರಾಚೀನ ಅರ್ವಾಚೀನ ಕನ್ನಡ ಸಾಹಿತಿಗಳನ್ನೆಲ್ಲ ಮನೋಜ್ಞವಾಗಿ ಪರಿಚಯಿಸಿದ್ದಾರೆ.

ಕಾಲಕ್ರಮದಲ್ಲಿ ಪರಿಚಯಿಸಿದರೆ ಮಕ್ಕಳಿಗೆ ಬೇಸರವಾಗಬಹುದೆಂದು ಭಾವಿಸಿ. ಮಹಾಭಾರತ ರಚನಾಕಾರರು. ರಾಮಾಯಣ ರಚನಾಕಾರರು. ವೈದಿಕ-ಜೈನ–ವೀರಶೈವ ರಚನಾಕಾರರು. ಶಿವಶರಣರು. ಹರಿದಾಸರು. ಹೀಗೆ ರಚನಾಕಾರರನ್ನು ಆಧರಿಸಿ ಈ ಕೃತಿ ರಚನೆ ಮಾಡಿದ್ದಾರೆ : ಮಕ್ಕಳ ಓದುವ ಉತ್ಸುಕತೆ ಚಿಗುರುತ್ತ ಹೋಗುವಂತೆ ಮಾಡಿದ್ದಾರೆ ; ಇದೊಂದು ಮಕ್ಕಳ ಮಟ್ಟದ ಸಾಹಿತ್ಯಚರಿತ್ರೆಯಾಗುವಂತೆ ಮಾಡಿದ್ದಾರೆ. ಬಹಳ ಶ್ರಮವಹಿಸಿ ವಿಷಯ ಸಂಗ್ರಹ ಮಾಡಿದ್ದಾರೆ.

ಮುಖ್ಯವಿವರಗಳ ಕೈಬಿಡದೆ, ಮಕ್ಕಳ ದೃಷ್ಟಿಯಿಂದ ಅನಾವಶ್ಯಕವೆನಿಸುವ ವಿವರಗಳನ್ನು ಬಿಟ್ಟು. ಕೃತಿಯ ಮನೋರಂಜಕತೆ ವರ್ಧಿಸುವಂತೆ ಮಾಡಿದ್ದಾರೆ. ಮಕ್ಕಳಿಗೆ ಮಾತ್ರವಲ್ಲ. ವಯಸ್ಕರಿಗೂ ಇದು ವಾಚನೀಯವಾಗುವಂತೆ ಮಾಡಿದ್ದಾರೆ. ಅಲ್ಲದೆ, ಎಲ್ಲರಿಗೂ ಇದೊಂದು ಆಕರಗ್ರಂಥವಾಗಬಲ್ಲುದು.

ಇದುವರೆವಿಗಿನ ಕನ್ನಡ ಮಕ್ಕಳ ಸಾಹಿತ್ಯದಲ್ಲಿ ನಾನು ಮೆಚ್ಚಿರುವ ಈ ಮೌಲಿಕ ಕೃತಿಗೆ ಮನ್ನಣೆಯ ಸ್ಥಾನ ಮೀಸಲು. ಮಕ್ಕಳಿಗೆ ಮನೋರಂಜನೆಯೊಡನೆ ಕನ್ನಡ ಸಾಹಿತ್ಯದ ಪರಿಜ್ಞಾನ ಲೀಲಾಜಾಲವಾಗಿ ದೊರೆಯುವಂತೆ ಮಾಡಿರುವ ಗೆಳೆಯ ಶ್ರೀ ಶ್ರೀನಿವಾಸರಾಯರನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

ಡಾ|| ಸಿದ್ಧಯ್ಯ ಪುರಾಣಿಕ

# ನನ್ನ ಅನಿಸಿಕೆ

ಇಂದಿನ ಭಾರತೀಯ ಜನಜೀವನವನ್ನು ರೂಪಿಸುತ್ತಿರುವ, ಉದ್ದೀಪನಗೊಳಿಸುತ್ತಿರುವ, ಪ್ರೇರಿಸುತ್ತಿರುವ ಶಕ್ತಿಗಳು ವ್ಯಾಸ ವಾಲ್ಮೀಕಿ ಕಾಳಿದಾಸರಂಥ ಕವಿಗಳೇ ಹೊರತು, ರಾಜ ಮಹಾರಾಜರಲ್ಲ. ಆದ್ದರಿಂದ ಶೈಕ್ಷಣಿಕ ಕಾರ್ಯಕ್ರಮದಲ್ಲಿ ಸಾಹಿತ್ಯ ಚರಿತ್ರೆಯ ವ್ಯಾಸಂಗಕ್ಕೆ ಯುಕ್ತಾವಕಾಶವನ್ನು ಕಲ್ಪಿಸತಕ್ಕದ್ದು ಅನಿವಾರ್ಯ.

ಈಚೀಚೆಗೆ ಕನ್ನಡ ಸಾಹಿತ್ಯವನ್ನು ಕುರಿತ ಚರಿತ್ರೆಗಳು ಸಾಕಷ್ಟು ಸಂಖ್ಯೆಯಲ್ಲಿ ಬರುತ್ತಿವೆ. ಒಂದೊಂದೂ ವಿಷಯ ಸಂಗ್ರಹ, ನಿರೂಪಣೆ ಹಾಗೂ ವಿಮರ್ಶೆಗಳ ದೃಷ್ಟಿಯಿಂದ ವಿಶಿಷ್ಟವಾಗಿದೆ. ಉಪಾದೇಯವಾಗಿವೆ. ಆದರೆ ಮಕ್ಕಳ ಮನೋವಿಕಾಸ ಹಾಗೂ ಜ್ಞಾನವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಂಡು ಈ ತನಕ ಒಂದಾದರೂ ಸಾಹಿತ್ಯ ಚರಿತ್ರೆ ಪ್ರಕಟವಾದದ್ದಿಲ್ಲ. ಇಂಥದೊಂದು ಸಾಹಿತ್ಯ ಚರಿತ್ರೆಯ ಅವಶ್ಯಕತೆಯನ್ನು ಮನಗಂಡು, ಅದರ ರಚನೆಗೆ ಕೈಹಾಕಿರುವ ಶ್ರೀ ಶ್ರೀನಿವಾಸರಾಯರ ದೂರದೃಷ್ಟಿ ಹಾಗೂ ಸಮಯಪ್ರಜ್ಞೆ ಶ್ಲಾಘನೀಯವಾಗಿವೆ.

ಪ್ರೌಢ ಸಾಹಿತ್ಯದ ಜತೆಗೆ ಶ್ರೀ ಶ್ರೀನಿವಾಸರಾಯರು ಶಿಶುಸಾಹಿತ್ಯ ಕ್ಷೇತ್ರದಲ್ಲಿಯೂ ಸಾಕಷ್ಟು ಕೃಷಿಮಾಡಿ ಹೆಸರು ಗಳಿಸಿದ್ದಾರೆ. ಆದ್ದರಿಂದ ಮಕ್ಕಳಿಗೆ ಬೇಕಾದ ಸಾಹಿತ್ಯ ಚರಿತ್ರೆಯ ರೂಪ ಸ್ವರೂಪ ನಿರೂಪಣಾ ವಿಧಾನಗಳನ್ನು ಅವರು ಬಲ್ಲವರಾಗಿದ್ದಾರೆ. ಈ ಸಾಹಿತ್ಯ ಚರಿತ್ರೆಯ ಎರಡು ಪ್ರಮುಖ ಲಕ್ಷಣಗಳೆಂದರೆ, ಮೊದಲನೆಯದಾಗಿ, ಅಧ್ಯಾಯಗಳ ವಿಭಜನೆ : 'ಮಹಾಭಾರತ ರಚನಕಾರರು' ಎಂಬ ಅಧ್ಯಾಯವನ್ನು ತೆರೆದದ್ದಾದರೆ, ಕಾಲಾನುಕ್ರಮದಲ್ಲಿ ಮಹಾಭಾರತದ ಕತೆ ಹೇಗೆ ಬೆಳೆದು ಬಂತೆಂಬ ವಿಚಾರ. ಅಂದರೆ ಆ ಕಾವ್ಯದ ಇತಿಹಾಸ ಕಣ್ಣಿಗೆ ಕಟ್ಟಿದಂತೆ ಓದುಗರ ಮುಂದೆ ನಿಲ್ಲುತ್ತವೆ. ಅನ್ಯಸಂಗತಿಗಳ ಅಡಚಣೆ ಇಲ್ಲದಿರುವುದರಿಂದ ಅದನ್ನು ಮಕ್ಕಳು ಸುಲಭವಾಗಿ ಗ್ರಹಿಸಲು ಮತ್ತು ಧಾರಣೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲಿಯ ಎಲ್ಲ ವಿಭಾಗಗಳಿಗೂ ಈ ಮಾತು ಅನ್ವಯಿಸುತ್ತದ.

ಎರಡನೆಯದಾಗಿ ಸಂವಾದ ವಿಧಾನ. ಈ ಸಂವಾದ ವಿಧಾನದಲ್ಲಿ ಕಥನ ವಿಧಾನವೂ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಈ ವಿಧಾನದಿಂದಾಗಿ ಮಕ್ಕಳಿಗೆ ಚರಿತ್ರೆ ಬೋರ್ ಆಗುವುದಿಲ್ಲ. ತಾತ ಕಥೆ ಹೇಳುತ್ತಿದ್ದಂತೆಲ್ಲ ಮಕ್ಕಳ ಕುತೂಹಲ ಕೆರಳುತ್ತದೆ, ಆ ಕುತೂಹಲವೇ ಸಂವಾದಕ್ಕೆ ನಾಂದಿಯಾಗುತ್ತದೆ. ಪಂಚತಂತ್ರದ ಕತೆಯಂತೆ ಇಲ್ಲಿಯ ಚರಿತ್ರೆ ಮುಂದೆಮುಂದೆ ಸಾಗುತ್ತದೆ. ಭಾಷೆಯಲ್ಲಿ ಕಾಠಿಣ್ಯವಿಲ್ಲ : ವಿಮರ್ಶೆಯ ಭಾರವಿಲ್ಲ. ಈ ಎರಡೂ ಹೂ ಹಗುರವಾಗಿವೆ.

ಈ ಎರಡು ಲಕ್ಷಣಗಳಿಂದಾಗಿ 'ಕನ್ನಡ ಸಾಹಿತಿ ದರ್ಶನ' ವಿಶಿಷ್ಟವಾಗಿದೆ, ಅಪೂರ್ವವಾದುದಾಗಿದೆ. ಮಕ್ಕಳಿರುವ ಮನೆಗೆ ಇದೊಂದು ಸಂಸ್ಕೃತಿಯ ದೀಪವಾಗುತ್ತದೆ. ಈ ಕಾರಣಕ್ಕಾಗಿ ನಾನು ಗ್ರಂಥಕರ್ತರನ್ನು ಅಭಿನಂದಿಸುತ್ತೇನೆ.

26-1-89

ಡಾ॥ ದೇ. ಜವರೇಗೌಡ

# ಸ್ತುತ್ಯಕಾರ್ಯ

ಶ್ರೀ ಎಸ್. ವಿ. ಶ್ರೀನಿವಾಸರಾಯರ 'ಕನ್ನಡ ಸಾಹಿತಿ ದರ್ಶನ' ಎಂಬ ಗ್ರಂಥವನ್ನು ಸ್ಥೂಲವಾಗಿ ಪರಿಶೀಲಿಸಿದರೆ ಸಾಕು, ಕನ್ನಡ ಸಾಹಿತ್ಯದ ವೈಭವವು ನಮ್ಮ ಕಣ್ಮುಂದೆ ಸುಳಿಯುತ್ತವೆ. ಹತ್ತನೆಯ ಶತಮಾನದ ಮಹಾಕವಿ ಪಂಪನಿಂದ ಇತ್ತೀಚಿನ ದಲಿತಕವಿ ಸಿದ್ಧಲಿಂಗಯ್ಯನವರ ತನಕ ಸುಮಾರು ಎರಡು ಸಾವಿರಕ್ಕೂ ಮಿಗಿಲಾದ ಕನ್ನಡ ಸಾಹಿತ್ಯೋಪಾಸಕರನ್ನು ಶ್ರೀಯುತರು ಪರಿಚಯ ಮಾಡಿಕೊಡುತ್ತಾರೆ. ಸುಮಾರು ಎರಡು ಸಾವಿರ ವರ್ಷಗಳಿಗೂ ಮೀರಿದ ಇತಿಹಾಸವಿರುವ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನ ತುಸು ಕಷ್ಟವೆಂದೇ ಹೇಳಬಹುದು. ಆದರೆ ಶ್ರೀಯುತರು ಏಕಾಂಗಿಯಾಗಿ ಕನ್ನಡ ಸಾಹಿತ್ಯ ಚರಿತ್ರೆಯೊಡನೆ ತಿಳಿಗನ್ನಡದಲ್ಲಿ ಕಥಾರೂಪದ ಮೂಲಕ ಮಕ್ಕಳಿಗೆ 'ಕನ್ನಡ ಸಾಹಿತಿಗಳ ದರ್ಶನ'ವನ್ನು ಮಾಡಿಸಿದ್ದಾರೆ, ಇದರಲ್ಲಿ ಬರುವ ಸಾಹಿತಿಗಳ ಜೀವನ ಚರಿತ್ರೆಯನ್ನು ಕನ್ನಡದ ಮಕ್ಕಳು ಆಸಕ್ತಿಯಿಂದ ಓದುತ್ತಾರೆಂದು ನಾನು ಭಾವಿಸುತ್ತೇನೆ.

'ಕನ್ನಡ ಸಾಹಿತಿ ದರ್ಶನ' ಗ್ರಂಥದಲ್ಲಿ ಲೇಖಕರು ಮಕ್ಕಳಿಗೆ ಕವಿ ಚರಿತ್ರೆಯನ್ನು ಹೇಳುವ ಶೈಲಿ ಮೆಚ್ಚುವಂತಹದು. ವ್ಯಾಸಣ್ಣ ಮಕ್ಕಳಿಗೆ ಕತೆ ಹೇಳುತ್ತಾ 'ಕತೆ ಜೊತೆಯಲ್ಲಿ ಕವಿ ಚರಿತ್ರೆಯನ್ನೂ ಸ್ವಲ್ಪ ತಿಳಿಯಬೇಕು. ಎಂದು ಹೇಳಿ 'ವಿಕ್ರಮಾರ್ಜುನ ವಿಜಯ' ಬರೆದಆದಿಕವಿ ಪಂಪನಿಂದ ಪ್ರಾರಂಭ ಮಾಡಿ, ಈ ಎರಡು ಸಾವಿರ ವರ್ಷಗಳಲ್ಲಿ ಕನ್ನಡ ಸಾಹಿತ್ಯ ಲೋಕವನ್ನು ಬೆಳೆಸಿ ಬೆಳಗಿಸಿದ ಹಿರಿಯ. ಕಿರಿಯ, ಹೆಸರಾಂತ ಮತ್ತು ಎಲೆಯ ಮರೆಯ ಸಾಹಿತ್ಯಕಾರರ ಪರಿಚಯವನ್ನು ಅವರ ಕೃತಿಗಳೊಂದಿಗೆ ಉತ್ತಮ ಶೈಲಿಯಲ್ಲಿ ಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಹೇಳಿರುವುದು ಈ ಹೊತ್ತಿಗೆಯ ವಿಶೇಷ ಲಕ್ಷಣ.

ಪ್ರಾಥಮಿಕ ಶಾಲಾ ಮಕ್ಕಳಿಗೆ ಅವರ ಪಠ್ಯಕ್ರಮದ ಜೊತೆಗೆ, ಉಪಾಧ್ಯಾಯರು ಈ ಗ್ರಂಥದಲ್ಲಿ ಪ್ರಸ್ತಾಪವಾಗಿರುವ ಕನ್ನಡ ಸಾಹಿತ್ಯ ಚರಿತ್ರೆಯನ್ನು ವ್ಯಾಸರಾಯರು ದಿನೇಶ, ದಿನಕರರಿಗೆ ಹೇಳಿದಂತೆ ಮಕ್ಕಳ ಭಾಷೆಯಲ್ಲಿ ಸಣ್ಣ ಕಥೆಗಳಾಗಿ ತರಗತಿಯಲ್ಲಿ ಹೇಳಿದಲ್ಲಿ ನಮ್ಮ ಮಕ್ಕಳಿಗೆ ಕನ್ನಡ ಸಾಹಿತ್ಯಕಾರರ ಪರಿಚಯದ ಜೊತೆಗೆ ಭಾರತದ ಸಂಸ್ಕೃತಿಯ ನಾನಾ ಪ್ರಕಾರಗಳ ಪರಿಚಯವೂ ಆಗುತ್ತದೆ.

ಈ ದೃಷ್ಟಿಯಿಂದ ಮಾನ್ಯ ಶ್ರೀನಿವಾಸರಾಯರು ಸಾಹಿತ್ಯಕ್ಕೆ ಮತ್ತು ಸಂಸ್ಕೃತಿಗೆ ಮಾಡಿರುವ ಸೇವೆ ವಿಶಿಷ್ಟವಾದುದು ಮತ್ತು ಸ್ತುತ್ಯವಾದುದು. ಅದಕ್ಕಾಗಿ ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಎಂ. ಚಂದ್ರಶೇಖರ್

ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

## ಅಪೂರ್ವ ಕೃತಿ

ಸಾಹಿತ್ಯ ಕ್ಷೇತ್ರದಲ್ಲಿ ಲೇಖಕರಾಗಿ. ಕಾದಂಬರಿಕಾರರಾಗಿ ಚಿರಪರಿಚಿತರಾದ ಶ್ರೀ ಶ್ರೀನಿವಾಸರಾಯರು "ಕನ್ನಡ ಸಾಹಿತಿ ದರ್ಶನ" ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಕನ್ನಡ ಸಾಹಿತಿಗಳ ಸಂಕ್ಷಿಪ್ತ ಪರಿಚಯ ನೀಡುವ ಇದೊಂದು ಅಪೂರ್ವ ಕೃತಿಯಾಗಿದೆ. ಈ ಕೃತಿಗೆ ಸಹೃದಯ ಓದುಗರಿಂದ, ಅಭಿಮಾನಿಗಳಿಂದ ಹೆಚ್ಚಿನ ಪ್ರೋತ್ಸಾಹ ಸಹಕಾರ ದೊರೆಯಲೆಂದು ಹಾರೈಸುತ್ತೇನೆ. ಲೇಖಕರ ಈ ಕೃತಿ ಪ್ರಕಾಶನಕ್ಕೆ ಸರ್ವ ರೀತಿಯ ಯಶಸ್ಸನ್ನು ಕೋರಿ. ಮುಂದೆಯೂ ಇನ್ನೂ ಹೆಚ್ಚಿನ ಕೃತಿಗಳನ್ನು ರಚಿಸುವಂತೆ ಶ್ರೀ ಮಂಜುನಾಥಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಡಿ. ವೀರೇಂದ್ರ ಹೆಗ್ಗಡೆಯವರು

## ಅಭಿನಂದನೆ

ಹೆಸರಾಂತ ಸಾಹಿತಿಗಳಾದ ಶ್ರೀ ಎಸ್. ವಿ. ಶ್ರೀನಿವಾಸರಾಯರು ಸಿದ್ಧಪಡಿಸಿರುವ 'ಕನ್ನಡ ಸಾಹಿತಿ ದರ್ಶನ' ಸಾಹಿತ್ಯಾಸಕ್ತರಿಗೆ ತುಂಬ ಉಪಯುಕ್ತವಾದ ಕೃತಿ. ಇಂಥ ಸೂಚಿಸಾಮಗ್ರಿ ಕನ್ನಡದಲ್ಲಿ ಬಹಳವಿಲ್ಲ. ಈ ಪುಸ್ತಕ ಕನ್ನಡ ಸಾಹಿತಿಗಳ ದರ್ಶನವಷ್ಟೇ ಆಗಿರದೆ ಕನ್ನಡ ಸಾಹಿತ್ಯ ದರ್ಶನವೂ ಆಗಿದೆ. ನಮ್ಮ ಹಳೆಯ ಹಾಗು ಹೊಸ ಸಾಹಿತ್ಯದ ಸ್ಥೂಲ ಚರಿತ್ರೆ ಕೂಡ ಇಲ್ಲಿ ಸಿಗುತ್ತದೆ. ಪರಿಚಯಾತ್ಮಕ ವಿಮರ್ಶೆಗೂ ಅಲ್ಲಲ್ಲಿ ಎಡೆಯುಂಟು.

ವಿಶೇಷ ಶ್ರಮ ಹಾಗೂ ಅಧ್ಯಯನದಿಂದ ಈ ಕೃತಿಯನ್ನು ರಚಿಸಿರುವ ಲೇಖಕರು ಅಭಿನಂದನೀಯರು.

ಸಿ. ಪಿ. ಕೆ.
ಕನ್ನಡ ಪ್ರಾಧ್ಯಾಪಕರು
ಮಾನಸಗಂಗೋತ್ರಿ, ಮೈಸೂರು

# ಅಮೂಲ್ಯ ಕೊಡುಗೆ

'ಕನ್ನಡ ಸಾಹಿತಿ ದರ್ಶನ' ಗ್ರಂಥ ಕನ್ನಡ ಸಾರಸ್ವತ ಲೋಕಕ್ಕೆ ಒಂದು ಅಮೂಲ್ಯ ಕೊಡುಗೆ. ಒಂದು ಉಪಯುಕ್ತ ಕೈಪಿಡಿ.

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ದುಡಿದ, ಸೇವೆ ಸಲ್ಲಿಸಿದ ಲೇಖಕ ; ಸಾಹಿತಿ ಮಹನೀಯರ ಕವಿ ಕಾವ್ಯ ವಿವರಗಳನ್ನು ತುಂಬಾ ಶ್ರಮದಿಂದ ಸಂಗ್ರಹಿಸಿದ್ದೀರಿ. ಅದಕ್ಕಾಗಿ ನೀವು ಅಭಿನಂದನೀಯರು.

ತಮ್ಮ ವಿಶ್ವಾಸಿ,
**ಜಿ. ನಾರಾಯಣ**
ಅಧ್ಯಕ್ಷ. ಕರ್ನಾಟಕ ಪತ್ರಿಕಾ ಅಕಾಡೆಮಿ

# ಮೆಚ್ಚುಗೆ

ಎಸ್. ವಿ. ಶ್ರೀನಿವಾಸರಾಯರ 'ಕನ್ನಡ ಸಾಹಿತಿ ದರ್ಶನ' ಕನ್ನಡ ಲೇಖಕರ ಬಗೆಗೆ ಸಾಕಷ್ಟು ತಿಳುವಳಿಕೆಯನ್ನು ನೀಡುವ ಗ್ರಂಥ. ಇದನ್ನು ಡೈರೆಕ್ಟರಿ ಎಂದು ಹೇಳುವಂತಿಲ್ಲ. ಏಕೆಂದರೆ ಡೈರೆಕ್ಟರಿಯ ವ್ಯಾಪ್ತಿಗಿಂತ ಶ್ರೀನಿವಾಸರಾಯರ ಉದ್ದೇಶ ದೊಡ್ಡದು. ಒಬ್ಬ ಲೇಖಕನ ಹೆಸರು. ಹುಟ್ಟಿದ ವರ್ಷ. ತಂದೆತಾಯಿಗಳ ಹೆಸರು ಮತ್ತು ಕೃತಿಗಳ ಹೆಸರುಗಳನ್ನು ಮಾತ್ರ ನಮೂದಿಸುವುದರಲ್ಲಿ ತೃಪ್ತಿಪಟ್ಟುಕೊಳ್ಳದೆ ಲೇಖಕ ಮತ್ತು ಆತನ ಕೃತಿಗಳ ಬಗೆಗೆ ಓದುಗನಿಗೆ ಒಂದು ಅಭಿಪ್ರಾಯ ಬರುವಂತೆ ಮಾಡಿದ್ದಾರೆ. ಈ ಕೆಲಸವನ್ನು ಶ್ರದ್ಧೆಯಿಂದ ಅವರು ಸಾಧಿಸಿದ್ದಾರೆನ್ನುವುದು ಈ ಪುಸ್ತಕವನ್ನು ಓದಿದರೆ ಅರ್ಥವಾಗುತ್ತದೆ. ಒಬ್ಬ ವ್ಯಕ್ತಿ ಮಾಡಲು ಅಸಾಧ್ಯ ಎನ್ನುವ ಕೆಲಸವನ್ನು ಶ್ರೀನಿವಾಸರಾಯರು ಒಂಟಿಯಾಗಿ ಸಾಧಿಸಿರುವುದು ನಮ್ಮ ಮೆಚ್ಚುಗೆಯನ್ನು ಗಳಿಸುತ್ತದೆ.

'ಕನ್ನಡ ಸಾಹಿತಿ ದರ್ಶನ' ಪರಿಷ್ಕೃತಗೊಂಡು ಎರಡನೆಯ ಮುದ್ರಣವನ್ನು ಕಾಣಬೇಕು ಎನ್ನುವುದು ನನ್ನ ಆಶೆ. ಏಕೆಂದರೆ ಶ್ರೀನಿವಾಸರಾಯರು ದೊಡ್ಡ ಕೆಲಸ ಮಾಡಿದ್ದಾರೆ. ಆ ಕೆಲಸ ಸರಿಯಾದ ರೂಪಕ್ಕೆ ಬಂದರೆ ಅವರ ಶ್ರಮ ಸಾರ್ಥಕವಾಗುತ್ತದೆ. ಅವರಿಂದಲೇ ಇದರ ಪರಿಷ್ಕರಣದ ಕೆಲಸವನ್ನು ಕನ್ನಡಿಗರು ಮಾಡಿಸಬೇಕು. ಅದು ಸಾಧ್ಯವಾಗುತ್ತದೆಯೋ, ಇಲ್ಲವೋ ? ಅದಾಗಲಿ ಬಿಡಲಿ, ಶ್ರೀನಿವಾಸರಾಯರು ಇಂತಹ ಒಳ್ಳೆಯ ಕೆಲಸಮಾಡಿರುವುದಕ್ಕಾಗಿ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**ಬಿ. ವಿ. ವೈಕುಂಠರಾಜು**
ಅಧ್ಯಕ್ಷರು
ಕರ್ನಾಟಕ ನಾಟಕ ಅಕಾಡೆಮಿ

# ಅಪೂರ್ವ ಸಾಹಸ

ನನ್ನ ಆಸಕ್ತಿ ಹಾಗೂ ಕಲಿಕೆ ರಾಜ್ಯಶಾಸ್ತ್ರ ಮತ್ತು ಸಾಹಿತ್ಯವಾದರೆ, ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರದು ಕಲಿಕೆ ಇಂಜಿನಿಯರಿಂಗ್ ಮತ್ತು ಆಸಕ್ತಿ ಕನ್ನಡ ಸಾಹಿತ್ಯ ರಚನೆ. ನಮ್ಮಿಬ್ಬರನ್ನು ಸಮಾನವಾಗಿ ಬೆಸೆದುಕೊಂಡಿರುವ ಕೊಂಡಿ ನಮ್ಮಲ್ಲಿರುವ ಕನ್ನಡ ಸಾಹಿತ್ಯದ ಬಗೆಗಿನ ಒಲವು. ಶ್ರೀಯುತ ಶ್ರೀನಿವಾಸರಾಯರು ಮೂಲತಃ ಸೃಜನಶೀಲ ಲೇಖಕರು. ಬಹು ಹಿಂದೆಯೇ ಅಂದರೆ 1949ರಲ್ಲೇ ಅವರು 'ಅಖಿಲ ಕರ್ನಾಟಕ ಸಣ್ಣ ಕಥಾ ಸ್ಪರ್ಧೆ'ಯಲ್ಲಿ ಬಹುಮಾನ ಗಳಿಸಿದ್ದರು. ಅವರ ಹತ್ತಾರು ಕಾದಂಬರಿಗಳು 'ಸುಧಾ' 'ಪ್ರಜಾಮತ' 'ಕನ್ನಡಪ್ರಭ' ಮೊದಲಾದ ಪತ್ರಿಕೆಗಳಲ್ಲಿ ಧಾರವಾಹಿಗಳಾಗಿ ಪ್ರಕಟವಾಗಿ ಸಾಕಷ್ಟು ಜನಪ್ರಿಯತೆ ಪಡೆದಿವೆ. ಇವರ ಅನುವಾದಿತ ಕೃತಿ ಒರಿಯಾ ಕಥೆಗಳು ಕರ್ನಾಟಕ ಸರ್ಕಾರದ ಪುರಸ್ಕಾರವನ್ನು ಪಡೆದಿದೆ. ಇಂತಹ ಜನಪ್ರಿಯ ಬರಹಗಾರರು ಸಂಶೋಧನಾ ಕ್ಷೇತ್ರಕ್ಕೆ ಬರುವುದು ತೀರಾ ಅಪರೂಪ. ಏಕೆಂದರೆ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷವಾಗಿ ಸಂಶೋಧನೆಗೆಂದೇ ನೇಮಕ ಗೊಂಡವರೂ ಸಹ ದಿನನಿತ್ಯ ಪತ್ರಿಕೆಗಳಲ್ಲಿ ಹೆಸರು ಬರುವಂತಹ ಲೇಖನ ವ್ಯವಸಾಯದಲ್ಲಿ ತೊಡಗುತ್ತಿರುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯ ಪರಿಪಾಠವಾಗಿದೆ. ಆದರೆ ಶ್ರೀನಿವಾಸರಾವ್ ಅವರು ಅನೇಕ ವರ್ಷಗಳ ಕಾಲ ದುಡಿದು, ವಿಷಯ ಸಂಗ್ರಹಿಸಿ ಸಂಶೋಧನೆ ಮತ್ತು ಪರಿಷ್ಕರಣಗಳ ಮೂಲಕ ನಾಡಿನ ಜನತೆಗೆ ದೀರ್ಘಕಾಲ ಪ್ರಯೋಜನಕ್ಕೆ ಬರುವಂತಹ ಕೃತಿರಚನೆಗೆ ಕೈಹಾಕಿರುವುದು ಸಂತಸದ ವಿಚಾರ. ಅವರ ಇತ್ತೀಚಿನ "ಮಕ್ಕಳೇ ಇವರನ್ನು ಬಲ್ಲಿರಾ ?" ಎಂಬ ಕೃತಿ ಮಕ್ಕಳ ಸಾಹಿತ್ಯ ಅಧ್ಯಯನಕ್ಕೆ ಉಪಯುಕ್ತವಾದ ಕೃತಿ. ಪ್ರಸ್ತುತಗ್ರಂಥ 'ಕನ್ನಡ ಸಾಹಿತಿ ದರ್ಶನ' ಶ್ರೀನಿವಾಸರಾವ್ ಅವರ ಜೀವನದ ಅಪೂರ್ವಸಾಹಸ. ಕನ್ನಡ ಸಾಹಿತ್ಯ ವೈವಿಧ್ಯತೆಯನ್ನು ಕಥಾರೂಪದಲ್ಲಿ ಮಕ್ಕಳಿಗೆ ಪರಿಚಯಿಸುವುದು ನನ್ನ ಉದ್ದೇಶವೆಂದು ನಮ್ರತೆಯಿಂದ ಹೇಳುವ ಲೇಖಕರು ಪರೋಕ್ಷವಾಗಿ ಇದು 'ಕನ್ನಡಿಗೆಲ್ಲರ ಕೈಪಿಡಿ' ಯಾಗುವುದೆಂದು ಸೂಚಿಸುತ್ತಾರೆ. ವ್ಯಕ್ತಿ ಯೊಬ್ಬರು ಮಾಡಬಹುದಾದ ಅತ್ಯುತ್ತಮ ಪ್ರಯತ್ನವಿದು.' ತಮ್ಮ ಪತಿಯ ಈ ಅಪೂರ್ವ ಕೆಲಸಕ್ಕೆ ಬೆನ್ನೆಲುಬಾಗಿ ಶ್ರೀಮತಿ ಅನುಸೂಯರಾವ್ ಸಹ ದುಡಿದಿದ್ದಾರೆ. ಕನ್ನಡ ಮಕ್ಕಳು ಓದಲೇಬೇಕಾದ ಇಂತಹ ಅಪೂರ್ವಗ್ರಂಥವನ್ನು ಕನ್ನಡ ಸಾಹಿತ್ಯಕ್ಕೆ ಉಡುಗೊರೆಯಾಗಿ ಕೊಟ್ಟ ಶ್ರೀನಿವಾಸರಾವ್ ದಂಪತಿಗಳನ್ನು ಹೃತ್ಪೂರ್ವಕ ವಾಗಿ ಅಭಿನಂದಿಸುತ್ತೇನೆ.

ಹೆಚ್. ಆರ್. ದಾಸೇಗೌಡ

ನಿರ್ದೇಶಕರು, ಕಾಲೇಜು ಅಭಿವೃದ್ಧಿ ಸಮಿತಿ, ಬೆಂ.ವಿ.ವಿ.

# ಉಪಯುಕ್ತ ಕೃತಿ

....ಗ್ರಂಥದ ತುಂಬ ಚಿಮ್ಮಿ ಕಣ್ಣು ಹಾಯಿಸಿ ಬಂದಾಗ ಫಲಪುಷ್ಪ ಪ್ರದರ್ಶನಕ್ಕೆ ಅಣಿಯಾಗಿರುವ ಲ್ಯಾಲಾಬಾಗ್ ತುಂಬ ಚಿಮ್ಮಿ ಸುತ್ತಾಡಿ ಬಂದಾಗ ಆಗುವ ಆನಂದ, ಉಲ್ಲಾಸಗಳ ಅನುಭವವಾಗುತ್ತದೆ. ಯಾವೊಂದು ಸಸ್ಯದ ವಿವರ ಅಥವಾ ಯಾವೊಂದು ಹೂವಿನ ಜಾತಿ ವಿಶೇಷ ನಮಗೆ ಅರ್ಥವಾಗಿರದಿದ್ದರೂ ಎಲ್ಲವನ್ನೂ ನೋಡಿದ ಸಂತೋಷ. ಎಲ್ಲದರ ಅಲ್ಪ ಪರಿಚಯದ ಸಂತೃಪ್ತಿ ಲಭಿಸುತ್ತದೆ. ಕನ್ನಡ ಸಾಹಿತ್ಯಾರಾಮ ಇಷ್ಟೊಂದು ಸಮೃದ್ಧವೇ ? ಇಷ್ಟೊಂದು ವೈವಿಧ್ಯ ಪೂರ್ಣವೆ ?

ಕೆಲವರ ಗ್ರಂಥ ಪರಿಚಿತ ಎನಿಸಿದರೆ. ಕೆಲವರ ಹೆಸರು ಪರಿಚಿತ ಎನಿಸೀತು, ಅವರವರ ರುಚಿಗೆ ತಕ್ಕ ವಿಷಯದ ಗ್ರಂಥದ ಹಾಗೂ ಲೇಖನ ಬಗ್ಗೆ ತಕ್ಕಷ್ಟು ಪರಿಚಯ ಸಿಕ್ಕರೆ ಸಾಕಲ್ಲ ? ಹೆಚ್ಚಿನ ವಿವರಪೂರ್ಣ ಅಧ್ಯಯನ ಕುತೂಹಲ ಕೆರಳಿಸಲಿಕ್ಕೆ ?

ನಿರೂಪಣೆಯ ಕ್ರಮ ನೋಡಿದರೆ ಮಕ್ಕಳಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಕುತೂಹಲ ಕೆರಳಿಸಿ ಗಂಭೀರ ಅಧ್ಯಯನದತ್ತ ಅವರ ಮನಸ್ಸನ್ನು ತಿರುಗಿಸುವುದೇ ಪ್ರಾಯಶಃ ಈ ಗ್ರಂಥದ ಉದ್ದೇಶವೆಂದು ತೋರುತ್ತದೆ. ಹಿರಿಯರಿಗೂ ಅನೇಕ ರೀತಿಯಲ್ಲಿ ಈ ಕೃತಿ ಅಂಥದೇ ಕುತೂಹಲವನ್ನು ಒದಗಿಸಬಲ್ಲದು. ಉದಾಹರಣೆಗೆಂದು ಹೇಳುವುದಾದರೆ ಕನ್ನಡದಲ್ಲಿ ಬರೆದ ರಾಮಾಯಣಗಳೆಷ್ಟು ? ಭಾರತಗಳೆಷ್ಟು ? ಇಂಥ ವಿವರಗಳು ಬೇಕೆಂದಾಗ ನೀಡುವ ಗ್ರಂಥಗಳೆಷ್ಟಿವೆ ? ಈ ಗ್ರಂಥ ಆ ಕೆಲಸ ಮಾಡಿದೆ.

ಹಳಗನ್ನಡ, ನಡುಗನ್ನಡ, ಹೊಸಗನ್ನಡ (ಸಮಕಾಲೀನರು ಸೇರಿದಂತೆ) ಸಾಹಿತ್ಯ ಮತ್ತು ಸಾಹಿತಿಗಳ ಸಂಕ್ಷಿಪ್ತ ಪರಿಚಯಕ್ಕಾಗಿ ಅದೆಲ್ಲವನ್ನು ಒಂದೆಡೆ ನೀಡುವ ಈ ಗ್ರಂಥ ಸಾಹಿತ್ಯಾಭ್ಯಾಸಿಗಳೆಲ್ಲರಿಗೂ ಉಪಯುಕ್ತ ಮತ್ತು ಅವಶ್ಯಕವೆನಿಸೀತು.

ಇಂಥ ಸಂಕಲನದ ಕೆಲಸ ಅಷ್ಟು ಸರಳ, ಸುಲಭ ಅಲ್ಲ. ಲೇಖಕರ ವೈಯುಕ್ತಿಕ ಹಾಗೂ ಇತರ ವಿವರಗಳನ್ನು ನೀಡುವ ಯಾವ ನಿಯತಕಾಲಿಕ ಪತ್ರಿಕೆಗಳು ಇದ್ದಂತಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದವರು ಈಚೆಗೆ ಪ್ರಕಟಿಸಿದ 'ಆಧುನಿಕ ಕನ್ನಡ ಬರಹಗಾರರು' ಸಂಪುಟದಲ್ಲಿ ದೊರೆಯುವಷ್ಟು ವಿವರಗಳ ಹೊರತಾಗಿ ಈ ದಿಕ್ಕಿನಲ್ಲಿ ಕೆಲಸ ಮಾಡಲು ಹೊರಡುವ ಲೇಖಕರು ಹೆಚ್ಚಾಗಿ ಸ್ವಪ್ರಯತ್ನವನ್ನೇ ಅವಲಂಬಿಸಬೇಕಾಗುತ್ತದೆ. ಇಷ್ಟೆಲ್ಲ ಅಡಚಣೆಗಳಿರುವಾಗಲೂ ಶ್ರೀನಿವಾಸರಾಯರು ಪ್ರಾರಂಭಿಸಿ ಪೂರ್ತಿ ಮಾಡಿದ ಈ ಕೆಲಸ ಒಂದು ಸಾಹಸವೇ ಎಂದು ಹೇಳಬೇಕು. ಅದಕ್ಕಾಗಿ ಅವರು ಅಭಿನಂದನೀಯರು.

ಕನ್ನಡ ಓದುಗರೆಲ್ಲ ಈ ಗ್ರಂಥದ ಸಂಪೂರ್ಣ ಲಾಭ ಪಡೆಯಲೆಂದು ಆಶಿಸುತ್ತೇನೆ.

(ದಿವಂಗತ) **ಜಯತೀರ್ಥ ರಾಜಪುರೋಹಿತ**
ಐ. ಎ. ಎಸ್.

# ೧

# ಪೌರಾಣಿಕ ಮತ್ತು ಧಾರ್ಮಿಕ
# ಸಾಹಿತ್ಯ ರಚನಕಾರರು

## (ಅ) 'ಮಹಾಭಾರತ' ರಚನಕಾರರು

"ತಾತ ಬಂದ...ತಾತ ಬಂದ" ಬಾಗಿಲು ತೆಗೆದ ಮುಕುಂದ ಚಪ್ಪಾಳೆ ತಟ್ಟಿ ಕುಣಿದ.

ಬಿಳಿ ಮೀಸೆಯ ಮರೆಯಲ್ಲಿ ನಗೆ ಹೊರಸೂಸಿತ್ತು. ಒಳಗೆ ಬಂದ ವ್ಯಾಸ ರಾಯರು ಕೊಡೆಯನ್ನು ಮಡಚಿ "ಎಷ್ಟು ದೊಡ್ಡೋನಾಗ್ಬಿಟ್ಟಿದ್ದೀಯೊ ಮುಕುಂದ" ಎಂದು ನುಡಿಯುತ್ತ ಹತ್ತಿರ ಎಳೆದುಕೊಂಡರು ಪ್ರೀತಿಯಿಂದ. ಮುಕುಂದ ತಾತನ ಟೋಪಿಯನ್ನು ತೆಗೆದುಕೊಂಡು ತನ್ನ ತಲೆಗೆ ಹಾಕಿಕೊಂಡ. "ಬೆಳಗಾಗೇಳ್ತಾನೆ ಎಷ್ಟೊಂದು ಸೆಖೆ" ಬೆವರುತ್ತಿದ್ದ ಬೋಳು ತಲೆಯ ಮೇಲೆ ಕೈ ಆಡಿಸಿಕೊಂಡು "ಇದೇನು ಕುರುಕ್ಷೇತ್ರ ನಡೀತಿದೆ ಅಣ್ಣತಮ್ಮಂದ್ರಲ್ಲಿ" ನುಡಿದು ಪಡಸಾಲೆಯೊಳಗೆ ಹೊಡೆದಾಡುತ್ತಿದ್ದ ದಿನೇಶ, ದಿನಕರರ ಮಧ್ಯೆ ನಿಂತು ಜಗಳ ಬಿಡಿಸಿದರು.

"ನೋಡಿ ತಾತ, ನನ್ನ ಬಾಲ್ ಎಲ್ಲೊ ಮುಚ್ಚಿಟ್ಟಿಟ್ಟಿದ್ದಾನೆ" ದಿನೇಶ ದೂರಿತ್ತ.

"ನೋಡಿ ತಾತ...ನನ್ನ ಆಟಕ್ಕೆ ಸೇರಿಸ್ಕೊಳ್ಳೊದಿಲ್ವಂತೆ ಈ ಧಡಿಯಾ" ಅಣ್ಣನ ಮೇಲೇರಿ ಹೋದ ದಿನಕರ ಕೈಲಿ ಹಿಡಿದಿದ್ದ ದಿಂಬನ್ನೇ ಎತ್ತಿಕೊಂಡು.

"ಇಷ್ಟು ಸಣ್ಣ ವಿಷಯಕ್ಕೆಲ್ಲಾ ನೀವು ಮನೇನ ಕುರುಕ್ಷೇತ್ರ ಮಾಡ್ಬಿಟ್ರೆ ಹೇಗಯ್ಯಾ...ಸಮಾಧಾನ ತಂದ್ಕೊಳ್ಳಿ. ಅವನು ಚೆಂಡು ಕೊಡ್ದೆ ನೀನು ಆಡ್ಲಾರೆ. ನಿನ್ನ ಬ್ಯಾಟು ಇಲ್ದೆ ಅವನು ಆಡ್ಲಾರ. ಹೌದೊ ಅಲ್ವೋ ?" ಇಬ್ಬರನ್ನೂ ಹತ್ತಿರ ಎಳೆದುಕೊಂಡರು.

ಇಬ್ಬರೂ ಹೌದೆಂದರು.

"ಅಣ್ಣ ತಮ್ಮಂದ್ರು ಹೀಗೆಲ್ಲಾ ಜಗ್ಳ ಕಾಯ್ಬಾರ್ದು. ಅನ್ಯೋನ್ಯವಾಗಿರ್ಬೇಕು. ನೋಡಪ್ಪಾ ದಿನಕರ...ನೀನು ಒಳ್ಳೆ ಹುಡ್ಗ ಹೌದೊ ಅಲ್ವೊ ?"

"ದಿನಕರ ಏನೋ ಒಳ್ಳೇನು ತಾತ...ಆದ್ರೆ ಎಲ್ಲಾ ತರ್ಲೇನೂ ಈ ದಿನೇಶಂದೆ. ನನ್ನೂ ಆಟಕ್ಕೆ ಸೇರ್ಸಿಕೊಳ್ಳೋದಿಲ್ವಂತೆ...ಒಬ್ನೇ ಆಡ್ತಾನಂತೆ..."

ದೂರಿತ್ತ ಮುಕುಂದನ ಕಿವಿ ಹಿಂಡಿದ ದಿನೇಶ "ಇವನೊಬ್ಬ ಶಕುನಿ...ಸಮಯ ನೋಡ್ಕೊಂಡು ಮುಳ್ಳು ಚುಚ್ತಾನೆ. ಅಡ್ಗೆಮನೇಲಿ ಅಮ್ಮನ ಸೆರಗ್ನಲ್ಲಿ ಸೇರ್ಕೊಂಡು ಏನೇನೊ ಹೇಳ್ತಾನೆ. ಅಪ್ಪ ಆಫೀಸ್ನಿಂದ ಬರೋದೆ ತಡ ದೂರಿನ ಲಿಸ್ಟೇ ತಗೊಂಡ್ಹೋಗ್ಬಿಡ್ತಾನೆ."

"ಇದೇನ್ರೊ ತಾತ ಅಪರೂಪವಾಗಿ ಬರ್‍ತಾ ಇದ್ದಾರೆ: ಆಗ್ಲೆ ನಿಮ್ಮ

ಪ್ರದರ್ಶನ ಶುರುಮಾಡ್ಬಿಟ್ರಿ" ಎನ್ನುತ್ತ ಅಡಿಗೆಮನೆಯಿಂದ ಹೊರಗೆ ಬಂದರು ಪದ್ದಮ್ಮ ತಮ್ಮ ಕೈಯನ್ನು ಸೆರಗಿಗೆ ಒರೆಸಿಕೊಳ್ಳುತ್ತ.

"ನೋಡಿ ವ್ಯಾಸಣ್ಣ...ಎಷ್ಟು ಹೊಡೆದಾಡ್ತಾರೆ. ಭೀಮ ದುರ್ಯೋಧನರ ಹಾಗೆ..ಹೊತ್ತಿಲ್ಲ ಗೊತ್ತಿಲ್ಲ. ಸಣ್ಣಪುಟ್ಟ ವಿಷ್ಯಕ್ಕೆಲ್ಲ ಕಾದಾಡಿ ಬೂದಿ ಹುಯ್ಕೊಂತಾರೆ ಹೂಂ...ಹೋಗ್ಲಿ ಈ ವಿಷಯ...ಊರ್ನಿಂದ ಬಂದ್ರಾ ? ರುಕ್ಮಿಣಿ ಚೆನ್ನಾಗಿದ್ದಾಳಾ ? ಮಕ್ಕಳನ್ನು ಕರ್ಕೊಂಡು ಬರ್ಬೇಕಾಗಿತ್ತು...ಹ್ಯಾಗೂ ರಜಾ ಇತ್ತು. ಹಾಯಾಗಿ ಒಂದು ತಿಂಗ್ಳು ಇರ್ಬ್ಬೋದಾಗಿತ್ತು" ಎಂದು ಊರಿನ ಕ್ಷೇಮಸಮಾಚಾರವನ್ನು ಪ್ರಶ್ನಿಸಿದರು.

"ಶಕುನಿ ಯಾರು ತಾತ....?" ತಾತನ ಬಳಿ ನಿಂತಿದ್ದ ಮುಕುಂದ ತಾತ ಮಾತನಾಡಲೂ ಬಿಡದೆ ಅವರ ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಳ್ಳುತ್ತ ಪ್ರಶ್ನಿಸಿದ.

ವ್ಯಾಸಣ್ಣ ತನ್ನ ಊರಿನ ವಿಷಯ ಹೇಳಲು ಪ್ರಾರಂಭಿಸಿದಾಗ ಮುಕುಂದ ತಾಯಿಯ ಬಳಿಗೆ ನಡೆದ. ಸೀರೆಯ ನೆರಿಯನ್ನು .ತನ್ನ ಸುತ್ತ ಸುತ್ತಿಕೊಳ್ಳುತ್ತ "ಭೀಮ–ದುರ್ಯೋಧನ ಯಾರಮ್ಮಾ..." ಸೀರೆಯನ್ನು ಜಗ್ಗಿದ.

"ನಿಮ್ಮ ತಾತನ್ನ ಕೇಳು ಹೇಳ್ತಾರೆ. ನಿನ್ನ ಹತ್ರ ಕೂಡಿಸ್ಕೊಂಡು ನೀನು ಕೇಳೊ ಪ್ರಶ್ನೆಗೆಲ್ಲಾ ಉತ್ತರ ಹೇಳೋ ತಾಳ್ಮೇನೂ ಇಲ್ಲ. ಹೊತ್ತೂ ಇಲ್ಲ. ತಾತಂಗೆ ತಣ್ಣಗೆ ನಿಂಬೆಹಣ್ಣಿನ ಷರಬತ್ತಾದ್ರೂ ಮಾಡ್ಕೊಂಡು ಬರ್ತೀನಿ. ನೀನು ಮಾತ್ನಾಡ್ತಾ ಕೂತಿರು. ಸ್ಕೂಲ್ನಲ್ಲಿ ಹುಡುಗ್ರಹತ್ರ ಹೆಣ್ಗೆ ಹೆಣ್ಗೆ ಕೋಪಾನೆ ಹೊರ್ಟುಹೋಗಿದೆ. ಶಾಂತವಾಗಿ ಕೂತ್ಕೊಂಡು ಎಷ್ಟು ಹೊತ್ತಾದ್ರೂ ಕಥೆ ಹೇಳ್ತಾ ಇರ್ತಾರೆ..." ಒಳನಡೆದರು ಪದ್ದಮ್ಮ.

ಮುಗುಳ್ನಕ್ಕು ಮುಕುಂದನನ್ನು ಹತ್ತಿರ ಎಳೆದುಕೊಂಡು ಗುಂಗುರು ಕೂದಲ ಮೇಲೆ ನಲ್ಮೆಯಿಂದ ಕೈ ಆಡಿಸಿದರು ವ್ಯಾಸರಾಯರು.

"ಕಥೆ ಹೇಳಿ ತಾತ..." ತಾತನ ಕೆನ್ನೆ ಮೃದುವಾಗಿ ತಟ್ಟಿದ ಮುಕುಂದ.

"ಕುರುಕ್ಷೇತ್ರ ಎಲ್ಲಿದೆ ತಾತ..." ದಿನೇಶ ಹತ್ತಿರ ಬಂದು ನಿಂತ.

"ಅಷ್ಟೂ ಗೊತ್ತಿಲ್ಲ ಇವಂಗೆ ಭಗವದ್ಗೀತೇಲಿ ಅಲ್ವೇನ್ ತಾತ..." ಗರ್ವದಿಂದ ಎದೆ ಉಬ್ಬಿಸಿ ನುಡಿದ ದಿನಕರ. ವ್ಯಾಸರಾಯರು ಮುಗುಳ್ನಕ್ಕರು.

"ಭಗವದ್ಗೀತೇಲಿ ಹೆಸರು ಬರುತ್ತೆ ನಿಜ. ಆದ್ರೆ ಆ ಕ್ಷೇತ್ರ ದೆಹಲಿ ಹತ್ರ ಇದೆ. ಕೌರವರಿಗೂ ಪಾಂಡವರಿಗೂ ಯುದ್ಧ ನಡೆದ ಸ್ಥಳ 'ಕುರುಕ್ಷೇತ್ರ'. ಈ ಕುರುಕ್ಷೇತ್ರ ದಲ್ಲಿ ಕೃಷ್ಣ ಅರ್ಜುನನಿಗೆ ಭಗವದ್ಗೀತೆ ಬೋಧಿಸ್ತಾನೆ. ಎಲ್ಲಾ ಸರಿಯಾಗಿ ಹೇಳ್ತೀನಿ. ಈ ವಿಷಯಾನ್ನೆಲ್ಲಾ ಹುಡುಗ್ರು ಚೆನ್ನಾಗಿ ತಿಳ್ಕೊಂಡಿರ್ಬೇಕು. ಐದು ನಿಮಿಷ ಕೂತಿರಿ. ಮೈ ಎಲ್ಲಾ ಬೆವರ್ತಾ ಇದೆ. ಸ್ನಾನ ಮಾಡ್ಕೊಂಡು ಬಂದ್ಬಿಡ್ತೀನಿ"

ಜೇಲದಿಂದ ಟವಲನ್ನು ತೆಗೆದು ಹೆಗಲ ಮೇಲೆ ಹಾಕಿಕೊಂಡು ಬಚ್ಚಲಮನೆಯತ್ತ ನಡೆದರು.

"ಸುಮ್ನೆ ಕೂತ್ಕೊ ಬನ್ರೊ. ತಾತ ಒಂದು ಕಥೆ ಹೇಳ್ತಾರೆ" ಮುಕುಂದ ಗೋಡೆ ಒರಗಿ ಕುಳಿತ. ದಿನಕರನಿಗೆ ಚೆಂಡು ಕೊಟ್ಟು ದಿನೇಶನೂ ಕುಳಿತ. ಬ್ಯಾಟು ಚೆಂಡನ್ನು ತನ್ನ ಹತ್ತಿರವೇ ಇಟ್ಟುಕೊಂಡು ಇವರಿಂದ ಸ್ವಲ್ಪ ದೂರದಲ್ಲಿ ದಿನಕರನೂ ಕುಳಿತ.

"'ಭಾರತ' ಹೆಸರು ಕೇಳಿದ್ದೀರಾ...?" ಸ್ನಾನ ಮಾಡಿ ಸಂಧ್ಯಾವಂದನೆ ಮುಗಿಸಿ ಪದ್ಮಮ್ಮ ತಂದಿರಿಸಿದ್ದ ಷರಬತ್ತನ್ನು ಕುಡಿಯುತ್ತ ಪ್ರಶ್ನಿಸಿದರು ವ್ಯಾಸರಾಯರು.

"ಭಾರತದ ಹೆಸ್ರು ಕೇಳ್ದೆ ಏನು? ನಾವಿರೋದೇ ಭಾರತ" ನುಡಿದ ದಿನೇಶ ಗರ್ವದಿಂದ.

"ಅವ್ನರಿ, 'ಭಾರತ' ಅನ್ನೊ ಪುಸ್ತಕದ ಹೆಸ್ರು ಕೇಳಿದ್ದೀರಾ?...ಅದನ್ನು ಬರ್ದೋರು ಯಾರು?"

ಮೂರು ಜನರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ದಿನೇಶ, ಮುಕುಂದ ತಮಗೆ ಗೊತ್ತಿಲ್ಲವೆಂದು ತಲೆ ಅಲ್ಲಾಡಿಸಿದರು.

"ನಂಗೊತ್ತಿದೆ" ಎದ್ದುನಿಂತು ನುಡಿದ ದಿನಕರ.

"ಯಾರು?"

"ಕುಮಾರವ್ಯಾಸ"

"ಭೇಷ್. ಆದ್ರೆ ಕುಮಾರವ್ಯಾಸ ಬರೆದದ್ದು ಕನ್ನಡ ಭಾರತ. ಇದಕ್ಕೂ ಹಿಂದೆ... ಬಾಳ ಹಿಂದೆ...ಅಂದ್ರೆ ಸಾವಿರಾರು ವರ್ಷಗಳ ಮುಂಚೆ 'ಭಾರತಂ ಪಂಚಮೋ ವೇದಃ' ಎಂದು ಖ್ಯಾತವಾಗಿರುವ ಸಂಸ್ಕೃತ ಭಾರತವನ್ನು ಇನ್ನೊಬ್ರು ರಚಿಸಿದ್ರು...ಜ್ಞಾಪಿಸ್ಕೊ ದಿನಕರ, ನೀನ್ಹೇಳ್ಬಹುದ್ದು. ನಿಂಗೆ ಸ್ವಲ್ಪ ವಿಷಯ ಗೊತ್ತಿದೆ."

ಒಂದು ನಿಮಿಷ ಯೋಚಿಸಿದ ದಿನಕರ ಜ್ಞಾಪಕ ಬರಲಿಲ್ಲವೆಂದು ತಲೆ ಅಲ್ಲಾಡಿಸಿದ.

"ನಾನೇ ರಚಿಸಿದ್ದು." ಮಾತು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು. "ತಾತಂಗೆ ಈಗ ಸಾವಿರ ವರ್ಷ" ಚಪ್ಪಾಳೆ ತಟ್ಟಿ ಕುಣಿದ ಮುಕುಂದ.

"ಅಷ್ಟೂ ಗೊತ್ತಾಗ್ಲಿಲ್ವೇನ್ರೊ ನಿಮ್ಗೆ. ತಾತನ ಹೆಸ್ರು ಏನು? 'ವ್ಯಾಸಣ್ಣ'. ಭಾರತ ಮೊದ್ಲು ರಚಿಸಿದೋರು ವ್ಯಾಸಮಹರ್ಷಿ. ಇವರ ಮುತ್ತಾತನವರ ಮುತ್ತಾತನ ಕೋಲುತಾತ" ಅಡಿಗೇಮನೆಯಲ್ಲೆ ನುಡಿದರು ಪದ್ಮಮ್ಮ.

"ಹೌದೇನು ತಾತ?" ಕುತೂಹಲದಿಂದ ಪ್ರಶ್ನಿಸಿದ ದಿನೇಶ.

"ವೇದ ಪುರಾಣಗಳನ್ನು ರಚಿಸಿದ ವೇದವ್ಯಾಸ ಮಹರ್ಷಿಗಳೆಲ್ಲಿ? ಶಾಲಾ ಮಾಸ್ತರ ನಾನೆಲ್ಲಿ ಮಗು! ನಮ್ಮಿಬ್ಬರದೂ ಒಂದೇ ಹೆಸ್ರು. ಅದೇ ಸಾಮ್ಯ.

ಅವರ ಹಾಗೆ ನಾನು ವಸಿಷ್ಠ ವಂಶೋದ್ಭವ. ಇದೇ ಹೆಮ್ಮೆಯ ವಿಷಯ. ಅವರು ಮಹಾನ್ ಕೃತಿಗಳನ್ನು ರಚಿಸಿ ಈ ಪ್ರಪಂಚದಲ್ಲಿ ಅಮರರಾಗಿ ಉಳಿದಿದ್ದಾರೆ. ನಾನು ಆ ಪವಿತ್ರ ಗ್ರಂಥವಾಚನ ಮಾಡಿ ನನ್ನ ಜನ್ಮ ಸಾರ್ಥಕಪಡಿಸಿಕೊಳ್ಳೋದಕ್ಕೆ ಪ್ರಯತ್ನಿಸ್ತಾ ಇದ್ದೀನಿ."

"ಅವರು ಯಾವಾಗ ಇದ್ರು ತಾತ ?" ದಿನಕರನ ಪ್ರಶ್ನೆ.

"ಕ್ರಿಸ್ತಪೂರ್ವ ಅಂದರೆ ಕ್ರಿಸ್ತಶಕ ಪ್ರಾರಂಭ ಆಗೋದಕ್ಕೆ ಸುಮಾರು 400–500 ವರ್ಷ ಹಿಂದಿನವರು ಅಂತ ಪ್ರತೀತಿ."

"ಅಬ್ಬಬ್ಬಾ, 24 ಶತಮಾನ ಹಿಂದಿದ್ದೋರು ಈ ಮಹರ್ಷಿ! ಅಂದ್ರೆ ಈ 'ಭಾರತಾ'ನೂ ಪುರಾತನವಾದ್ದು."

"ಹೌದು, ಇದು ಸುಮಾರು ನೂರು ಸಾವಿರ ಶ್ಲೋಕಗಳುಳ್ಳ ಬೃಹತ್ ಗ್ರಂಥ. ಇದನ್ನು ವೈಶಂಪಾಯನ ಎಂಬ ಮಹರ್ಷಿ ಸಂಸ್ಕೃತದಲ್ಲಿ ಬರೆದು ಪ್ರಚುರಪಡಿಸಿದ್ರು. ಸೂತಪುರಾಣಿಕರು ಅನ್ನೋ ಇನ್ನೊಬ್ಬ ಋಷಿ ಇದಕ್ಕೆ ಟಿಪ್ಪಣಿ ಬರೆದು ಎಲ್ಲಾ ಜನರಿಗೂ ಸರಿಯಾಗಿ ತಿಳಿಯೋ ಹಾಗೆ ವಿವರಿಸಿದ್ರು. ಈಗ ಇದು ಪ್ರಪಂಚದ ಎಲ್ಲಾ ಭಾಷೇಲೂ ತರ್ಜುಮೆ ಆಗಿದೆ. ಅದ್ಭುತ ಗ್ರಂಥ ಅಂತ ಎಲ್ಲಾರೂ ಹೊಗಳಿದ್ದಾರೆ. ಇಂಥಾ ಬೃಹತ್ ಗ್ರಂಥ ಪ್ರಪಂಚದ ಇನ್ಯಾವ ಭಾಷೇಲೂ ಇಲ್ಲ. ಕನ್ನಡದಲ್ಲಿ ಇದನ್ನು ಆಧರಿಸಿ ಮೊದ್ಲು ಬರೆದೋರು ಅಂದ್ರೆ ಆದಿಕವಿ ಪಂಪ.

"ಕಥೆ ಹೇಳಿ ತಾತ ಅಂದ್ರೆ ಏನೇನೋ ಹೇಳ್ತಿದ್ದೀರಲ್ಲ."

ಮುಕುಂದ ಬೇಸರವನ್ನು ಹತ್ತಿಕ್ಕದಾಗಿದ್ದ.

"ಕಥೆ ಜೊತೇಲಿ ಕವಿಚರಿತ್ರೇನೂ ಸ್ವಲ್ಪ ತಿಳ್ಕೋಬೇಕು ಮಗು."

ಹತ್ತಿರ ಸೆಳೆದುಕೊಂಡು ತಲೆ ಸವರಿದರು.

"ಆದಿಕವಿ ಅಂದ್ರೆ...ಪಂಪಂಗೆ ಮುಂಚೆ ಕನ್ನಡದಲ್ಲಿ ಕವಿಗಳೇ ಇರ್ಲಿಲ್ವೆ ?"

"ಇದ್ರು. ಆದ್ರೆ ಅವರ ಬಗ್ಗೆ ನಮಗೆ ಹೆಚ್ಚಿನ ವಿಷಯ ತಿಳಿದಿಲ್ಲ. 'ಕವಿರಾಜಮಾರ್ಗ' ಅನ್ನುವ ಲಕ್ಷಣಗ್ರಂಥ ನೃಪತುಂಗನ* ಕಾಲದಲ್ಲಿ ರಚಿತವಾಗಿತ್ತು, ಒಂದು ಭಾಷೆಯಲ್ಲಿ ಒಂದು ಲಕ್ಷಣಗ್ರಂಥರಚನೆಯಾಗಬೇಕಾದರೆ ಅಷ್ಟುಹೊತ್ತಿಗೆ ಭಾಷೆ ಸಾಕಷ್ಟು ಬೆಳೆದಿರಬೇಕಾದ್ದು ಅನಿವಾರ್ಯ. ಭಾಷೆ ಬೆಳೆಯದೆ ಅದಕ್ಕೆ ಕಟ್ಟುಪಾಡುಗಳನ್ನು ಏರ್ಪಡಿಸುವುದು ಅರ್ಥವಿಲ್ಲದ್ದೆನಿಸುತ್ತದೆ. ಕ್ರಿ.ಶ. 450ರಲ್ಲಿ ದೊರೆತ ಹಲ್ಮಿಡಿ ಶಾಸನದಿಂದ ಕನ್ನಡ ಭಾಷೆ ಅಷ್ಟುಹೊತ್ತಿಗಾಗಲೇ ಸಾಕಷ್ಟು ಬೆಳೆದು ಮೌಖಿಕ ಸ್ಥಿತಿಯಿಂದ ಲಿಖಿತ ರೂಪಕ್ಕಿಳಿದಿತ್ತೆಂದು ತಿಳಿದುಬರುತ್ತದೆ. ಅಂದಿನ ಭಾಷೆಯನ್ನೇ ಕೇಳಿ ಎಷ್ಟು ಸೊಗಸಾಗಿದೆ,

---

* ರಾಷ್ಟ್ರಕೂಟ ಅರಸ ಅಮೋಘವರ್ಷ (ನೃಪತುಂಗ) ನ ಕಾಲ ಕ್ರಿ.ಶ. 815–878.

'ನಮಃ ಶ್ರೀಮತ್ಕದಂಬಪನ್ ತ್ಯಾಗಸಂಪನ್ನನ್ ಕಲಭೋರ
ಅರಿಕಕುಸ್ಥ ಭಟ್ಟೋರನಾಳೆನರಿದಾವಿ ನಾಡುಳ್ ಮೃಗೇಶನಾಗೇನ್ದ್ರ
ಭೀಳರ್...ವಿಜ ಅರಸಂಗೆ ಬಾಳ್ಗಟ್ಟು ಪಲ್ಮಡಿಉಂ ಮೂಱು
ವಳ್ಳಿಉಂ ಕೊಟ್ಟಾರ್...'

ಕ್ರಿ.ಶ. 7ನೇ ಶತಮಾನದ ಹೊತ್ತಿಗೆ ಕನ್ನಡ ಇನ್ನಷ್ಟು ಸಂಪನ್ನವಾಗಿ ಬೆಳೆದಿತ್ತೆಂದು ಕಪ್ಪೆ ಅರಭಟ್ಟನನ್ನು ಸ್ತುತಿಸುವ ಶಾಸನ (ಬಿಜಾಪುರ ಜಿಲ್ಲೆಯ ಬಾದಾಮಿಯಲ್ಲಿ ದೊರೆತಿದೆ) ದಿಂದ ತಿಳಿದುಬರುತ್ತದೆ.

ಸಾಧುಗೆ ಸಾಧು ಮಾಧುರ್ಯನ್ಗೆ ಮಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ ॥

ಕವಿ 'ಕವಿರಾಜಮಾರ್ಗ'ದಲ್ಲಿ ಕರ್ಣಾಟಕದ ಮೇರೆಯನ್ನು ಗುರುತಿಸಿದ್ದಾನೆ. ಈಗಿರುವ ನಮ್ಮ ಕರ್ಣಾಟಕಕ್ಕೆ ನೃಪತುಂಗನ ಕಾಲದ ಕರ್ಣಾಟಕವನ್ನು ಹೋಲಿಸಿದರೆ ಇವಳ ಚಿಕ್ಕದು ಅನ್ನಿಸುತ್ತೆ. ಅದರಲ್ಲಿ ಕವಿ ಹೇಗೆ ವರ್ಣಿಸಿದ್ದಾನೆ ನೋಡಿ...

ಕಾವೇರಿಯಿಂದಮಾ ಗೋ ।
ದಾವರಿವರಮಿರ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು ।
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ ॥"

ವ್ಯಾಸರಾಯರು ಪದ್ಯ ಹೇಳಿ ಮುಗಿಸುತ್ತಿದ್ದಂತೆಯೇ ಪದ್ದಮ್ಮ ಅಡಿಗೆಮನೆಯಿಂದ ಹೊರಬಂದರು, "ನೋಡಿದ್ಯಾ ಮುಕುಂದಾ. ಪದ್ಯ ಹೇಳೋದು ಅಂದ್ರೆ ಹೇಗೆ ಅಂತಾ ಈಗ್ಲಾದರೂ ಗೊತ್ತಾಯ್ತಾ. ಪದ ಪದ ಬಿಡ್ಸಿ ರಾಗವಾಗಿ ಹಾಡಿದ್ರೆ ಸಾಕು ಪದ್ಯದ ಅರ್ಥ ತಾನೇ ತಾನಾಗಿ ಅರ್ಥವಾಗ್ಬಿಡುತ್ತೆ." ನುಡಿದರು.

"ತಾತ ನಂಗೆ ಅರ್ಜುನನ ಕಥೆ ಹೇಳಿ..." ವ್ಯಾಸರಾಯರ ಭುಜ ಹಿಡಿದು ಅಲುಗಾಡಿಸಿದ ಮುಕುಂದ.

"ಅದನ್ನೇ ಹೇಳ್ತೀನಿ ಮಗು...ಪಂಪ* ಕನ್ನಡದ ಆದಿಕವಿ. ಈತ 'ಮಹಾಭಾರತ' ಕಥೆಯನ್ನು ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು 'ವಿಕ್ರಮಾರ್ಜುನ ವಿಜಯ' ಎಂಬ ಹೆಸರಿನ ಉದ್ಗ್ರಂಥ ಬರೆದಿದ್ದಾನೆ. ಇದರಲ್ಲಿ 14 ಆಶ್ವಾಸಗಳಿವೆ. ಶೈಲಿ 'ಚಂಪು'. ಅಂದರೆ ಗದ್ಯ ಪದ್ಯ ಮಿಶ್ರಿತ ಶೈಲಿ.

---

* ಜನನ : ಕ್ರಿ.ಶ. 902, ದುಂದುಭಿ ಸಂವತ್ಸರ. ವೆಂಗಿಮಂಡಲದ ಅಭಿರಾಮದೇವರಾಯ ಈತನ ತಂದೆ, ಪೂರ್ವಜರು ಬ್ರಾಹ್ಮಣರು. ಈತ ಪಂಪನ ಜನನಕಾಲಕ್ಕೆ ಜೈನಮತಾವಲಂಬಿಯಾಗಿದ್ದನು.

"ಇವನು ಯಾವ ಕಾಲದಲ್ಲಿದ್ದ ತಾತ ?" ದಿನೇಶ ಪ್ರಶ್ನಿಸಿದ.

"ಹತ್ತನೇ ಶತಮಾನದಲ್ಲಿ. ಚಾಲುಕ್ಯರಸ ಎರಡನೇ ಅರಿಕೇಸರಿ ಆಶ್ರಯದಲ್ಲಿದ್ದ ಶ್ರೇಷ್ಠ ಆಸ್ಥಾನಕವಿ. ತನ್ನ ರಾಜನನ್ನು ಮೆಚ್ಚಿಸುವುದಕೋಸ್ಕರ ಆತನನ್ನು ಅರ್ಜುನನಿಗೆ ಹೋಲಿಸಿ ಸ್ತುತಿಸಿದ್ದಾನೆ."

"ಕಥೆ ಹೇಳಿ ತಾತ" ಮತ್ತೆ ಪೀಡಿಸಿದ ಮುಕುಂದ.

"ಪಂಪ ಈ ಕಥೇಲಿ ಏನು ಬದಲಾವಣೆ ಮಾಡ್ಕೊಂಡಿದ್ದಾನೆ ?" ದಿನಕರ ಪ್ರಶ್ನಿಸಿ ಹತ್ತಿರ ಬಂದು ಕುಳಿತ.

"ದ್ವಾಪರ ಯುಗದಲ್ಲಿ ಪಾಂಡು ಮತ್ತು ಧೃತರಾಷ್ಟ್ರ ಎಂಬ ಇಬ್ಬರು ಅಣ್ಣ ತಮ್ಮಂದಿರಿದ್ದರು. ಪಾಂಡುವಿನ ಮೊದಲ ಪತ್ನಿಯಾದ ಕುಂತಿಯಲ್ಲಿ ಮೂರು. ಎರಡನೆ ಪತ್ನಿ ಮಾದ್ರಿಯಲ್ಲಿ ಎರಡು ಮಕ್ಕಳು ಜನಿಸಿದರು. ಅವರೇ ಪಾಂಡವರು. ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ. ಧೃತರಾಷ್ಟ್ರನಿಗೆ ನೂರೊಂದು ಜನ ಮಕ್ಕಳು. ದುರ್ಯೋಧನ, ದುಶ್ಯಾಸನ ಮುಂತಾಗಿ ಅವರ ಹೆಸರುಗಳು. ಗಾಂಧಾರಿ ಇವರ ತಾಯಿ. ಧೃತರಾಷ್ಟ್ರನ ಮಕ್ಕಳು ಕೌರವರು, ಬಾಲ್ಯದಲ್ಲಿ ಕೌರವರು, ಪಾಂಡವರು ಒಟ್ಟಿಗೆ ದ್ರೋಣಾಚಾರ್ಯರಲ್ಲಿ ಯುದ್ಧವಿದ್ಯೆ ಕಲಿತು ಪಾರಂಗತರಾಗುತ್ತಾರೆ. ದೊಡ್ಡವರಾದಮೇಲೆ ಇಬ್ಬರಲ್ಲೂ ವೈಮನಸ್ಯ ಬೆಳೆಯುತ್ತ ಹೋಗುತ್ತದೆ. ಮೋಸದ ಪಗಡೆ ಆಟದಲ್ಲಿ ಪಾಂಡವರನ್ನು ಸೋಲಿಸಿ ಅವರ ರಾಜ್ಯವನ್ನೆಲ್ಲಾ ದುರ್ಯೋಧನ ಕಬಳಿಸುತ್ತಾನೆ. ದ್ರೌಪದಿಯ ಸೀರೆ ಎಳೆದು ರಾಜ್ಯಸಭೆಯಲ್ಲಿ ಅವಮಾನ ಮಾಡುತ್ತಾನೆ. ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸಕ್ಕೆ ಪಾಂಡವರನ್ನು ಕಳಿಸುತ್ತಾನೆ. ಪಾಂಡವರ ಪರಮ ಮಿತ್ರ ಶ್ರೀಕೃಷ್ಣ. ಇವನು ಕೌರವ, ಪಾಂಡವರ ಮಧ್ಯೆ ಸಂಧಾನ ನಡೆಸಲು ಪ್ರಯತ್ನ ಮಾಡುತ್ತಾನೆ. ಕೌರವ ಅಂದರೆ ದುರ್ಯೋಧನ 'ಸೂಜಿ ಮೊನೆಯಷ್ಟು ಜಾಗ ಪಾಂಡವರಿಗೆ ಕೊಡಲ್ಲ' ಅಂತ ಹಟ ಮಾಡುತ್ತಾನೆ. 'ಕುರುಕ್ಷೇತ್ರ' ಅನ್ನುವ ಜಾಗದಲ್ಲಿ ಭಾರಿ ಯುದ್ಧ ಆಗುತ್ತದೆ. ಕೌರವನ ಕಡೆ ಹನ್ನೊಂದು ಅಕ್ಷೌಹಿಣಿ ಸೈನ್ಯ. ಪಾಂಡವರ ಕಡೆ ಏಳು ಅಕ್ಷೌಹಿಣಿ ಸೈನ್ಯ. ಕೆಟ್ಟವರಾದ ಕೌರವರು ಎಲ್ಲಾ ಸಾಯುತ್ತಾರೆ. ಪಾಂಡವರು ಜಯಿಸಿ ಭಾರತವರ್ಷದಲ್ಲಿ ಅನೇಕ ವರ್ಷಗಳು ಸುಖದಿಂದ ಇರುತ್ತಾರೆ. ಇದೇ ವ್ಯಾಸಭಾರತದ ತಿರುಳು. ಈ ಭಾರತದುದ್ದಕ್ಕೂ ಶ್ರೀಕೃಷ್ಣನ ಮಹಾತ್ಮೆಯನ್ನು ಅನೇಕ ಘಟನೆಗಳಿಂದ ಬಹಳ ಚೆನ್ನಾಗಿ ವಿವರಿಸಿದ್ದಾನೆ. ಈತ ಮನುಷ್ಯರೂಪದಲ್ಲಿರುವ ಭಗವಂತ ಅನ್ನುವುದನ್ನು ಪ್ರತ್ಯಕ್ಷಪಡಿಸಿದ್ದಾನೆ ಕವಿ."

"ಈ ಕುರುಕ್ಷೇತ್ರದಲ್ಲೆ ಅಲ್ವೆ ಶ್ರೀಕೃಷ್ಣ ಅರ್ಜುನನಿಗೆ ವಿಶ್ವದರ್ಶನ ಮಾಡ್ಸಿದ್ದು, ಭಗವದ್ಗೀತೆ ಉಪದೇಶಿಸಿದ್ದು ?" ಅಡಿಗೆಮನೆಯಲ್ಲೆ ಪ್ರಶ್ನಿಸಿದರು ಪದ್ಮಮ್ಮ.

"ನೀವೂ ಕಥೆ ಕೇಳ್ತಾ ಇದ್ದೀರಾ ?" ಮುಗುಳ್ನಕ್ಕರು ವ್ಯಾಸರಾಯರು,

"ಹೌದಮ್ಮಾ, ಈ ಕುರುಕ್ಷೇತ್ರ ಯುದ್ಧದಲ್ಲೇ ಶ್ರೀಕೃಷ್ಣಪರಮಾತ್ಮ ಜಗದ್ವಿಖ್ಯಾತ ಗೀತೋಪದೇಶ ಮಾಡಿದ್ದು. ಪಂಪಮಹಾಕವಿ ಜೈನನಾದ್ದರಿಂದ ಕೃಷ್ಣನಿಗೆ ಪ್ರಾಧಾನ್ಯತೆ ಕೊಡಲು ಅವನ ಮನಸ್ಸು ಒಪ್ಲಿಲ್ಲ ಅಂತ ತೋರುತ್ತೆ. ಅವನ ಭಾರತ ದಲ್ಲಿ ಕೃಷ್ಣನನ್ನು ಸಂಪೂರ್ಣವಾಗಿ ಉಪೇಕ್ಷಿಸಿದ್ದಾನೆ.

"ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂಗಾಡಿನೊಳ್ ಭೀಮ ಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲವರ್ಗಳಿನೀ ಭಾರತಂ ಲೋಕಪೂಜ್ಯಂ ॥

ಈ ಪದ್ಯದಿಂದ ಇದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಭಾರತದಲ್ಲಿ ದ್ರೌಪದಿ ಅರ್ಜುನನ ಹೆಂಡತಿ ಮಾತ್ರ. ಕರ್ಣನ ಪಾತ್ರ ಇಲ್ಲಿ ಬಹಳ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಅಭಿಮಾನಿ ದುರ್ಯೋಧನ, ಶೂರನಾದ ಭೀಮ, ಧೀರೋದಾತ್ತ ಅರ್ಜುನರ ಚಿತ್ರ ಮನಮುಟ್ಟುವಂತಿದೆ. 'ಸುಭದ್ರೆ'ಯ ವ್ಯಕ್ತಿತ್ವಕ್ಕೆ ಇಲ್ಲಿ ಹೆಚ್ಚು ಪ್ರಾಶಸ್ತ್ಯ ದೊರೆತಿದೆ. ಒಟ್ಟಿನಲ್ಲಿ ಕನ್ನಡದ ಭಾಗ್ಯ, ಆದಿಕವಿ ಪಂಪ. ವ್ಯಾಸ ಭಾರತದ ಚಿನ್ನವನ್ನು ಪುಟವಿಟ್ಟು ಅಮೂಲ್ಯ ಆಭರಣವನ್ನಾಗಿ ನಿರ್ಮಿಸಿ ವರ್ಣನಾ ಮಯ ಶೈಲಿಯ ಒಪ್ಪವಿಟ್ಟಿದ್ದಾನೆ. ಆತನದು ಉದಾತ್ತ ಚಂಪೂ ಶೈಲಿ. ಉದಾ ಹರಣೆಗಾಗಿ ಒಂದು ಪದ್ಯ ಹೇಳುತ್ತೇನೆ ಕೇಳಿ. 'ಬನವಾಸಿ' ಕಂಡರಂತೂ ಈತನಿಗೆ ಬಹು ಅಕ್ಕರೆ."

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿ ನಿಂಪುಗ
ಳ್ಗಾಗರವಾದ ಮಾನಸರೆ ಮಾನಿಸರಂತವರಾಗಿ ಪುಟ್ಟಲೇ ।
ನಾಗಿಯುಮೇನೊ ತೀರ್ದಪುದೇ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್ ॥

"ಈತ ಇದೊಂದೆ ಕಾವ್ಯಾನ ಬರೆದದ್ದು ?" ದಿನೇಶ ಹತ್ತಿರ ಬಂದು ಕುಳಿತ. "ಕನ್ನಡ ಕವಿಗಳ ವಿಷಯ ನಂಗೆ ಏನೇನೂ ಗೊತ್ತೇ ಇಲ್ಲ. ನಮ್ಮ ಪುಸ್ತಕದಲ್ಲಿ ಎಲ್ಲೋ ಅಲ್ಪ ಹರಕುಮುರುಕಾಗಿ ಬಂದಿದೆ. ನಂಗೆ ಹ್ಯಾಗೂ ಈಗ ಬೇಸಿಗೆ ರಜ. ಎಲ್ಲಾ ಕವಿಗಳ ಸೂಕ್ಷ್ಮ ಪರಿಚಯ ಮಾಡಿಕೊಡಿ ತಾತ." ಮಾತು ಮುಂದುವರಿಸಿದ.

"ಭೇಷ್. ನೋಡಿ ವ್ಯಾಸಣ್ಣ, ನೀವು ಬಂದ ಗಳಿಗೆ ಎಷ್ಟು ಒಳ್ಳೇದು. ನಮ್ಮ ಹುಡುಗ ಎಷ್ಟು ಬೇಗ ಮಾರ್ಪಾಟಾಗಿಹೋದ. ಹೇಳಿ, ಹೇಳಿ...ಅವನ ಅಜ್ಞಾನಾನ ಸ್ವಲ್ಪವಾದ್ರೂ ತೊಲಗಿಸಿ." ಹೊರಗೆ ಬಂದು ನಿಂತ ಪದ್ದಮ್ಮನವರ ಮುಖ ಹಿಗ್ಗಿ ಅಗಲವಾಗಿತ್ತು.

ವ್ಯಾಸರಾಯರು ಸಂತೋಷದಿಂದ ಮುಂದುವರಿಸಿದರು.

"ಪಂಪ ಬರೆದ ಇನ್ನೊಂದು ಮಹಾಕಾವ್ಯ 'ಆದಿಪುರಾಣ'.* ಇದು ಒಂದು ಧಾರ್ಮಿಕ ಗ್ರಂಥ. ಹೂಂ, ಇನ್ನು ಪಂಪನ ವಿಷಯ ಸಾಕು ಅಲ್ವೆ? ಈಗ ರತ್ನತ್ರಯರಲ್ಲಿ ಇನ್ನೊಬ್ಬನಾದ 'ಗದಾಯುದ್ಧ'ದ ಕರ್ತೃ ರನ್ನನ ವಿಷಯವನ್ನು ಸ್ವಲ್ಪ ಹೇಳ್ತೀನಿ. 'ಗದಾಯುದ್ಧ' ಭಾರತ ಕಥೆಯಿಂದಲೇ ಆಯ್ದ ಒಂದು ಪ್ರಸಂಗ. ಭೀಮ ಇದರ ನಾಯಕ. ಅದಕ್ಕೇ ಈ ಕಾವ್ಯಕ್ಕೆ 'ಸಾಹಸ ಭೀಮ ವಿಜಯ'ವೆಂದು ನಾಮಕರಣ ಮಾಡಿದ. ಈತನ ಪ್ರಗಲ್ಭ ಕಲ್ಪನಾಶಕ್ತಿ, ವೀರ್ಯ್ಯವತ್ತಾದ ಶೈಲಿ, ಪಾತ್ರನಿರೂಪಣೆ ಈ ಕಾವ್ಯದಲ್ಲಿ ಮಯೂರನೃತ್ಯವೆಸಗಿವೆ. ಇವನನ್ನು ಮೆಚ್ಚಿದ ಕುವೆಂಪು ಅವರು 'ರನ್ನ ವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿದ್ದಾನೆ' ಎಂದು ಹೊಗಳಿದ್ದಾರೆ.

ಈತನಿಗೆ ತನ್ನ ಕಾವ್ಯಸತ್ವದ ಮೇಲೆ ಬಹಳ ಅಭಿಮಾನ. ತಾನು ಯಾರಿಗೂ ಕಡಿಮೆಯಿಲ್ಲವೆನ್ನುವ ಆತ್ಮಗೌರವ ಯಾರೂ ಮೆಚ್ಚಬೇಕಾದ್ದೆ. ತನ್ನ ಕವಿತಾಶಕ್ತಿಯನ್ನು ತಾನೇ ಹೆಮ್ಮೆಯಿಂದ ಹೊಗಳಿಕೊಂಡಿದ್ದಾನೆ.

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥

ಇದು ಒಣಜಂಭವಲ್ಲ. ದುರಭಿಮಾನವಲ್ಲ. ನಿಜವಾಗಿ ಈತ ಕವಿರತ್ನನೇ ಸರಿ."

"ರನ್ನನೂ ಪಂಪನ ಕಾಲ್ದಲ್ಲೇ ಇದ್ನೆ?" ದಿನಕರ ಪ್ರಶ್ನಿಸಿದ.

"ಇಲ್ಲ. ಪಂಪ, ಪೊನ್ನನ ತರುವಾಯ ಪ್ರಸಿದ್ಧಿಗೆ ಬಂದ ಕವಿ ರನ್ನ.

---

* ಇದೂ ವಿಕ್ರಮಾರ್ಜುನ ವಿಜಯದಂತೆಯೇ ಚಂಪೂ ಶೈಲಿಯಲ್ಲಿದೆ. ಇಲ್ಲಿ 16 ಆಶ್ವಾಸಗಳಿವೆ. ಜಿನಸೇನಾಚಾರ್ಯರ ಪೂರ್ವಪುರಾಣವೇ ಇದರ ಮೂಲ. ಕವಿಯ ಕಲ್ಪನಾಶಕ್ತಿಗೂ ಕಥನಕೌಶಲಕ್ಕೂ ಇಲ್ಲಿ ಹೆಚ್ಚು ಅವಕಾಶವಿಲ್ಲ. ಸಂಪ್ರದಾಯ ರೀತಿಯಲ್ಲಿ ಜೈನ ಆದಿತೀರ್ಥಂಕರ ಪುರುದೇವನ ಕಥೆಯನ್ನೇ ಹೇಳಿದ್ದಾನೆ. 'ಇದುವೇ ಸುಕವಿ ಪ್ರಮೋದಪ್ರದಮಿದುವೆ ಸಮಸ್ತ ಭವ್ಯಲೋಕಪ್ರಮುದಪ್ರದಮೆನೆ ನೆಗೆಟ್ದಾ ಡಿ ಪುರಾಣದೊಳಜೆವುದು ಕಾವ್ಯಧರ್ಮಮಂ ಧರ್ಮಮುಮಂ' ಎಂಬುದಾಗಿ ಹೇಳಿದ್ದಾನೆ. ಪುರುದೇವನ ಮಕ್ಕಳಾದ ಭರತ, ಬಾಹುಬಲಿಗಳ ಚರಿತವೂ ಇದರಲ್ಲಿ ಬಂದಿದೆ. ಉದ್ದಾಮ ಶೈಲಿ, ವರ್ಣನಾ ವೈಖರಿಯಿಂದಾಗಿ ಪ್ರತಿಭೆ ಮೆರೆದಿದೆ. ಉದಾಹರಣೆಗಾಗಿ ಒಂದು ಪದ್ಯ : (ಇದು ವಿವಾಹ ಮಂಟಪದ ವರ್ಣನೆ)

ಚಂದನದೆಳದಳಿರ್ದೋರಣಂಗಳವು
ಸೂಚಿತ ಮಂಗಳ ಕಾರಣಂಗಳವು ॥
ರತಿಯ ವಿವಾಹಾಗಾರಮೆನಿಸಲಿದು
ಸಕಳ ವಿಳಾಸನಿವಾಸಮೆನಿಸಲಿದು ॥

ಈತ* ಜನಿಸಿದ್ದು ಸುಮಾರು ಕ್ರಿ. ಶ. 949ರಲ್ಲಿ. ಇವನು ಜಾತಿಯಲ್ಲಿ ವೈಶ್ಯ, ವೃತ್ತಿಯಲ್ಲಿ ಬಳೆಗಾರ. ಧರ್ಮದಲ್ಲಿ ಜೈನ. ಸಂಸ್ಕೃತ, ಕನ್ನಡ ಎರಡರಲ್ಲೂ ಉದ್ದಾಮ ಪಾಂಡಿತ್ಯ ಗಳಿಸಿದ್ದ. ಈತನ 'ಭೀಮವಿಜಯ'ಕ್ಕೆ ಆಶ್ರಯ ನೀಡಿದ್ದ ಚಕ್ರವರ್ತಿ ಸತ್ಯಾಶ್ರಯ ಪರೋಕ್ಷವಾಗಿ ನಾಯಕ."

"ಇದು ಸ್ವತಂತ್ರ ಕಾವ್ಯವೆ ?" ಒಳಗೆ ಬಂದ ವಾಸುದೇವರಾಯರು ಪ್ರಶ್ನಿಸಿದರು.

"ಅಲ್ಲ. ಭಾಸನ 'ಊರುಭಂಗ', ಭಟ್ಟನಾರಾಯಣನ 'ವೇಣೀಸಂಹಾರ', ಪಂಪನ ಭಾರತದ ಹದಿಮೂರನೆಯ ಆಶ್ವಾಸ ಈ ಮಹಾಕಾವ್ಯಕ್ಕೆ ಪ್ರೇರಕವಾಗಿರಬಹುದು. ತನ್ನ ಅದ್ಭುತ ಕಲ್ಪನಾ ಸಾಮರ್ಥ್ಯ, ಕಥಾಸೌಂದರ್ಯ, ಶಬ್ದ ಚಮತ್ಕಾರ, ನಾಟಕೀಯ ನಿರೂಪಣೆಗಳಿಂದ ಚಿಕ್ಕ ಘಟನೆಯೊಂದನ್ನೇ ಮಹಾಕಾವ್ಯವನ್ನಾಗಿ ಸೃಷ್ಟಿಸಿದ್ದಾನೆ" ಎಂದು ಮೊದಲಿನ ಆವೇಶದಿಂದಲೇ ವಿವರಣೆ ಇತ್ತು, "ಓಹೋ..ಮನೆಯ ಯಜಮಾನ್ರು! ನಾನು ನೋಡ್ಲೆ ಇಲ್ಲ" ಎಂದು ಎದ್ದು ನಿಲ್ಲಲು ಹೋದಾಗ ವಾಸುದೇವರಾಯರು ಅವರ ಭುಜ ಹಿಡಿದು ಕೂಡಿಸಿ, "ಕೂತ್ಕೊಳ್ಳಿ... ಕೂತ್ಕೊಳ್ಳಿ...ಹುಡುಗ್ರು ಗಲಾಟೆ ಕೇಳ್ದೆ ಇದ್ದಾಗ್ಲೆ ನಂಗೆ ಅನ್ನಿಸ್ತು. ಇವತ್ತು ಮನೆ ಒಳ್ಗೆ ಏನೋ ಆಶ್ಚರ್ಯ ಕಾದಿದೆ ಅಂತ. ಆಚಾರ್ಯಪುರುಷರು ಒಳಗೆ ಪವಾಡ ಮಾಡ್ಬಿಬಿಟ್ಟಿದ್ದಾರೆ! ಹುಡುಗ್ರೆಲ್ಲಾ ಗಪ್‌ಚಿಪ್. ಹುಳಿ ಉಕ್ಕಿ ವಾಸ್ನೆ ಬರ್‍ತಾ ಇದ್ರೂ ಮನೆಯ ಯಜಮಾನ್ತಿ ಯಾವ್ದೋ ಲೋಕ್ದಲ್ಲಿ ತೇಲ್ತಾ ಅಡಿಗೆ ಮನೆ ಬಾಗ್ಲಲ್ಲೆ ಕೂತ್ಬಿಟ್ಟಿದ್ದಾಳೆ!" ಎಂದು ವಾತಾವರಣವನ್ನು ಹಗುರಾಗಿಸಿ ಅನಂತರ ವ್ಯಾಸರಾಯರ ಕ್ಷೇಮ ಸಮಾಚಾರ ವಿಚಾರಿಸಿದರು.

"ಒಳ್ಳೆ ವಿಷಯಾನೆ ಹೇಳ್ತಾ ಇದ್ದೀರಿ. ನಾನೂ ಇವತ್ತು ಮಧ್ಯಾಹ್ನ ರಜಾ ಹಾಕ್ಬಿಡ್ತೀನಿ. ನಾಳೆ ಭಾನುವಾರ ಹ್ಯಾಗೂ ರಜ ಇದ್ದೇ ಇದೆ. ಹುಡುಗ್ರು ಜೊತೇಲಿ ನಮ್ಮ ಅಜ್ಞಾನಾನೂ ಸ್ವಲ್ಪ ಕಳೀಲಿ."

"ಅಯ್ಯೋ ಅಯ್ಯೋ, ಅಷ್ಟು ದೊಡ್ಡ ಮಾತು ಹೇಳ್ಬೇಡಿ. ನನಗೆ ಗೊತ್ತಿರೋದು ತಾನೆ ಮಹಾ ಎಷ್ಟು ? ನಿಮಗೆ ಬೇಕಾಗೋವಷ್ಟು ವಿಷಯ ನಾನು ತಿಳಿಸ್ತಾರೆ."

"ಶಿವಪೂಜೇಲಿ ಕರಡಿ ಬಿಟ್ರು ಅಂತಾ..." ಪದ್ಮಮ್ಮ ರಾಗ ಎಳೆದರು.

---

* ಜನ್ಮಸ್ಥಳ ಜಂಬುಖಂಡಿ ಎಪ್ಪತ್ತಕ್ಕೆ ಸೇರಿದ ಮುದವೊಳಲು (ಇಂದಿನ ಮುಧೋಳ್) ತಾಯಿ ಅಬ್ಬಲಬ್ಬೆ. ತಂದೆ ಜಿನವಲ್ಲಭೇಂದ್ರ. ಗುರುಗಳು ಅಜಿತಸೇನಾಚಾರ್ಯ. ಮೊದಲು ಅತ್ತಿಮಬ್ಬೆ ಚಾವುಂಡರಾಯರಂತಹ ಮಾಂಡಲಿಕರ ಬಳಿಯಲ್ಲಿದ್ದು ಅನಂತರ ಕಲ್ಯಾಣಿ ಚಾಲುಕ್ಯ ಚಕ್ರವರ್ತಿ ತೈಲಪ ಮತ್ತು ಯುವರಾಜ ಸತ್ಯಾಶ್ರಯರ ರಾಜಸ್ಥಾನ ಅಲಂಕರಿಸಿದ್ದನು. ಈತನಿಗೆ ಕವಿರತ್ನ, ಕವಿಚಕ್ರವರ್ತಿ, ಕವಿಕುಂಜರಾಂಕುಶ, ಕವಿತಿಲಕ ಮೊದಲಾದ ಬಿರುದುಗಳಿದ್ದವು.

"ಹೂಂ,.ಮುಂದುವರ್ಸಿ ತಾತ." ದಿನಕರ ಕಾತರದಿಂದ ನುಡಿದ.

"ರನ್ನನ 'ಗದಾಯುದ್ಧ' ಹತ್ತು ಆಶ್ವಾಸಗಳುಳ್ಳ ಅಮೂಲ್ಯ ಕೃತಿ. ಇದನ್ನು 'ಸಾಹಸಭೀಮ ವಿಜಯ' ಅಂತಾನೂ ಕರೀತಾರೆ. ಮಹಾಭಾರತ ಅನ್ನುವುದು ಒಂದು ಮಹಾಸಮುದ್ರವಾದರೆ ಗದಾಯುದ್ಧ ಪ್ರಸಂಗ ಇದರಿಂದ ಆಯ್ದು ಒಂದು ಅನರ್ಘ್ಯ ರತ್ನವಿದ್ದ ಹಾಗೆ. ಈ ರತ್ನವನ್ನು ಕವಿ ರನ್ನ ಕುಶಲತೆಯಿಂದ ಕೆತ್ತಿದ ಕುಂದಣದ ಗೂಡಿನಲ್ಲಿರಿಸಿ ಅಮೋಘ ಆಭರಣವನ್ನಾಗಿ ಮಾಡಿದ್ದಾನೆ. 'ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತೊಳಕೊಂಡಿತ್ತು' ಎಂದು ರನ್ನನೇ ಹೇಳಿರುವಂತೆ ಇದು ಸಂಪೂರ್ಣವಾಗಿ ಮಹಾಭಾರತದ ಕಥೆಯನ್ನೆ ಒಳಗೊಂಡಿದೆ. ಶ್ರೀಕೃಷ್ಣ, ದ್ರೌಪದಿ, ದುರ್ಯೋಧನ, ಭೀಷ್ಮ, ಧೃತರಾಷ್ಟ್ರ, ಗಾಂಧಾರಿ, ಬಲರಾಮ, ಅಶ್ವತ್ಥಾಮ, ಸಂಜಯ, ಇವರೆಲ್ಲಾ ಗದಾಯುದ್ಧದಲ್ಲಿ ಜೀವಂತ ವ್ಯಕ್ತಿಗಳಾಗಿ ಬರುತ್ತಾರೆ. ಅಲ್ಲದೆ ಕಥೆ ಪ್ರಾರಂಭವಾಗುವುದಕ್ಕೆ ಮೊದಲೇ ಮೃತಿ ಹೊಂದಿರುವ ಕರ್ಣ, ದುಃಶಾಸನ, ಅಭಿಮನ್ಯು, ದ್ರೋಣ ಇವರ ವ್ಯಕ್ತಿತ್ವ ಚಿತ್ರಣವೂ ಕಾವ್ಯದಲ್ಲಿ ಅನುಷಂಗಿಕವಾಗಿ ಬಂದಿವೆ.

'ಸಾಹಸಭೀಮ ವಿಜಯ' ಕೇವಲ ಚಂಪೂಕಾವ್ಯವಲ್ಲ. ಇದರಲ್ಲಿ ನಾಟಕದ ಎಲ್ಲ ಗುಣಗಳೂ ಮೂಡಿಬಂದೇ ಇದು ದೃಶ್ಯಕಾವ್ಯ (Dramatic poem) ಆಗಿದೆ. ಈ ಕಾವ್ಯದ ನಾಯಕ ಭೀಮಸೇನ. 'ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ' ಎಂದು ಕವಿಯೇ ಒಂದೆಡೆ ಹೇಳಿದ್ದಾನೆ. ಭೀಮ ಶೂರ, ಧೀರಶಿಖಾಮಣಿ, ಪ್ರತಿ ನಾಯಕ ದುರ್ಯೋಧನ ಹಟದ ವ್ಯಕ್ತಿ. ಇವನಲ್ಲಿ ದುರ್ಗುಣ. ಸುಗುಣ ಎರಡೂ ಭವ್ಯಪ್ರಮಾಣದಲ್ಲೆ ತುಂಬಿವೆ. ಈತನ ಛಲ, ಪುತ್ರಪ್ರೇಮ, ಮಿತ್ರಪ್ರೇಮ, ಅಭಿಮಾನ ನಮ್ಮ ಮನಸ್ಸನ್ನು ಕರಗಿಸುತ್ತದೆ. ಆತನಲ್ಲಿ ದ್ವೇಷಭಾವನೆಗೆ ಬದಲಾಗಿ ಸಹಾನುಭೂತಿ ಮೂಡುವಂತೆ ಮಾಡುತ್ತದೆ. ರನ್ನನದು ಗಂಡುಶೈಲಿ. ವಾಗ್ವೈಭವ, ಬೆಡಗು ಪ್ರಮುಖ ಲಕ್ಷಣಗಳು. ಇದರಲ್ಲಿ ವೀರ, ಶೋಕ, ಕರುಣರಸಗಳು ಹಿತಮಿತವಾಗಿ ಮೂಡಿಬಂದಿವೆ.

ಆತನ ಶೈಲಿಯ ವೈಭವ ತೋರಿಸಲು ಕೆಲವು ಪದ್ಯಗಳನ್ನು ಹೇಳುತ್ತೇನೆ ಕೇಳಿ...ಗದಾಯುದ್ಧದ ವರ್ಣನೆ,

ದಪ್ಪರಿದಟ್ಟುಂ ಪೊಟ್ಟೆನೆ
ದೊಪ್ಪಧೊಗಪ್ಪೆನೆದಿಧೀಲ್ಬಧಿಲ್ಲೆನೆ ಗದೆಗಳ್
ಸೊಪ್ಪು ಸೊವಡಪ್ಪಿನಂಸೂ
ಟ್ರಿಪ್ಪದೆ ಕಡುಕೆಯ್ದು ಪೊಯ್ದುರೊರ್ವರನೊರ್ವರ್

ಗದೆಗಳ ಹೊಡೆತ ಕೇಳಿದಂತಾಗುವುದಿಲ್ಲವೆ ? ಈಗ ವಸಂತ ವರ್ಣನೆ ಕೇಳಿ...

ಬಂದಿರೆ ಮಾಮರಂಗಳಿರ ಮಲ್ಲಿಗೆ ಬಂದಿರೆ ಕೋಕಿಲಾಳಿನೀ
ವೃಂದಮೆ ಬನ್ನಿ ಮಿತ್ರ ಶುಕನೀ ಸೊಕಮೆ ರಜನೀಚಂದ್ರ
ನೈಸಿಂದಮೆ ಬಂದಿರೆ ಕುಶಲಮೆ ನಿಮಗೆಂದು ಮಧುಪ್ರವೇಶದೊಳ್
ಬಂದು ಮನೋಜನೇನನಿತುಮಂ ಪೆಸಗೊಂಡನೊ ಕೂಡಿಕೊಂಡನೆ ॥

ವ್ಯಾಸರಾಯರು ವಾಸುದೇವರಾಯರತ್ತ ನೋಡಿದರು. "ಹೂಂ... ಮುಂದುವರ್ಸಿ. ನಾನು ಬಟ್ಟೆ ಬದ್ಲಾಯಿಸಿ ಕೈಕಾಲು ತೊಳ್ದು ಬರ್‍ತೀನಿ. ಬಂದು ನಾನೂ ದಿನೇಶನಂತೆ ಸುಮ್ನೆ ಕೂತಿರ್‍ತೀನಿ. ಮುಕುಂದನ್ಹಾಗೆ ಖಂಡಿತ ನಿದ್ದೆ ಹೊಡ್ಯೊಲ್ಲ" ಹೋಗುತ್ತಲೇ ನುಡಿದರು. ಪದ್ಮಮ್ಮ ಮುಗುಳ್ನಗುತ್ತ ಹೊರಗ ಬಂದು ಮುಕುಂದನಿಗೆ ಒಂದು ತೆಳು ದುಪ್ಪಟಿ ಹೊದಿಸಿದರು.

"'ಅಜಿತ ಪುರಾಣ'* ರನ್ನ ಬರೆದ ಧಾರ್ಮಿಕ ಗ್ರಂಥ. ಇದರ ಶೈಲಿಯ ಮೋಹಕತೆ ತಿಳಿಸಲು ಒಂದು ಪದ್ಯ ಉದಾಹರಿಸುತ್ತೇನೆ,

ಎನಿತೆನಿತು ಕಟಿನಭವಮಂ
ನೆನೆದಪೆ ! ಎನಿತೆನಿತು ಭವದ ಬಂಧುಗಳಂ ನೀಂ
ನೆನೆದಪೆ ! ಎನಿತೆನಿತೊಡಲಂ
ನೆನೆದಪೆ ! ಎಲೆ ಜೀವ ನೀನೆ ಪೇೞ್ ಪವಣೊಳವೇ ।

"ಹೂಂ. ಏಳಿ ಊಟ ಮಾಡಿ ಪುನಃ ಕೂತ್ಕೊಳ್ಳಿಂತೀರಿ" ವಾಸುದೇವರಾಯರು ಟವಲನ್ನು ತಂದು ವ್ಯಾಸರಾಯರ ಮುಂದಿರಿಸಿದಾಗ ತಿಳಿಯಾಗಿ ನಗುತ್ತ ಅವರ ಆದರಾತಿಥ್ಯಕ್ಕೆ ಕಣ್ಣಿನಲ್ಲೆ ಕೃತಜ್ಞತೆ ಸೂಚಿಸುತ್ತ ಮೇಲೆದ್ದರು.

"'ರನ್ನಕಂದ', 'ಪರಶುರಾಮಚರಿತ' ಕೂಡ ರನ್ನಂದೇ ಅಲ್ವೆ ರಾಯ್ರೆ ?"

"ಹೌದು ಅಂತ ಹೇಳ್ತಾರೆ. 'ರನ್ನಕಂದ' ಕನ್ನಡ-ಕನ್ನಡ ನಿಘಂಟು. ದುರದೃಷ್ಟದಿಂದ ಇದರ ಸಮಗ್ರ ಪ್ರತಿ ಇನ್ನೂ ಎಲ್ಲಿಯೂ ಸಿಕ್ಕಿಲ್ಲ. 'ಪರಶುರಾಮ ಚರಿತ' ಹಾಗೂ ಈತನೇ ಬರೆದನೆನ್ನಲಾಗುವ 'ಚಕ್ರೇಶ್ವರ ಚರಿತ'ಗಳು ಇನ್ನೂ ಲಭ್ಯವಿಲ್ಲ.

---

* 2ನೇ ತೀರ್ಥಂಕರನಾದ ಅಜಿತನಾಥನ ಚರಿತೆಯನ್ನು ಹನ್ನೆರಡು ಆಶ್ವಾಸಗಳಲ್ಲಿ ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ. ಇದರಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ವಿಷಯ ಸಹ ಬರುತ್ತದೆ. ಇತರರ ಜೈನಪುರಾಣಗಳಲ್ಲಿ ಕಂಡುಬರುವ ಭವಾವಳಿಗಳ ಗೊಂದಲ ಇಲ್ಲಿ ಕಂಡುಬರುವುದಿಲ್ಲ. ಈ ಗ್ರಂಥವನ್ನು ರನ್ನನೇ 'ಪುರಾಣತಿಲಕ' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ:

ಏನಿತುಂಟಾಗಮವರ್ಣನ
ಮನಿತುಮನೊಳಕೊಂಡು ಸಕಲಭವ್ಯಜನಂಗ ।
ಳನುರಾಗವನೊಡರಿಸಿದಪು
ದೆನಿಪ ಪುರಾಣಂ ಪುರಾಣ ತಿಲಕಮಿದಲ್ತೇ ॥

'ಸಾಹಸ ಭೀಮ ವಿಜಯ'ವೇ 'ಚಕ್ರೇಶ್ವರ ಚರಿತ'ವಿರಬಹುದೆಂದು ಕೆಲವರು ಊಹಿಸಿದ್ದಾರೆ.

* * *

ಮಹಾಭಾರತವನ್ನು ಬರೆದ ಇನ್ನೊಬ್ಬ ಪ್ರತಿಭಾವಂತ ಲೇಖಕ **ಕುಮಾರವ್ಯಾಸ.**

"ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲಿ ಕುಣಿಯುವುದು. ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು."

ಈತನ ಅಗ್ಗಳಿಗೆ ಅಗಣಿತ.

"ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ, ಪದವಿಟ್ಟಳುಪದೊಂದಗ್ಗಳಿಕೆ, ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ."

ಈತನೂ ರನ್ನನಂತೆಯೇ ತನ್ನನ್ನು ತಾನೆ ಮೆಚ್ಚಿಕೊಂಡಿದ್ದಾನೆ. ಧೈರ್ಯದಿಂದ ಹೊಗಳಿಕೊಂಡಿದ್ದಾನೆ,

'ತನ್ನ ಕಾವ್ಯ ಕಾವ್ಯಕೆ ಗುರು' ಎಂಬ ಪ್ರತಿಷ್ಠೆ, 'ಬಣಗು ಕವಿಗಳ ಲೆಕ್ಕಿಪನೆ, ಶುಕರೂಪನಲ್ಲನೆ' ಎಂಬ ಹೆಮ್ಮೆ, 'ವೀರನಾರಾಯಣನೆ ಕವಿ, ಲಿಪಿಕಾರ ಕುಮಾರ ವ್ಯಾಸ' ಎಂಬ ನಮ್ರತೆಯಲ್ಲಿ ಕೊಚ್ಚಿಹೋಗುತ್ತದೆ.

"'ಕುಮಾರವ್ಯಾಸ' ಇದು ಕಾವ್ಯನಾಮ ಅಲ್ವೆ ಮೇಸ್ಟ್ರೆ?" ಆಫೀಸಿಗೆ ಹೋಗಲು ಪುನಃ ಬಟ್ಟೆ ಧರಿಸುತ್ತ ಪ್ರಶ್ನಿಸಿದರು ವಾಸುದೇವರಾಯರು.

"ಹೌದು. ಆತನ ಹೆಸರು ನಾರಣಪ್ಪ. ಗದುಗಿನ ಬಳಿಯ ಕೋಳಿವಾಡ ಆತನ ಜನ್ಮಸ್ಥಳ. ಆತ ಇದ್ದದ್ದು ಬಹುಶಃ 15ನೇ ಶತಮಾನ.* ಈತ ಇಷ್ಟು ವಿಖ್ಯಾತ ಕವಿಯಾಗಿದ್ದು ತನ್ನ ಪಾಂಡಿತ್ಯದ ಬಗ್ಗೆ ತನ್ನನ್ನೇ ಹೊಗಳಿಕೊಂಡಿದ್ದರೂ ತಾನು ಇದ್ದ ಕಾಲದ ಬಗ್ಗೆ ಎಲ್ಲೂ ಕಿಂಚಿತ್ತೂ ಸುಳುವು ಕೊಟ್ಟಿಲ್ಲ. ಆತನ ಕಾವ್ಯ 'ಕರ್ಣಾಟ ಭಾರತ ಕಥಾಮಂಜರಿ'.

"ಈತ ಭಾರತವನ್ನು ಪೂರ್ತಾ ಬರೀಲಿಲ್ಲ; ಕೃಷ್ಣದೇವರಾಯನು ತನ್ನ ಆಸ್ಥಾನಕವಿಯಾದ ತಿಮ್ಮಣ್ಣನಿಂದ ಬರೆಸಿದ ಅಂತಾರಲ್ಲ ನಿಜವೆ?" ಬಾಗಿಲ ಬಳಿ ಹೊರಟಿದ್ದ ವಾಸುದೇವರಾಯರು ನಿಂತು ಪ್ರಶ್ನಿಸಿದರು.

"ಹೌದು. ಈತ 10 ಪರ್ವಗಳನ್ನು ಮಾತ್ರ ಬರೆದಿದ್ದಾನೆ. ಉಳಿದ ಎಂಟು

---

* ಸುಮಾರು ಕ್ರಿ.ಶ. 1430. ಅಂಕಿತನಾಮ: ಗದುಗಿನ ವೀರನಾರಾಯಣ. ಈತ ವಿಜಯನಗರದ ಪ್ರೌಢದೇವರಾಯ (ಕ್ರಿ.ಶ. 1419–1446) ನ ಆಳ್ವಿಕೆಯ ಕಾಲದಲ್ಲಿ ಇದ್ದನೆಂದು ಊಹೆ.

ಪರ್ವಗಳನ್ನು ತಿಮ್ಮಣ್ಣಕವಿ * ರಚಿಸಿದ್ದಾನೆ ಎಂದು ಹೇಳಲಾಗುತ್ತದೆ. ಆದರೆ ಗದಾಪರ್ವದ ಅಂತ್ಯದಲ್ಲಿ ಗ್ರಂಥಸ್ತುತಿ–ಫಲಶ್ರುತಿಗಳಿರುವುದರಿಂದ ನಾರಣಪ್ಪನು ಗ್ರಂಥವನ್ನು ಮುಗಿಸಿದ್ದಾನೆ ಎಂದು ಕೆಲವರ ಅಭಿಪ್ರಾಯ."

ವ್ಯಾಸರಾಯರು ಮುಂದುವರಿಸಿದರು, ಮಕ್ಕಳತ್ತ ನಗೆಮಿಂಚು ಬೀರಿ.

> 'ತಿಳಿಯಹೇಳುವೆ ಕೃಷ್ಣಕಥೆಯನು
> ಇಳೆಯ ಜಾಣರು ಮೆಚ್ಚುವಂತಿರೆ
> ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ ।
> ಹಲವು ಜನ್ಮದ ಪಾಪರಾಶಿಯ
> ತೊಳೆವ ಜಲವಿದು ಶ್ರೀಮದಾಗಮ
> ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ ॥

ಕುಮಾರವ್ಯಾಸನ ಈ ಭಾರತದಲ್ಲಿ ಕೃಷ್ಣನ ಪಾತ್ರಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಈತ ಈ ಕಾವ್ಯಕ್ಕೆ ಮಾತ್ರ ನಾಯಕನಲ್ಲ. ಜಗತ್ತಿಗೇ ನಾಯಕ. ಜಗತ್ತಿನ ಸೃಷ್ಟಿ, ಸ್ಥಿತಿ. ಲಯ ಎಲ್ಲವೂ ಆತನ ಅಂಕಿತಕ್ಕೇ ಒಳಪಡುತ್ತದೆ. ಆದರೂ ಆತ ಸಾಮಾನ್ಯ ಮನುಷ್ಯನಂತೆ ಕಟ್ಟುಕಟ್ಟಳೆಗೆ ಒಳಪಟ್ಟು ಎಲ್ಲರೊಡಗೂಡಿ ಬಾಳುತ್ತಾನೆ. ತನ್ನ ದೈವತ್ವವನ್ನು ತನ್ನ ಭಕ್ತರ ಅಭೀಷ್ಟ ನೆರವೇರಿಸಲು ಮಾತ್ರ ಉಪಯೋಗಿಸುತ್ತಾನೆ.

'ಎತ್ತಲೊಲಿವುದು ಧರ್ಮಬಲ ತಾನತ್ತಲೊಲಿವುದು ದೈವ, ದೈವವದೆತ್ತಲೊಲಿದಿಹುದತ್ತ ವಿಜಯಾಶ್ರಯದ ಕುಡಿನೋಟ'.

ದುಷ್ಟರನ್ನು ದಂಡಿಸಿ ಶಿಷ್ಟರನ್ನು ರಕ್ಷಿಸಿ ಧರ್ಮಸಂಸ್ಥಾಪನೆ ಮಾಡುವುದೇ ಕೃಷ್ಣಲೀಲೆಯ ಕಥಾವಸ್ತು.

ಭೀಷ್ಮನ ಮಾತಿನಲ್ಲಿ ಕೃಷ್ಣಪ್ರಶಂಸೆ ಕೇಳಿ,

> ಘನರಜೋಗುಣದಲ್ಲಿ ಚತುರಾನನತಮೋಗುಣದಲ್ಲಿ ಶಂಕರ
> ನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ ।
> ಘನಜಗನ್ಮಯನಾಗಿ ಸರ್ವಾತ್ಮನು ಮಹೇಶ್ವರನೆನಿಪನೀತನ
> ನೆನಹನೀತನ ನಿಜವನರಿಪ ಮಹಾತ್ಮನಾರೆಂದ ॥

ಕುಮಾರವ್ಯಾಸನ ಶೈಲಿ ಬಹಳ ಸತ್ವಪೂರ್ಣ ಹಾಗೂ ಸುಂದರ. ವರ್ಣನೆ, ಅಲಂಕಾರ, ಗಾದೆಮಾತು ಮಧುರವಾಗಿ ಮಿಳಿತಗೊಂಡಿರುವುದನ್ನು ಕಾವ್ಯದುದ್ದಕ್ಕೂ ಕಾಣಬಹುದು. ಪಾತ್ರಚಿತ್ರಣ ಖಚಿತ. ಕಥಾನಿರೂಪಣೆ ಕುತೂಹಲಪೂರ್ಣ. ಸರಳ ಸುಂದರ ಕಾವ್ಯ ಹಾಡಲೂ ಹಿತ.

"ಒಂದು ಒಳ್ಳೆ ಪದ್ಯ ಹಾಡಿ ತಾತ" ದಿನೇಶ ಅಂಗಲಾಚಿದ.

---

* ಕಾಲ: ಸುಮಾರು ಕ್ರಿ.ಶ. 1570.

ಮುಗುಳ್ನಕ್ಕ ವ್ಯಾಸರಾಯರು ಒಂದು ಕ್ಷಣ ಯೋಚಿಸಿ ಹಾಡತೊಡಗಿದರು.

ಆರೊಡನೆ ಕಾದುವೆನು ಕಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕಲರಥವು ಕುಲದಲಿ ಸಂದು ಬಂದವರು ।
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳೆಂದು ಕು
ಮಾರ ನೆಣಗೊಬ್ಬಿಸಲಿ ನುಡಿದನು ಹೆಂಗಳಿದಿರಿನಲಿ ॥

ಹೆಂಗಸರ ಮಧ್ಯೆ ಹೀಗೆ ಜಂಭ ಕೊಚ್ಚುವ ಉತ್ತರಕುಮಾರ ಕುರುಸೈನ್ಯ ಕಂಡು ಅಂಜಿ ಹೀಗೆ ಗೋಳಿಡುತ್ತಾನೆ.

ಹಸಿದ ಮಾರಿಯು ಮಂದೆಯಲಿ ಕುಟಿ
ನುಸುಳಿದಂತಾದೆನು ಬೃಹನ್ನಳೆ
ಯೆಸಗದಿರು ತೇಜಿಗಳ ತಡೆ ಜವ್ಮಟಿಗೆಯನು ಬಿಸುಡು ।
ಮಿಸಕಬಾರದು ಪ್ರಳಯಕಾಲನ
ಮುಸುಕನುಗಿವವನಾರು ಕೌರವ
ನಸಮ ಬಲನ್ಶೈ ರಥವ ಮರಳಿಚು ಜಾಳಿಸುವೆನೆಂದ ॥

ಉತ್ತರಕುಮಾರನ ಪಾತ್ರಸೃಷ್ಟಿಯಲ್ಲಿ ಕವಿ ನವಿರುಹಾಸ್ಯ ತುಂಬಿರುವಂತೆ ಕೃಷ್ಣನ ಪಾತ್ರರಚನೆಯಲ್ಲಿ ಭಕ್ತಿಪ್ರವಾಹವನ್ನೇ ಹರಿಸಿದ್ದಾನೆ. ಭೀಮನನ್ನು ವೀರೋತ್ತಮನೆಂದು ವರ್ಣಿಸಿದ್ದಾನೆ. ಕೊಟ್ಟ ಭಾಷೆಗೆ ತಪ್ಪಲಿಲ್ಲ. ಒಡೆಯನಿಗೆ ಎರಡುಬಗೆಯಲಿಲ್ಲ. ಕೊನೆಯತನಕ ಕೌರವನಿಗಾಗಿ ಹಂಬಲಿಸಿ ಕಾಯವನ್ನು ನೀಗಿದ ಕರ್ಣನ ಪಾತ್ರಸೃಷ್ಟಿ ಅಮೋಘ.

ನಾರಣಪ್ಪ ಕನ್ನಡದ ಹೆಮ್ಮೆ. 'ರೂಪಕ ಸಾಮ್ರಾಜ್ಯದ ಚಕ್ರವರ್ತಿ'".

ಮೇಸ್ಟರು ಮಾತು ನಿಲ್ಲಿಸಿದೊಡನೆ ದಿನೇಶ "ಕುಮಾರವ್ಯಾಸ ಕೀ ಜೈ" ಎಂದು ಕೂಗಿದ. ದಿನಕರನೂ ದನಿ ಕೂಡಿಸಿದ. ಇದೇತಾನೆ ಎಚ್ಚತ್ತಿದ್ದ ಮುಕುಂದ ಜೈ ಎಂದು ಕೂಗಿದ. ಪದ್ದಮ್ಮ, ವ್ಯಾಸರಾಯರು ತಿಳಿಯಾಗಿ ನಕ್ಕರು.

* * *

ಆಫೀಸಿನಿಂದ ವ್ಯಾಸರಾಯರು ಮನೆಗೆ ಹಿಂತಿರುಗಿದಾಗ ಸಂಜೆ ಐದೂವರೆ ಗಂಟೆ. ಕೈಕಾಲು ತೊಳೆದು ಮಡಿ ಮಗುಟ ಉಟ್ಟು ರಾಘವೇಂದ್ರ ಸ್ತೋತ್ರ, ಸಂಧ್ಯಾವಂದನೆ ಪೂರೈಸಿ ದೇವರಿಗೆ ನಮಸ್ಕಾರ ಹಾಕಿ ಹೊರಗೆ ಬಂದಾಗ ದಿನಕರನ ಜೊತೆಯಲ್ಲಿ ಅವನ ವಯಸ್ಸಿನ ಇನ್ನೂ ಇಬ್ಬರು ಹುಡುಗರನ್ನು ಕಂಡು ಆಶ್ಚರ್ಯ ಗೊಂಡರು.

"ಇವರಿಗೆ ಕಥೆ, ಕವನ ಅಂದ್ರೆ ಬಹಳ ಇಷ್ಟ. ಅದಕ್ಕೇ ಹೋಗಿ ಕರ್ಕೊಂಡು ಬಂದೆ ತಾತ." ಉತ್ಸಾಹದಿಂದ ನುಡಿದ ದಿನಕರ.

"ಒಳ್ಳೇದು ಬರ್ಲಿ" ಎಂದು ನುಡಿದ ವ್ಯಾಸರಾಯರು ಹಜಾರದಲ್ಲಿ ಗೋಡೆ ಒರಗಿ ಕುಳಿತರು, "ಹೂಂ...ಮಧ್ಯಾಹ್ನ ಕುಮಾರವ್ಯಾಸನ ಬಗ್ಗೆ ಹೇಳಿ ಪೂರೈಸಿದ್ದೆ ಅಲ್ವೆ ? ಇನ್ನೊಬ್ಬ ಕನ್ನಡದಲ್ಲಿ ಭಾರತ ಬರೆದ ಉದ್ದಾಮ ಕವಿ ಅಂದ್ರೆ ಲಕ್ಷ್ಮೀಶ.

'**ಲಕ್ಷ್ಮೀಶ**' ಜೈಮಿನಿ ಮುನಿಗಳು ಸಂಸ್ಕೃತದಲ್ಲಿ ಬರೆದಿದ್ದ 'ಜೈಮಿನಿ ಭಾರತ' ವನ್ನು ಸಂಗ್ರಹಿಸಿ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಸಂಸ್ಕೃತದ 68 ಅಧ್ಯಾಯದ ಬೃಹತ್ ಗ್ರಂಥ ಕನ್ನಡ ಅನುವಾದದಲ್ಲಿ 34 ಸಂಧಿಗಳಲ್ಲಿ ಅಡಕವಾಗಿದೆ. ಎಲ್ಲಿಯೂ ರಸಾಭಾಸವಾಗಿಲ್ಲ. ಭಟ್ಟಿ ಇಳಿಸಿದ ರಸಪಾಕದಂತೆ ಬಹಳ ಆಸ್ವಾದ ಯುಕ್ತವಾಗಿದೆ. ಇದರಷ್ಟು ಜನಪ್ರಿಯವಾದ ಗ್ರಂಥ ಇನ್ನೊಂದಿಲ್ಲವೆಂದು ಧೈರ್ಯ ವಾಗಿ ಹೇಳಬಹುದು. ಲಕ್ಷ್ಮೀಶನ ಛಂದಸ್ಸು, ಶೈಲಿ, ಪಾತ್ರಪೋಷಣೆ, ಹಾಸ್ಯ, ಶೃಂಗಾರ, ಅಲಂಕಾರ ಚಮತ್ಕಾರಗಳು ಜನಸಾಮಾನ್ಯರನ್ನು ಮುಗ್ಧಗೊಳಿಸಿವೆ. ಧರ್ಮರಾಯನು ಭ್ರಾತೃಹತ್ಯಾದೋಷ ಪರಿಹರಿಸಿಕೊಳ್ಳಲು ಕೈಗೊಳ್ಳುವ ಅಶ್ವಮೇಧ ಯಾಗ ಪ್ರಕರಣ ಈ ಗ್ರಂಥದ ಮುಖ್ಯ ವಿಷಯವಾದರೂ ಇದರಲ್ಲಿ ಪ್ರಾಸಂಗಿಕ ವಾಗಿ ಬರುವ ನೂರಾರು ಕಥೆಗಳು ಬಹಳ ರಂಜನೀಯವಾಗಿವೆ."

"ಲಕ್ಷ್ಮೀಶ ಇದ್ದ ಕಾಲ ಯಾವುದು ಸಾರ್ ?" ದಿನಕರನ ಸಾಹಿತಿ ಮಿತ್ರನೊಬ್ಬ ಪ್ರಶ್ನಿಸಿದ.

"ಬಹುಶಃ 16ನೇ ಶತಮಾನದ ಮಧ್ಯಭಾಗ.* ಈತನಿಗೆ 'ಉಪಮಾ ಲೋಲ', 'ಕರ್ಣಾಟ ಕವಿ ಚೂತವನ ಚೈತ್ರ' ಎಂಬ ಬಿರುದುಗಳಿದ್ದವು. ವಾರ್ಧಕ ಷಟ್ಪದಿಯ ಈ ಕಾವ್ಯ ಹಾಡಲು ಎಷ್ಟು ಇಂಪಾಗಿದೆ ಕೇಳಿ :

> ಏಕೆ ನಿಂದಿಹೆ ಪೋಗು ಸೌಮಿತ್ರಿ ಕೋಪಿಸನೆ
> ಕಾಕುತ್ಸ್ಥ ನಿಲ್ಲಿ ತಳುವಿದೊಡೆ ನೆರವುಂಟು ತನ
> ಗೀಕಾಡೊಳುಗ್ರಜಂತುಗಳಲ್ಲಿ ರಘುನಾಥನೇಕಾಕಿಯಾಗಿರ್ಪನು
> ಲೋಕದರಸೇಗೆಯ್ದೊಡಂ ತನ್ನ ಕಿಂಕರರ್
> ಬೇಕು ಬೇಡೆಂದು ಪೇಳರೆ ಭರತ ಶತ್ರುಘ್ನ
> ರೀ ಕೆಲಸಕೊಪ್ಪಿದರೆ ಹನುಮಂತನಿರ್ದಪನೆ ಪೇಳೆಂದಳಲ್ದಳಬಲೆ ॥

ಮುಗಿಯುತ್ತಿದ್ದಂತೆಯೇ ಎಲ್ಲರೂ ಚಪ್ಪಾಳೆ ತಟ್ಟಿದರು ತೃಪ್ತಿಯಿಂದ. ಹಾಲಿನಲ್ಲಿ ಬೆರಳದ್ದಿ ಹೂಬತ್ತಿ ಹೊಸೆಯುತ್ತಿದ್ದ ಪದ್ದಮ್ಮ ಚಪ್ಪಾಳೆ ತಟ್ಟಲು ಹೋದಾಗ ಹಾಲು ಚೆಲ್ಲಿಹೋಯಿತು. ಎಲ್ಲರೂ ಘೊಳ್ಳೆಂದು ನಕ್ಕರು.

---

* ಕ್ರಿ. ಶ. 1550ರ ಸುಮಾರು. ಈತ ವೈಷ್ಣವ ಕವಿ. ತಂದೆ ಅಣ್ಣಮಾಲಿಕ, ಜನ್ಮ ಸ್ಥಳ ದೇವನೂರು. ಅಂಕಿತ ನಾಮ ಲಕ್ಷ್ಮೀರಮಣಸ್ವಾಮಿ.

"ನೋಡಿ ತಾತ ಅಮ್ಮ ಒಂದಿನಾನೂ ಪುರಾಣಕ್ಕೆ ಹೋಗೋದನ್ನ ತಪ್ಪಿಸಿ ಕೊಳ್ತಾ ಇರ್ಲಿಲ್ಲ. ಇವತ್ತು ಹೂಬತ್ತಿನೂ ಇಟ್ಕೊಂಡು ಇಲ್ಲೇ ಕೂತ್ಬಿಟ್ಟಿದ್ದಾಳೆ. ಪುರಾಣಶ್ರವಣಕ್ಕೆ ಪುಣ್ಯದ ಕಲೆಕ್ಷನ್ ಕಡ್ಮೆ ಆಗೊಲ್ವೇನುತ್ತೆ. ಮಧ್ಯೆ ಮಧ್ಯೆ ರಾಮ, ಕೃಷ್ಣ ಸ್ವಲ್ಪ ಸೇರ್ಸಿ ತಾತ" ದಿನಕರ ನುಡಿದಾಗ "ಸುಮ್ನೆ ಕೂತ್ಕೊಳ್ಳೋ ದೊಡ್ಡೋರು ಮಾತಾಡ್ತಾ ಇರ್ಬೇಕಾದ್ರೆ ಮಧ್ಯದಲ್ಲಿ ತಲೆ ಹಾಕ್ಬೇಡ" ಚೆಲ್ಲಿದ್ದ ಹಾಲನ್ನು ತಮ್ಮ ಸೀರೆಯ ಸೆರಗಿನಿಂದಲೇ ಒರೆಸುತ್ತ ನುಡಿದರು ಪದ್ಮಮ್ಮ.

ಹದಿನಾರನೆ ಶತಮಾನದ **ಸಾಳ್ವ*** ಇನ್ನೊಬ್ಬ 'ಭಾರತ' ಬರೆದಿರುವ ಕವಿ. ಇವನು ಜೈನ ಕವಿ. ಇವನಿಗೆ 'ಸಾಜಕವಿ', 'ಕರ್ಣಾಟಕ ಲಕ್ಷಣದೋಜ' ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಸಾಳ್ವರಚಿತಭಾರತ 'ಸಾಳ್ವಭಾರತ' ಎಂದು ಪ್ರಸಿದ್ಧವಾಗಿದೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ಇದರಲ್ಲಿ 'ಹರಿವಂಶ' 'ಕುರುವಂಶ'ಚರಿತ್ರೆ ಇದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿಯ ಮಾತಿನಲ್ಲಿ ಕೇಳಿ:

> ನವರಸದನೆಲೆಮಧುರಭಾವದ
> ತವದಲಂಕಾರಂಗಳಿಂದೊ
> ಪ್ಪುವ ವಿಮಲಲಲಿತಾಂಗ ಮೃದುಪದರಚನೆ ನೆಜೀ ಮೆಜೀವ
> ವಿವಿಧ ಗುಣಗಣನಿಳಯೆ ಸೊಬಗಿನ
> ಸವಿಯ ಸೈವಟೆಗಜೀವಮತ್ಕೃತಿ
> ಯುವತಿ ಚದುರರ ಮನವನಿರ್ಕುಳಿಗೊಳ್ಪುದಚ್ಚರಿಯೇ ॥

**'ಷಡಕ್ಷರದೇವ'** 17ನೇ ಶತಮಾನದ ಉತ್ತರಾರ್ಧದಲ್ಲಿ† ಜೀವಿಸಿದ್ದ ಶ್ರೇಷ್ಠ ಕವಿ. ವೀರಶೈವ ಸಂಪ್ರದಾಯಕ್ಕೆ ಸೇರಿದವನು ಮತ್ತು ಚಂಪೂ ಶೈಲಿಯನ್ನು ಪ್ರಸಿದ್ಧಿಗೆ ತಂದವನು. ಸಂಸ್ಕೃತ ಕನ್ನಡ ಪಂಡಿತನಾಗಿ ಮೆರೆದು ರಾಜಗೌರವಕ್ಕೆ ಪಾತ್ರನಾಗಿ ಯಳಂದೂರ ಮಠದ ಪೂಜ್ಯ ಮಠಾಧಿಪತಿಯಾಗಿ ಆಳಿ ಅಲ್ಲೇ ಸಮಾಧಿ ಯನ್ನು ಪಡೆದನು. ಈತನ ಪ್ರಮುಖ ಗ್ರಂಥಗಳು : 'ಶಬರ ಶಂಕರ ವಿಳಾಸ',

---

* ಕಾಲ ಸುಮಾರು ಕ್ರಿ. ಶ. 1550. ತೌಳವ ದೇಶಾಧಿಪತಿ ಸಾಳ್ವಮಲ್ಲರಾಜನ ಆಸ್ಥಾನ ಕವಿ. ಈತ ರಚಿಸಿರುವ ಇತರ ಕೃತಿಗಳು 'ರಸರತ್ನಾಕರ', 'ವೈದ್ಯಸಾಂಗತ್ಯ'.

† ಕಾಲ: ಸು. ಕ್ರಿ. ಶ. 1650. ಜನ್ಮಸ್ಥಳ: ಮಳವಳ್ಳಿ ತಾಲ್ಲೂಕಿನ ದನಗೂರು. 'ರಾಜಶೇಖರ ವಿಳಾಸ' ಶಾಲಿವಾಹನಶಕ 1576ನೇ ಜಯ ಸಂವತ್ಸರ ಮಾಘ ಶುದ್ಧ ಶುಕ್ಲಪಕ್ಷ ತೃತೀಯ ಬುಧವಾರ ಅಂದರೆ ಕ್ರಿ.ಶ. 1655ರಲ್ಲಿಯೂ, ವೃಷಭೇಂದ್ರ ವಿಜಯ ಶಾಲಿವಾಹನಶಕ 1598ನೆಯ ನಳ ಸಂವತ್ಸರದ ಮಾಘಮಾಸದ ಸಿತ ಪಕ್ಷ ಪಂಚಮಿ ಗುರುವಾರ ಅಂದರೆ ಕ್ರಿ.ಶ. 1677ರಲ್ಲಿ ಪೂರ್ಣಗೊಂಡುದಾಗಿ ಕವಿಯ ಮಾತಿನಿಂದಲೇ ವ್ಯಕ್ತವಾಗುತ್ತದೆ.

'ವೃಷಭೇಂದ್ರ ವಿಜಯು',*1 'ರಾಜಶೇಖರ ವಿಳಾಸ.'*2 'ಶಬರ ಶಂಕರ ವಿಳಾಸ'ದ ಕಥೆ ವ್ಯಾಸಮಹಾಭಾರತದಿಂದ ತೆಗೆದುಕೊಂಡದ್ದು. ಇಲ್ಲಿ ಇದು ಐದು ಆಶ್ವಾಸಗಳುಳ್ಳ ಚಿಕ್ಕ ಕಾವ್ಯ. ಅರ್ಜುನ ತಪಸ್ಸು ಮಾಡಿ ಕಿರಾತವೇಷದಿಂದ ಈಶ್ವರನಿಂದ ಪಾಶುಪತಾಸ್ತ್ರ ಪಡೆದುದೇ ಈ ಕಾವ್ಯದ ವಸ್ತು. ಪ್ರಥಮಾಶ್ವಾಸದಲ್ಲಿ ಈಶ್ವರನ ಒಡ್ಡೋಲಗದ ವರ್ಣನೆ, ದ್ವಿತೀಯಾಶ್ವಾಸದಲ್ಲಿ ಅರ್ಜುನನ ತಪಸ್ಸಿನ ವಿವರ, ತೃತೀಯಾಶ್ವಾಸದಲ್ಲಿ ಪ್ರಮಥರೂ ದೇವಸ್ತ್ರೀಯರೂ ಬೇಟೆಗಾಗಿ ಇಂದ್ರಕೀಲ ಪರ್ವತಕ್ಕೆ ಹೊರಟ ವಿಚಾರ, ಚತುರ್ಥಾಶ್ವಾಸದಲ್ಲಿ ಕಥೆ ಶಿಖರ ಮುಟ್ಟುತ್ತದೆ. ಕಿರಾತ, ಪಾರ್ಥರ ಯುದ್ಧದ ವರ್ಣನೆ ವರ್ಣನಾತೀತ. ಅರ್ಜುನ ಲಿಂಗಕ್ಕೆ ಪೂಜಿಸಿದ ಹೂಗಳು ಕಿರಾತನ ತಲೆಯ ಮೇಲೆ ಕಂಡಾಗ ತನ್ನ ಉದ್ಧಟತನಕ್ಕೆ ವ್ಯಸನಪಟ್ಟು ದೇವರನ್ನು ಕ್ಷಮಾಪಣೆ ಯಾಚಿಸುತ್ತಾನೆ, ಪಂಚಮಾಶ್ವಾಸದಲ್ಲಿ ಪಾರ್ಥನಿಗೆ ದರ್ಶನ ಕೊಟ್ಟು ಪಾಶುಪತಾಸ್ತ್ರವನ್ನೀಯುತ್ತಾನೆ. ಈ ಕಾವ್ಯದಲ್ಲಿ ಕಥೆಗಿಂತ ವರ್ಣನೆ ಹೆಚ್ಚು.

ಹೀಗೆ ಎಲ್ಲಾ ಮಹಾಕವಿಗಳೂ ವರ್ಣಿಸಿರುವುದು ರಾಮ, ಕೃಷ್ಣ, ಈಶ್ವರನ

---

*1 'ವೃಷಭೇಂದ್ರ ವಿಜಯು' : ಬಸವೇಶ್ವರ ಚರಿತೆಯನ್ನು ನಿರೂಪಿಸಿರುವ ಬೃಹತ್ ಗ್ರಂಥ. ಇದರಲ್ಲಿ 42 ಆಶ್ವಾಸಗಳಿದ್ದು ಸಾವಿರ ಪದ್ಯಗಳನ್ನು ಒಳಗೊಂಡಿದೆ. ಇದು ಕಥನ ಕವನಗಳ ಗಣಿ. ಶೃಂಗಾರದ ಅತಿರೇಕವಾಗಲಿ, ವರ್ಣನೆಗಳ ಬಾಹುಲ್ಯವಾಗಲಿ ಇಲ್ಲ.

*2 'ರಾಜಶೇಖರ ವಿಳಾಸ' : ಇದು ಉದ್ದಾಮ ಕಾವ್ಯ. ಈ ಕಾವ್ಯಕ್ಕೆ ವಸ್ತು ಮಲ್ಲಣಾರ್ಯನ 'ಭಾವಚಿಂತಾರತ್ನ'ದ ಕಥೆ. ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ಸಾರುವುದೇ ಈ ಕಾವ್ಯದ ಉದ್ದೇಶ. ಕನ್ನಡದ ಬಹಳ ಗ್ರಂಥಗಳಲ್ಲಿ ಬರುವ ಸತ್ಯೇಂದ್ರ ಚೋಳನೇ ಈ ಕಥೆಯ ನಾಯಕ. 13ನೇ ಆಶ್ವಾಸದಲ್ಲಿ 'ತಿರುಕೊಳವಿನಾಚಿ' ಎಂಬ ಶಿವಭಕ್ತ ತನ್ನ ಒಬ್ಬನೇ ಮಗನು ಮಂತ್ರಿಪುತ್ರನ ಕುದುರೆಗೆ ಸಿಕ್ಕಿ ಸತ್ತಾಗ ಕವಿ ಕರುಣರಸವನ್ನು ಹರಿಸಿದ್ದಾನೆ. ಉಳಿದ ಕಾವ್ಯದಲ್ಲಿ ಸ್ವಲ್ಪಭಾಗ ಧರ್ಮೋಪದೇಶ, ಶಿವಲೀಲೆ ಮತ್ತೆ ಅಷ್ಟಾದಶ ವರ್ಣನೆಗೆ ಮೀಸಲಾಗಿದೆ. ಕವಿ ಶೃಂಗಾರಕ್ಕೇ ಹೆಚ್ಚು ಪ್ರಾಧಾನ್ಯತೆ ಕೊಟ್ಟಿದ್ದಾನೆ, ಷಡಕ್ಷರಿಯ ಕಾವ್ಯಗಳಲ್ಲಿ ಶೃಂಗಾರರಸ ಅದ್ದೂರಿಯಿಂದ ಮೆರೆದರೂ ಅಲ್ಲಲ್ಲೆ ವೀರ, ಶಾಂತ, ಕರುಣರಸಗಳ ವಿರಾಮಸ್ಥಾನಗಳು ಸಾಕಷ್ಟು ಬರುತ್ತವೆ. ತನ್ನ ಸಾಮರ್ಥ್ಯದಿಂದಾಗಿ 17ನೇ ಶತಮಾನದ ಕನ್ನಡ ಕವಿಗಳಲ್ಲಿ ಒಂದು ವಿಶಿಷ್ಟ ಸ್ಥಾನ ಗಳಿಸಿದ್ದಾನೆ. ಈತನ ಶೈಲಿಗೆ ಈ ಎರಡು ಪದ್ಯ ಉದಾಹರಣೆ. ಒಂದರಲ್ಲಿ ಕರುಣಾರಸ ಉಕ್ಕಿದರೆ ಇನ್ನೊಂದರಲ್ಲಿ ವರ್ಣನೆಯ ವೈಭವ ತಾಂಡವವಾಡುತ್ತಿದೆ.

'ಎಲ್ಲಿಯ ಹಯುಮೆಲ್ಲಿಯು ನೃಪಸೆಲ್ಲಿಯು ವೈಹಾಳಿಯೆಲ್ಲಿಯತಿ ಕಳಕಳಮಿಂ
ತೆಲ್ಲಿಯು ದರ್ಶನಗಮನಮಿದೆಲ್ಲಿಯ ಮೃತಿ ನಿನಗೆ ಬಂದುದೆಲೆ ಸುಕುಮಾರಾ'

'ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ
ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ ನವೀನ ಚೀನದಿಂ
ಬಿತ್ತರವೆತ್ತ ಮೇಲ್ಕುಡಿ ನಿಮಿರ್ಚಿದ ಬಜ್ಜರಗಂಬ ಮಿಂಬುಗೊಂ
ಡುತ್ತಮ ನೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್'

ಮಹಿಮೆಯನ್ನೆ. ಒಂದೇ ರಾಗವನ್ನು ವಿವಿಧ ವಾದ್ಯಗಳಲ್ಲಿ ನುಡಿಸುವ ಹಾಗೆ ಕವಿಗಳೂ ಬೇರೆ ಬೇರೆ ರೀತಿಯಲ್ಲಿ ಸ್ತುತಿಸಿದ್ದಾರೆ." ನುಡಿದರು ವ್ಯಾಸರಾಯರು.

"ಭಾರತ ಮತ್ತಾರು ಬರೆದಿದ್ದಾರೆ ಸಾರ್ ? ಪ್ರಶ್ನಿಸಿದ ಚಂದ್ರು.

"ಇದೇ ಶತಮಾನದ **ಸುಕುಮಾರಭಾರತಿ** ವಾರ್ಧಕ ಷಟ್ಪದಿಯಲ್ಲಿ 'ಭಾರತ' ರಚಿಸಿದ್ದಾನೆ. ಇದಕ್ಕೆ 'ಚಾಯಣ ಭಾರತ' ಎಂದು ಹೆಸರು. ಗೋಪಕವಿ ವಾರ್ಧಕ ಷಟ್ಪದಿಯಲ್ಲಿ 'ಚಿತ್ರಭಾರತ' ಎಂಬ ಶಬ್ದಾಲಂಕಾರಭೂಯಿಷ್ಠವಾದ ಚಿತ್ರಕವಿತ್ವ ರಚಿಸಿದ್ದಾನೆ. ಮಲ್ಲರಸ*1 ಎಂಬ ಕವಿ 'ದಶಾವತಾರ ಚರಿತೆ'ಯನ್ನು ಚಂಪೂವಿನಲ್ಲೂ, ವೆಂಕಟಾರ್ಯಶಿಷ್ಯ*2ನೆಂಬುವನು 'ಕೃಷ್ಣಗೋಪೀವಿಲಾಸ' ಎಂಬ ಗ್ರಂಥವನ್ನು ಸಾಂಗತ್ಯದಲ್ಲೂ, ಲಕ್ಷ್ಮ ಕವಿ*3 'ರುಕ್ಮಾಂಗದ ಚರಿತೆ'ಯನ್ನು ರಚಿಸಿದ್ದಾನೆ. ಇದೇ ಶತಮಾನದ ಇನ್ನೊಬ್ಬ ಪ್ರಸಿದ್ಧ ಕವಿ ತಿಮ್ಮಣ್ಣಕವಿ. ಈತ ಭಾರತದ ಉತ್ತರ ಭಾಗವನ್ನು 'ಭಾರತ' ಎಂಬ ಭಾಮಿನಿಷಟ್ಪದಿ ಕೃತಿಯಲ್ಲಿ ಅಳವಡಿಸಿದ್ದಾನೆ. ಈ ಗ್ರಂಥಕ್ಕೆ 'ಕೃಷ್ಣರಾಜಭಾರತ' ಎಂದೂ ಹೆಸರಿದೆ." ನುಡಿದ ವ್ಯಾಸರಾಯರು ಬದಿಯಲ್ಲಿದ್ದ ಕೈಚೀಲದಿಂದ ಒಂದು ಪುಸ್ತಕ ಹೊರತೆಗೆದು "ಇದು ನನ್ನ 'ಕೈಪಿಡಿ ಬೃಹತ್ ಕೋಶ. ಇದರಲ್ಲಿ ನಂಗೆ ಆಸಕ್ತಿ ಕಂಡ ವಿಷಯವನ್ನೆಲ್ಲಾ ಕ್ರೋಢೀಕರಿಸಿ ಇಟ್ಟಿದ್ದೇನೆ. ಈ ಮಹಾಭಾರತವನ್ನು ಕನ್ನಡಕ್ಕೆ ಎಷ್ಟುಜನ ಎಷ್ಟು ಹೆಸರಿನಲ್ಲಿ ಹೊರತಂದಿದ್ದಾರೆ ನೋಡಿ......ಸಾಮಾನ್ಯ ಜನಗಳಿಗೆ ಅನುಕೂಲವಾಗುವಂತೆ **ಎ. ಆರ್. ಕೃಷ್ಣಶಾಸ್ತ್ರಿ**ಗಳು 'ವಚನ ಭಾರತ'ವನ್ನು, ತ. ಸು. ಶಾಮರಾಯರು 'ಕುಮಾರವ್ಯಾಸ ಭಾರತ' ಕಾವ್ಯಸಂಗ್ರಹವನ್ನು, ಸಿ.ಪಿ.ಕೆ. ಅವರು 'ಸಂಗ್ರಹ ಮಹಾಭಾರತ' (ಮೂಲಶ್ಲೋಕ ಸಹಿತ) ನೀಡಿದ್ದಾರೆ. ಅಂಬಳೆ ಕೃಷ್ಣಶಾಸ್ತ್ರಿ*4ಗಳ 'ವಚನ ಭಾರತ' ಇನ್ನೊಂದು ಜನಪ್ರಿಯ ಕೃತಿ. ವೆ॥ **ಪಟ್ಟವರ್ಧನ ಅಶ್ವತ್ಥ ನಾರಾಯಣ ಶಾಸ್ತ್ರಿಗಳು** ಜೈಮಿನಿಭಾರತವನ್ನು ಸಚಿತ್ರವಾಗಿ ಕಥಾಸಂಗ್ರಹ ರೂಪದಲ್ಲಿ ಪ್ರಕಟಿಸಿದ್ದಾರೆ. ಇದೇ ಜೈಮಿನಿ ಭಾರತವನ್ನು ವಿವಿಧ ರೂಪದಲ್ಲಿ ಹಲವರು ಪರಿಷ್ಕರಿಸಿ ಸಂಗ್ರಹಿಸಿ ಪ್ರಕಟಿಸಿದ್ದಾರೆ : **ಬಿ. ಭೀಮಸೇನರಾವ್**ರವರ 'ಕರ್ನಾಟಕ ಜೈಮಿನಿ ಭಾರತ', **ರಾಮಚಂದ್ರ ನರಸಿಂಗರಾವ್ ಮಳಗಿ**ಯವರ 'ಸಂಕ್ಷಿಪ್ತ ಜೈಮಿನಿ ಭಾರತ', ಕಡಬದ ನಂಜುಂಡಶಾಸ್ತ್ರಿಗಳ 'ಜೈಮಿನಿ ಭಾರತ', ದೇ.ಜ.ಗೌ.ರವರ 'ಜೈಮಿನಿ ಭಾರತ ಸಂಗ್ರಹ', ಜಿ. ಗುಂಡಣ್ಣನವರ 'ಜೈಮಿನಿ ಭಾರತ ಸಂಗ್ರಹ',

---

*1 ಕಾಲ: ಸು. ಕ್ರಿ.ಶ. 1680. *2 ಸು. ಕ್ರಿ.ಶ. 1700. *3 ಸು. ಕ್ರಿ.ಶ. 1723.

*4 'ಕನ್ನಡ ಸೇನಾನಿ' ಎಂದು ಪ್ರಸಿದ್ಧರಾಗಿದ್ದ ಅಂಬಳೆ ಕೃಷ್ಣಶಾಸ್ತ್ರಿಗಳು ಸಂಸ್ಕೃತ ಹಾಗೂ ಕನ್ನಡದ ಉದ್ದಾಮ ಪಂಡಿತರು. ಇವರ 'ವಚನಭಾರತ' ಬಹಳ ಜನಪ್ರಿಯ ಕೃತಿ. ಇವರ ಇತರ ಕೃತಿಗಳು 'ಶ್ರೀಪತಿಯ ಕತೆಗಳು', 'ಬಂಕಿಮಚಂದ್ರ', 'ಕವಿಜಿಹ್ವಾಬಂಧನ' (ಸಂಪಾದಿಸಿದ ಛಂದೋಗ್ರಂಥ), 'ಕನ್ನಡ ಕೈಪಿಡಿ' (ಅಲಂಕಾರ ಶಾಸ್ತ್ರಗ್ರಂಥ).

ಸಿ. ಎನ್. ಲಕ್ಷ್ಮೀದೇವಿಯವರ ವಚನರೂಪಕ 'ಜನಪ್ರಿಯ ಜೈಮಿನಿ ಭಾರತ' ಮುಂತಾದವುಗಳು.

ವ್ಯಾಸಭಾರತದ ಕನ್ನಡ ಸರಳಾನುವಾದವನ್ನು 'ಶ್ರೀಮನ್ಮಹಾಭಾರತ' ಎಂಬ ಹೆಸರಿನಿಂದ ವಿದ್ವಾನ್ **ರಾಮೇಶ್ವರಾವಧಾನಿ,** ವಿದ್ವಾನ್ **ಎಚ್. ಎಸ್. ರಂಗಸ್ವಾಮಿ** ಮುಂತಾದವರುಗಳು ಸಂಪಾದಿಸಿ ಹೊರತಂದಿದ್ದಾರೆ. ಬಂಗಾಳದ ಕವಿ **ನವೀನಚಂದ್ರ ಸೇನರ** 'ಶ್ರೀಕೃಷ್ಣಚರಿತ್ರ'ವನ್ನು ಗೋವಿಂದ ಪೈಗಳು ಗದ್ಯಾನುವಾದ ಮಾಡಿದ್ದಾರೆ. ಚಿ. ವಾಸುದೇವಯ್ಯನವರ 'ಭೀಷ್ಮಚರಿತೆ'. ರಜನಿಕಾಂತ ಗುಪ್ತರ ವಂಗಭಾಷೆಯ 'ಭೀಷ್ಮಚರಿತೆ'ಯ ಕನ್ನಡಾನುವಾದ. ಆರ್. ವ್ಯಾಸರಾಯರ 'ಶ್ರೀಕೃಷ್ಣಚರಿತೆ' ಬಂಕಿಮಚಂದ್ರರ 'ಶ್ರೀಕೃಷ್ಣಚರಿತ್ರೆ'ಯ ಅನುವಾದ. ಕೆ. ಎಂ. ಮುನ್ಷಿಯವರ ಕೃಷ್ಣಾವತಾರವನ್ನು **ಸಿದ್ಧವನಹಳ್ಳಿ ಕೃಷ್ಣಶರ್ಮರು** ಕನ್ನಡಕ್ಕೆ ಅನುವಾದಿಸಿದ್ದಾರೆ. 'ರಾಜಾಜಿ ಮಹಾಭಾರತ' 'ವ್ಯಾಸರ್ ವಿರುನ್ದು' ಎಂಬ ತಮಿಳು ಗ್ರಂಥದ ಕನ್ನಡ ಅನುವಾದ. ಅನುವಾದಕರು **ಎಲ್. ಗುಂಡಪ್ಪ.*** 'ಪಂಪಭಾರತ ಸಂಗ್ರಹ' ಪಂಪ ನಾಗರಾಜಯ್ಯ ಸಂಪಾದಿಸಿರುವ ಕೃತಿ.

ಕುಮಾರವ್ಯಾಸ ವಿರಚಿತ 'ಕನ್ನಡ ಮಹಾಭಾರತ'ವನ್ನು ಶೋಧಿಸಿ ಮೈಸೂರು ಪ್ರಾಚ್ಯ ಕೋಶಾಗಾರ ಅನೇಕ ಸಂಪುಟಗಳಲ್ಲಿ ಪ್ರಕಟಿಸಿದೆ. 'ಕರ್ಣಾಟ ಭಾರತ ಕಥಾಮಂಜರಿ' **ಕುವೆಂಪು** ಮತ್ತು **ಮಾಸ್ತಿ**ಯವರು ಸಂಪಾದಿಸಿರುವ 'ಕುಮಾರವ್ಯಾಸ ಭಾರತ' ಜನಸಾಮಾನ್ಯರಿಗೆ ಕಡಿಮೆ ಬೆಲೆಯಲ್ಲಿ ಮಾರಾಟಗೊಂಡ ಜನಪ್ರಿಯ ಆವೃತ್ತಿ. **ಎನ್ಕೆ**ರವರೂ ಕುಮಾರವ್ಯಾಸ ಭಾರತವನ್ನು ಗದ್ಯರೂಪದಲ್ಲಿ ಹೊರ ತಂದಿದ್ದಾರೆ. 'ಕರ್ಣಾಟಕ ಮಹಾಭಾರತ' ಎಸ್. ಎನ್. ಕೃಷ್ಣಜೋಯಿಸರು ಸಂಪಾದಿಸಿರುವ ಇದೇ ಹಿನ್ನೆಲೆಯ ಇನ್ನೊಂದು ಕೃತಿ. 'ಭೀಮದುರ್ಯೋಧನೀಯ' ಕುಮಾರವ್ಯಾಸ ಗದಾಪರ್ವ ಸಂಗ್ರಹ. ಇದರ ಸಂಪಾದಕರು **ಎಚ್. ಎಂ. ಶಂಕರ ನಾರಾಯಣರಾವ್.** ಇವಲ್ಲದೆ **ದೇವುಡು** ಅವರ 'ಮಹಾಭಾರತ ಸಂಗ್ರಹ', ಡಿ.ವಿ.ಜಿ. ಅವರ 'ಶ್ರೀಕೃಷ್ಣ ಪರೀಕ್ಷಣಂ'. ಸಿ. ಎಂ. ದೇವೇಂದ್ರನಾಯಕರವರ 'ಶ್ರೀ ಅಭಿನವ

---

* ಎಲ್. ಗುಂಡಪ್ಪ (ಎಂ.ಎ.) ನವರ ಜನನ 1903 ಜನವರಿ. 'ಭಾರತಂ ಪಂಚಮೋ ವೇದಃ' ಎಂಬ ಖ್ಯಾತಿ ಪಡೆದಿರುವ ಶ್ರೀ ಮಹಾಭಾರತ ಗದ್ಯಾನುವಾದ 'ಕರ್ಣಾಟಕ ಭಾರತ ಕಥಾ ಮಂಜರಿ'. ಮೂಲಕೃತಿಯ ಸೌಂದರ್ಯಕ್ಕೆ ಕುಂದು ಬಾರದಂತೆ ಗದ್ಯಶೈಲಿಯಲ್ಲಿ ಅನುವಾದ ಮಾಡಿದ್ದಾರೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ವಿದ್ಯಾರ್ಥಿಯಾಗಿದ್ದಾಗಲೇ ತಾವು ಬರೆದ ಕವಿತೆಗಳಿಗಾಗಿ ರಜತ ಪದಕ ಗಳಿಸಿದ್ದರು. 'ತಿರುಕ್ಕುರಳ್, ಶಿಲಪ್ಪದಿಗಾರಮ್'ಗಳನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್–ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ ಕನ್ನಡ ನಿಘಂಟಿನ ಸಂಪಾದನೆಯಲ್ಲಿ ದುಡಿದಿದ್ದಾರೆ. 'ಪತ್ರಿಕಾ ನಿಘಂಟು' ಬಹಳ ಉಪಯುಕ್ತ ಗ್ರಂಥ.

ಮಹಾಭಾರತ ಕಾವ್ಯಮಂಜರಿ', ವಂಶಿ ಅವರ 'ಶ್ರೀ ಮಹಾಭಾರತ' (ಕುಮಾರವ್ಯಾಸ ಭಾರತದ ಅನುವಾದ), ಜೋಗ ವಿರಚಿತ 'ಭಗವಾನ್ ಶ್ರೀಕೃಷ್ಣ', ಗ.ಪು. ಹೊನ್ನಾಪುರ ಮಠ ರಚಿಸಿರುವ 'ಶ್ರೀಕೃಷ್ಣ ಚರಿತ್ರೆ', ದೇರಾಜೇ ಸೀತಾರಾಮಯ್ಯ ವಿರಚಿತ ಗದ್ಯಕಾವ್ಯ 'ಶ್ರೀಮನ್ಮಹಾಭಾರತ ಕಥಾಮೃತಂ', ಆರ್. ಎಸ್. ರಾಮರಾಯರ 'ಸಾಹಸಭೀಮ', ಡಾ॥ ಆರ್.ಸಿ. ಹಿರೇಮಠ ಸಂಪಾದಿಸಿರುವ 'ಐರಾವತ ಸೋಂಪಿ', ದೇವುಡುರವರ 'ಭಾರತದ ಮಹಾಪುರುಷರು', ಚಿ. ಶ್ರೀ. ಕುಲಕರ್ಣಿ ಬರೆದಿರುವ 'ಶ್ರೀಹರಿ ವಿಜಯ ಕಥಾ', ಪಂಡಿತ ಸಿ.ಆರ್. ಶ್ರೀನಿವಾಸ ಅಯ್ಯಂಗಾರ್ ಬರೆದಿರುವ 'ಮಹಾಭಾರತದ ಸೂತ್ರದಾರ'. ವಿ. ಸೀ. ಅವರ 'ಮಹಾಭಾರತದ ಐವರು ಮಾನ್ಯರು', ಡಾ॥ ದೇ. ಜ. ಗೌ.ರವರ 'ಗದುಗಿನ ಭಾರತ–ಒಂದು ಸಾಂಸ್ಕೃತಿಕ ಅಧ್ಯಯನ', ಬಿ. ಎಸ್. ಗೋಪಾಲಕೃಷ್ಣರವರ 'ಮಹಾಭಾರತದ ಭೀಮ', ಹೆಚ್. ಶ್ರೀಕಂಠಯ್ಯನವರ 'ಭಾರತ ನೀತಿಸಾರ', ಎನ್, ಅನಂತರಂಗಾಚಾರ್ಯರ 'ಕುಮಾರವ್ಯಾಸ ವಿರಚಿತ ಕರ್ಣಪರ್ವ', ತ. ಸು. ಶಾಮರಾಯರ 'ಕನ್ನಡ ಮಹಾಭಾರತ ಉದ್ಯೋಗಪರ್ವ ಸಂಗ್ರಹ', ಮುಂತಾದವುಗಳು ಮಹಾಭಾರತ ಅವಲಂಭಿತ ಕೃತಿಗಳು. 'ಪರ್ವ' ಡಾ॥ ಎಸ್. ಎಲ್. ಭೈರಪ್ಪ ವಿರಚಿತ ಆಧುನಿಕ ಮಹಾಭಾರತ, ನವ್ಯಪ್ರಜ್ಞೆಯ ಕಥಾನಕ. ಮಹಾಭಾರತದ ವಿರಾಟ ಮತ್ತು ಉದ್ಯೋಗ ಪರ್ವಗಳಿಗೆ ನವರತ್ನಸರಹರಿ ಮತ್ತು ಸತ್ಯಧರ್ಮರು ವ್ಯಾಖ್ಯಾನ ಬರೆದಿದ್ದಾರೆ.

## (ಆ) 'ರಾಮಾಯಣ' ರಚನಕಾರರು

"ಕಥೆ ಹೇಳಿ ತಾತ" ಮತ್ತೆ ಗೋಗರೆದ ಮುಕುಂದ.

"ಆಗ್ಲಪ್ಪಾ ಮುಕುಂದ. ಇನ್ನು ರಾಮ, ಆಂಜನೇಯರ ಕಥೆ ಹೇಳ್ತೀನಿ. ನೀನು ನಿದ್ದೆ ಮಾಡ್ದೆ ಎದ್ದು ಕೂತಿರ್ತೀಯಾ ?" ಹುಸಿನಗುತ್ತ ಪ್ರಶ್ನಿಸಿದವರು ವ್ಯಾಸರಾಯರು. "ಹೂಂ" ಎಂದು ಗೋಣು ಅಲ್ಲಾಡಿಸಿದ ಮುಕುಂದ

ಯಾವತ್ ಸ್ಥಾಸ್ಯನ್ತಿ ಗಿರಯಃ ಸರಿತಶ್ಚ ಮಹೀತಲೇ
ತಾವದ್ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ ॥

ಎಲ್ಲಿಯವರೆಗೆ ಭೂಮಿಯಲ್ಲಿ ಗಿರಿಗಳೂ ನದಿಗಳೂ ಇರುವುವೋ ಅಲ್ಲಿಯವರೆಗೆ ರಾಮಾಯಣ ಕಥೆಯು ಲೋಕದಲ್ಲಿ ಪ್ರಚಾರವಾಗುತ್ತದೆ.

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿ ಕೋಕಿಲಂ ॥

ಕಾವ್ಯಶ್ರೀಯ ಕೊಂಬೆಯನ್ನೇರಿ ಮಧುರವಾಗಿ ರಾಮ, ರಾಮ ಧ್ವನಿಗೈಯುವ ವಾಲ್ಮೀಕಿ ಕೋಗಿಲೆಯನ್ನು ವಂದಿಸುತ್ತೇನೆ.

ಪ್ರಾಚೀನ ಶ್ಲೋಕ ಎಷ್ಟು ಅರ್ಥವತ್ತಾಗಿದೆ !

ಈಗ ರಾಮಾಯಣದ ಕಥೆಯನ್ನೆ ವಸ್ತುವಾಗಿಟ್ಟುಕೊಂಡು ಕಾವ್ಯ ರಚಿಸಿರುವ ಕವಿಗಳನ್ನು ಒಬ್ಬೊಬ್ಬರಾಗಿ ಪರಾಮರ್ಶಿಸೋಣ. ಈ ರಸ್ತೆಯಲ್ಲಿ ನಾವು ನಡೆದಾಗ ನಮಗೆ ಮೊದಲು ಸಿಗುವ ಮಹಾವ್ಯಕ್ತಿ ಎಂದರೆ ಆದಿಕವಿ ವಾಲ್ಮೀಕಿ ಋಷಿ.* ಬ್ರಹ್ಮನಿಂದ ಸ್ಫೂರ್ತಿ ಪಡೆದ ವಾಲ್ಮೀಕಿಯ ಮನಸ್ಸಿನಲ್ಲಿ ಈ ಕಥಾನಕವು ಸುಸ್ಪಷ್ಟವಾಗಿ ರೂಪುಗೊಂಡಾಗ ರಾಮಾಯಣ ಮಹಾಕಾವ್ಯವು ಸೃಷ್ಟಿಯಾಯಿತು.

ಒಬ್ಬ ಮನುಷ್ಯ ರಾಮನಾಮ ಜಪಿಸುತ್ತ ತಪಸ್ಸು ಮಾಡುತ್ತ ಕುಳಿತಿದ್ದಾನೆ. ದಿನಗಳುರುಳಿವೆ. ತಿಂಗಳುಗಳು ಕಳೆದಿವೆ. ವರ್ಷಗಳು ಸಂದಿವೆ. ಆ ಮನುಷ್ಯನ ಸುತ್ತ ಹುತ್ತ ಬೆಳೆದಿದೆ. ಆದರೂ ರಾಮನಾಮ ಕೇಳಿಬರುತ್ತಿದೆ."

"ಹುತ್ತದಲ್ಲಿ ಹಾವು ಸೇರ್ಕೊಳ್ಳಿಲ್ವೆ ?" ದಿನೇಶನ ಪ್ರಶ್ನೆ.

"ರಾಮನಾಮಕ್ಕೆ ಆ ದಿವ್ಯಶಕ್ತಿ ಇದೆ. ಈ ವಾಣಿ ಕೇಳಿದೊಡೆ ಕೆಟ್ಟದ್ದು ನಡೆಯುವುದಿಲ್ಲ. ಕೆಟ್ಟ ಜನ ಹತ್ತಿರ ಸೇರುವುದಿಲ್ಲ."

"ಸುಮ್ನಿರೊ ದಿನೇಶ. ಕಥೆ ಹೇಳೋವಾಗ ಹಾಗೆಲ್ಲ ಮಧ್ಯೆ ಮಾತ್ನಾಡ್ಬೇಡ," ಗದರಿಸಿದರು ತಾಯಿ.

"ಕೇಳ್ಲಿ ಬಿಡಿ ಪದ್ದಮ್ಮ. ಮನಸ್ನಲ್ಲಿ ಅನುಮಾನ ಉಳಿದ್ರೆ ಕಥೇಲಿ ಸ್ವಾರಸ್ಯ ಹೊರಟುಹೋಗುತ್ತೆ. ಹೂಂ. ಇನ್ನು ಕಥೆ ಮುಂದುವರಿಸೋಣ. ಸಪ್ತಋಷಿಗಳು ಒಂದಿನ ಆ ಮಾರ್ಗದಲ್ಲಿ ಬಂದಾಗ ಇದನ್ನು ನೋಡಿದರು. ಆ ಮನುಷ್ಯ ಪ್ರಪಂಚಕ್ಕೆ ಅತ್ಯುತ್ತಮವಾದ ಕೆಲಸವನ್ನು ಮಾಡಬೇಕಿದ್ದುದರಿಂದ ಹುತ್ತ ಒಡೆದು

---

* ವಾಲ್ಮೀಕಿಯ ಜೀವಿತ ಕಾಲ ಸರಿಯಾಗಿ ತಿಳಿದುಬಂದಿರುವುದಿಲ್ಲ. ತ್ರೇತಾಯುಗದಲ್ಲಿ (ಕ್ರಿ. ಪೂ. 867102) ರಾಮಾಯಣ ರಚಿತಗೊಂಡಿರಬೇಕೆಂದು ಕೆಲವರ ಊಹೆ. ಅಂದರೆ ವಾಲ್ಮೀಕಿ ಇದಕ್ಕೂ ಹಿಂದೆ ಇದ್ದಿರಬೇಕು. ಮಾನಿಯರ್ ವಿಲಿಯಮ್ಸ್ ಮತ್ತು ವಿಂಟರ್ ನಿಟ್ಸ್ ರಾಮಾಯಣದ ರಚನೆ ಕಾಲ ಸುಮಾರು ಕ್ರಿ.ಪೂ. 3ನೇ ಶತಮಾನವೆಂದು ಅಭಿಪ್ರಾಯಪಡುತ್ತಾರೆ. ಮ್ಯಾಕ್ಡಾನೆಲ್ ಸು. ಕ್ರಿ. ಪೂ. 400–200 ಕಾಲದಲ್ಲಿ ರಚಿತಗೊಂಡಿರಬಹುದೆಂದು ಊಹಿಸುತ್ತಾರೆ.

13ನೇ ಶತಮಾನದಲ್ಲಿ ರಚಿತವಾದ ಅಧ್ಯಾತ್ಮ ರಾಮಾಯಣದಲ್ಲಿ ವಾಲ್ಮೀಕಿ ದ್ವಿಜನಾಗಿದ್ದು ಆಚಾರದಲ್ಲಿ ಶೂದ್ರನಾಗಿ ಕಿರಾತರೊಡನೆ ಬೆಳೆದನೆಂದು ಉಲ್ಲೇಖವಿದೆ.

14ನೇ ಶತಮಾನದಲ್ಲಿ ರಚಿತವಾದ ಕೃತ್ತಿವಾಸ ರಾಮಾಯಣದಲ್ಲಿ ವಾಲ್ಮೀಕಿ ಚ್ಯವನ ಮುನಿಯ ಪುತ್ರನೆಂದೂ ಅತನ ಹೆಸರು ರತ್ನಾಕರನೆಂದೂ ದಸ್ಯುವೃತ್ತಿಯಿಂದ ಬೆಳೆದನೆಂದು ಹೇಳಿದೆ.

ಇವೆರಡನ್ನೂ ನಂಬುವುದು ಕಷ್ಟ. ವ್ಯಾಧನಾಗಿದ್ದ ವಾಲ್ಮೀಕಿ ಬ್ರಹ್ಮಕೃಪೆಯಿಂದ ಭಾರತದ ಆದಿಕವಿಯಾದದ್ದು ಮಾತ್ರ ಸತ್ಯಸಂಗತಿ ಅನಿಸುತ್ತದೆ.

ಆತನನ್ನು ಎಚ್ಚರಿಸಿದರು. ಆತನಿಗೆ ಪುನರ್ಜನ್ಮ ಬಂದಂತಾಯಿತು. ವಾಲ್ಮೀಕ ಎಂದರೆ ಹುತ್ತ. ಹುತ್ತದಿಂದ ಹೊರಬಂದುದರಿಂದ 'ವಾಲ್ಮೀಕಿ' ಎಂದು ಹೆಸರಾಯಿತು. ಈತ ಮೊದಲು ಬೇಡನಾಗಿದ್ದ. ಜನರನ್ನು ಕಾಡಿಸಿ ಪೀಡಿಸಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದ.

ಒಮ್ಮೆ ಈ ಬೇಡ ಇದೇ ಸಪ್ತಋಷಿಗಳನ್ನೇ ಅಡ್ಡಗಟ್ಟಿದ್ದ. ಆಗಲೇ ಇವರು ಆತನಿಗೆ ರಾಮನಾಮದ ಮಹತ್ವ ವಿವರಿಸಿ ಈ ಬೀಜ ಮಂತ್ರ ಉಪದೇಶಿಸಿದ್ದರು. ಹುತ್ತದಿಂದ ಹೊರಬಂದು ಹೊಸಜನ್ಮ ಹೊಂದಿ ಕಾಡಿನಲ್ಲಿ ಅಲೆಯುತ್ತಿದ್ದ ವಾಲ್ಮೀಕಿ, ಒಂದು ದಿನ ಒಬ್ಬ ಬೇಟೆಗಾರ ಆಕಾಶದಲ್ಲಿ ವಿಹರಿಸುತ್ತಿದ್ದ ಎರಡು ಕ್ರೌಂಚಪಕ್ಷಿಗಳಲ್ಲಿ ಗಂಡುಪಕ್ಷಿಯನ್ನು ಬಾಣದಿಂದ ಹೊಡೆದುರುಳಿಸಿದ್ದನ್ನು ಕಂಡ. ಹೆಣ್ಣುಪಕ್ಷಿಯ ಆಕ್ರಂದನ, ವಾಲ್ಮೀಕಿಯ ಹೃದಯವನ್ನು ಕಲಕಿತು. ಮನಸ್ಸು ವ್ಯಾಕುಲಗೊಂಡಿತು. ಆಶ್ರಮದಲ್ಲಿ ಧ್ಯಾನಮಗ್ನನಾಗಿದ್ದಾಗ ರಾಮಾಯಣ ರಚಿಸಲು ಬ್ರಹ್ಮನಿಂದ ಪ್ರೇರಣೆ ಆಯಿತು. ಇದು ದಂತಕಥೆ ಆಗಿರಬಹುದು. ನಿಜವೇ ಆಗಿರಬಹುದು. ಸ್ವತಃ ವಾಲ್ಮೀಕಿಯೇ ಇದನ್ನು ರಚಿಸದಿರಬಹುದು. ಆತನ ನಂತರ ಎಷ್ಟೋ ವರ್ಷಗಳ ತರುವಾಯ ಕೇಳಿ ಅರಿತಿದ್ದ ಈ ಕಥೆಗೆ ಯಾರೋ ಲಿಖಿತರೂಪ ಕೊಟ್ಟಿರಬಹುದು. ಅಂತೂ ಈ ಕಥೆಗೆ ವಾಲ್ಮೀಕಿ 'ಆಕರ' ಎಂಬುದರಲ್ಲಿ ಸಂದೇಹವಿಲ್ಲ. ಶೋಕ, ವಿರಹವೇ ಈ ಮಹಾಕಾವ್ಯದ ಅಂತಃಸತ್ವ.

ದಶರಥಪುತ್ರನೇ ಶ್ರೀರಾಮ. ಲಕ್ಷ್ಮಣ, ಭರತ, ಶತ್ರುಘ್ನ ರಾಮನ ತಮ್ಮಂದಿರು. ದಶರಥ ತನ್ನ ಕಿರಿ ಹೆಂಡತಿ ಕೈಕೆಗೆ ಕೊಟ್ಟಿದ್ದ ಭಾಷೆಯನ್ನು ಪೂರ್ಣ ಮಾಡಬೇಕಿತ್ತು. ಕೈಕೆ ಶ್ರೀರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಕಳುಹಿಸಬೇಕೆಂದೂ ತನ್ನ ಮಗ ಭರತನಿಗೆ ರಾಜ್ಯಪಟ್ಟಾಭಿಷೇಕವನ್ನು ನೆರವೇರಿಸಬೇಕೆಂದು ಬೇಡಿದಾಗ ತೋಚದೆ ಸುಮ್ಮನೆ ನಿಂತ. ಭ್ರಾತೃವಾತ್ಸಲ್ಯದಿಂದ ಶ್ರೀರಾಮನನ್ನೆ ಲಕ್ಷ್ಮಣ ಹಿಂಬಾಲಿಸಿದ. ಸೀತೆ ಸತಿ. ಆಕೆಯೂ ಗಂಡನ ಜೊತೆಯಲ್ಲೆ ಹೊರಟಳು. ದುಃಖದಿಂದ ಧಗ್ದವಾದ ಹೃದಯ ಹೊತ್ತಿರಲಾರದೆ ದಶರಥ ಕೆಲದಿನದಲ್ಲೆ ಮರಣ ಹೊಂದಿದ. ರಾಣಿಯರು ಶೋಕಸ್ತರಾದರೂ ಹದಿನಾಲ್ಕು ವರ್ಷ ಪತಿಯಿಂದ ವಂಚಿತಳಾಗಿದ್ದ ಲಕ್ಷ್ಮಣನ ಹೆಂಡತಿ ಊರ್ಮಿಳೆಯ ವಿರಹವೇದನೆ, ಕೈಕೆಯ ಪಶ್ಚಾತ್ತಾಪ, ತಾಯಿ ಕೌಸಲ್ಯೆಯ ಪುತ್ರವಿಯೋಗದ ದುಃಖ, ನೆಚ್ಚಿನ ಯುವರಾಜನ ಅಭಿಮಾನದಿಂದ ವಂಚಿತರಾದ ಪ್ರಜೆಗಳ ಶೋಕ, ಸೀತಾಪಹರಣವಾದಾಗ ಶ್ರೀರಾಮನ ವಿರಹ ವೇದನೆ ಇದೇ ಈ ಮಹಾಕಾವ್ಯದ ಕೃತಿ. ಈ ಕೃತಿಯೊಡನೆ ಅಮೋಘ ಕಾವ್ಯ ಸಂಗೀತ ನೀಡಿರುವ ವಾಲ್ಮೀಕಿಯ ಪ್ರೌಢಿಮೆ ನಿಜವಾಗಿ ಸ್ತುತ್ಯಾರ್ಹ. ಅದಕ್ಕೆ ಈತ ಪ್ರಪಂಚದ ಶ್ರೇಷ್ಠಕವಿಗಳಲ್ಲೆಲ್ಲಾ ಆಚಾರ್ಯನಾಗಿದ್ದಾನೆ. ಈ ಪ್ರಾಚೀನ ಗ್ರಂಥ ಭಾರತದ ಸಂಸ್ಕೃತಿಯ ಪ್ರತೀಕ. ಈ ಪೂಜ್ಯಕೃತಿ

ಎಂದೂ ಆದರಣೀಯ. ಇದರ ಹುರುಳನ್ನು ಮೊದಲು ಕನ್ನಡಕ್ಕೆ ನೀಡಿದವನು ಅಭಿನವಪಂಪ **'ನಾಗಚಂದ್ರ'**.

"ಇದೇನು ಮೇಸ್ಟ್ರೆ, ರತ್ನತ್ರಯರಲ್ಲಿ ಒಬ್ಬನಾದ ಪೊನ್ನನ್ನೇ ಬಿಟ್ಬಿಟ್ರಲ್ಲ. ಅವನು 'ರಾಮಾಭ್ಯುದಯ' ಅಂತಾನೋ ಏನೋ ಒಂದು ದೊಡ್ಡ ಕಾವ್ಯ ಬರ್ದಿದ್ದಾನೆ ಅಲ್ವೆ" ಸ್ವಲ್ಪಹೊತ್ತಿಗೆ ಮುಂಚೆ ಮನೆಯೊಳಗೆ ಬಂದಿದ್ದ ವಾಸುದೇವರಾಯರು ಪ್ರಶ್ನಿಸಿದರು.

"ನೀವು ಯಾವಾಗ ಬಂದ್ರೋ ನಾನು ನೋಡ್ಲೇ ಇಲ್ಲ." ನಕ್ಕರು ರಾಯರು.

"ಪೊನ್ನ* ರತ್ನತ್ರಯರಾದ ಪಂಪ, ಪೊನ್ನ, ರನ್ನರಲ್ಲಿ ಒಬ್ಬ ನಿಜ. ಈತನೂ ಒಬ್ಬ ಶ್ರೇಷ್ಠ ಕವಿ. ಅದೂ ಸತ್ಯ. ಈತನು ಬರೆದಿದ್ದಾನೆ ಎನ್ನುವ 'ಭುವನೈಕ ರಾಮಾಭ್ಯುದಯ' ಕಾವ್ಯ ಇನ್ನೂ ಉಪಲಬ್ಧವಿಲ್ಲ. 'ಶಾಂತಿಪುರಾಣ'ದ ಕೊನೆಯ ಪದ್ಯ ಈ ಕಾವ್ಯ ಬರೆದುದನ್ನು ಸಿದ್ಧಪಡಿಸುತ್ತದೆ.

> ವಿದಿತ ಭುವನೈಕ ರಾಮಾ
> ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ ।
> ಪದಿನಾಲ್ಕುಂ ಭುವನಂಗಳ್
> ಪದಿನಾಲ್ಕಾಶ್ವಾಸ ರಚನೆಗಂ ಬೆಲೆಯಕ್ಕುಂ ॥

ಇದರಲ್ಲಿರುವ 14 ಆಶ್ವಾಸಗಳಿಗೂ 14 ಲೋಕದ ಬೆಲೆ ಆಗುವುದೆಂದು ತಿಳಿಯುತ್ತದೆ. ಈ ಗ್ರಂಥ ವಾದಗ್ರಸ್ತವಾದ್ದರಿಂದ ನಾನು ಅದನ್ನು ಬಿಟ್ಟುಬಿಟ್ಟಿದ್ದೇನೆ.

"ನೀವು ಹೇಳೋದೂ ಸರಿ ಅನ್ನಿ. ರಾಮನ ಹೆಸ್ರು ಬಂದಿದೆ ಅಂತ 'ರಾಮಾಯಣ' ಅಂತಾನೆ ನಿರ್ಧರಿಸೋದು ಸರಿಹೋಗಲ್ಲ ಅನ್ನಿ. ಹೂಂ... ಮುಂದುವರ್ಸಿ..." ಕಾಫಿ ಕುಡಿಯುತ್ತ ನುಡಿದರು ವಾಸುದೇವರಾಯರು.

"ಹೂಂ...ಇನ್ನಾದ್ರೂ ರಾಮಾಯಣ ಹೇಳಿ..." ದಿನೇಶ ಎದ್ದು ಅಡಿಗೆ ಮನೆಗೆ ಹೋಗಿ ನೀರು ಕುಡಿದು ಬಂದು ಪುನಃ ಕುಳಿತ.

"ಪಂಪರಾಮಾಯಣದ ವಿಷಯ ಹೇಳ್ತಾ ಇದ್ರಲ್ಲ ಮುಂದುವರ್ಸಿ. ನಾನು ಹುಚ್ಚುಪ್ರಶ್ನೆ ಕೇಳಿದ್ರಿಂದ ವಿಷಯ ಎಲ್ಲೆಲ್ಲೊ ಹೊರ್ಟುಹೋಯ್ತು." ವಾಸುದೇವ ರಾಯರು ನುಡಿದರು.

---

* ಈತನ ಕಾಲ ಸು. ಕ್ರಿ. ಶ. 950. ಜನ್ಮಸ್ಥಳ ಪುಂಗನೂರು (ಚಿತ್ತೂರು ಜಿಲ್ಲೆಯ ಪುಂಗನೂರೆ). ರಾಷ್ಟ್ರಕೂಟ 3ನೇ ಕೃಷ್ಣನ ಆಳ್ವಿಕೆಯ ಕಾಲ (939–968) : ಮುಮ್ಮಡಿಕೃಷ್ಣನ ಸಾಮಂತನಾಗಿದ್ದ 'ಶಂಕರಗಂಡ'ನಿಗೆ 'ಭುವನೈಕ ರಾಮ' ಎಂಬ ಬಿರುದಿತ್ತೆಂದು ತಿಳಿದುಬರುತ್ತದೆ. ಆದ್ದರಿಂದ ಇದು ಶಂಕರಗಂಡನ ಪರಾಕ್ರಮವನ್ನು ಅಥವಾ ಕನ್ನರ (ಮುಮ್ಮಡಿ ಕೃಷ್ಣ) ತಕ್ಕೋಳದಲ್ಲಿ ಚೋಳರಾಜಾದಿತ್ಯನನ್ನು ಸೋಲಿಸಿದ ವಿಷಯ ಈ ಕಾವ್ಯದ ವಸ್ತುವಾಗಿರಬೇಕೆಂದು ಹಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.

ಅಭಿನವ ಪಂಪ **'ನಾಗಚಂದ್ರ'** ಇದ್ದುದು ಹನ್ನೊಂದು ಹನ್ನೆರಡನೆಯ ಶತಮಾನದ ಮಧ್ಯದಲ್ಲಿ.* ಆ ದಿನಗಳಲ್ಲಿ ಜೈನಮತ ಬಹಳ ಪ್ರಾಬಲ್ಯದಲ್ಲಿದ್ದು ರಾಜಾಶ್ರಯದಲ್ಲಿ ಗ್ರಂಥರಚನೆ ಮಾಡಿದ ಎಲ್ಲಾ ಕವಿಗಳೂ ಹೆಚ್ಚಾಗಿ ಧಾರ್ಮಿಕ ಹಿನ್ನೆಲೆಯಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಮತಪ್ರಚಾರವೇ ಮುಖ್ಯ ಉದ್ದೇಶ ವಾಗಿದ್ದಿರಬಹುದು. ನಾಗಚಂದ್ರ ತನ್ನ ಕಾವ್ಯಕ್ಕೆ ಆರಿಸಿಕೊಂಡ ವಿಷಯ ಸ್ವಲ್ಪ ವಿಶೇಷವಾದ್ದು. ಜೈನಪುರಾಣದಿಂದ ಹೊರತಾದದ್ದು. ಆದರೆ ಇದರಲ್ಲೂ ಜೈನತತ್ವ ವಾದ ಅಹಿಂಸಾವಾದವನ್ನು ಸಾಧ್ಯವಿದ್ದೆಡೆಯಲ್ಲೆಲ್ಲಾ ತುರುಕಿದ್ದಾನೆ. ಇದರಲ್ಲಿ ಯಜ್ಞ ಯಾಗಾದಿಗಳ ಪ್ರಸ್ತಾಪವಿಲ್ಲ. ವಿಶ್ವಾಮಿತ್ರ, ವಾಲ್ಮೀಕಿ, ವಸಿಷ್ಠರ ಪ್ರಸ್ತಾಪವಿಲ್ಲ. ಶ್ರೀರಾಮ ಶೂರನಾದರೂ ಹಿಂಸೆಯನ್ನು ಸಹಿಸದವನು. ಇವನು ರಾವಣನನ್ನಾಗಲಿ, ವಾಲಿಯನ್ನಾಗಲಿ ಕೊಲ್ಲುವುದಿಲ್ಲ. ರಾವಣ ಸಾಯುವುದು ಲಕ್ಷ್ಮಣನಿಂದ. ನಾಗ ಚಂದ್ರನ ರಾವಣ ದುರಂತನಾಯಕ. ಸದ್ಗುಣಿ, ಜಿತೇಂದ್ರಿಯನು. ಪರಾಂಗನಾ ವಿರತಿವ್ರತ ಹಿಡಿದಿದ್ದವನು. ಆದರೆ ದುರದೃಷ್ಟವಶಾತ್ ಸೀತೆಯನ್ನು ನೋಡಿ ದೊಡನೆ ಮೋಹಪರವಶನಾಗುತ್ತಾನೆ.

ಬಲಿ ದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆ ನಿಪರೂಪವತಿ ಜಾನಕಿ ಕ
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ ॥

ಸೀತೆ ಒಮ್ಮೆ ಮೂರ್ಛೆಹೋದಾಗ ರಾವಣನಿಗೆ ಕನಿಕರ ಉಮ್ಮಳಿಸಿದರೂ ದುರಭಿಮಾನವನ್ನು ಬಿಡಲಾರದೆ ರಾಮನನ್ನು ಯುದ್ಧದಲ್ಲಿ ಜಯಿಸಿ ಸೀತೆಯನ್ನು ಆತನಿಗೆ ಒಪ್ಪಿಸಬೇಕೆಂದು ನಿಶ್ಚಯಿಸುತ್ತಾನೆ. ಆದರೆ ಕಾರ್ಯ ಸಾಧಿಸದೆ ಯುದ್ಧ

---

* ಈತನ ಗುರುಗಳಾದ ಮೇಘಚಂದ್ರ ಯತಿಗಳು ಇದ್ದ ಕಾಲ ಕ್ರಿ. ಶ. 1100 ಎಂದು ತಿಳಿದುಬಂದಿರುವುದರಿಂದ ಈ ಕವಿಯ ಕಾಲ ಕ್ರಿ.ಶ. 1100 ಎಂದು ಧಾರಾಳವಾಗಿ ಹೇಳಬಹುದು. 'ಕಂತಿಹಂಪನ ಸಮಸ್ಯೆ' ಚಾಟುಪದ್ಯಗಳ ಆಧಾರದಿಂದ ಈತನ ಆಶ್ರಿತ ರಾಜ ಹೊಯ್ಸಳ ಬಲ್ಲಾಳ ನೆಂದು ತಿಳಿದುಬಂದರೂ ಇದನ್ನು ಪುಷ್ಟೀಕರಿಸಲು ಮತ್ತಾವ ಆಧಾರಗಳೂ ಇಲ್ಲ. ಈತನಿಗೆ 'ಭಾರತೀ ಕರ್ಣಪೂರ', 'ಕವಿತಾ ಮನೋಹರ', 'ಸಾಹಿತ್ಯ ವಿದ್ಯಾಧರ', 'ಚತುರ ಕವಿ' ಮುಂತಾದ ಬಿರುದುಗಳಿದ್ದುವು.

'ಮಲ್ಲಿನಾಥ ಪುರಾಣ' ಚಂಪೂಕಾವ್ಯ ಈತ ಬರೆದ ಇನ್ನೊಂದು ಉದ್ಗ್ರಂಥ. ಹತ್ತೊಂಬ ತ್ತನೆ ತೀರ್ಥಂಕರನಾದ ಮಲ್ಲಿನಾಥನ ಚರಿತ್ರೆಯನ್ನು 14 ಆಶ್ವಾಸಗಳಲ್ಲಿ ಬಹಳ ರಂಜನೀಯವಾಗಿ ಚಿತ್ರಿಸಿದ್ದಾನೆ. ಕ್ಷಣಿಕದ ಭೋಗಲಾಲಸೆಗಾಗಿ ಅನಿಶ್ಚಿತ ಸಂಸಾರದ ಕೊಳಚೆಯಲ್ಲಿ ಜೀವನಪರ್ಯಂತ ನೋಯುವದಕ್ಕಿಂತ ಶಾಶ್ವತ ಸೌಖ್ಯಕ್ಕಾಗಿ ವೈರಾಗ್ಯ ಪಡೆದು ಜೀವನ್ಮರಣದ ಪರಿಭ್ರಮಣದಿಂದ ಒಮ್ಮೆಯಾದರೂ ಮುಕ್ತಿ ಪಡೆಯಲು ಶ್ರಮಿಸಬೇಕೆಂಬ ತತ್ವವನ್ನು ಪ್ರತಿಪಾದಿಸಿದ್ದಾನೆ ಕವಿ ತನ್ನ ಕಾವ್ಯದಲ್ಲಿ. ವೈಶ್ರವಣನೆಂಬ ಅರಸ ತನ್ನ ಎರಡನೆ ಅವತಾರದಲ್ಲಿ ಮಲ್ಲಿನಾಥನಾಗಿ ಹುಟ್ಟಿ ಕೌಮಾರ್ಯದಲ್ಲಿ ಜೀವನದಲ್ಲಿ ಜಿಗುಪ್ಸೆ ಹೊಂದಿ ವಿರಾಗಿಯಾಗಿ ಕೊನೆಗೆ ತೀರ್ಥಂಕರನಾಗುತ್ತಾನೆ.

ದಲ್ಲಿ ಸಾಯುತ್ತಾನೆ. ಹೀಗೆ ದುರಂತರಾವಣನ ಚಿತ್ರವು ಪಂಪರಾಮಾಯಣದ ವೈಶಿಷ್ಟ್ಯವಾಗುಳಿದಿದೆ."

"ಸಾರ್...'ರಾಮಚಂದ್ರ ಚರಿತ'ವೇನೊ ನೀವು ಹೇಳ್ದಾಗೆ ಮೊದಲ ಜೈನ ರಾಮಾಯಣ. ಎರಡನೆ ಜೈನರಾಮಾಯಣ ಯಾರಾದರೂ ಬರೆದಿದ್ದಾರೈ?" ದಿನಕರನ ಮಿತ್ರ ಎದ್ದು ನಿಂತು ಪ್ರಶ್ನಿಸಿದ.

"ಕೂತ್ಕೊಳ್ಳಪ್ಪಾ ಕೂತ್ಕೊ. ಈ ನಿರ್ಜೀವ ಕವಿಚರಿತ್ರೇಲೂ ನಿಂಗೆ ಇಷ್ಟೊಂದು ಆಸಕ್ತಿ ಇದ್ಯಲ್ಲ ಅಂತ ನಂಗೆ ಬಾಳ ಸಂತೋಷವಾಗ್ತಾ ಇದೆ. ಎರಡನೆ ಜೈನರಾಮಾಯಣವನ್ನು ಬರೆದ ಕವಿಯ ಹೆಸರು **ಕುಮುದೇಂದು**. ಇವನು 13ನೇ ಶತಮಾನದವನು. ವಿವಿಧ ಷಟ್ಪದಿಗಳಲ್ಲಿ ರಾಗವಾಗಿ ಹಾಡುವ ರೀತಿಯಲ್ಲಿ ತನ್ನ ಈ ರಾಮಾಯಣ ರಚಿಸಿದ್ದಾನೆ. ಜೈನ ರಾಮಾಯಣಗಳಲ್ಲಿ ಎರಡು ಸಂಪ್ರದಾಯ ಗಳಿವೆ. ಮೊದಲನೆಯದು ವಿಮಲಸೂರಿ ಪ್ರಚಲಿತ ರಾಮಾಯಣ. ಎರಡನೆ ಯದು ಗುಣಭದ್ರ ಸಂಪ್ರದಾಯ. ಕುಮುದೇಂದು ವಿಮಲಸೂರಿ ಸಂಪ್ರದಾಯ ಅನುಸರಿಸಿ ಕಾವ್ಯ ರಚಿಸಿದ್ದಾನೆ. ಈ ಕಾವ್ಯ ಪೂರ್ಣರೂಪದಲ್ಲಿ ಇನ್ನೂ ಲಭ್ಯ ವಾಗಿಲ್ಲ."

"'ತೊರವೆ ರಾಮಾಯಣ' ಅಂತ ಪ್ರಸಿದ್ಧವಾಗಿದೆಯಲ್ಲಾ ಅದನ್ನು ಬರೆದ ವರು ಯಾರು? ವಾಸುದೇವರಾಯರು ಪ್ರಶ್ನಿಸಿದರು.

"ಇಷ್ಟು ದೊಡ್ಡವನಾಗಿ ಇಂಥಾ ಅಲ್ಪ ವಿಷಯ ಕೇಳ್ತಾ ಇದ್ದೀನಿ. ಅಹ್ಹಹಾ., ನೋಡಿ ನನ್ನ ಸಾಹಿತ್ಯಜ್ಞಾನ ಯಾವ ಮಟ್ಟದಲ್ಲಿದೆ. ಗೊತ್ತಿಲ್ಲದ ವಿಷಯ ಕೇಳು ವುದರಲ್ಲಿ ನನಗೇನೂ ಅವಮಾನ ಅನ್ನಿಸುವುದಿಲ್ಲ, ನಮ್ಮ ಹುಡುಗರಲ್ಲೂ ಇದೊಂದು ಕಾಂಪ್ಲೆಕ್ಸ್ ಬೆಳೀತಾ ಇರೋದು ನೋಡಿದ್ದೀನಿ. ಏನು ವಿಷಯಾನೂ ಗೊತ್ತಿರೋಲ್ಲ. ಹೇಳೋರು ಎದುರಿಗೇ ಇದ್ರೂ ಹೇಗೆ ಕೇಳೋದು ಅಂತ ನಾಚ್ಕೊಂಡಿರ್ತಾರೆ. ಇದು ಬಾಳ ಕೆಟ್ಟದಲ್ವೆ ಮೇಸ್ಟ್ರೆ". ರಾಯರು ಮಾತನ್ನು ಮುಂದುವರಿಸಿದರು.

"ನೀವು ಹೇಳೋದು ಬಾಳ ಖರೆ ಇದೆ ರಾಯ್ರು. ವಿಷಯಗ್ರಹಣೆ, ಜ್ಞಾನ ಸಂಚಯನದಲ್ಲಿ ಈ ನಾಚಿಕೆ, ಸಂಕೋಚ ಪ್ರವೃತ್ತಿ ಬಿಟ್ಬಿಡ್ಬೇಕು. ಆಗ್ಲೆ ಏನಾದ್ರೂ ತಿಳ್ಕೊಳ್ಳೋದಕ್ಕೆ ಸಾಧ್ಯವಾಗೋದು. ಹೂಂ...ಇನ್ನು ನೀವು ಕೇಳಿದ ವಿಷಯಕ್ಕೆ ಬರೋಣ..." ಕುಳಿತುಕೊಂಡು ಮಾತನ್ನು ಮುಂದುವರಿಸಿದರು.

"ತೊರವೆ ರಾಮಾಯಣ ಬರೆದ ಕವಿ **'ಕುಮಾರ ವಾಲ್ಮೀಕಿ'.*** ಈತ ಹದಿನೈ ದನೆ ಶತಮಾನದ ಕವಿಶ್ರೇಷ್ಠರಲ್ಲಿ ಒಬ್ಬ. ವಾಲ್ಮೀಕಿ ರಾಮಾಯಣದ ಎಲ್ಲಾ ಕಾಂಡ ಗಳನ್ನೂ ಕನ್ನಡಕ್ಕೆ ಅನುವಾದಿಸಿದ ಸತ್ಕೀರ್ತಿ ಈತನಿಗೆ ಸಲ್ಲುತ್ತದೆ. ಅನುವಾದ

---

* ಜನ್ಮಸ್ಥಳ: ಬಿಜಾಪುರ ಜಿಲ್ಲೆಯ 'ತೊರವೆ' ಗ್ರಾಮ. ಅಲ್ಲಿನ ದೇವರಾದ ನರಸಿಂಹನ ಅಂಕಿತದಲ್ಲಿ ಗ್ರಂಥ ರಚಿಸಿದ್ದಾನೆ. 'ಕವಿರಾಜಹಂಸ' ಈತನ ಬಿರುದು.

ಮಾಡುವಾಗ ಕೆಲವು ಮಾರ್ಪಾಡುಗಳನ್ನು ಸಹ ಮಾಡಿ ಕೃತಿಗೆ ಅಲ್ಲಲ್ಲಿ ಹೊಸ ತಿರುವು, ಮೆರುಗು ಕೊಟ್ಟಿದ್ದಾನೆ.

ಸರಸವರ್ಣಕ ಕವಿಗಳೊಳು ಭಾ ।
ಸುರಕುಮಾರವ್ಯಾಸನೊಬ್ಬನು
ಪರಿಕಿಪೊಡೆ ತಾನೊಬ್ಬ ಮಗುಳೆರಡನೆಯ ವರ್ಣಕಕೆ ॥
ವರಕುಮಾರವ್ಯಾಸನೊಬ್ಬನು
ಯೆರಡನೆಯ ತಾನೊಬ್ಬ ಮಿಕ್ಕಿನ
ಬರಡು ಕವಿಗಳ ಲೆಕ್ಕಿಸುವನೆ ಕುಮಾರ ವಾಲ್ಮೀಕಿ

ಹೀಗೆ ಹೆಮ್ಮೆಪಟ್ಟುಕೊಂಡಿದ್ದರೂ ಗ್ರಂಥದ ಆರಂಭದಲ್ಲಿ ವಾಲ್ಮೀಕಿ ಮಹರ್ಷಿಗಳಿಗೆ ವಂದಿಸಿದ್ದಾನೆ. 'ರಘುವರ ಕಥಾವಿಮಲೋದಧೀಂದು ಮಹಾಮುನಿ ಪ್ರಾಚೇತಸಂವಂದೇ' ಬಹಳ ಜನಪ್ರಿಯವಾಗಿರುವ ತೊರವೆ ರಾಮಾಯಣದ ಕರ್ತೃವನ್ನು ನಾವು ಎಂದೂ ಮರೆಯುವಂತೆಯೇ ಇಲ್ಲ. ತೊರವೆ ರಾಮಾಯಣದ ಗದ್ಯಾನುವಾದವನ್ನು ಕೆ. ಎಸ್. ಕೃಷ್ಣಮೂರ್ತಿಗಳೆಂಬುವವರು ಮಾಡಿದ್ದಾರೆ. ತೊರವೆ ರಾಮಾಯಣದ ಕಥಾವಸ್ತುವನ್ನು ಡಾ॥ ಎಸ್. ಎಸ್. ಬ್ಯಾತನಾಳರವರು ತಮ್ಮ ಗ್ರಂಥದಲ್ಲಿ ವಿವೇಚಿಸಿದ್ದಾರೆ.

ರಾಮಾಯಣವನ್ನು ಇನ್ನೂ ಹಲವು ಕವಿಗಳು ಬರೆದಿದ್ದಾರೆ. ಅವುಗಳಲ್ಲಿ ಈ ಕೆಲವು ಮುಖ್ಯವಾದವು :" ತಮ್ಮ ಕೈಪಿಡಿ ತೆರೆದು ಓದಲು ಪ್ರಾರಂಭಿಸಿದರು.

**ರಾಮವಿಜಯ ಕಾವ್ಯ** : ಜೈನ ಕಾವ್ಯ, ಸಾಂಗತ್ಯದಲ್ಲಿದೆ. ರಚನೆಯ ಕಾಲ ಸು. ಕ್ರಿ.ಶ. 1525, ಕಥೆ ಮಾಮೂಲು ರಾಮಾಯಣ. ಕೊನೆಯಲ್ಲಿ ಶ್ರೀರಾಮ ಕಿರಿಯ ಕುಮಾರನಿಗೆ ಪಟ್ಟ ಕಟ್ಟಿ ಜಿನದೀಕ್ಷೆ ವಹಿಸುತ್ತಾನೆ. ಇದನ್ನು ರಸದಿಂದ ಪುಟ್ಟಿಕ್ಕಿ ಭಾವದಿಂದ ಬೆಳೆಯಿಸಿ ಅಲಂಕೃತಿಯಿಂದ ಪೊರೆದು ವಸುಧೆಗೆ ಅತ್ಯಧಿಕವೆನ್ನಿಸಿ ಹೇಳಿದ ನೆಂದು ಕವಿ ಹೇಳುತ್ತಾನೆ. ಈ ಕಥೆಯನ್ನು ಶ್ರೇಣಿಕ ಮಹಾರಾಜನು ಗೌತಮ ಗಣಧರರಿಂದ ಕೇಳಿ ತನ್ನ ಮನದನ್ನೆಗೆ ಹೇಳುತ್ತಾನೆ. ಇದನ್ನೂ ಬರೆದ ಕವಿಯ ಹೆಸರು **ದೇವಪ್ಪ**. ಈತನು ನಂಜರಾಜ ಪಟ್ಟಣದ ನಂಜುಂಡರಾಜನ ಮಂತ್ರಿಯಾಗಿದ್ದ.

ತುಲಸಿದಾಸ ವಿರಚಿತ 'ಶ್ರೀರಾಮಚರಿತ ಮಾನಸ' ಪ್ರಸಿದ್ಧ ಕೃತಿ. ಇದನ್ನು ಕನ್ನಡಕ್ಕೆ **ಶಂಭುಭಟ್ಟ**ರವರು ಸುಲಿದ ಬಾಳೆಯ ಹಣ್ಣಿನಂದದಿ ಬಹಳ ಸರಳವಾಗಿ ಅನುವಾದಿಸಿದ್ದಾರೆ. ಉದಾಹರಣೆಗೆ ಒಂದೇ ಒಂದು ಪದ್ಯ ಹೇಳುತ್ತೇನೆ:

'ರಾಮನಾಮವು ಕಲಿಯ ಕಾಲದೊಳು ಕಲ್ಪತರು
ಕಾಮಿತವನೀಯುವುದು ಕಲ್ಯಾಣದಾಲಯವು
ನಾಮವನು ಜಪಿಸುತಲಿ ತುಲಸಿದಾಸನು ಬಹುಲ
ಸಾಮರಸ ಪಾವನತೆಗೇರಿದನು ತುಲಸಿಯೊಲು ॥'

15ನೇ ಶತಮಾನದಲ್ಲಿದ್ದ **ಬತ್ತಲೇಶ್ವರ** ಎಂಬ ವೀರಶೈವ ಕವಿಯೂ ಒಂದು ರಾಮಾಯಣವನ್ನು ಬರೆದಂತೆ ತೋರುತ್ತದೆ.

**'ಅದ್ವೈತ ರಾಮಾಯಣ'** ಇದೊಂದು ವಚನ ಗ್ರಂಥ. ಕರ್ತೃ **ನಿಜಗುಣಾರ್ಯ.** ಈತನ ಕಾಲ ಸು. ಕ್ರಿ.ಶ. 1650. 'ಅದ್ವೈತದಲಿ ರಾಮರಾವಣರ ನಿಜಪಥವನು ಪಾದವೈಭವವನು ಮಂಡೋದರಿಯು ರಾವಣನ ವಾದವನು ಉಸಿರುವೆನು' ಎಂದು ಕವಿ ಹೇಳಿದ್ದಾನೆ. **ಉತ್ತರರಾಮಾಯಣ** 17ನೇ ಶತಮಾನದಲ್ಲಿ **ಯೋಗೀಂದ್ರ** ಮತ್ತು **ನರಸಪ್ಪ** ಎಂಬ ಕವಿಗಳು ಕುಸುಮಷಟ್ಪದಿ ಹಾಗೂ ಭಾಮಿನಿಷಟ್ಪದಿಯಲ್ಲಿ ಕ್ರಮವಾಗಿ ರಚಿಸಿದ್ದಾರೆ. **ಮೂಲಕ ರಾಮಾಯಣ** ಭಾಮಿನಿ ಷಟ್ಪದಿಯ ಗ್ರಂಥ. ಕಥೆ ಸ್ವಲ್ಪ ವಿಭಿನ್ನವಾದದ್ದು. ಇದರಲ್ಲಿ ಮೂಲಕಾಸುರನು ಲಂಕೆಗೆ ಮುತ್ತಿಗೆ ಹಾಕಿ ವಿಭೀಷಣ ನನ್ನು ಸೋಲಿಸಿ ಅಯೋಧ್ಯೆಗೆ ಬಂದು ಭರತ, ಶತ್ರುಘ್ನ, ರಾಮ, ಲಕ್ಷ್ಮಣರೆಲ್ಲ ರನ್ನೂ ಸೋಲಿಸಿ ಕೊನೆಗೆ ಕುಶನಿಂದ ಸತ್ತ ಕಥೆ. ಇದನ್ನು ಬರೆದಾತನ ಹೆಸರು ಲಭ್ಯವಿಲ್ಲ. 'ಉತ್ತರರಾಮಾಯಣ' ಮತ್ತೆ ಇಬ್ಬರು ಕವಿಗಳಿಂದ, ಭಾಮಿನಿ ಷಟ್ಪದಿ ಯಲ್ಲಿ ಕ್ರಿ.ಶ. ಸುಮಾರು 1600ರಲ್ಲಿ **ನಾರಾಯಣ** ಎಂಬ ಕವಿಯಿಂದಲೂ ಕ್ರಿ. ಶ. ಸುಮಾರು 1650ರಲ್ಲಿ **ತಿರುಮಲೆ ವೈದ್ಯ**ನಿಂದಲೂ ರಚಿತಗೊಂಡಿದೆ.

**ಮಾರ್ಕಂಡೇಯ ರಾಮಾಯಣ :** **ತಿಮ್ಮರಸ ಕವಿ** ಕ್ರಿ.ಶ. ಸು. 1650ರಲ್ಲಿ ರಚಿಸಿ ದ್ದಾನೆ. ಯುಧಿಷ್ಠಿರನಿಗೆ ಮಾರ್ಕಂಡೇಯನು ಹೇಳಿದ ಕಥೆಯನ್ನು ಈತ ವಾರ್ಧಕ ಷಟ್ಪದಿಯಲ್ಲಿ ಹೇಳಿದ್ದಾನೆ.

**ರಾಮಚಂದ್ರ ಚರಿತ :** ಕವಿ **ಚಂದ್ರಶೇಖರ.** ಕಾಲ ಸುಮಾರು ಕ್ರಿ.ಶ. 1700. ಕೃತಿ ಸಾಂಗತ್ಯದಲ್ಲಿದೆ. ಈ ಕವಿಲಕ್ಷ್ಮಣ ಬಂಗರಾಜನ ಆಸ್ಥಾನಕವಿಯಾಗಿದ್ದಂತೆ ತಿಳಿದುಬರುತ್ತದೆ. 16 ಸಂಧಿ ಮಾತ್ರ ಬರೆದು ಈತ ಕಾಲವಾದನು. ಉಳಿದ 21 ಸಂಧಿಯನ್ನು 'ಪದ್ಮನಾಭ' ಕವಿ ರಚಿಸಿದ್ದಾನೆ. ಕಥೆ ಜೈನಸಂಪ್ರದಾಯಕ್ಕೆ ಸೇರಿದ್ದು. 'ಅಧ್ಯಾತ್ಮ ರಾಮಾಯಣ' ಭಾಮಿನಿಷಟ್ಪದಿಯಲ್ಲಿದೆ. ಕರ್ತೃ **ಶಂಕರ ನಾರಾಯಣ.** ಕಾಲ ಸುಮಾರು ಕ್ರಿ.ಶ. 1700-1750.

**ಶಂಕರ ರಾಮಾಯಣ :** ಕಾಲ ಕ್ರಿ. ಶ. ಸುಮಾರು 1721. **ತಿಮ್ಮಪ್ಪಯ್ಯ** ಅಥವಾ **ದಾಸಪ್ಪ** ಇಬ್ಬರಲ್ಲಿ ಒಬ್ಬನು ಬರೆದು ಇನ್ನೊಬ್ಬನು ಪ್ರತಿಮಾಡಿದ್ದಾನೆ. ಇದರಲ್ಲಿ ದಶರಥನ ಮದುವೆ ಅನಂತರ ಬಾಲಕಾಂಡ. ಕ್ರೀಡಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾ ಕಾಂಡ ಇವೆ. ಸಮುದ್ರಕಾಂಡದಲ್ಲಿ ಮೈರಾವಣನ ಪ್ರಸಂಗ ಬರುತ್ತದೆ. ಪಟ್ಟಾಭಿ ರಾಮ ಕಾಂಡದಲ್ಲಿ ಶ್ರೀರಾಮನ ಪಟ್ಟಾಭಿಷೇಕ. ಸಿಂದಾಕಾಂಡದಲ್ಲಿ ಅಗಸನ ಮಾತು ಕೇಳಿ ಸೀತೆಯನ್ನು ಕಾಡಿಗೆ ಬಿಟ್ಟದ್ದು, ಅವಳು ಕುಶ, ಲವರನ್ನು ಪಡೆದುದು ವರ್ಣಿತ ವಾಗಿದೆ.

'ಮೂಲಬಲ ರಾಮಾಯಣ' : ಇದನ್ನು ರಚಿಸಿದ ಕವಿ **ಹರಿದಾಸಮಾಧ್ವಕವಿ.**

ಆತನ ಕಾಲ ಸುಮಾರು ಕ್ರಿ.ಶ. 1750. ಈ ಕಾವ್ಯವೂ ಭಾಮಿನಿ ಷಟ್ಪದಿಯಲ್ಲಿದೆ. ಸಂಧಿಗಳ ಅಂತ್ಯದಲ್ಲಿ 'ನರಸಿಂಹ'ನ ಅಂಕಿತವಿದೆ.

**ವರದವಿಠಲ ರಾಮಾಯಣ** : ರಚನೆಯ ಕಾಲ ಸುಮಾರು 1751. ಕವಿಯ ಹೆಸರು ಲಭ್ಯವಿಲ್ಲ. ಕಥೆ ವಿಚಿತ್ರವಾಗಿದೆ. ಕೋಸಲ ದೇಶದ ಕುಶಲನೃಪನ ಮಗಳನ್ನು ದಶರಥನಿಗೆ ನಿಶ್ಚಯಿಸಲು ರಾವಣನು ಅವಳನ್ನು ಅಪಹರಿಸಿ ಸಮುದ್ರಮಧ್ಯದಲ್ಲಿ ಇಟ್ಟಿದ್ದನು. ಆದರೂ ದೈವಯೋಗದಿಂದ ದಶರಥನಿಗೂ ಅವಳಿಗೂ ಮದುವೆ ಯಾಯಿತು. ರಾವಣನ ಮಗನಾದ ಮೂಲಕಾಸುರನು ನಾರದನಿಂದ ಪ್ರಚೋದಿತ ನಾಗಿ ವಿಭೀಷಣನನ್ನು ಜಯಿಸಿ ಅಯೋಧ್ಯೆಗೆ ಹೋಗಿ ರಾಮಲಕ್ಷ್ಮಣರನ್ನು ಜಯಿಸಿ ಕುಶನಿಂದ ಸಂಹರಿಸಲ್ಪಟ್ಟನು.

**ರಾಮಕಥಾವತಾರ** : **ದೇವಚಂದ್ರ ಕರ್ತೃ**. ಕಾಲ ಸುಮಾರು ಕ್ರಿ.ಶ. 1792. 16 ಆಶ್ವಾಸಗಳ ಚಂಪೂಕಾವ್ಯ. ಇದರಲ್ಲಿ ನಾಗಚಂದ್ರನ ರಾಮಚರಿತ ಪುರಾಣವೇ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

**ಜಿನರಾಮಾಯಣ** : ಕರ್ತೃ ಜೈನಕವಿ **ಚಂದ್ರಸಾಗರವರ್ಣಿ**. ಕಾಲ ಸುಮಾರು 1810. ಭಾಮಿನಿಷಟ್ಪದಿಯಲ್ಲಿದೆ.

'ವಂಶಿ'ಯವರು ವಾಲ್ಮೀಕಿ ರಾಮಾಯಣವನ್ನು ಗದ್ಯರೂಪದಲ್ಲಿ 'ಸಂಪೂರ್ಣ ರಾಮಾಯಣ' ಹೆಸರಿನಲ್ಲಿ ಪ್ರಕಟಿಸಿದ್ದಾರೆ. 'ಗೀತರಾಮಾಯಣ'ದ ಕರ್ತೃ ಈಚನೂರು ಸಾವಿತ್ರಮ್ಮ ಸೀತಾರಾಮಯ್ಯ. ಲಕ್ಷ್ಮಣ ವಿರೂಪಾಕ್ಷ ಜೋಶಿ 'ಕಾವ್ಯರಾಮಾಯಣ' ಎಂಬ ಕೃತಿ ರಚಿಸಿದ್ದಾರೆ.

'ಸಂಕ್ಷೇಪ ರಾಮಾಯಣ' ಸಂಸ್ಕೃತ ಶ್ಲೋಕಗಳು ಮತ್ತು ಕನ್ನಡ ಅರ್ಥ ದೊಡನೆ ಕೆ. ಎಸ್. ವರದಾಚಾರ್ಯ ಮತ್ತು ಬಿ. ಕಾ. ಸುಬ್ಬರಾಯಾಚಾರ್ ರಚಿಸಿದ್ದಾರೆ.

**ಶೇಷರಾಮಾಯಣ** ಮೈಸೂರು ಮಹಾರಾಜ ಚಾಮರಾಜೇಂದ್ರ ಒಡೆಯರ ಆಸ್ಥಾನ ದಲ್ಲಿದ್ದ **ಸೋಸಲೆ ಅಯ್ಯಶಾಸ್ತ್ರಿಗಳು** ಬರೆದದ್ದು. ಕಥೆ ಉತ್ತರ ರಾಮಾಯಣದ ರಾಮಾಶ್ವಮೇಧದ ಕಥಾಭಾಗ. ಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಮೈಸೂರು ಅರಸು ಮನೆತನದ **ಚಾಮರಾಜ** (ಕ್ರಿ. ಶ. 1617-37) ವಾಲ್ಮೀಕಿ ರಾಮಾಯಣಕ್ಕೆ ಗದ್ಯದಲ್ಲಿ ವ್ಯಾಖ್ಯಾನ ಬರೆದಿದ್ದಾನೆ. **ಮುಮ್ಮಡಿ ಕೃಷ್ಣರಾಯರು** (1799-1868) ಬರೆದ ಭವಭೂತಿ ಕವಿಯ ಕನ್ನಡ ಗದ್ಯಾನುವಾದ 'ಉತ್ತರ ರಾಮಚರಿತ' ಕರುಣ ರಸ ಪ್ರಧಾನವಾದ ಉತ್ತಮ ಕೃತಿ. ದೇ.ಜ.ಗೌ.ರವರ 'ರಾಮಧಾನ್ಯ ಚರಿತ್ರೆ' ರಾಮಾಯಣದ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಕೃತಿ. ಜನತ ದರ್ಪಣ 'ರವಿಷೇಣ ರಾಮಾಯಣ' ಇದರ ಕನ್ನಡ ಸಾರಸಂಗ್ರಹ ಮಾಡಿದವರು ಶ್ರೀ **ನಿರ್ಜಿ ಅಣ್ಣಾ ರಾಯ.** ಮೂಲಗ್ರಂಥ ಸುಪ್ರಸಿದ್ಧ ಸಂಸ್ಕೃತ ಪದ್ಮಪುರಾಣ. ಇದು ಜೈನ

ಪರಂಪರೆಯ ರಾಮಕಥೆಯನ್ನು ವಿವರಿಸುವ ಪ್ರಾಚೀನ ಗ್ರಂಥವಾಗಿದೆ. ರಾಮನಿಗೆ ಇನ್ನೊಂದು ಹೆಸರು ಪದ್ಮನೆಂದು ಇತ್ತು. ಅವರಿಂದ ಜೈನಪುರಾಣಗಳಲ್ಲಿ ಈ ಹೆಸರನ್ನೇ ಸ್ವೀಕರಿಸಲಾಗಿದೆ. ಪ್ರಾಕೃತ 'ಪಉಮ ಚರಿಯ'ದ ವಿಕಸಿತರೂಪವೇ 'ರವಿಷೇಣನ' ಸಂಸ್ಕೃತ 'ಪದ್ಮಪುರಾಣ'.

ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಅವರ ಆಸ್ಥಾನಪಂಡಿತ ಸದ್ವಿದ್ಯಾ ಶಾಲಾಧ್ಯಕ್ಷ **ಗುಂಡಶಾಸ್ತ್ರಿ**ಗಳು ವಾಸಿಷ್ಠರಾಮಾಯಣವನ್ನು ಟೀಕಾಸಹಿತ ಪ್ರಕಟಿಸಿದ್ದಾರೆ. ಇದರ ಹೆಸರು 'ಶ್ರೀ ವಾಸಿಷ್ಟರಾಮಾಯಣಂ ಸ್ಥಿತಿಪ್ರಕರಣಂ'.

ಕಾರ್ಕಳದ ಸುಬ್ಬರಾಯರು ಭಾಮಿನಿಷಟ್ಪದಿಯಲ್ಲಿ ತುಲಸಿದಾಸರಾಮಾಯಣವನ್ನು 'ಕನ್ನಡ ತುಲಸೀದಾಸ ರಾಮಾಯಣ' ಎಂಬ ಹೆಸರಿನಲ್ಲಿ ರಚಿಸಿದ್ದಾರೆ. ಎನ್. ಎಸ್. ದಕ್ಷಿಣಾಮೂರ್ತಿಗಳೂ ಮತ್ತು ಕೃ. ಶ್ರೀ. ಕುಲಕರ್ಣಿಗಳೂ ಪ್ರತ್ಯೇಕವಾಗಿ ತುಲಸಿರಾಮಾಯಣವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

'ಶ್ರೀಮದ್ವಾಲ್ಮೀಕಿ ರಾಮಾಯಣಮ್' ವಾಲ್ಮೀಕಿ ರಾಮಾಯಣದ ಅನುವಾದ. ಅನುವಾದಕರು ವಿದ್ವಾನ್ ಎನ್. ರಂಗನಾಥಶರ್ಮ. ವಿ. ಸೀತಾರಾಮಯ್ಯನವರೂ ಒಂದು 'ವಾಲ್ಮೀಕಿ ರಾಮಾಯಣ' ಎಂಬ ಕೃತಿ ರಚಿಸಿದ್ದಾರೆ. ಪಂಡಿತ ಅಳಸಿಂಗಾಚಾರ್ಯರು ಮತ್ತು ಸೀತಾರಾಮಶಾಸ್ತ್ರಿಗಳು 'ಶ್ರೀಮದ್ರಾಮಾಯಣ'ವನ್ನು ಕನ್ನಡಕ್ಕಿತ್ತಿದ್ದಾರೆ.

ಡಾ|| ಸಿ. ಎನ್. ಶ್ರೀನಿವಾಸ ಅಯ್ಯಂಗಾರ್*ರಿಂದ ಅನುವಾದಗೊಂಡಿರುವ 'ಕನ್ನಡ ವಾಲ್ಮೀಕಿ ರಾಮಾಯಣ' ಮೂಲರಾಮಾಯಣದ ನಿಖರವಾದ ವಾಸ್ತುವನುವಾದ ಹೆಚ್ಚಿನ ವ್ಯಾಸಂಗಕ್ಕೆ ನೆರವಾಗಬಲ್ಲ ಟಿಪ್ಪಣಿಗಳೊಡನೆ ಕೂಡಿದೆ.

ಮೇಲುಕೋಟೆಯ ದೇವಶಿಖಾಮಣಿ **ಅಳಸಿಂಗಾಚಾರ್ಯರು** ರಾಮಾಯಣವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಬೇಲಕಕೆರೆ ಸೂರ್ಯನಾರಾಯಣಶಾಸ್ತ್ರಿಗಳು ಶ್ರೀ ಆನಂದರಾಮಾಯಣವನ್ನು 1947ರ ಸುಮಾರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಭಾಷಾಂತರ ಪ್ರಮಾಣಬದ್ಧವಾಗಿದೆ.

ಶ್ರೀ ಟಿ. ಚಂದ್ರಶೇಖರನ್ ಸಂಪಾದಿಸಿರುವ ವೆಂಕಾಮಾತ್ಯ ಕವಿಯ 'ಶ್ರೀಮದ್ರಾಮಾಯಣಂ', ಸರಳ ಪದ್ಯದ ಧಾಟಿಯಲ್ಲಿ ರಚಿಸಿರುವ ಟಿ. ಎಂ. ಮುತ್ತಣ್ಣನವರ 'ಬಾಲರಾಮಾಯಣ', ಸಿದ್ದವನಹಳ್ಳಿ ಕೃಷ್ಣಶರ್ಮರ 'ಬಾಲ ರಾಮಾಯಣ', ಪರಮೇಶ್ವರಭಟ್ಟರ 'ಅದ್ಭುತ ರಾಮಾಯಣ'. ಛ. ಶಂ. ಪೂಜಾ

---

* ಜನನ : ಫೆಬ್ರವರಿ 1901. ಚಿಕ್ಕಮಗಳೂರು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಎಂ.ಎಸ್.ಸಿ. ಪದವೀಧರರು. ಅದೇ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ (1932). 'ಗಣಿತ ಶಾಸ್ತ್ರದ ಚರಿತ್ರೆ' ವಿದ್ವತ್ಪೂರ್ಣ ಗ್ರಂಥ.

ರವರ 'ವಚನರೂಪ ರಾಮಾಯಣ', ಹೆಚ್. ಚಿಕ್ಕಲಿಂಗರಾಜ ಅರಸ್‌ರವರ 'ಕರ್ಣಾಟಕ ರಾಮಾಯಣ ಸಂಗ್ರಹ' ಮುಂತಾದವು ಹೆಸರಿಸಬಹುದಾದ ಇತರ ರಾಮಾಯಣ ಕುರಿತ ಕೃತಿಗಳು. ದೇವುಡು ಮತ್ತು ಭದ್ರಗಿರಿ ಕೇಶವದಾಸರೂ ಸಹ ಒಂದೊಂದು ಬಾಲರಾಮಾಯಣ ರಚಿಸಿದ್ದಾರೆ.

ರಾಮಾಯಣ ಕಥಾನಕ ಭಾರತದ ಬಹಳ ಕವಿಗಳಿಗೆ ವಸ್ತುವಾಗಿರುವಂತೆಯೇ ಸಂಸ್ಕೃತದ ಪ್ರಸಿದ್ಧ ಕವಿಯಾದ ಭಾಸನಿಗೂ ಆಕರವಾಗಿದೆ. 'ಯಜ್ಞಫಲ'. 'ಪ್ರತಿಮಾ', 'ಅಭಿಷೇಕ' ಆತನ ಪ್ರಸಿದ್ಧ ನಾಟಕಗಳು. ಇವುಗಳನ್ನೇ ಕುರಿತಾದ ಅನುವಾದಿತ ಕೃತಿ 'ಭಾಸರಾಮಾಯಣ ನಾಟಕ ತ್ರಿವೇಣಿ'. ಅನುವಾದಕರು ಡಾ॥ ಎಲ್. ಬಸವರಾಜು.

ಪು.ತಿ.ನ.ರವರ 'ಶ್ರೀರಾಮ ಪಟ್ಟಾಭಿಷೇಕಂ', ಎ. ಎನ್. ಮೂರ್ತಿರಾಯರ 'ಸೀತಾ ಪರಿತ್ಯಾಗ', ಶ್ರೀನಿವಾಸರ 'ಶ್ರೀರಾಮಪಟ್ಟಾಭಿಷೇಕಂ', ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ' ಕಾವ್ಯ, ಜಿ. ಪಿ. ರಾಜರತ್ನಂರವರ 'ಶ್ರೀರಾಮಚಂದ್ರ ಪ್ರಭು', ಕೃಷ್ಣ ಆಲನಹಳ್ಳಿಯವರ 'ಅವಲೋಕನ – ಶ್ರೀರಾಮಾಯಣದರ್ಶನಂ ಮಹಾಕಾವ್ಯ ಸಮೀಕ್ಷೆ'; ಡಾ॥ ಎಚ್. ಸೀತಾರಾಮ ಆಚಾರ್‌ರವರ 'ಕುಮಾರ ವಾಲ್ಮೀಕಿ - ಒಂದು ಅಧ್ಯಯನ', ಕೋ. ಚೆನ್ನಬಸಪ್ಪನವರ 'ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ' ಈ ರಾಮಾಯಣದ ಕಥಾನಕವನ್ನೊಳಗೊಂಡ ಕೃತಿಗಳು. ಎಸ್. ಎಲ್. ಎನ್. ಸಿಂಹರವರು 'ಆಧುನಿಕ ಯುಗಕ್ಕೆ ರಾಮಾಯಣ' ಎಂಬ ಗ್ರಂಥದಲ್ಲಿ ಕಥಾವಸ್ತು, ಪಾತ್ರಗಳ ವಿಮರ್ಶೆ ಮಾಡಿದ್ದಾರೆ. ಡಾ॥ ನರೇಂದ್ರ ಕೋಹಲಿಯರು ಹಿಂದಿಯಲ್ಲಿ ಕಾದಂಬರಿ ರೂಪದಲ್ಲಿ ರಚಿಸಿರುವ ರಾಮಾಯಣವನ್ನು ಕನ್ನಡಕ್ಕೆ ಶ್ರೀ ಎಂ. ವಿ. ನಾಗರಾಜರಾವ್ ಮತ್ತು ತಿಪ್ಪೆಸ್ವಾಮಿಗಳು ಅನುವಾದಿಸಿದ್ದಾರೆ. ಪ್ರಥಮ ಭಾಗ 'ದೀಕ್ಷೆ' ಹೊರಬಿದ್ದಿದೆ.

ಇವತ್ತು ಹ್ಯಾಗೂ ಪೌರ್ಣಮಿ. ಊಟ ಆದ್ಮೇಲೆ ತಾರಸಿ ಮೇಲೆ ಕುಳಿತು ಹುಡುಗರಿಗೆ ಬೇಕೂ ಅನ್ಸಿದ್ರೆ ಪುನಃ ಮುಂದುವರಿಸೋಣ..." ವ್ಯಾಸರಾಯರು ನುಡಿದೊಡನೆ ಹುಡುಗರೆಲ್ಲಾ "ಹಾಗೇ ಮಾಡಿ ತಾತ, ಹಾಗೇ ಮಾಡಿ ಸಾರ್" ಕೂಗಿದರು.

ವ್ಯಾಸರಾಯರು ದಿನಕರ ಹಾಗೂ ಅವನ ಸ್ನೇಹಿತರನ್ನು ಕರೆದು ಕಿವಿಯಲ್ಲಿ ಏನೋ ಹೇಳಿದರು. "ಹಾಗೇ ಆಗ್ಲಿ...ಹಾಗೇ ಆಗ್ಲಿ" ಸಂತೋಷದಿಂದ ಓಡಿದರು.

ರಾತ್ರಿ ಊಟವಾದಮೇಲೆ ಎಲ್ಲಾ ಮಾಳಿಗೆಯ ಮೇಲೆ ಸೇರಿದರು.

ರಾಯರು ಪದ್ಮಾಸನ ಹಾಕಿ ಕೂತರೆ ಕಾಲು ಜೋಮು ಹಿಡಿಯುವುದೆಂದು ಕುರ್ಚಿಯ ಮೇಲೆ ಕುಳಿತರು. ಪದ್ಮಮ್ಮ ಹಾಗೂ ಪಕ್ಕದ ಮನೆಯ ಸೀತಾಬಾಯಿ ಜಮಖಾನೆಯ ಮೇಲೆ ಕುಳಿತರು. ದಿನೇಶ ಹಾಗೂ ಇನ್ನೂ 6-7 ಹುಡುಗರು ಇನ್ನೊಂದು ಜಮಖಾನೆಯ ಮೇಲೆ ಕುಳಿತರು.

"ನಮ್ಮ ದಿನಕರ, ಅವನ ಸ್ನೇಹಿತ ವಾಸು ಎಲ್ಲಿ ಕಾಣ್ತಾನೆ ಇಲ್ವಲ್ಲ..." ರಾಯರು ಪ್ರಶ್ನಿಸಿದಾಗ. ಪದ್ದಮ್ಮ ತಮ್ಮ ದೃಷ್ಟಿಯನ್ನು ಹುಡುಗರು ಕುಳಿತಿದ್ದ ಜಮಖಾನೆಯತ್ತ ಹರಿಸಿದರು.

ವ್ಯಾಸರಾಯರು ಚಪ್ಪಾಳೆ ತಟ್ಟಿದೊಡನೆ ಒಬ್ಬ ಹುಡುಗ, ಒಬ್ಬ ಹುಡುಗಿ ಕೈಹಿಡಿದು ನಗುತ್ತ ಬಂದರು. ವಾಸುದೇವರಾಯರು, ಪದ್ದಮ್ಮ ಒಬ್ಬರ ಮುಖ ವನ್ನೊಬ್ಬರು ನೋಡಿ ಮುಗುಳ್ನಕ್ಕರು.

ಮನೋರಮೆ : ನೋೞ್ಪುದೀಪಗಲ್ಗಳೆಂತೊ ಪಿರಿಯವು. ಪಗಲುಮಿರುಳುಂ ಸುರಿವ ಬಲ್ಸೋನೆಯು ಜಿನುಂಗಿನತ್ತಣಿನೆನ್ನ ಬಗೆಯುಂ ಬೇಸತ್ತುದು. ಅಂತದಱಿನೇನಾನುಮೊಂದು ನಲ್ಗತೆಯಂ ಪೇೞ !

ಮುದ್ದಣ : ಪ್ರಾಣೇಶ್ವರಿ ! ತಡೆಯೇಂ. ಇನಿತೊಂದು ಬಯಕೆ ತಲೆದೋಱೆ ಆವ ಗಹನಂ ? ಆದೊಡವಾವ ನಲ್ಗತೆಯಂ ಪೇೞ್ವೆಂ ? ಏಂ ಭೋಜ ಪ್ರಬಂಧಂ ? ವಿಕ್ರಮ ವಿಜಯಂ ? ಮಹಾವೀರ ಚರಿತಂ ?

ಮ : ಇಸ್ಸಿ ! ಇವರೊಳೆನಗಬ್ಕಱಿಲ್ಲಂ ! ಉೞಿದೊಡಮುೞಿದೊಡಂ ಬಟ್ಟೆ ದೋಱುಪ ರಸಭರಿತಂ ಚರಿತಮೈಸೆ.

ಮು : ನಿನಗಾವ ರಸದೊಳಿಷ್ಟಂ ? ಶೃಂಗಾರರಸದೊಳೇ ? ವೀರರಸದೊಳೇ ? ಹಾಸ್ಯರಸದೊಳೇ ?

ಮ : ಆವ ರಸದೊಳೆಂದೊಡೇಂ ? ನವರಸದೊಳಂ.

ಮು : ಅಂತಿರೆ ಮತ್ತಮಾಕತೆ ಯಾವುದು ?

ಮ : ರಾಮಾಯಣದೊಳೇನಾನುಮೊಂದು.

ಮು : ಅಂತೆಯೆ ಅಕ್ಕೆ. ಸೀತಾ ಸ್ವಯಂವರಮಂ ಪೇೞ್ವೆಂ.

ಮ : ಆಂ ಮುನ್ನಮೆ ಕೇಳ್ದಿರ್ಪೆನಲ್ತೆ !

ಮು : ಏಂ ಸೀತಾಪಹರಣ ಕಥನದೊಳ್ ಬಯಕೆಯೆ ?

ಮ : ಉಃ ! ಅನೊಲ್ಲೆಂ.

ಮು : ಮೇಣಾವ ನಲ್ಗತೆಯಂ ಪೇೞ್ವೆನೋ.

ಮ : ಇಂತೇಕುಸಿರ್ವೆಯ್, ನಾಡೊಳೆನಿತ್ತೋ ರಾಮಾಯಣಂಗಳೊಳವು. ನೀಂ ಕೇಳ್ದುದಱೊಳೊಂದಂ ನಲ್ಮೆದೋಱೆ ಕಂಡು ಪೇೞ್ವುದು.

ಮು : ನೀನೆ ಒಂದನಾಯ್ದುಕೊಳ್ವುದು.

ಮ : ಶ್ರೀರಾಮಂ ಅಶ್ವಮೇಧಮಂ ಕೈಕೊಂಡನೆಂಬರಲ್ತೆ ; ಆ ಕತೆಯೆ ಅಕ್ಕುಂ.

ಮು : ಅಕ್ಕುಂ. ಆವ ಧಾಟಿಯೊಳ್ ಪೇೞ್ವೆಂ ; ಪದ್ಯದೊಳ್ ಪೇೞ್ವೆನೊ ? ಗದ್ಯದೊಳ್ ಪೇೞ್ವೆನೊ ?

ಮ : ಪದ್ಯಂ ವಧ್ಯಂ. ಗದ್ಯಂ ಹೃದ್ಯಂ. ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು.

"ಈಗ ಮುದ್ದಣ್ಣ ವಿರಚಿತ 'ರಾಮಾಶ್ವಮೇಧಂ' ಎಂಬ ಮಹಾನ್ ಕೃತೀಂ ವೇದಬ್ರಹ್ಮಶ್ರೀ ಗಮಕಶಿರೋಮಣಿ ವ್ಯಾಸರಾಯರ್ ಪ್ರದ್ಯಮಪ್ಪ ಗದ್ಯದೊಳೆ ಪೇಳ್ವರ್." ದಿನಕರ ನುಡಿದೊಡನೆ ಎಲ್ಲರೂ ಚಪ್ಪಾಳೆ ತಟ್ಟಿದರು. ವ್ಯಾಸರಾಯರು ಮುಗುಳ್ನಕ್ಕು ಕಥೆಯನ್ನು ಪ್ರಾರಂಭಿಸಿದರು.

"ಮುದ್ದಣ ಹತ್ತೊಂಬತ್ತನೆ ಶತಮಾನದ ಕವಿ.* ನಂದಳಿಕೆ ಲಕ್ಷ್ಮೀನಾರಣಪ್ಪನ ಕಾವ್ಯನಾಮ 'ಮುದ್ದಣ'. ಪಾತಾಳಿ ತಿಮ್ಮಪ್ಪಯ್ಯ ತಂದೆ, ಮಹಾಲಕ್ಷ್ಮಮ್ಮ ತಾಯಿ. ಬಡ ಕುಟುಂಬದಲ್ಲಿ ಹುಟ್ಟಿದ ಮುದ್ದಣನಿಗೆ ವಿದ್ಯಾಭ್ಯಾಸ ಸಾಂಗವಾಗಿ ಸಾಗಲಿಲ್ಲ. ಶಾಲೆಯೊಂದರಲ್ಲಿ ವ್ಯಾಯಾಮಶಿಕ್ಷಕನಾಗಿ ಸೇರಿ ತನ್ನ ಸಾಹಿತ್ಯಾಭ್ಯಾಸವನ್ನು ಮುಂದುವರಿಸಿದ. ಉಡುಪಿಯಲ್ಲಿ ಶಾಲಾ ಮಾಸ್ತರರಾಗಿದ್ದ ಮಳಲಿ ಸುಬ್ಬರಾಯರು ಈತನ ಸಾಹಿತ್ಯಾಭಿವೃದ್ಧಿಗೆ ಬಹಳ ಸಹಾಯ ಮಾಡಿದರು. ಮುದ್ದಣ ತನ್ನ ಯಕ್ಷಗಾನ 'ಕುಮಾರ ವಿಜಯ'ದಲ್ಲಿ ಈ ಗುರುವನ್ನು ಭಕ್ತಿಯಿಂದ ನೆನೆದಿದ್ದಾನೆ. 'ಸರ್ಪಭೂಷನ ಭಕ್ತಕವಿತಾ । ದರ್ಪಣಾಬ್ಧಿ ಗಂಭೀರ ಗುರುವೆನಿ । ಸಿರ್ಪ ಮಳಲೀ ಸುಬ್ಬರಾಯರಿಗರ್ಪಿಸುವೆನಿದನು ॥'. ಎಂದು ತುಂಬು ಅಭಿಮಾನದಿಂದ ಗುರುಗಳಿಗೆ ಕಾಣಿಕೆಯಾಗಿ ಅರ್ಪಿಸಿದ್ದಾನೆ. ಎಳೆಯ ವಯಸ್ಸಿನಿಂದ ಬೆಳೆದು ಬಂದ ಸಾಹಿತ್ಯಾಭಿರುಚಿಯನ್ನು ಶ್ರದ್ಧೆಯಿಂದಾಗಿ ಬಹುಬೇಗ ರೂಪಿಸಿಕೊಂಡು ಮೂವತ್ತೊಂದು ವರ್ಷದೊಳಗೆ 'ರತ್ನಾವತಿ ಕಲ್ಯಾಣ', 'ಕುಮಾರ ವಿಜಯ' ಎಂಬ ಯಕ್ಷಗಾನ ಪ್ರಸಂಗಗಳನ್ನೂ, 'ಅದ್ಭುತ ರಾಮಾಯಣ', 'ರಾಮ ಪಟ್ಟಾಭಿಷೇಕ', 'ರಾಮಾಶ್ವಮೇಧ' ಎಂಬ ಕಾವ್ಯಗಳನ್ನು ರಚಿಸಿ ಕನ್ನಡ ಸಾಹಿತ್ಯ ಕುಸುಮ ಮಾಲೆಗೆ ಈ ಗುಲಾಬಿಗಳನ್ನು ಸೇರಿಸಿದನು. ಇವಲ್ಲದೆ 'ಗೋದಾವರಿ' ಎಂಬ ಕಾದಂಬರಿಯ ಕೆಲವು ಪರಿಚ್ಛೇದ, ಭಗವದ್ಗೀತೆ, ರಾಮಾಯಣಗಳ ಕನ್ನಡ ಅನುವಾದ, ಕಾಮಶಾಸ್ತ್ರ ಕುರಿತು ಒಂದು ಗ್ರಂಥ ಬರೆದಿದ್ದಾನೆ. ಕನ್ನಡದ ದುರದೃಷ್ಟ. ಇಂತಹ ಅದ್ಭುತ ಕಾರ್ಯಗಳನ್ನು ಮಾಡಿದ ಈ ಮಹಾನ್ ವ್ಯಕ್ತಿಯನ್ನು ಮೃತ್ಯು ಅಷ್ಟುಬೇಗ ಅಪ್ಪಿತು. ನಕ್ಷತ್ರದಂತೆ ಕ್ಷಣಕಾಲ ಜಾಜ್ವಲ್ಯಮಾನವಾಗಿ ಬೆಳಗಿ ಅಸ್ತವಾಯಿತು ಮುದ್ದಣನ ಕಾವ್ಯಜೀವನ.

ಮುದ್ದಣನ ಮೂರು ಕಾವ್ಯಗಳೂ ರಾಮಾಯಣಕ್ಕೆ ಸಂಬಂಧಪಟ್ಟವುಗಳು. 'ಅದ್ಭುತ ರಾಮಾಯಣ'ದಲ್ಲಿ ಅಂಗಸಾಧನೆ ಮಾಡಿದ ಗದ್ಯವು 'ರಾಮಾಶ್ವಮೇಧ'ದಲ್ಲಿ ಪಳಗಿದ ಜಟ್ಟಿಯಾಗಿದೆ. 'ರಾಮಪಟ್ಟಾಭಿಷೇಕ'ದಲ್ಲಿ ತೋರಿದ ಕಲ್ಪನಾ ಚಮತ್ಕೃತಿ ಅಲ್ಲಿ ಸ್ವಚ್ಛಂದ ವಿಹರಿಸುತ್ತದೆ'. ರಂ. ಶ್ರೀ. ಮುಗಳಿಯವರ ವಿಮರ್ಶೆ ಬಹು ಸೂಕ್ತವಾಗಿದೆ" ಎಂದು ಕವಿಯ ಪರಿಚಯವನ್ನು ಮಾಡಿಸಿದರು.

---

* ಜೀವಿತ ಕಾಲ: ಕ್ರಿ.ಶ. 1869–1901 (ಫೆಬ್ರವರಿ). 'ನಂದಳಿಕೆ' ಹುಟ್ಟಿದೂರು (ಉಡುಪಿ ಕಾರ್ಕಳಗಳ ನಡುವೆ ಇದೆ).

"ಆಗಿನ ಕಾಲ್ದಲ್ಲಿ ಈಗಿನ ಕಾಲ್ದಲ್ಲಿ ಇರೋ ಹಾಗೆ ಹೊಸಬ್ರ ಕಾವ್ಯಪ್ರಕಟಣೆಗೆ ತೊಂದ್ರೆ ಇಲ್ಲಿಲ್ವೆ ಮೇಸ್ಟ್ರೆ ?" ಪ್ರಶ್ನಿಸಿದರು ವಾಸುದೇವರಾಯರು. ಮುಗುಳ್ನಕ್ಕ ಮೇಷ್ಟರು ಪ್ರಾರಂಭಿಸಿದರು.

"ಆಗಿನ ಕಾಲದಲ್ಲೂ ಹೊಸಬರಿಗೆ ಇದೇ ತೊಂದರೆ ಇತ್ತು. ನಂದಳಿಕೆ ನಾರಣಪ್ಪ ಬರೆದದ್ದು ಅಂತ ಬರೆದು ಕಳಿಸಿದರೆ ಪ್ರಕಟವಾಗೋಲ್ಲ ಅನ್ನುವ ಭಯ ದಿಂದ್ಲೇ ಮುದ್ದಣ ತನ್ನ 'ಶ್ರೀರಾಮ ಪಟ್ಟಾಭಿಷೇಕ' ಷಟ್ಪದಿಯಲ್ಲಿ ಬರೆದ ಕಾವ್ಯ ವನ್ನು 'ಮಹಾಲಕ್ಷ್ಮಿ' ಎಂಬ ಕವಿಯತ್ರಿ ಹೆಸರು ಬರೆದು 'ಕರ್ಣಾಟಕ ಕಾವ್ಯ ಕಲಾ ನಿಧಿ' ಗ್ರಂಥಮಾಲೆಗೆ ಕಳುಹಿಸಿದ. ಭಾಷೆಯ ಸೊಗಸು, ಕಥನ ಶೈಲಿಗೆ ಮೆಚ್ಚಿದ ಗ್ರಂಥಮಾಲೆಯ ಎಂ. ಎ. ರಾಮಾನುಜಯ್ಯಂಗಾರ್‌ರವರು 'ಮಹಾಲಕ್ಷ್ಮಿ' ಯಾರೊ ಅಜ್ಞಾತ ಪ್ರಾಚೀನ ಮಹಾನ್ ಕವಿಯತ್ರಿ ಇರಬಹುದೆಂದೆಣಿಸಿ 'ಕಾವ್ಯಮಂಜರಿ' ಯಲ್ಲಿ ಪ್ರಚುರಪಡಿಸಿದರು. ಅನಂತರ ಬರೆದ ಇನ್ನೊಂದು ಮಹತ್ಕೃತಿ 'ರಾಮಾಶ್ವ ಮೇಧ'ವನ್ನು ತನ್ನ ಹೆಸರಿನಲ್ಲಿ ಪ್ರಕಟಣೆಗೆ ಕಳುಹಿಸಲು ಅಂಜಿದ ನಾರಣಪ್ಪ ತನ್ನ ತಾಯಿ ಮುದ್ದಿನಿಂದ ಕರೆಯುತ್ತಿದ್ದ 'ಮುದ್ದಣ್ಣ' ಕರೆಯನ್ನೇ ಕಾವ್ಯಕರ್ತೃವಿನ ಹೆಸರಾಗಿ ಬಳಸಿ ಅದೇ ಗ್ರಂಥಮಾಲೆಗೆ ಕಳುಹಿಸಿದ. ಅದೂ ಅಲ್ಲೆ ಪ್ರಕಾಶನಗೊಂಡು ಸರ್ವಜನ ಮನ್ನಣೆ ಗಳಿಸಿತು."

"ಈ ಕಾವ್ಯಗಳ ಗುಣ ಮೆಚ್ಚಿ ಪ್ರಕಟಿಸುವ ಸಾಹಸ ಮಾಡ್ಬೇಕಾದ್ರೆ ಈ ರಾಮಾನುಜಯ್ಯಂಗಾರ್ ಸಹ ಒಳ್ಳೆ ವಿದ್ವಾಂಸರಿರ್ಲೇಬೇಕು ಅಲ್ವೆ ಮೇಸ್ಟ್ರೆ ?" ಪ್ರಶ್ನಿಸಿದರು ರಾಯರು.

"ಹೌದು. **ರಾಮಾನುಜಯ್ಯಂಗಾರ್** ಒಳ್ಳೆಯ ಮೇಧಾವಿ. ಘನ ವಿದ್ವಾಂಸ. ಸಂಸ್ಕೃತ, ಹಳಗನ್ನಡದಲ್ಲಿ ಪ್ರೌಢಿಮೆ ಗಳಿಸಿದ್ದ ವ್ಯಕ್ತಿ. ವೃತ್ತಿ ಅಧ್ಯಾಪಕ ವೃತ್ತಿ ಯಾದರೂ ಪ್ರಾಚೀನ ಗ್ರಂಥಗಳನ್ನು ಪತ್ತೆಹಚ್ಚಿ ಪರಿಷ್ಕರಿಸಿ ಸಂಪಾದಿಸಿ ಪ್ರಕಟಿಸಲು ಅಪಾರ ಆಸಕ್ತಿ. ಇಂತಹ ಪ್ರಕಟಣೆಗಾಗಿಯೇ 'ಕರ್ಣಾಟಕ ಕಾವ್ಯಮಂಜರಿ' ಎಂಬ ನಿಯತಕಾಲಿಕವನ್ನು ಪ್ರಾರಂಭಿಸಿದ್ದರು. ರನ್ನನ 'ಗದಾಯುದ್ಧ'. ಹರಿಹರನ 'ಗಿರಿಜಾ ಕಲ್ಯಾಣ', ಆಂಡಯ್ಯನ 'ಕಬ್ಬಿಗರ ಕಾವ', ಜನ್ನನ 'ಯಶೋಧರ ಚರಿತೆ', ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಮುಂತಾದುವುಗಳು ಪ್ರಥಮವಾಗಿ ಪ್ರಕಟ ಗೊಂಡದ್ದು ಈ ಕಾವ್ಯಮಾಲೆಯಲ್ಲೆ. ಇವರು ಸ್ವತಃ ಬರೆದು ಪ್ರಕಟಿಸಿದ ಉದ್ಗ್ರಂಥ ಗಳು 'ಪ್ರಬಂಧ ಮಂಜರಿ', 'ಕವಿಸಮಯಂ' ಇವು ಕನ್ನಡ ಲೇಖನಾಭ್ಯಾಸಿಗಳಿಗೆ ಬಹಳ ಉಪಯುಕ್ತ ಗ್ರಂಥಗಳು. ಇವರು ಕೆಲವು ನಾಟಕಗಳ ಗದ್ಯಾನುವಾದವನ್ನು ಮಾಡಿದ್ದಾರೆ. ಇವರದು 73 ವರ್ಷಗಳ ಸಾರ್ಥಕ ಜೀವನ.*

---

* ಜನನ : 1864, ಮರಣ : 1937.

ಇನ್ನು ಮುದ್ದಣ್ಣನ ಕೃತಿಗಳ ಪರಿಚಯ ಸ್ವಲ್ಪ ಮಾಡಿಕೊಳ್ಳೋಣ. ಮುಖ್ಯವಾದದ್ದು 'ರಾಮಾಶ್ವಮೇಧ.' ಪದ್ಮಪುರಾಣದ ಶೇಷರಾಮಾಯಣವೇ ಈ ಕಾವ್ಯ ಕಥನಕ್ಕೆ ಮೂಲ ಎಂದು ರಾಮಾಶ್ವಮೇಧ ಕಾವ್ಯವನ್ನು ವಿವರಿಸಹತ್ತಿದರು.

ರಾವಣನನ್ನು ಕೊಂದು ಸೀತೆಯೊಡನೆ ಅಯೋಧ್ಯೆಗೆ ಹಿಂತಿರುಗಿದ ಶ್ರೀರಾಮ, ಪಟ್ಟಾಭಿಷಕ್ತನಾಗಿ ಸುಖದಿಂದ ರಾಜ್ಯಭಾರ ಮಾಡಿಕೊಂಡಿದ್ದಾಗ ಯಃಕಶ್ಚಿತ್ ಮನುಷ್ಯನೊಬ್ಬ 'ರಾವಣನ ಸೆರೆಯಲ್ಲಿದ್ದ ಸೀತಾದೇವಿ ಕಳಂಕಿನಿ' ಎಂದು ಮಿಥ್ಯಾಪವಾದ ಹೊರಿಸಿದಾಗ ಅದನ್ನು ಕಳೆದುಕೊಳ್ಳಲು ಶ್ರೀರಾಮ ಸೀತಾದೇವಿಯನ್ನು ತ್ಯಜಿಸಲು ನಿಶ್ಚಯಿಸಿ ತಮ್ಮ ಲಕ್ಷ್ಮಣನಿಗೆ ಆಕೆಯನ್ನು ಕಾಡಿನಲ್ಲಿ ಬಿಟ್ಟು ಬರಲು ಆಣತಿ ಈಯುತ್ತಾನೆ. ಈ ಹೊಸ ದಾರುಣ ಪರಿಸ್ಥಿತಿಯ ಬಗ್ಗೆ ಕಿಂಚಿತ್ತೂ ಅರಿಯದೆ ಇದ್ದ ಗರ್ಭಿಣಿ ಸೀತೆ ಗುಬ್ಬಚ್ಚಿ ಮರಿಗಳಿಗೆ ಗುಟುಕು ಕೊಡುವುದನ್ನು ನೋಡಿ, ಸ್ತ್ರೀಸಹಜಭಾವದಿಂದ—

"ಮಿತ್ರೆ! ನೋಡೆ! ನೋಡೆ! ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತೆ ಪಿಡಿಪಂತಿರೆ ಎನ್ನಿದರೊಳ್ ಪಿಳ್ಳೆಯುಂ. ಮುದ್ದುಗೆಯ್ಯುಂ ಇಂತಿರ್ಪಿನಂ ಇನ್ನೊಲ್ಲೆನೀ ಎಡೆಯುಂ ಎತ್ತಾನುಂ ಪೆರೆತೊಂದೆಡೆಗೆ ಪೋಪಂ ಅಲಸುವೆನೀನೋಟಕ್ಕೆ" ಎಂದು ಮಕ್ಕಳಿಂದಾಗುವ ಸುಖವನ್ನು ಕಲ್ಪಿಸಿ ಹಲುಬಿದಾಗ ಪದ್ದಮ್ಮನವರ ಕಣ್ಣು ಹನಿಯಾಡುತ್ತಿತ್ತು. ಪೂಜ್ಯ ಅತ್ತಿಗೆಯನ್ನು ಅಸಹಾಯ ಸ್ಥಿತಿಯಲ್ಲಿ ಕಾಡಿನಲ್ಲಿ ಬಿಟ್ಟು ಬರಲಾಗದ ಲಕ್ಷ್ಮಣನ ತೊಳಲಾಟ ಆತನ ದುಃಖ 'ದೇವಿಯರೆನ್ನಂ ಕಂದನೆಂದು ಸಂಬೋಧಿಸದಿರಿಂ, ಪಗೆವವನೆಂದೇ ಬಗೆಯಿಂ ಇನ್ನೆವರಮಣ್ಣನಾಣತಿಯಂ ನಿಮ್ಮೊಳೆಂದೆನಿಲ್ಲ. ನಾಡೊಳಾವನೋ ಮಡಿವಳನೋರ್ವನ ಭದ್ರಮಾಗೆ ದೇವಿಯಿರೊಳ್ ಕುಂದಿಟ್ಟು ದೇವರಂ ಚುನ್ನವಾಡಿದಂ ಗಡ!...ಇದೆ ಕೊಳ್ಳಿಂ ಸ್ವಾಮಿಕಾರ್ಯ ಧುರಂಧರಂ, ಅಗ್ರಜನ್ಮಾಜ್ಞಾನುವರ್ತಿ, ವೀರಾಗ್ರಗಣ್ಯಂ, ಕೃತಕೃತ್ಯಂ, ನಚ್ಚಿನ ಮೈದುನನೆಂ, ಲಕ್ಷ್ಮಣನೆಂ ಈ ಒಸಗೆಯ ಪೇಳಲ್ಕೆಂದು ಬಂದು ಬೆನ್ನಿಕ್ಕಿ ಪೊಳಲ್ಗೆ ಪೋದಪೆಂ' ಲಕ್ಷ್ಮಣ ನುಡಿದಾಗ ರಾಯರೂ ಕಣ್ಣನ್ನು ಒರೆಸಿಕೊಂಡರು. "ಕಂದಾ! ಏತರ್ಕೆ ನಿಂದಿರ್ಪೈ? ತಳ್ವಿದನೆಂದು ನಿನ್ನೊಳಗ್ರಜಂ ಕೋಪಿಸನೆ? ಅಣ್ಣನಾಜ್ಞೆ ಸಂದುದಲಾ! ಪೋ ಪೋಗೈ" ಎಂದು ಸೀತಾ ನುಡಿದಾಗ ಪದ್ದಮ್ಮ ಅಳುವನ್ನು ಹತ್ತಿಕ್ಕದಾದರು. ಗೊಳೋ ಎಂದು ಬಿಕ್ಕಿ ಬಿಕ್ಕಿ ಅತ್ತರು. "ಯಾರೇನು ಮಾಡುವರು ಯಾರಿಂದಲೇನಹುದು. ಪೂರ್ವಜನ್ಮದ ಕರ್ಮ ವಿಧಿ ಬೆನ್ನಬಿಡದು" ಸೀತೆ ಹೃದಯವನ್ನು ಕಲ್ಲು ಮಾಡಿಕೊಂಡು ಕಣ್ಣೀರನ್ನು ಒರಸಿಕೊಂಡಾಗ ರಾಯರು, ಪದ್ದಮ್ಮ ಗಂಭೀರವಾಗಿ ಕುಳಿತರು. ವೇದಾಂತ ಚಿತ್ತಶಾಂತಿಯನ್ನು ಸಂಪೂರ್ಣವಾಗಿ ಕಲಕಿಬಿಟ್ಟಿತ್ತು.

ಲವಕುಶರ ಕಾಳಗದ ವರ್ಣನೆ ಕೇಳಿ ದಿನಕರ ದಿನೇಶ ಮುಕುಂದ ಎಲ್ಲಾ ಹುಡುಗರೂ ಆವೇಶದಿಂದ ಕುಣಿದಾಡಿದರು.

"ಈ ವಗೆಯಸುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತು. ತಾನೆಂದ ಕತೆ ಬಲ್ಲೊಗಸು ಬಲ್ಲೊಗಸು" ಮುದ್ದಣ್ಣನ ವಾಣಿಯೊಡನೆ ವ್ಯಾಸರಾಯರು ಕಥೆಯನ್ನು ಮುಗಿಸಿದಾಗ ಎಲ್ಲರೂ ಚಪ್ಪಾಳೆ ತಟ್ಟಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

"ಇವತ್ತು ಅಮೋಘ ಕಾವ್ಯದ ರಸದೌತಣ ಉಣಿಸಿದಿರಿ ವ್ಯಾಸರಾಯರೆ!" ಎಂದು ಅವರ ಬೆನ್ನುತಟ್ಟಿ "ಹೂಂ, ಬನ್ನಿ...ಇವತ್ತಿಗೆ ಸಾಕು. ನಾಳೆ ಪುನಃ ಮುಂದುವರಿಸುವಿರಂತೆ." ಮಹಡಿ ಮೆಟ್ಟಿಲಿನತ್ತ ನಡೆದರು ರಾಯರು.

"ನಾಳೆ ಏನು ಹೇಳ್ತೀರಿ ತಾತ ?" ದಿನಕರನ ಸ್ನೇಹಿತ ಉತ್ಸಾಹದಿಂದ ಕೇಳಿದ.

ರಾಷ್ಟ್ರಕವಿ ಕೆ. ವಿ. ಪುಟ್ಟಪ್ಪ*ನವರ 'ರಾಮಾಯಣ ದರ್ಶನಂ.'"

"'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಬರ್ದೋರೇ ಕಣೋ !" ಒಬ್ಬ ಹುಡುಗ ನುಡಿದ.

"ಕನ್ನಡ ಎನೆ ಕುಣಿದಾಡುವುದೆನ್ನೆದೆ
ಕನ್ನಡ ಎನೆ ಕಿವಿ ನಿಮಿರುವುದು !" ಇನ್ನೊಬ್ಬ ಹೇಳಿದ.

"'ಕುವೆಂಪು' ಅಂದ್ರೇನು ತಾತ ?" ಮೆಟ್ಟಿಲಿಳಿಯುತ್ತ ಪ್ರಶ್ನಿಸಿದ ದಿನೇಶ.

"'ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ'. ತೀರ್ಥಹಳ್ಳಿ ತಾಲ್ಲೂಕು ಮಲೆನಾಡಿನ ಲ್ಲಿರೋ ಪ್ರಕೃತಿರಮ್ಯ ಸ್ಥಳ. 'ಕುಪ್ಪಳ್ಳಿ' ಈ ತಾಲ್ಲೂಕಿನಲ್ಲಿರೋ ಒಂದು ಗ್ರಾಮ. ತಂದೆ ವೆಂಕಟಪ್ಪ : ತಾಯಿ ಸೀತಮ್ಮ."

"ಡಾಕ್ಟರ್ ಪುಟ್ಟಪ್ಪ ಬೇರೇನಾ ತಾತ ?" ದಿನೇಶನ ಮತ್ತೊಂದು ಪ್ರಶ್ನೆ.

"ಅಲ್ಲ ಮಗು. ಕುವೆಂಪು ಅವರೇ ಡಾಕ್ಟರ್ ಪುಟ್ಟಪ್ಪ. 'ಪದ್ಮಭೂಷಣ' ಪುಟ್ಟಪ್ಪಾನೂ ಅವರೇ. ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳು ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿವೆ. ರಾಷ್ಟ್ರಪತಿ ಗಳು ಇವರ ಅಪಾರ ಸಾಹಿತ್ಯ ಸೇವೆಯನ್ನು ಮೆಚ್ಚಿ 'ಪದ್ಮಭೂಷಣ' ಪ್ರಶಸ್ತಿ ಪ್ರಧಾನ ಮಾಡಿದ್ದಾರೆ. ಅವರು ಬರೆದ 'ಶ್ರೀರಾಮಾಯಣ ದರ್ಶನಂ' ಕಾವ್ಯಕ್ಕೆ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಹಾಗೂ ಭಾರತೀಯ ಜ್ಞಾನಪೀಠದ ಪ್ರಶಸ್ತಿಗಳು ದೊರಕಿವೆ. ಇದರ ವಿಷಯಾನೆ ನಾನು ಬೆಳಿಗ್ಗೆ ಹೇಳೋದು."

"ಇವರು ಕಾದಂಬರೀನೂ ಬರ್ದಿದ್ದಾರಾ ?" ದಿನಕರ ಪ್ರಶ್ನಿಸಿದ. ಬಚ್ಚಲುಮನೆ ಯತ್ತ ಹೋಗುತ್ತಿದ್ದ ವ್ಯಾಸರಾಯರನ್ನು ನಿಲ್ಲಿಸಿ.

"'ಕಾನೂರು ಸುಬ್ಬಮ್ಮ ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ಎರಡೂ ಬೃಹತ್ ಕಾದಂಬರಿಗಳು. ಮಲೆನಾಡಿನ ಜೀವನ ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ."

"ಇವರ 'ಶ್ರೀ ರಾಮಕೃಷ್ಣ ಪರಮಹಂಸ', 'ಸ್ವಾಮಿ ವಿವೇಕಾನಂದ' ಜೀವನ

---

* ಜನನ : 29 ಡಿಸೆಂಬರ್ 1902.

ಚರಿತ್ರೆಗಳನ್ನು ಓದಿದ್ದೇನೆ. ಮನೋಜ್ಞವಾಗಿ ರಚಿಸಿದ್ದಾರೆ." ವಾಸುದೇವರಾಯರು ನುಡಿದರು.

"'ಕಾವ್ಯ ವಿಹಾರ' ನಮ್ಮಣ್ಣಂಗೆ ಪಠ್ಯಪುಸ್ತಕ. ಅದ್ರಲ್ಲಿ ಏನೇನೊ ವಿಮರ್ಶೆಗಳಿವೆಯಂತೆ," ದಿನಕರನ ಮಿತ್ರ ನುಡಿದ.

"ಹೌದು, ಲಕ್ಷ್ಮೀಶನ 'ಸೀತಾ ವನವಾಸ', 'ಹರಿಶ್ಚಂದ್ರ ಕಾವ್ಯ', 'ಗದಗಿನ ಭಾರತ' ಕೃತಿಗಳ ವಿಮರ್ಶೆ ಇದ್ರಲ್ಲಿದೆ," ವ್ಯಾಸರಾಯರು ನಿಂತು ನುಡಿದರು.

"ಹೋದ್ವರ್ಷ ಕಾಲೇಜ್ನಲ್ಲಿ ಆಡಿದ್ರಲ್ಲಾ, ರುದ್ರನಾಟಕ...ನಾವೂ ಹೋಗಿದ್ವಿ. ಯಾವ್ದದು ? ತುಂಬಾ ಚೆನ್ನಾಗಿತ್ತು." ಪದ್ಮಮ್ಮ ಹಾಸಿಗೆ ಹಾಸುತ್ತ ಪ್ರಶ್ನಿಸಿದರು.

"ರಕ್ತಾಕ್ಷಿ." ರಾಯರು ಒಡನೆಯೇ ನುಡಿದರು. "ನಾನು ಓದ್ತಾ ಇರ್ಬೇಕಾದ್ರೂ ಅದು ಇತ್ತು. ಬಿದನೂರಿನ ಚರಿತ್ರೆ ಅವಲಂಬಿಸಿದೆ ಅಲ್ವೆ ವ್ಯಾಸರಾಯ್ರೆ?"

"ಹೌದು. ಸರಳ ರಗಳೆಯಲ್ಲಿ ಇವರು ಸುಂದರವಾಗಿ ನಾಟಕಗಳನ್ನು ಹೆಣೆದಿದ್ದಾರೆ. 'ಜಲಗಾರ', 'ಯಮನ ಸೋಲು'–ಓದಲೇಬೇಕಾದವುಗಳು. 'ಬೆರಳ್ಗೆ ಕೊರಳ್', 'ಸ್ಮಶಾನ ಕುರುಕ್ಷೇತ್ರ'–ಅವರ ಶ್ರೇಷ್ಠ ನಾಟಕಗಳು.

"ಅವರ ಮೊದಲ ಕೃತಿ ಯಾವ್ದು ಸಾರ್ ?" ದಿನಕರನ ಇನ್ನೊಬ್ಬ ಸ್ನೇಹಿತ ಚಂದ್ರು ಪ್ರಶ್ನಿಸಿದ.

"ನಾಳೆ ಬೆಳಗ್ಗೆ ಬನ್ನಿ. ಎಲ್ಲಾ ಹೇಳ್ತಾರೆ. ಪಾಪ, ಮಲಕ್ಕೊಳ್ಳಿ ಮೇಷ್ಟ್ರು. ಬೆಳಗ್ಗೆಯಿಂದ ಹೇಳಿ ಹೇಳಿ ಸುಸ್ತಾಗಿದ್ದಾರೆ." ವಾಸುದೇವರಾಯರು ನುಡಿದಾಗ ವ್ಯಾಸರಾಯರು ಮುಗುಳ್ನಕ್ಕರು. "ಕೇಳಲಿ, ಕೇಳಲಿ...ಪಾಪ ಇಷ್ಟೊಂದು ಆಸಕ್ತಿ ಇರೋ ಹುಡುಗರು ನನಗೆ ತಾನೆ ಎಲ್ಲಿ ಸಿಗ್ಬೇಕು. ತೂಕಡಿಸೋ ಹುಡುಗರನ್ನೇ ನೋಡಿದ್ದೋನಿಗೆ ಇಂಥೋರನ್ನ ಕಂಡ್ರೆ ಬಾಳ ಸಂತೋಷ ಆಗುತ್ತೆ" ಎಂದು ಹೇಳಿ ಹುಡುಗನ ಹತ್ತಿರ ಬಂದು ತಲೆ ಸವರುತ್ತಾ ಹೇಳಿದರು–

"'ಕೊಳಲು' ಅವರ ಮೊದಲಿನ ಕಾವ್ಯಸಂಕಲನ. ಇದಾದಮೇಲೆ ಪಾಂಚಜನ್ಯ, ನವಿಲು, ಕಲಾಸುಂದರಿ, ಪಕ್ಷಿಕಾಶಿ, ಪ್ರೇಮಕಾಶ್ಮೀರ, ಮುಂತಾದ ಕವನ ಸಂಗ್ರಹಗಳು ಬಂದಿವೆ. 'ಚಿತ್ರಾಂಗದೆ' ಒಂದು ಅಪೂರ್ವ ಖಂಡಕಾವ್ಯ. ಅರ್ಜುನ, ಬಭ್ರುವಾಹನರ ನಡುವೆ ಯುದ್ಧ ನಡೆಯುತ್ತಿದ್ದಾಗ ಮಧ್ಯೆ ಪ್ರವೇಶಿಸಿ ಹತಳಾಗುವ ದುರಂತ ಕಥೆ. ಬಹು ಕಾವ್ಯಮಯವಾಗಿ ರೂಪಿತವಾಗಿದೆ. ಹೂಂ, ಸಾಕು ಇವತ್ತಿಗೆ. ನಾಳೆ ಬನ್ನಿ, ಅವರ ಬೃಹತ್ ಕೃತಿ 'ರಾಮಾಯಣ ದರ್ಶನಂ'ನ ಪರಿಚಯ ಸ್ವಲ್ಪ ಮಾಡ್ಕೊಳ್ಳೋಣ." ನಡೆದರು ಮುಂದೆ.

ಹೊರಬಾಗಿಲಿನತ್ತ ಓಡಿದರು ದಿನೇಶ ಮತ್ತು ದಿನಕರನ ಸ್ನೇಹಿತರು.

* * *

ಬೆಳಗ್ಗೆ ವ್ಯಾಸರಾಯರು ಸ್ನಾನ-ಸಂಧ್ಯಾವಂದನೆಗಳನ್ನು ಪೂರೈಸಿ ದೇವತಾರ್ಚನೆಗೆ ಕುಳಿತಿದ್ದರು. ಆಗಲೇ ಹುಡುಗರು ಹೊರಗಡೆ ಹಜಾರದಲ್ಲಿ ಸೇರಿ ಗಲಾಟೆ

ಪ್ರಾರಂಭಿಸಿದ್ದರು. ಪದ್ಮಮ್ಮ ಗಲಾಟೆ ಮಾಡಬೇಡಿರೆಂದು, ವ್ಯಾಸರಾಯರ ಪೂಜೆಗೆ ಭಂಗ ತರಬಾರದೆಂದು ತಿಳಿಯಹೇಳಿದಮೇಲೆ ಸಾಲಾಗಿ ಕುಳಿತು ರಾಮಾಯಣದ ಕಥೆಯನ್ನು ತಮಗೆ ತಿಳಿದಂತೆ ವಿಮರ್ಶಿಸಹತ್ತಿದರು.

ಸ್ವಲ್ಪಹೊತ್ತಿನಲ್ಲಿ ಹೊರಗೆ ಬಂದ ವ್ಯಾಸರಾಯರು ಬಾಲಕರ ಸಮೂಹ ಕಂಡು ಬಹಳ ಸಂತುಷ್ಟರಾದರು. ಹಸನ್ಮುಖರಾಗಿ ಕಥನ ಪ್ರಾರಂಭಿಸಿದರು.

ಕುವೆಂಪು ಅವರ ರಾಮಾಯಣ ದರ್ಶನ ಕೂಡ ವಾಲ್ಮೀಕಿ ರಾಮಾಯಣದ ಹಾದಿಯಲ್ಲಿ ನಡೆದುಬಂದ ಒಂದು ಉದ್ಗ್ರಂಥ. ಕವಿ ಭಕ್ತಿಯಿಂದ ಈ ಗ್ರಂಥವನ್ನು ತನ್ನ ಗುರುಗಳಾದ ಶ್ರೀ ವೆಂಕಣ್ಣಯ್ಯನವರಿಗೆ ಅರ್ಪಿಸುತ್ತಾ,

ಇದೊ ಬಂದಿರುವೆನಿಂದು<br>
ಮುಗಿಸಿ ತಂದಿಪೆ ನಾ ಮಹಾಗಾನಮಂ. ಹಿಂತೆ<br>
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ<br>
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ,<br>
ಮರುವುಟ್ಟು ಪಡೆದಂತೆ ಮೂಡಿದೀ ಕಾವ್ಯಮಂ<br>
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್,....ಕಿರಿಯ ನಾಂ<br>
ಹಿರಿಯರಿಗೆ ಹಾಡುವೆನ್, ಕೇಳ್ವುದಾಶೀರ್ವಾದಂ...

ಎಂದು ಕಥೆಯನ್ನು ಆರಂಭಿಸಿದ್ದಾರೆ. ಕವಿ ಈ ಕಾವ್ಯದಲ್ಲಿ ತಮಗೆ ಸೂಕ್ತವೆನಿಸಿದ ಹಲವು ಬದಲಾವಣೆಗಳನ್ನು ಮಾಡಿಕೊಂಡು ಇದಕ್ಕೆ ಒಂದು ನವ್ಯದೃಷ್ಟಿಯನ್ನು ನೀಡಿದ್ದಾರೆ. ಮಂಥರೆ, ಊರ್ಮಿಳೆ, ರಾವಣರ ಪಾತ್ರಸೃಷ್ಟಿಯಲ್ಲಿ ಹೊಸತನವನ್ನು ಕಾಣುತ್ತೇವೆ. ಅವರ ಮನಸ್ಸಿನ ತುಮುಲ, ಉತ್ಕಟ ಆಕಾಂಕ್ಷೆಯ ನೈಜ ಅರಿವು ನಮ್ಮ ಮನಸ್ಸಿಗೆ ಆದಾಗ ವ್ಯಕ್ತಿತ್ವದ ಮೇಲೆ ಹೆಮ್ಮೆ ಮೂಡುತ್ತದೆ. ಅವರಲ್ಲುಳಿದಿರುವ ಮಾನವೀಯ ದುರ್ಬಲತೆಯ ಬಗ್ಗೆ ಅನುಕಂಪ ಮೂಡುತ್ತದೆ. ನಾವು ವಾಲ್ಮೀಕಿ ರಾಮಾಯಣದಲ್ಲಿ ಕಾಣುವ ಮಂಥರೆಗೂ, ಕುವೆಂಪು ಅವರ ಸೃಷ್ಟಿ ಮಂಥರೆಗೂ ಅಜಗಜಾಂತರವಿದೆ. ಇಲ್ಲೂ ಮಂಥರೆ ಗೂನಿ, ಕುರೂಪಿ ನಿಜ. ಆದರೆ ವ್ಯಕ್ತಿತ್ವ ಹಿರಿದು.

'ಸಂತಸದೊಳಾ ದಾಸಿ, ಮುದಿಗೂನಿ ರಾಮನಂ<br>
ಮುದ್ದಿಸಲ್ ಬಯಸಿ ತೋಳ್ ಚಾಚಲಾ ಕೌಸಲ್ಯೆ :<br>
ಕಂದುಗಮಂಗಳಂ, ಮುಟ್ಟದಿರ್ ಮುಟ್ಟದಿರ್ !<br>
ಬೇಡಬೇಡೆನ್ನುತೆ ನಿವಾರಿಸಿದಳಾಕೆಯಂ.<br>
ಮುದಿಮಂಥರೆಯ ಮೈತ್ರಿ ಜಜ್ಜರಿತಮಪ್ಪಂತೆವೋಲ್<br>
ಮುರಿದೊಲ್ಮೆಯವಮಾನದಿಂದೆ ಕಣ್ಬನಿ ಚಿಮ್ಮಿ<br>
ನಿಲ್ಲದಲ್ಲಿಂ ನಡೆದಳಯ್ ಭರತನಂ ಬಿಗಿದಪ್ಪಿ.

ತುಳಿದ ಸರ್ಪಿಣಿಯಂತೆ ಮುಳಿಸಿನಿಂದಿಯೆ ಪೋಗದು
ಸುಯ್ದು, ಪೆಡೆಯೆತ್ತಿ !'

ಈ ವಿಷ ಸನ್ನಿವೇಶ ರಾಮನ ವನವಾಸಕ್ಕೆ ಕಾರಣವಾಯಿತೆಂಬುದನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಇಷ್ಟಾದರೂ ಮಂಥರೆ ಕೆಟ್ಟ ಹೆಂಗಸಲ್ಲ. ಅವಳಿಗೂ ಶ್ರೀರಾಮನಲ್ಲಿ ಭಕ್ತಿ, ಅಭಿಮಾನಗಳುಂಟು ಎಂಬುದು ಈ ಕೆಳಗಿನ ಮಾತುಗಳಿಂದ ವ್ಯಕ್ತವಾಗುತ್ತದೆ :

ಓ ನನ್ನ ಭರತನಣ್ಣಯ್ಯ ! ಓ
ರಾಮಯ್ಯ ! ಹೇಳೆಲ್ಲಿರುವೆಯಯ್ಯಾ ? ದಮ್ಮಯ್ಯ
ಓ ನನ್ನ ಭರತನಣ್ಣಯ್ಯ ! ಓ ರಾಮಯ್ಯ !

ರಾಮದರ್ಶನಕ್ಕಾಗಿ ಕಾಡನ್ನು ಸೇರಿದ್ದಾಳೆ. ಅವಳಿಗೆ ಈಗ ರಾಮನಿಲ್ಲದೆ ವಿಶ್ವದಲ್ಲಿ ಇನ್ನೇನೂ ಇಲ್ಲ.

ಅಂತರಂಗ ಪರಿವರ್ತನೆಗೆ ಈ ಉಕ್ತಿ, ಈ ಚೀತ್ಕಾರ ಸಾಲದೆ ? ಅವಳಿಗೆ ಈಗ ರಾಮನೊಬ್ಬ ದೈವ. ಅವಳನ್ನಷ್ಟೇ ಅಲ್ಲ, ಕೋಸಲವನ್ನೂ, ಜಗತ್ತನ್ನೆಲ್ಲ ಉದ್ಧರಿಸಿದ ದೈವ.

ಲಕ್ಷ್ಮಣ ರಾಮನ ಜೊತೆಯಲ್ಲಿ ಕಾಡಿಗೆ ಹೋದಾಗಿನಿಂದ ಅವನು ಹಿಂತಿರುಗುವತನಕ ಲಕ್ಷ್ಮಣನ ಹೆಂಡತಿ ಊರ್ಮಿಳೆ ಸಹ ನಾರುಮಡಿಯುಟ್ಟು ಸನ್ಯಾಸಿನಿಯಂತೆ ಜೀವನ ನಡೆಸುತ್ತಾಳೆ. ಸೀತೆಗಾದರೂ ರಾಮನ ಸಾನಿಧ್ಯ, ಸಖ್ಯ ಲಭ್ಯವಿತ್ತು. ಪಾಪ, ಈಕೆ ಎಲ್ಲವನ್ನೂ ತ್ಯಜಿಸಿ ನಡೆಸುವ ತ್ಯಾಗಮಯ ಜೀವನ ಅಲೌಕಿಕವಾದದ್ದು.

ಇಲ್ಲಿಯ ರಾವಣ ಶೂರ, ಧೀರ, ಅಭಿಮಾನಿ, ಮಹತ್ವಾಕಾಂಕ್ಷೆ ಉಳ್ಳವನು ಹಾಗೂ ಸಂಯಮಿ. ಪತಿವ್ರತೆ ಯಾರಾದರೂ ಸಿಕ್ಕಿದರೆ ಅವರ ಕಾಲಿಗೆ ಎರಗುವೆನೆಂದು ಹಂಬಲಿಸುವ ಆದರ್ಶವಾದಿ. ಪ್ರಪಂಚದಲ್ಲೆಲ್ಲಾ ಈ ಬಗ್ಗೆ ಪರೀಕ್ಷೆ ನಡೆಸಿದಾಗ್ಯೂ ಯಾರೂ ಇಂತಹ ಆದರ್ಶ ಸತಿ ಸಿಕ್ಕದಿದ್ದುದರಿಂದ ಸೀತೆಯ ಪರೀಕ್ಷೆ ಈಗ ನಡೆಸಹೊರಟಿದ್ದಾನೆ. ಈ ರಾವಣನ ವ್ಯಕ್ತಿಚಿತ್ರದಲ್ಲಿ 'ವಿಮಲಸೂರಿ'ಯ ರಾವಣನ ವ್ಯಕ್ತಿತ್ವದ ಛಾಯೆಯನ್ನು ನಾವು ಕಾಣಬಹುದು. ರಾವಣ ಸತ್ತಾಗ ದುರಾತ್ಮನೊಬ್ಬ ಸತ್ತನೆಂದು ಸಂತೋಷವಾಗುವುದಿಲ್ಲ. ಕರುಣೆ ಪುಟಿದೆದ್ದು ರಾವಣನ ವ್ಯಕ್ತಿತ್ವದ ಬಗ್ಗೆ ಸಹಾನುಭೂತಿ ಉಕ್ಕಿ ಹರಿಯುತ್ತದೆ. ದಿವಂಗತ ರಾಷ್ಟ್ರಕವಿ ಗೋವಿಂದ ಪೈ ಹೇಳುವಂತೆ 'ಮಿಲ್ಟನ್ ಕವಿಯ ಪ್ಯಾರಡೈಸ್ ಲಾಸ್ಟ್' ಪ್ಯಾರಡೈಸ್ ರೀಗೇನ್ ಆದಮೇಲೆ ಯಾವ ಭಾಷೆಯಲ್ಲೆ ಆಗಲಿ ಈ ಪ್ರಮಾಣದ ಒಂದು ಮಹಾ ಕಾವ್ಯ ಬರೆದದ್ದನ್ನು ಕಾಣೆ. ಇದು ಸತ್ಯಮಾತು..." ಮಾತು ಮುಗಿದೊಡನೆ ವಾಸುದೇವರಾಯರು ನುಡಿದರು "ಈ ಅಮೋಘ ಕಾವ್ಯ ಪ್ರತಿಯೊಬ್ಬರ ಮನೇಲೂ ಇರ್ಬೇಕು. ಇವತ್ತು ಸಂಜೆ ಆಫೀಸ್ನಿಂದ ಬರೋವಾಗ ಒಂದು ಪುಸ್ತಕ ಕೊಂಡು ತರ್ತೀನಿ." ಕಾವ್ಯ ಕೇಳಿ ರಾಯರ ಮನಸ್ಸು ಬಹು ಉಲ್ಲಸಿತವಾಗಿತ್ತು. ಕಾವ್ಯದ

ಮಧುವಿನ ಮತ್ತತೆಯಿಂದ ಬಹಿರ್ಮುಖರಾಗಬೇಕಾದರೆ ಹುಡುಗರಿಗೆ ಕೆಲವು ನಿಮಿಷಗಳೇ ಹಿಡಿದವು.

ಪದ್ಮಮ್ಮನವರು ರಾಮದೇವರ ಫೋಟೋಗೆ ಮಂಗಳಾರತಿ ಮಾಡಿ ಅಲ್ಲಿ ಸೇರಿದ್ದವರಿಗೆಲ್ಲಾ ಬಾಳೆಹಣ್ಣಿನ ರಸಾಯನ ಹಂಚಿದರು.

"ಹೊಸ ಕನ್ನಡದಲ್ಲಿ ಇನ್ಯಾರೂ ರಾಮಾಯಣ ಬರ್ದಿಲ್ವೆ ಸಾರ್..." ದಿನಕರನ ಮಿತ್ರ ಪ್ರಶ್ನಿಸಿದ.

"ರಾಮಾಯಣ ದರ್ಶನ ಕಾವ್ಯದ ಜೊತೆಯಲ್ಲಿ ನೆನಪಿಗೆ ಬರುವ ಗ್ರಂಥ **ದೇ.ಜ.ಗೌ.**ರವರ 'ಶ್ರೀ ರಾಮಾಯಣ ದರ್ಶನಂ ವಚನ ಚಂದ್ರಿಕೆ' ಮತ್ತು ಡಾ॥ ಎಚ್. ತಿಪ್ಪೇರುದ್ರಸ್ವಾಮಿಗಳ 'ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ'–ಎಂಬ ತೌಲನಿಕ ಅಧ್ಯಯನ ಗ್ರಂಥ.

**ಹೆಳವನಕಟ್ಟೆ ಗಿರಿಯಮ್ಮ***1 ಎಂಬಾಕೆ 'ಸೀತಾ ಕಲ್ಯಾಣ'ವನ್ನು ಹಾಡಿನ ರೂಪದಲ್ಲೂ, ಮೈಸೂರು ದೊರೆಗಳ ಆಶ್ರಯದಲ್ಲಿದ್ದ **ಬಸವಪ್ಪ ಶಾಸ್ತ್ರಿ***2ಗಳು 'ಉತ್ತರ ರಾಮಚರಿತೆ'ಯನ್ನು ನಾಟಕರೂಪದಲ್ಲೂ ಬರೆದಿದ್ದಾರೆ. ಮಕ್ಕಳಿಗಾಗಿ **ಪಾಲಿರಾಮ ಚಂದ್ರರಾಯರು** ಸರಳ ಸುಂದರ ಛಂದದಲ್ಲಿ ರಾಮಾಯಣ ರಚಿಸಿದ್ದಾರೆ.

"ನವನೀತ ರಾಮಾಯಣ ಅಂತ ಒಂದು ಹೆಸ್ರು ಕೇಳಿದ್ದೀನಿ, ಇದನ್ನು ಬರ್ದೋರು ಯಾರು?" ಪ್ರಶ್ನಿಸಿದರು ವಾಸುದೇವರಾಯರು.

"ಇದನ್ನು ಬರೆದವರು **ಮುಳಿಯ ತಿಮ್ಮಪ್ಪಯ್ಯ**. 'ಮುಳಿಯ' ದಕ್ಷಿಣ ಕನ್ನಡ ಜಿಲ್ಲೆಯ ಒಂದು ಗ್ರಾಮ. ಬಾಲ್ಯದಿಂದಲೂ ಇವರಿಗೆ ಓದಿನಲ್ಲಿ ಬಹಳ ಆಸಕ್ತಿ. ತಂದೆ ಕೇಶವಭಟ್ಟರೆ ಇವರಿಗೆ ಗುರು. ಸಂಸ್ಕೃತ ಹಾಗೂ ಕನ್ನಡದಲ್ಲಿ ಪಾಂಡಿತ್ಯ ಗಳಿಸಿ 'ನಾಡೋಜ ಪಂಪ' ಎಂಬ ವಿಮರ್ಶಾತ್ಮಕ ಕೃತಿ ರಚಿಸಿ ಕನ್ನಡ ಸಾಹಿತ್ಯ ಭಂಡಾರಕ್ಕೆ 1938ರಲ್ಲಿ ಸೇರಿಸಿದರು. 1904ರಲ್ಲಿ ನವನೀತ ರಾಮಾಯಣ ಹೊರ ಬಂತು. ಇನ್ನೊಂದು ಸಂಶೋಧನಾತ್ಮಕ ಕೃತಿ 'ಕವಿರಾಜಮಾರ್ಗ ವಿವೇಕ'. ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದ ಇವರು ಮುದ್ದಣನ 'ರಾಮಾಶ್ವಮೇಧ'ದಿಂದ ಪ್ರಭಾವಿತರಾಗಿ 'ಚಂದ್ರಾವಳಿ ವಿಲಾಸ ಎಂಬ ಹಳೆಗನ್ನಡ ಗದ್ಯಕಾವ್ಯ ರಚಿಸಿದರು.' 'ಕಬ್ಬಿಗರ ಕಾವ'ದ ಮಾದರಿಯಲ್ಲಿ ನಿರ್ಮಿಸಿದ ಪದ್ಯಕಾವ್ಯ 'ಸೊಬಗಿನ ಬಳ್ಳಿ'. 'ನಡತೆಯ ನಾಡು' ಇನ್ನೊಂದು ಗದ್ಯ ಕಾವ್ಯ. 'ಅರ್ಥದಾರಿ' ಯಕ್ಷಗಾನ ರೂಪಕ. 'ಪಶ್ಚಾತ್ತಾಪ' ಸಾಮಾಜಿಕ ಕಾದಂಬರಿ. ಸ್ವಲ್ಪ ಕಾಲ

---

*1 ಕಾಲ: ಸು. ಕ್ರಿ. ಶ. 1750.

*2 ಕಾಲ: ಕ್ರಿ.ಶ. 1843–1891. ಅಭಿನವ ಕಾಳಿದಾಸ ಬಿರುದು. ಶಾಕುಂತಲ, ವಿಕ್ರಮೋರ್ವಶೀಯ ರತ್ನಾವಳಿ, ಚಂಡಕೌಶಿಕ ಮುಂತಾದವುಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಷೇಕ್ಸ್‌ಪಿಯರ್‌ನ 'ಒಥೆಲೋ'ವನ್ನು 'ಶೂರಸೇನ ಚರಿತೆ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ.

'ಕನ್ನಡ ಕೋಗಿಲೆ' ಎಂಬ ಮಾಸಪತ್ರಿಕೆ ಸಹ ನಡೆಸಿದ್ದರು. ಯಕ್ಷಗಾನ ರಚನಗಾರ ಹಾಗೂ ಕವಿ 'ಪಾರ್ತಿಸುಬ್ಬ'ನ ಬಗೆಗೆ ಸಂಶೋಧನೆ ನಡೆಸಿ ಅವನ ಜೀವನ ಚರಿತ್ರೆಯನ್ನು ಬಹು ರಮ್ಯವಾಗಿ 'ಪಾರ್ತಿಸುಬ್ಬ' ಪುಸ್ತಕದಲ್ಲಿ ರೂಪಿಸಿದ್ದಾರೆ.

"ಪಾರ್ತಿಸುಬ್ಬ* ಸಹ ಒಂದು ರಾಮಾಯಣ ರಚಿಸಿದ್ದಾನಂತೆ ನಿಜವೆ ?"

ಇವನು ರಾಮಾಯಣವನ್ನು ಬರೆದಿಲ್ಲ. ರಾಮಾಯಣದ ಪ್ರಸಂಗಗಳನ್ನು ಆಯ್ದುಕೊಂಡು 'ಪುತ್ರಕಾಮೇಷ್ಟಿ', 'ಪಟ್ಟಾಭಿಷೇಕ', 'ಪಂಚವಟಿ', 'ವಾಲಿ ಸುಗ್ರೀವರ ಕಾಳಗ', 'ಚೂಡಾಮಣಿ', 'ಸೇತುಬಂಧನ', 'ಅಂಗದ ಸಂಧಾನ', 'ಕುಂಭಕರ್ಣ ಕಾಳಗ', 'ಇಂದ್ರಜಿತು ಕಾಳಗ', 'ಲವಕುಶ ಕಾಳಗ', ಎಂಬ ಹತ್ತು ಯಕ್ಷಗಾನ ಪ್ರಸಂಗಗಳನ್ನು ಬರೆದು ಆಡಿಸಿ ಖ್ಯಾತನಾಗಿದ್ದಾನೆ. ಇವಲ್ಲದೆ ಮಹಾಭಾರತದಿಂದ 'ಬಾಲಲೀಲೆ', 'ಐರಾವತ' ಪ್ರಸಂಗಗಳನ್ನು ಆರಿಸಿಕೊಂಡಿದ್ದಾನೆ. ಯಕ್ಷಗಾನ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. 'ಯಕ್ಷಗಾನಾಚಾರ್ಯ', 'ಯಕ್ಷಗಾನ ಕವಿಶ್ರೇಷ್ಠ', 'ಯಕ್ಷಗಾನ ವಾಲ್ಮೀಕಿ' ಮುಂತಾದ ಪ್ರಶಸ್ತಿಗಳು ಇವನಿಗೆ ಸಂದಿವೆ.

## (ಇ) 'ವೈದಿಕ ಪುರಾಣ' ರಚನಕಾರರು

ಪುರಾಣ ಅಂದರೆ 'ಪುರ ಅಪಿ ನವೀನಂ' ಅಂದರೆ ಹಳೆಯದಾದರೂ ಹೊಸತು. ಪುರಾಣಗಳು ಹೆಚ್ಚಾಗಿ ಸಂಭಾಷಣಾರೂಪದಲ್ಲಿವೆ. ಒಬ್ಬ ಜ್ಞಾನಿಯು ಇನ್ನೊಬ್ಬ ಜಿಜ್ಞಾಸುವಿನ ಪ್ರಶ್ನೆಗಳಿಗೆ ಉತ್ತರ ಹೇಳುವ ರೀತಿಯಲ್ಲಿವೆ. ಇದು ಉಪದೇಶಿಸದ ನೀತಿ ಇಲ್ಲ. ಇದು ಪ್ರತಿಪಾದಿಸದ ತತ್ವವಿಲ್ಲ. ಇದನ್ನು ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ವಿಶ್ವಕೋಶ ಎನ್ನಬಹುದು. ವೇದಗಳಂತೆಯೇ ಇವನ್ನೂ ಸಹ ಪವಿತ್ರ ಗ್ರಂಥಗಳೆಂದು ಪರಿಗಣಿಸಲಾಗಿದೆ. ವೇದಗಳಲ್ಲಿ ಪ್ರತಿಪಾದಿತವಾಗಿರುವ ಹಲವಾರು ವಿಷಯಗಳನ್ನು ಕಥಾರೂಪದಲ್ಲಿ ಹೇಳಿರುವುದು ಪುರಾಣಗಳ ವೈಶಿಷ್ಟ್ಯ.

ಹದಿನೆಂಟು ಮಹಾಪುರಾಣಗಳು ಅಷ್ಟೇ ಸಂಖ್ಯೆಯ ಉಪಪುರಾಣಗಳಿವೆ. ಈ ಎಲ್ಲ ಪುರಾಣಗಳ ಕರ್ತೃ ವೇದವ್ಯಾಸ ಮಹರ್ಷಿಯೇ ಎಂದು ನಂಬಿಕೆ ಇದೆ. ಈ ಪುರಾಣಗಳು ಕಾಲಕಾಲಕ್ಕೆ ಅನೇಕ ಬದಲಾವಣೆಗಳನ್ನು ಹೊಂದಿವೆ. ಪ್ರಚಲಿತ ಜಾತಿಮತಗಳ ಪ್ರಭಾವವನ್ನು ಸ್ಪಷ್ಟವಾಗಿ ಆ ಕಾಲದಲ್ಲಿ ನಿರ್ಮಿತ ಕೃತಿಗಳಲ್ಲಿ ಕಾಣಬಹುದು.

---

* ಜೀವಿತ ಕಾಲ : ಕ್ರಿ.ಶ. 1750–1810.

ರಾಮಾಯಣ, ಮಹಾಭಾರತಗಳಂತೆ ಭಾಗವತವೂ ಭಾರತೀಯರ ಪವಿತ್ರಗ್ರಂಥ. ಇದರಲ್ಲಿ 12 ಸ್ಕಂದಗಳಿವೆ. ಇದು ಕಥೆಗಳ ಭಂಡಾರ. ಭಾಗವತ ಭಕ್ತಿಪ್ರಧಾನ ಗ್ರಂಥವಾದುದರಿಂದ ಭಕ್ತಿಯ ವಿವಿಧ ಪ್ರಕಾರಗಳ ವಿವರಣೆಯನ್ನು ಇಲ್ಲಿ ಕಾಣ ಬಹುದು. ಇದೂ ಕೂಡ ವ್ಯಾಸನಿರ್ಮಿತವೆ ಎಂದು ಹೇಳಲಾಗುತ್ತದೆ. ಶುಕಮುನಿ 'ಪರೀಕ್ಷಿತ'ನೆಂಬ ರಾಜನಿಗೆ ಈ ಕಥೆಯನ್ನು ಹೇಳಿ ಆತನ ಪಾಪವನ್ನು ಪರಿಹಾರ ಮಾಡಿದನೆಂದು ಪ್ರತೀತಿ.

" 'ಪರೀಕ್ಷಿತ' ಏನು ಪಾಪ ಮಾಡಿದ್ದ ?" ಮುಕುಂದ ಆಸಕ್ತಿಯಿಂದ ಪ್ರಶ್ನಿಸಿದ.

"ಭಾಗವತ ಪುರಾಣದಲ್ಲಿ ಸಹಸ್ರಾರು ಕಥೆಗಳಿವೆ. ಅವುಗಳನ್ನೆಲ್ಲಾ ಹೇಳು ವುದಕ್ಕೆ ಹೋದರೆ ತಿಂಗಳಾದರೂ ಸಾಲದು. ಪಾಪ ಮಗು ಕೇಳುತ್ತಾ ಇದೆ ಅಂತ ಈ ಕಥೇನ ಚುಟುಕಾದಲ್ಲಿ ಹೇಳಿ ಮುಗಿಸುತ್ತೇನೆ. ಪರೀಕ್ಷಿತ ರಾಜ ಒಮ್ಮೆ ಬೇಟೆ ಆಡಲು ಕಾಡಿಗೆ ಬಂದಿರುತ್ತಾನೆ. ಒಂದು ಮರದ ಕೆಳಗೆ ಒಬ್ಬ ಋಷಿ ಘೋರವಾಗಿ ತಪಸ್ಸು ಮಾಡುತ್ತಾ ಇರುತ್ತಾನೆ. ರಾಜ ಮಾತನಾಡಿಸಿದರೂ ಆತ ಮಾತನಾಡು ವುದಿಲ್ಲ. ಧ್ಯಾನದಲ್ಲೇ ಇರುತ್ತಾನೆ. ರಾಜನಿಗೆ ಸಿಟ್ಟು ಬರುತ್ತದೆ. ಪಕ್ಕದಲ್ಲಿ ಒಂದು ಹಾವು ಸತ್ತು ಬಿದ್ದಿರುವುದು ಕಣ್ಣಿಗೆ ಬೀಳುತ್ತದೆ. ಅದನ್ನು ಕಡ್ಡಿಯಿಂದೆತ್ತಿ ಋಷಿಯ ಕೊರಳ ಸುತ್ತ ಹಾಕಿ ಹೊರಡುತ್ತಾನೆ. ಸ್ವಲ್ಪ ಹೊತ್ತಿನ ನಂತರ ಬಂದ ಋಷಿ ಕುಮಾರ ಈ ದುಷ್ಕೃತ್ಯದಿಂದ ಕೋಪಗೊಂಡು 'ಈ ಕೆಲಸ ಮಾಡಿದವನು ಏಳುದಿನ ದಲ್ಲಿ ಹಾವು ಕಡಿದು ಸಾಯಲಿ' ಎಂದು ಶಪಿಸುತ್ತಾನೆ. ಇದನ್ನು ಅರಿತ ರಾಜ ಋಷಿವರ್ಯನನ್ನು ಎಷ್ಟು ಅಂಗಲಾಚಿದರೂ ಪ್ರಯೋಜನವಾಗುವುದಿಲ್ಲ. 7 ದಿನದಲ್ಲಿ ನಿನ್ನ ಪಾಪವನ್ನೆಲ್ಲ ತೊಡೆದುಕೊಂಡು ಮುಕ್ತಿ ಪಡೆಯಲು ಯತ್ನಿಸು ಎಂದು ಉಪದೇಶಿಸಿದನು. ಅದು ಹೇಗೆ ಸಾಧ್ಯ ? ಎಂದು ರಾಜ ವ್ಯಾಕುಲಗೊಂಡಾಗ ಶುಕಮುನಿಗಳ ಬಳಿಗೆ ಹೋಗಿ 'ಭಾಗವತ' ಪುಣ್ಯಕಥೆಯನ್ನು ಕೇಳು. ನಿನ್ನ ಪಾಪ ಪರಿಹಾರ ಆಗುವುದು' ಎಂದು ಋಷಿ ಪುತ್ರ ಮರುಕಗೊಂಡು ಸೂಚಿಸಿದ. ಆತ ಹೋದ. ಕಥೆ ಕೇಳಿದ. ಪಾಪ ಪರಿಹಾರ ಮಾಡಿಕೊಂಡು ಸತ್ತು ಸ್ವರ್ಗ ಸೇರಿದ.

ಭಾಗವತದಲ್ಲಿ ಬ್ರಹ್ಮನ ಉದಯದಿಂದ ಹಿಡಿದು ವೈಕುಂಠ ವರ್ಣನೆ, ಜಯ ವಿಜಯರ ಕಥೆ, ದಕ್ಷಯಜ್ಞ, ಗಿರಿಜಾ ಕಲ್ಯಾಣ, ಕೃಷ್ಣ ಕಥೆ ಸಮಸ್ತವೂ ಇದೆ. 10ನೇ ಸ್ಕಂದವೇ ಭಾಗವತದ ಜೀವಾಳ. ಇದರಲ್ಲಿಯೇ ಕೃಷ್ಣನ ಚರಿತ್ರೆ ಬರುವುದು. ಕನ್ನಡಕ್ಕೆ ಈ ಭಾಗವತವನ್ನು ಯಾರು ಪರಿಚಯ ಮಾಡಿಸಿದರು ಎಂಬುದು ಇನ್ನೂ ಸಂದಿಗ್ಧಾವಸ್ಥೆಯಲ್ಲಿಯೇ ಇದೆ. ಈ ಭಾಗವತದ ಹಲವು ಕಥೆಗಳೂ ಕೂಡ ಕಾಲ ಕಾಲಕ್ಕೆ ಜಾತಿ ಮತ ಪಂಥಗಳ ಪ್ರಭಾವಕ್ಕೆ ಒಳಗಾಗಿ ವಿಕೃತರೂಪ ತಾಳಿವೆ. ವಿಸ್ತಾರಗೊಂಡಿವೆ. ಮೊಟಕಾಗಿವೆ. ಈ ಪುರಾಣದ ಕಥೆಯನ್ನೆ ಆಯ್ದು ಬೃಹತ್ ಕೃತಿಯನ್ನು ರಚಿಸಿ ಕನ್ನಡದ ಸಾಹಿತ್ಯ ಸಾಮ್ರಾಜ್ಯದಲ್ಲಿ . 12ನೇ ಶತಮಾನದ

ಉತ್ತರಾರ್ಧದಲ್ಲಿ ಮೆರೆದ **'ಹರಿಹರ'*** ಕವಿಯ ವಿಷಯವನ್ನು ಸ್ವಲ್ಪ ಅರಿಯೋಣ. ಹಂಪೆ ವಿರೂಪಾಕ್ಷನ ಪರಮ ಭಕ್ತ 'ಹರಿಹರ' ಭಾವುಕ, ಗಾಯಕ ಮೇಲಾಗಿ ಹುಟ್ಟು ಕವಿ. ಹಾಡು ಕಟ್ಟಿ ದೇವರನ್ನು ನೆನೆಯುವುದೇ, ಅರ್ಚನೆ ಮಾಡುವುದೇ ಆತನ ದಿನಚರಿ. 'ರಗಳೆ ಕವಿ ಹರಿಹರ' ಎಂದೇ ಇವನು ಆಗಿನ ಕಾಲದಲ್ಲಿ ಪ್ರಸಿದ್ಧನಾಗಿದ್ದರೂ ಸಾಹಿತ್ಯ ಲೋಕದಲ್ಲಿ ಇವನಿಗೆ ಅಪರಿಮಿತವಾದ ಯಶಸ್ಸು ದೊರೆತಿದೆ. ಈತನ ಚಂಪೂ ಕಾವ್ಯ 'ಗಿರಿಜಾ ಕಲ್ಯಾಣ' ಕಥಾವಿಷಯ ಪೌರಾಣಿಕವಾದರೂ ವಸ್ತು, ರಚನೆ, ವರ್ಣನೆ, ಶೈಲಿಯಲ್ಲಿ ತನ್ನದೇ ಆದ ಹೊಸತನವನ್ನು ಎತ್ತಿ ಒಡಿದಿದ್ದಾನೆ. ಮೆರಗುಶೈಲಿ, ಲಲಿತಲಾಲಿತ್ಯ, ಆಕರ್ಷಣೀಯ ವರ್ಣನೆ ಇದಕ್ಕೆ ಉದಾಹರಣೆ 'ಅರರೆ ಧುರ್ಭುಗು ಭಾಪುರೇ ಭುಗು ಭುಗು ಪ್ರಜ್ವಾಲಿ ಮಜ್ಜಯ್ಯದೇ ಲಾವಣ್ಯಂ ಲಯಮಾಯ್ತು ವಿಭ್ರಮ ವಿಳಾಸಂ ಮಾಯಮಾಯ್ತುತ್ಕಟಾ ಜೀವಂ ಬೇದುದ ಚೆಲ್ವು ಸತ್ತುದು ಸುಖಂ ಹಾಳಾಯ್ತು ಕಂದರ್ಪ ಸದ್ಭಾವಂ......'

'ಪನ್ನಗ ಭೂಷಣ ವಿಷಸಂ
ಪನ್ನನ ನಿಷ್ಠುರ ಗುಣಂಗಳುರಿಪುವುದುಚಿತಂ
ನಿನ್ನಂ ನಿನ್ನೀ ಸದ್ಗುಣ
ಮನ್ನಂ ನೆರೆದುರಿಪಲೇಕೆ ಮನ್ಮಥರಾಜಾ ॥'

ಕಾಮದಹನ ದೃಶ್ಯ ಈ ಕಾವ್ಯದ ಜೀವಾಳ. ಮನ್ಮಥನ ಸರ್ವಗುಣಗಳನ್ನು ನೆನೆನೆನೆದು ಸೈರಿಸಲಾರದೆ ಮತ್ತೆ ಮತ್ತೆ ಕಣ್ಣೀರಿಡುತ್ತಾಳೆ. ಅವಳ ಶೋಕದಲ್ಲಿ ನಮ್ಮ ಹೃದಯ

---

* ಕಾಲ: ಸುಮಾರು ಕ್ರಿ.ಶ. 1165. ಆಶ್ರಿತ ರಾಜ: ಹೊಯ್ಸಳ ವೀರನರಸಿಂಹ ಬಲ್ಲಾಳ. ಗುರು: ಹಂಪೆಯ ಮಾಯಿದೇವ. 'ರಾಘವಾಂಕ' ಹರಿಹರನ ಸೋದರಳಿಯ. ವ್ಯಾಕರಣಕ್ಕಾಗಿ ಭಾಷೆಯಲ್ಲ, ಭಾಷೆಗಾಗಿ ವ್ಯಾಕರಣ ಎಂದು ಭಾಷೆಯ ಸ್ವತಂತ್ರ ಬೆಳವಣಿಗೆಗಾಗಿ ಶ್ರಮಿಸಲು ಮುಂದಾದ. ಪ್ರಾಸದ ವಿಷಯದಲ್ಲಿ 'ಜಟಕುಳಕ್ಷಳ' ಬಗ್ಗೆ ತಲೆ ಕೆಡಿಸಿಕೊಳ್ಳಬೇಡಿರೆಂದು ಧೈರ್ಯದಿಂದ ಹೇಳಿದ ಅಂದಿನ ಕ್ರಾಂತಿಕಾರಿ ಕವಿ.

ಶತಕಗಳನ್ನು ಬರೆದ ವೀರಶೈವ ಕವಿಗಳಲ್ಲಿ ಹರಿಹರನು ಮೊದಲನೆಯವನು. ಈತ 'ಪಂಪಾ ಶತಕ', 'ರಕ್ಷಾಕವಚ' ಎಂಬ ಎರಡು ಶತಕಗಳನ್ನು ರಚಿಸಿದ್ದಾನೆ. ಭಕ್ತಿ ಜ್ಞಾನ ವೈರಾಗ್ಯಗಳನ್ನು ಹೇಳುವುದು ಶತಕಸಾಹಿತ್ಯದ ಲಕ್ಷಣ. ಹರಿಹರನು ವೈರಾಗ್ಯ ಭಕ್ತಿಗಳಿಗೆ ಇಲ್ಲಿ ಪ್ರಾಶಸ್ತ್ಯ ಕೊಟ್ಟಿದ್ದಾನೆ. ಶತಕಕ್ಕೆ ಒಂದು ಉದಾಹರಣೆ ಕೇಳಿ—

'ಪ್ರತ್ಯಕ್ಷಂ ಸತ್ತುಹೋಗುತ್ತಿದೆ.ನರನಿಕರಂ ತಾನದಂ ಕಂಡು ಕಂಡುಂ
ನಿತ್ಯತ್ವಂ ಬೆತ್ತಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ
ಪ್ಪತ್ಯಂತಂ, ಗರ್ವಿಪೆನ್ನೀ ಮನಕೆ ಪರಮ ವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ'

ತಿರುನೀಲಕಂಠ ರಗಳೆ, ಗುಂಡಯ್ಯನ ರಗಳೆಗಳಲ್ಲದೆ ಈತನು ಬಸವರಾಜ ದೇವರ ರಗಳೆ, ನಂಬಿಯಕ್ಕನ ರಗಳೆ, ಮಲುಹಣದೇವ ಚರಿತೆ, ಮುಂತಾಗಿ ನೂರಕ್ಕೂ ಹೆಚ್ಚು 'ರಗಳೆ'ಗಳನ್ನು ರಚಿಸಿದ್ದಾನೆ. ಒಂದೊಂದು ರಗಳೆಯಲ್ಲೂ ಒಬ್ಬೊಬ್ಬ ಭಕ್ತನ ಕಥೆ ಇದೆ.

ಒಂದಾಗಿ ನಮಗೂ ಪ್ರೀತಿಯ ವಸ್ತುವೊಂದು ಕಳೆದುಹೋದಂತೆ ಭಾಸವಾಗುತ್ತದೆ. ಕಣ್ಣು ತುಂಬಿ ಬರುತ್ತದೆ.

ಹರಿಹರನ ಶೈಲಿಯ ಮುಖ್ಯ ಲಕ್ಷಣ 'ಉತ್ಸಾಹ'. ಇದು ಈ ಕಾವ್ಯದಲ್ಲಿ ಭವ್ಯವಾಗಿ ನರ್ತಿಸಿದೆ. ಕವಿಯೇ ಹೇಳುವಂತೆ 'ಉತ್ಸಾಹದಿಂದ ಪೇಳ್ದ್ಗೆ ಪೇಳ್ದ ಗಿರಿಜಾ ಕಲ್ಯಾಣ ಕಾವ್ಯಂ.'

ಈ ಶೈಲಿಯಲ್ಲಿ ಸಾಧಿಸಿದ್ದ ನಿಪುಣತೆ ಪ್ರೌಢಿಮೆ ತೋರಿಸುತ್ತದೆ.

"ರಗಳೆ ಅಂದರೇನು ?" ದಿನಕರನ ಪ್ರಶ್ನೆ.

"ಇದೂ ಒಂದು ತರಹ ಪದ್ಯರಚನೆ. ಇದರಲ್ಲಿ ಕವಿಗೆ ಹೆಚ್ಚು ಸ್ವಾತಂತ್ರ್ಯವಿರುತ್ತದೆ. ಒಂದೊಂದು ಪದ್ಯಕ್ಕೂ ಇಷ್ಟೇ ಸಾಲುಗಳಿರಬೇಕೆಂಬ ನಿಯಮವಿಲ್ಲ. ಒಟ್ಟಿನಲ್ಲಿ ಇದೊಂದು ವಿಶಿಷ್ಟ ರೀತಿಯ ಹಾಡಿನ ಧಾಟಿ."

"ಯಾವ್ದಾರೂ ಒಂದು ರಗಳೆ ಹಾಡಿ ತೋರಿಸ್ತೀರಾ ? ದಿನೇಶ ಉತ್ಸಾಹದಿಂದ ಪ್ರಶ್ನಿಸಿದ.

> 'ಶಿವಭಕ್ತಿ ಸೋಪಾನದಂತೆ ತೆರೆಗಳು ಮಸಗೆ
> ಶಿವನಲ್ಲದಾರು ಇಲ್ಲೆಂಬಂತೆ ತಲೆ ನಡುಗೆ
> ಭವಿಗಳಂ ನೋಡೆನೆಂಬಂತೆ ಕಣ್ಣವೆ ಮುಗಿಯೆ'

ಇದು 'ತಿರುನೀಲಕಂಠ ರಗಳೆ' ಯೊಳಗಿನ ಒಂದು ಪದ್ಯ. 'ಗುಂಡಯ್ಯನ ರಗಳೆ' ಈತನ ಚಿಕ್ಕ ಚೊಕ್ಕ ಕಾವ್ಯ. ಹರಿಹರನ ಪ್ರತಿಭೆ ಇಲ್ಲಿ ಸ್ಫುಟವಾಗಿ ಹರಿದಿದೆ.

> 'ಕುಣಿದಾಡುವ ಗುಂಡಯ್ಯನ ನೀಕ್ಷಿಸಿ
> ಜಳಪೂರಿತ ಲೋಚನದಿಂ ನೋಡುತೆ
> ನಳನಳಿ ಪಂಗದಿ ಬಿಗಿಬಿಗಿದಪ್ಪುತೆ
> ನೆಗೆದಂ ಗಗನ ತಳಕ್ಕೆ ಮಹೇಶಂ
> ಬಗೆಮಿಗೆ ನಡೆತಂದಂ ಗಿರಿಜೇಶಂ

ಇದೇ ಶತಮಾನದಲ್ಲಿದ್ದ ಕರ್ಣಪಾರ್ಯ, ನೇಮಿಚಂದ್ರ ಮತ್ತು ಬಂಧುವರ್ಮ ಎಂಬುವರು ಹರಿವಂಶ, ಕುರುವಂಶಗಳ ಜೊತೆಯಲ್ಲಿ 22ನೇ ತೀರ್ಥಂಕರನಾದ ನೇಮಿನಾಥನ ಕಥೆಯನ್ನು ಸೇರಿಸಿ ಜೈನ ಸಂಪ್ರದಾಯಕ್ಕೆ ಹೊಂದುವಂತೆ ಕಥಾರಚನೆಯಲ್ಲಿ ಬದಲಾವಣೆಗಳನ್ನು ಮಾಡಿಕೊಂಡು ಕ್ರಮವಾಗಿ 'ಹರಿವಂಶ ಪುರಾಣ' (ನೇಮಿನಾಥ ಪುರಾಣ) 'ಹರಿವಂಶಾಭ್ಯುದಯ', ಜೈನಪುರಾಣ (ನೇಮಿನಾಥ ಪುರಾಣ) ರಚಿಸಿದ್ದಾರೆ. ಎಲ್ಲರದೂ ಚಂಪೂಶೈಲಿ. ಇವರ ಕಾವ್ಯಗಳು ಜೈನಸಂಪ್ರದಾಯಕ್ಕೆ ಹೆಚ್ಚು ಸಂಬಂಧಪಟ್ಟಿರುವುದರಿಂದ ಜೈನಸಾಹಿತ್ಯಕಾರರ ವಿಭಾಗದಲ್ಲಿ ಅವರನ್ನು ವಿವರಿಸುತ್ತೇನೆ. ಹೂಂ – ಇನ್ನು ಇದೇ ಕಾಲದ ಇನ್ನೊಬ್ಬ ಬ್ರಾಹ್ಮಣ ಕವಿಯ ಬಗ್ಗೆ ಸ್ವಲ್ಪ ಅರಿಯೋಣ. ಈತನ ಪ್ರಸಿದ್ಧ ಕಾವ್ಯ' ಜಗನ್ನಾಥ ವಿಜಯ' ಹಾಂ...! ನಾನು ಹೆಸ್ರು ಹೇಳೋ ಬದ್ಲು ಈಗ ಇಲ್ಲಿ ಇರೋರಲ್ಲಿ ಯಾರಾದ್ರೂ ಹೇಳ್ತೀರಾ

ಆ ಕವಿ ಯಾರು ಅಂತ ? ವ್ಯಾಸರಾಯರು ಸುತ್ತ ದೃಷ್ಟಿ ಹರಿಸಿದರು. ವಾಸುದೇವ ರಾಯರು ತಮಗೆ ಗೊತ್ತಿಲ್ಲವೆಂದು ತಲೆ ಅಲ್ಲಾಡಿಸಿದರು. ಹುಡುಗರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

"ಹೂಂ...ಹೇಳಿ ತಪ್ಪಾದ್ರೂ ಪರ್ವಾಗಿಲ್ಲ." ಬಾಯಿ ಬಿಡಿಸಲು ಒತ್ತಾಯ ಪಡಿಸಿದರು. ಹಲವು ನಿಮಿಷಗಳ ಮೌನ ಒಡೆದು ದಿನಕರನ ಮಿತ್ರ ರಘುನಾಥ ಮೆಲ್ಲನೆ ಉಸುರಿದ. "ರುದ್ರಭಟ್ಟ ಇರ್ಬೇಕು."

"ಭೇಷ್, ಶಭಾಷ್...ನೀನು ಖಂಡಿತಾ ಕನ್ನಡದ ಒಬ್ಬ ಶ್ರೇಷ್ಠ ವಿಮರ್ಶಕನಾಗ್ತಿ..." ಎದ್ದು ಬಂದು ವ್ಯಾಸರಾಯರು ಆ ಹುಡುಗನ ಬೆನ್ನು ತಟ್ಟಿದರು.

"ಅವನಿಗೆ ದೊಡ್ಡ ಕವಿ ಆಗ್ಬೇಕು ಅಂತ ತುಂಬಾ ಆಸೆ ಮೇಸ್ಟ್ರೆ." ದಿನಕರ ಒಡನೆಯೇ ನುಡಿದ.

"ಆಗ್ತಾನೆ, ಆಗ್ತಾನೆ. ಸ್ವಲ್ಪ ಸಾಧನೆ ಮಾಡಿದ್ರೆ ಆಗೇ ಆಗ್ತಾನೆ. ಆಸಕ್ತಿ. ದೃಢ ಮನಸ್ಸು ಎರಡೂ ಇದ್ರೆ ಯಾವ್ದು ಸಾಧಿಸೋದಕ್ಕೆ ಆಗಲ್ಲ ಹೇಳಿ. ರುದ್ರಭಟ್ಟ ಕೂಡ ವ್ಯಾಸಂಗ ಸಾಧನೆಯಿಂದ ಒಳ್ಳೆಯ ಕವಿಯಾದ. **ರುದ್ರಭಟ್ಟ*** ಸ್ಮಾರ್ತ ಬ್ರಾಹ್ಮಣ. ಹರಿ-ಹರರಲ್ಲಿ ಬೇಧವನ್ನು ಎಣಿಸಿದ ಭಾಗವತ ಸಂಪ್ರದಾಯ. ಉಪನಿಷದ್ದರ್ಶನ, ಈತನ ಕಾವ್ಯದಲ್ಲಿ ಹೆಜ್ಜೆಹೆಜ್ಜೆಗೂ ಮೂಡಿಬಂದಿವೆ. ಈತನ ಕಾವ್ಯ 'ಜಗನ್ನಾಥ ವಿಜಯ'. ಈ ಕಥೆಗೆ ಆಧಾರ ವಿಷ್ಣುಪುರಾಣದ 5-6ನೆಯ ಅಂಗಗಳಲ್ಲಿ ದೊರಕುವ 'ಕೃಷ್ಣ ಚರಿತೆ'. ಇದರಲ್ಲಿ ಕೃಷ್ಣಜನ್ಮದಿಂದ ಬಾಣಾಸುರ ಯುದ್ಧದವರೆಗೆ 18 ಆಶ್ವಾಸಗಳಲ್ಲಿ ಈ ಕಥೆ ಹರಡಿದೆ. ಈ ಕೃಷ್ಣಕಥನಕ್ಕೆ 'ಭಕ್ತಿ' ಶೃತಿ ಹಿಡಿದಿದ್ದರೆ, ಅದ್ಭುತರಸ ಮೃದಂಗ ಬಾರಿಸಿದೆ. ಭಾವೋನ್ಮಾದದಿಂದ ಕವಿ ನಿರರ್ಗಳವಾಗಿ 'ಕೃಷ್ಣಲೀಲೆ'ಯನ್ನು ಹಾಡಿದ್ದಾನೆ. ನಲಿದಿದ್ದಾನೆ. ಓದುಗರು ಕೂಡ ಈ ರಸಸ್ವಾದ ಅನುಭವಿಸುತ್ತಾರೆ. ನೋಡಿ ಹೀಗಿದೆ :—

ಇನಿಯುಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ
ದನ ರಸದಣ್ಪಿನಂತೆ ನನೆಯೋಜಿದ ಮಲ್ಲಿಗೆಯಂತೆ ಪೂರ್ಣ ಚಂ
ದ್ರನ ಸಿರಿಯಂತೆ ಬಂದೆಸೆಪ ತೆಂಕಣ ತಂಬೆಲರಂತೆ ರುದ್ರಭ
ಟ್ಟನ ಕವಿತಾರಸಂ ಮನಮಸಿರ್ಕುಟಿಗೊಳ್ಪುದು ಸಜ್ಜನರ್ಕಳಾ ॥

ತನ್ನ ಕವಿತಾರಸದ ಯೋಗ್ಯತೆ ಮೇಲೆ ಆತ ಪಟ್ಟಿರುವ ಹೆಮ್ಮೆ ನಮಗೂ ಸರಿ ಅನಿಸದೆ ಇರದು.

---

* ಕಾಲ : ಸುಮಾರು ಕ್ರಿ.ಶ. 1180 [ "ಚಂದ್ರಮೌಳಿ ಪ್ರಮುಖ ನಿಖಿಲ ವಿದ್ವಜ್ಜನಂ ಮೆಚ್ಚೆ ಪೇೞ್ದಂ" ಎಂದು ಹೇಳಿಕೊಂಡಿರುವುದರಿಂದ ಹಾಗೂ ಚಂದ್ರಮೌಳಿಯು ವೀರಬಲ್ಲಾಳ (ಕ್ರಿ.ಶ. 1173-1220)ನ ಮಂತ್ರಿಯಾಗಿದ್ದುದರಿಂದ ಆತನ ಕಾಲ ಕ್ರಿ.ಶ. 1180 ಎಂದು ನಿರ್ಧರಿಸಬಹುದು] ಈತನಿಗೆ ಕವಿರಾಜ, 'ಕೃತಿ ಶಾರದಾಭ್ರ ಚಂದ್ರಾತಪ' ಎಂಬ ಬಿರುದುಗಳಿದ್ದವು.

ಸಾಯಲು ಸಿದ್ಧವಾಗುವ ಮೊದಲು ಆಕೆ ಮಾಡುವ ಪ್ರಾರ್ಥನೆ: 'ಕಲಿ ಹರಿಶ್ಚಂದ್ರ ರಾಯಂ ಸತ್ಯವೆರಸಿ ಬಾಳಲಿ, ಮಗಂ ಮುಕ್ತನಾಗಲಿ, ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ'. ಆದರ್ಶ ನಾರಿಯ ಜ್ವಲಂತ ನಿದರ್ಶನ. ಹೀಗೆ ಈ ಹರಿಶ್ಚಂದ್ರಕಾವ್ಯ ರಚನೆ, ಪಾತ್ರ ಪೋಷಣೆ, ರಂಗಸಜ್ಜಿಕೆ, ವರ್ಣನೆ ಎಲ್ಲ ದೃಷ್ಟಿಯಿಂದಲೂ ಸರ್ವಾಂಗ ಸುಂದರವಾದ ಮಹಾನ್ ಕೃತಿಯಾಗಿ ನಿಂತಿದೆ. ಈತನ 'ವೀರೇಶ ಚರಿತೆ' ಪುಟ್ಟ ಕೃತಿಯಾದರೂ ಸತ್ವಪೂರ್ಣವಾಗಿದೆ. ಇದು 127 ಪದ್ಯ 2 ಸಂಧಿಗಳ ಚಿಕ್ಕ ಚೊಕ್ಕ ಕಾವ್ಯ. ವೀರಭದ್ರನು ದಕ್ಷನ ಯಜ್ಞವನ್ನು ನಾಶಮಾಡಿದ ಪ್ರಕರಣವೇ ಈ ಕಾವ್ಯದ ವಸ್ತು. ರೌದ್ರರಸವೇ ಈ ಕಾವ್ಯದ ಶ್ರುತಿ.

"ಹರಿಶ್ಚಂದ್ರ ಕಾವ್ಯ ಇಷ್ಟು ಪರಿಪೂರ್ಣವಾಗಿ ಬಂದಿದ್ರೂ ರಾಘವಾಂಕನ ಗುರು ಪರಿಹರ ಇದನ್ನು ಮೆಚ್ಚಲಿಲ್ವಂತೆ. ಹಲ್ಲು ಮುರಿಯುವಂತೆ ಹೊಡೆದನಂತೆ ನಿಜವೆ?" ದಿನಕರನ ಹೊಸ ಸ್ನೇಹಿತ ಗುರುರಾಜ ಎದ್ದುನಿಂತು ಪ್ರಶ್ನಿಸಿದ. ವ್ಯಾಸರಾಯರು ಮುಗುಳ್ನಕ್ಕರು.

"ಬಹುಶಃ ಇದೊಂದು ದಂತಕಥೆ. ಹರಿಹರನ ನಿಷ್ಠಾವಂತ ಶಿಷ್ಯರಿಗೆ ಈ ಕಾವ್ಯ ರಚನೆ ಅಪರಾಧವಾಗಿ ಕಂಡಿರಬೇಕು."

**ಚೌಂಡರಸ**

ಈತನ ಕಾಲ ಸುಮಾರು 1300. ಬ್ರಾಹ್ಮಣ ಕವಿ, ಅನುವಾದ ಮಾಡೇ ಹೆಸರು ಗಳಿಸಿದ ಉದ್ದಾಮ ಕವಿ. 'ನಳಚರಿತ್ರೆ' ಚಂಪೂಶೈಲಿಯ ಕೃತಿ. ಇಲ್ಲಿ ನಳದಮಯಂತಿಯರ ಕಥಾನಕವಿದೆ. ಕಳ್ಳಕಾಕರ ಸಾಹಸ ಚಿತ್ರಗಳೊಡನೆ ವಿಟ್ಠಲನ ಮಹಾತ್ಮೆಯನ್ನು ಮಧುರವಾಗಿ ಸೇರಿಸಿ ಲೌಕಿಕ ಕಥೆಗೆ ಅಧ್ಯಾತ್ಮಕ ರಸ ತುಂಬಿರುವ ಕೃತಿ. 'ಅಭಿನವ ದಶಕುಮಾರ ಚರಿತೆ' ಈ ಚಂಪೂಕಾವ್ಯ ದಂಡಿಯ 'ದಶಕುಮಾರ ಚರಿತೆ'ಯ ಅನುವಾದ, ಗದ್ಯವನ್ನು ಚಂಪೂಗೆ ಅಳವಡಿಸಿರುವುದು ಈತನ ಅಗ್ಗಳಿಕೆ. ಈ ಗ್ರಂಥದ ಗದ್ಯಾನುವಾದವನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದೆ. ಅನುವಾದಕರು ವಿದ್ವಾನ್ ಜಿ. ಆರ್. ಶ್ರೀನಿವಾಸ ಅಯ್ಯಂಗಾರ್.

ಹದಿನಾರನೆ ಶತಮಾನದಲ್ಲಿದ್ದ 'ಮೂರನೆ ಮಂಗರಸ'ನೆಂಬುವವನು 'ಹರಿವಂಶ ಪುರಾಣ' (ನೇಮಿಜಿನೇಶ ಸಂಗತಿ) ಎಂಬ ಕಾವ್ಯವನ್ನು 'ಸಾಂಗತ್ಯ'ದಲ್ಲಿ ರಚಿಸಿದ್ದಾನೆ. ಜಿನಸೇನಾಚಾರ್ಯರ 'ಹರಿವಂಶ ಪುರಾಣ' ಇದಕ್ಕೆ ಆಧಾರ. ಹರಿವಂಶ, ಕುರುವಂಶ ಗಳ ಜೊತೆಯಲ್ಲಿ ಜಿನವಂಶವನ್ನು ಸೇರಿಸಿ ಹೆಣೆದಿರುವ ಧಾರ್ಮಿಕ ಗ್ರಂಥ ಇದು. ಈ ಕೃತಿಯನ್ನು ಡಾ॥ ಎಂ. ಎಸ್. ಸುಂಕಾಪುರರವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇದೇ ಶತಮಾನದಲ್ಲಿದ್ದ ಸೋದೆ ಮಠದ ಸ್ವಾಮಿಗಳಾದ ವಾದಿರಾಜರು ತಮ್ಮ ಸಾಂಗತ್ಯ ಕೃತಿ 'ವೈಕುಂಠ ವರ್ಣನೆ'ಯಲ್ಲಿ ವಿಷ್ಣು, ವೇದವ್ಯಾಸ, ಸರಸ್ವತಿ ಮುಂತಾದವರು ಗಳನ್ನು ಸ್ತುತಿಸಿದ್ದಾರೆ. ಈ ಗ್ರಂಥವನ್ನು 'ತತ್ವಸಾರದ ಸೊಬಗಿನ ಸೋನೆ' ಎಂದೂ ಕರೆಯುವುದುಂಟು.

**ಚಾಟುವಿಠಲನಾಥ*** : ಇವನು ವಿವಿಧ ಮೂಲಗಳಿಂದ ಸಂಗ್ರಹಿಸಿದ ಭಾಗವತ ಕಥೆಗಳನ್ನು 'ಕನ್ನಡ ಭಾಗವತ' ಎಂಬ ಹೆಸರಿನಲ್ಲಿ ಸಂಗ್ರಹ ಮಾಡಿದ್ದಾನೆ."

ಮಾತು ನಿಲ್ಲಿಸಿದ ವ್ಯಾಸರಾಯರು, ಎದ್ದು ಅಡಿಗೆಮನೆಯತ್ತ ಹೋದರು.

"ಪದ್ದಮ್ಮ ದೇವ್ರ ಹತ್ರ ಸೊಡ್ಲು ಹಚ್ಚಿಡಮ್ಮ. ಒಂದೆರಡು ಕೀರ್ತನೆ ಹಾಡ್ತೀನಿ" ಎಂದು ಹೇಳಿ ಪಡಸಾಲೆಯ ಇನ್ನೊಂದು ಮೂಲೆಗೆ ಹೋಗಿ ತಮ್ಮ ಕೈಚೀಲದಿಂದ ಚಿಟಿಕೆ ತೆಗೆದು ಬೆರಳಲ್ಲಿ ಜೋಡಿಸಿಕೊಂಡು ತನ್ಮಯತೆಯಿಂದ ಹಾಡಲು ಪ್ರಾರಂಭಿಸಿದರು.

> ತಲ್ಲಣಿಸದಿರು ಕಂಡ್ಯ ತಾಳು ಮನವೆ
> ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
> ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ.

"ಈ ಭಕ್ತಿಗೀತೆ ರಚಿಸಿದ್ದು ಯಾರು ಹೇಳಿ...?" ವ್ಯಾಸರಾಯರು ಶಿಷ್ಯ ಸಮೂಹದತ್ತ ದೃಷ್ಟಿಹರಿಸಿದರು.

"ಪುರಂದರದಾಸರು." ದಿನಕರ ನುಡಿದ,

"ಅಲ್ಲ. ಕನಕದಾಸರು..." ಅಡಿಗೆ ಮನೆಯಿಂದಲೇ ನುಡಿದರು ಪದ್ದಮ್ಮ. "ನೋಡಿದ್ರಾ ಈಗಿನ ಕಾಲ್ದ ವಿದ್ಯೆಗೂ ಹಿಂದಿನ ಕಾಲ್ದ ಜ್ಞಾನಕ್ಕೂ ಇರೋ ವ್ಯತ್ಯಾಸಾನ? ಲತಾ ಮಂಗೇಶ್ಕರ್, ಮನ್ನಾಡೆ, ಉಷಾ ಅಯ್ಯರ್, ರಫಿ ಹಾಡಿದ್ರೆ ನಿಮ್ಗೆ ಚಿತ್ರಕಥೆ, ಡೈರಕ್ಟರು ನಟ-ನಟಿಯರು ಎಲ್ಲಾ ಜ್ಞಾಪಕಕ್ಕೆ ಬರುತ್ತೆ. ನಮ್ಮ ಸಂಸ್ಕೃತಿ ಉದ್ಧಾರಕರು, ಕವಿಶ್ರೇಷ್ಠರ ಹಾಡುಗಳು ಅಂದ್ರೆ ತಾತ್ಸಾರ, ಬೇಸರ..." ಮುಸಿ ಮುಸಿ ನಕ್ಕರು ವ್ಯಾಸರಾಯರು.

"ಕಾಗಿನೆಲೆ ಅಂತ ಕೇಳ್ದಕೂಡ್ಲೆ ಈ ಗೀತೆ ಕನಕದಾಸರ್ದು ಅಂತ ನಾನು ಗುರ್ತಿಸ್ಬಿಟ್ಟೆ." ಗೆದ್ದ ಗೆಲುವಿತ್ತು ಪದ್ದಮ್ಮನವರ ಮಾತಿನಲ್ಲಿ.

ವ್ಯಾಸರಾಯರು ಮಾತನ್ನು ಮುಂದುವರಿಸಿದರು. ಕನಕದಾಸರು† ಇದ್ದಕಾಲ ನಿಖರವಾಗಿ ತಿಳಿದು ಬಂದಿಲ್ಲ. ಹದಿನಾರನೆ ಶತಮಾನದ ಮಧ್ಯದಲ್ಲಿ ಇವರು ಜೀವಿಸಿದ್ದರು ಎಂದು ಊಹಿಸಲಾಗಿದೆ. ಚಿಕ್ಕಂದಿನಲ್ಲೆ ತಂದೆಯನ್ನು ಕಳೆದುಕೊಂಡ ಕನಕ

* ಈತನ ಕಾಲ ಕ್ರಿ.ಶ. ಸುಮಾರು 1530. 'ನಿತ್ಯಾತ್ಮಶುಕಯೋಗಿ' ಈತನ ಕಾವ್ಯನಾಮ. ಈ ಗ್ರಂಥದಲ್ಲಿ 12,000ಕ್ಕೂ ಹೆಚ್ಚು ಭಾಮಿನಿ ಷಟ್ಪದಿಯ ಪದ್ಯಗಳಿವೆ. ಈ ಗ್ರಂಥವನ್ನು ಕೆ. ವೆಂಕಟರಾಮಪ್ಪನವರು ಆರು ಸಂಪುಟಗಳಲ್ಲಿ ಸಂಪಾದಿಸಿ ಹೊರತಂದಿದ್ದಾರೆ. ತ. ಸು. ಶಾಮರಾಯರ 'ವಚನ ಭಾಗವತ' 'ಕನ್ನಡ ಭಾಗವತ'ದ ಅನುವಾದಿತ ಕೃತಿ.

† ಜೀವಿತ ಕಾಲ ಸು. ಕ್ರಿ.ಶ. 1550. ಕನಕದಾಸರು, ಪುರಂದರದಾಸರು ಇಬ್ಬರೂ ವ್ಯಾಸರಾಯರ ಶಿಷ್ಯರು ಎಂದು ಪ್ರತೀತಿ. ಹುಟ್ಟಿದ ಊರು ಧಾರವಾಡ ಜಿಲ್ಲೆಯ 'ಬಾಡ'. ತಂದೆಯ ಹೆಸರು ಬೀರೇಗೌಡ. ತಾಯಿಯ ಹೆಸರು ಬಚ್ಚಮ್ಮ.

ದಾಸ ಕೆಲದಿನ ವಿಜಯನಗರದ ಸೇನೆಯಲ್ಲಿ ಕೆಲಸ ಮಾಡಿದ. ಒಮ್ಮೆ ಯುದ್ಧದಲ್ಲಿ ಗಾಯಗೊಂಡು ಭಗವಂತನ ದಯೆಯಿಂದ ಗುಣ ಹೊಂದಿದ ಮೇಲೆ ವೈರಾಗ್ಯ ತಳೆದು ವ್ಯಾಸರಾಯರ ಶಿಷ್ಯವೃತ್ತಿ ಅವಲಂಬಿಸಿ ವೇದಾಂತ ಅಭ್ಯಸಿಸಿದ. ಕೆಲದಿನದಲ್ಲೆ ಪ್ರೌಢಿಮೆ ಸಂಪಾದಿಸಿದ. ಅನಂತರ ಹರಿದಾಸನಾದ. ಈತನ ದೈವಭಕ್ತಿ, ಜ್ಞಾನದ ಬಗ್ಗೆ ಅನೇಕ ಕಥೆಗಳಿವೆ." "ಬಾಳೆಹಣ್ಣಿನ ಕಥೆ ನಂಗೊತ್ತು." ದಿನೇಶ ಕೂಗಿದ ಉತ್ಸಾಹದಿಂದ. "ದೇವಸ್ಥಾನಕ್ಕೆ ದೇವ್ರನ್ನ ಕರ್ಸಿದ್ದು ನಂಗೊತ್ತು" ಇನ್ನೊಬ್ಬ ಹುಡುಗ ನುಡಿದ. "ಕನಕನ ಕಿಂಡಿ ಕಥೆ ನಂಗೊತ್ತು" ನಗುತ್ತ ರಾಯರು ನುಡಿದರು.

"ಇವರು ಸಾವಿರಾರು ಕೀರ್ತನೆ, ಗೀತೆಗಳನ್ನು ಬರೆದದ್ದಲ್ಲದೆ. 'ಹರಿಭಕ್ತಿಸಾರ' 'ರಾಮಧಾನ್ಯ ಚರಿತ್ರೆ' 'ನಳಚರಿತ್ರೆ' ಮೋಹನ ತರಂಗಿಣಿ' ಎಂಬ ಉದ್ಗ್ರಂಥ ಗಳನ್ನು ರಚಿಸಿದ್ದಾರೆ. 'ಹರಿಭಕ್ತಿಸಾರ' ಭಾಮಿನಿ ಷಟ್ಪದಿಯಲ್ಲಿದೆ. 110 ಪದ್ಯಗಳಲ್ಲಿ 'ಹರಿನಾಮಸ್ತವ ಪ್ರಾರ್ಥನೆಗಳನ್ನು ಒಳಗೊಂಡಿದೆ. 'ಮೋಹನ ತರಂಗಿಣಿ' ಸಾಹಿತ್ಯ ರೂಪದ ಗ್ರಂಥ. ಇದು ಭಾರತ, ಭಾಗವತದ ಕಾಮದಹನ, ಉಷಾ-ಅನಿರುದ್ಧ ಪ್ರಣಯ, ಕೃಷ್ಣ ಬಾಣಾಸುರರ ಯುದ್ಧ ಮುಂತಾದ ಕಥಾನಕಗಳನ್ನು ಒಳಗೊಂಡಿ ರುವ ಧರ್ಮಗ್ರಂಥ. ಕಾವ್ಯಮಾರ್ಗದ 18 ವರ್ಣನೆಗಳೂ ಇದರಲ್ಲಿ ಬಂದಿವೆ. 'ಕೇಳ್ವರಿಗಿದು ತನಿಬೆಲ್ಲದಚ್ಚು' 'ಜೇನುತುಪ್ಪದ ತೊರೆ' ಆಗಿದೆ. 'ರಾಮಧಾನ್ಯಚರಿತ್ರೆ' ಒಂದು ವಿಶಿಷ್ಟ ಕೃತಿ. ದೇವರು ಬಡವರ ಬಂಧು, ಭಕ್ತರ ಪಕ್ಷಪಾತಿ ಎಂಬುದನ್ನು ಸೂಚಿಸಲು ರಾಗಿ ಮತ್ತು ಭತ್ತದ ಮಧ್ಯೆ ವಾದ ನಡೆಸಿ ಅದರಲ್ಲಿ ರಾಗಿ ಗೆದ್ದಿತೆಂದೂ ಅದಕ್ಕೆ ರಾಮನು 'ರಾಘವ' ಎಂಬ ತನ್ನ ಹೆಸರನಿತ್ತನೆಂದೂ ಕನಕದಾಸರು ಕಲ್ಪಿಸಿ ದ್ದಾರೆ. 'ನಳಚರಿತ್ರೆ'ಯಲ್ಲಿ ನಳ ದಮಯಂತಿಯರ ಕಥೆ ಬಹು ಸ್ವಾರಸ್ಯರೀತಿಯಲ್ಲಿ ರೂಪಿತವಾಗಿದೆ. 'ದೈವವ ನೆನೆವ ಭಕ್ತರಿಗುಂಟೆ ಭಯವೆಲೆ ನೃಪತಿ' ಈ ಸತ್ಯವನ್ನು ನಳದಮಯಂತಿಯರ ಜೀವನದಲ್ಲಿ ತೋರಿಸಿದ್ದಾರೆ. ಅವರ ನುಡಿಮುತ್ತುಗಳು ಬಹು ಮೋಹಕ. ಅನುಭವದ ರಸಪಾಕ, ವೇದಾಂತದ ಸಿಹಿಗುಳಿಗೆ. ಎಲ್ಲವೂ ನಿತ್ಯನೂತನ. 'ಏನೂ ಇಲ್ಲದ ಎರಡು ದಿನದ ಸಂಸಾರ, ಡಿಂಬ ಇಲ್ಲದ ಜೀವ, ಕುಲ ಕುಲ ಕುಲವೆಂದು ಬಡಿದಾಡದಿರಿ, ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿ ಗಳ ಕೂಡೆ ಜಗಳ ಲೇಸು, ಹಸುವಿನ ಮಾಂಸದೊಳುದಿಸಿದ ಕ್ಷೀರವ ವಸುಧೆಯೊಳಗೆ ಭೂಸುರರುಣಲಿಲ್ಲವೆ ?' ಎಷ್ಟು ರಮ್ಯವಾಗಿದೆ ಕಲ್ಪನೆ! ಅವರ ಹಾಡುಗಳಲ್ಲಿ ಪರಿಪಕ್ವದ ಪ್ರಪಂಚಾನುಭವ, ಉತ್ತಮ ವಿವೇಕ ಕಂಡುಬರುತ್ತವೆ.

ವಿಜಯನಗರ ನಾಶವಾದ ಮೇಲೆ ದೇಶದಲ್ಲಿ ಅಶಾಂತಿ ನೆಲೆಸಿ ಸಣ್ಣಪುಟ್ಟ ಪಾಳೆಯಗಾರರು ಹೆಚ್ಚಿದುದರಿಂದಲೂ, ರಾಜ್ಯದಲ್ಲಿ ಉಂಟಾದ ಕ್ಷೋಭೆಯಿಂದಲೂ ಈ ದೇಶದಲ್ಲಿ ಆಗ ಸಾಹಿತ್ಯ ರಚನೆ ಹೆಚ್ಚು ಆದಂತಿಲ್ಲ. ಮತ್ತೆ ಸಾಹಿತ್ಯಬೆಳೆ ಹುಲುಸಾಗಿ ಬೆಳೆದು ಚಿನ್ನದ ತೆನೆ ಬಿಟ್ಟಿದ್ದು ಮೈಸೂರ ಅರಸರ ಆಳ್ವಿಕೆಯಲ್ಲಿ.

**ಚಿಕ್ಕದೇವರಾಜ*** ಸ್ವಯಂ ಕವಿಯಾಗಿದ್ದುದಲ್ಲದೆ ಕವಿಪೋಷಕನಾಗಿದ್ದ. ಈತ ಭಾಗವತ ಮತ್ತು ಭಾರತಕ್ಕೆ ಕನ್ನಡ ಟೀಕೆ ಬರೆದಿದ್ದಾನೆ. ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಕವಯಿತ್ರಿ ಹೊನ್ನಮ್ಮ, ತಿಮ್ಮಕವಿ, ಮಲ್ಲರಸ ಈತನ ಆಶ್ರಯದಲ್ಲೆ ಇದ್ದ ಕವಿಶ್ರೇಷ್ಠರುಗಳು.

**ತಿರುಮಲಾರ್ಯ** : † ಈತ ಶ್ರೀ ವೈಷ್ಣವ ಕವಿ. 'ಕರ್ಣ ವೃತ್ತಾಂತ ಕಥೆ' ಸಾಂಗತ್ಯ ಶೈಲಿಯ ಕೃತಿ. ಇದರಲ್ಲಿ ಮಹಾಭಾರತ ಶಾಂತಿಪರ್ವದ ಆದಿಭಾಗದಲ್ಲಿ ಹೇಳಿರುವ ಕರ್ಣ ವೃತ್ತಾಂತವು ನಿರೂಪಿತವಾಗಿದೆ. ತಮ್ಮನಾದ ಸಿಂಗರಾರ್ಯನು ಕನ್ನಡಕ್ಕೆ ಮೊದಲನೆಯದಾಗಿ 'ಮಿತ್ರವಿಂದ ಗೋವಿಂದ' ಎಂಬ ಗೀತನಾಟಕವನ್ನು ನೀಡಿದ್ದಾನೆ. ಸಂಸ್ಕೃತ ಕವಿ ಶ್ರೀಹರ್ಷನ 'ರತ್ನಾವಳಿ' ನಾಟಕವನ್ನು ಅನುಸರಿಸಿ ಶ್ರೀಕೃಷ್ಣನು ಮಿತ್ರವಿಂದೆಯನ್ನು ಮದುವೆಯಾದ ಕಥೆಯನ್ನು ನಾಟಕರೂಪದಲ್ಲಿ ಬರೆದಿದ್ದಾನೆ. ಕನ್ನಡದ ಮೊದಲ ನಾಟಕವೆಂದು ಇದಕ್ಕೆ ಪ್ರಾಶಸ್ತ್ಯ ದೊರೆತಿದೆ.

**ಚಿಕುಪಾಧ್ಯಾಯ** : ‡ ಈತ ರಚಿಸಿರುವಷ್ಟು ಗ್ರಂಥಗಳನ್ನು ಕನ್ನಡದಲ್ಲಿ ಇನ್ಯಾವ ಕವಿಯೂ ರಚಿಸಿಲ್ಲ. ಸಂಸ್ಕೃತದಲ್ಲಿ ಪ್ರಸಿದ್ಧವಾಗಿದ್ದ 'ವಿಷ್ಣು ಪುರಾಣ' ವನ್ನು ರಾಜನ ಆಜ್ಞೆಯ ಮೇರೆಗೆ ಸುಲಲಿತ ಕನ್ನಡದಲ್ಲಿ ಅನುವಾದ ಮಾಡಿದ್ದಾನೆ. 'ರುಕ್ಮಾಂಗದ ಚರಿತ್ರೆ' 'ಸಾತ್ವಿಕ ಬ್ರಹ್ಮವಿದ್ಯಾವಿಲಾಸ' 'ಅರ್ಥಪಂಚಕ' ಇವು ಚಂಪೂ

---

* ಈತನ ಕಾಲ ಕ್ರಿ. ಶ. 1672–1704. 'ಚಿಕ್ಕದೇವರಾಜ ಬಿನ್ನಪ' ಎಂಬ ಹಳಗನ್ನಡ ಗ್ರಂಥ ರಚಿಸಿದ್ದಾರೆ. 'ಗೀತಗೋಪಾಲ' ಜಯದೇವನ 'ಗೀತಗೋವಿಂದ' ಮಾದರಿಯ ಗ್ರಂಥ. ಇದರಲ್ಲಿ ಭಗವಂತನ ಗುಣ ವರ್ಣಿತವಾಗಿದೆ.

† ಈತನ ಕಾಲ ಕ್ರಿ.ಶ. 1645–1706. ಈತನ ಕೃತಿಗಳು : ಅಪ್ರತಿಮವೀರ ಚರಿತ, ಚಿಕದೇವರಾಜ ವಿಜಯ, ಚಿಕದೇವರಾಜ ವಂಶಾವಳಿ ಇತ್ಯಾದಿ. 'ಚಿಕದೇವರಾಜ ವಿಜಯ' ಈ ಯುಗದ ಅಪರೂಪ ಶೈಲಿ 'ಚಂಪೂ'ವಿನಲ್ಲಿದೆ.

‡ ಈತನ ಕಾಲ ಸು. ಕ್ರಿ.ಶ. 1690. ಚಿಕ್ಕದೇವರಾಯನ ಆಸ್ಥಾನ ಕವಿ ಹಾಗೂ ಮಂತ್ರಿಯಾಗಿದ್ದನು. ಈತನ ನಿಜವಾದ ಹೆಸರು ಲಕ್ಷ್ಮೀಪತಿ. ಈತನ ಕೃತಿಸಂಖ್ಯೆ 30 ಎಂದು ಕವಿಚರಿತಕಾರರ ಅಭಿಪ್ರಾಯ. ಈತನು ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲೂ ಪಾಂಡಿತ್ಯ ಹೊಂದಿದ್ದನು. 'ಶೃಂಗಾರ ಶತಕ', 'ರಂಗಧಾಮ ಸ್ತುತಿ', 'ಪಶ್ಚಿಮರಂಗ ಮಹಾತ್ಮ್ಯ' ಸಾಂಗತ್ಯ ಗ್ರಂಥಗಳು. ಹೀಗೆ ಸಾಹಿತ್ಯದ ಗಾನಸುಧೆಯನ್ನು ವಿವಿಧ ರಾಗಗಳಲ್ಲಿ ಸುಶ್ರಾವ್ಯವಾಗಿ ಹಾಡಿದ ಕವಿ. ಈತನ ಇತರ ಕೃತಿಗಳು : ಕಮಲಾಚಲ ಮಹಾತ್ಮ್ಯ, ಹಸ್ತಗಿರಿಯ ಮಹಾತ್ಮೆ, ಅಕ್ಷರ ಮಾಲಿಕಾ ಸಾಂಗತ್ಯ, ಅಮರಶತಕ, ಕಾಮಾಂಧ ಟೀಕೆ, ಚಿಕ್ಕದೇವರಾಜ ಶೃಂಗಾರ ಪದಗಳು, ಚಿತ್ರಶತಕ ಸಾಂಗತ್ಯ, ಪಶ್ಚಿಮರಂಗ ಸಾಂಗತ್ಯ, ವೇದಾಮೃತ ಟೀಕೆ, ಶುಕಸಪ್ತತಿ ಶೇಷಧರ್ಮ. ಈತ ಶೃಂಗಾರದ ಹಾಡುಗಳನ್ನೂ ಸಹ ರಚಿಸಿದ್ದಾನೆ. 'ದಿವ್ಯಸೂರಿ ಚರಿತೆ'ಯಲ್ಲಿ ರಾಮಾನುಜಾಚಾರ್ಯರನ್ನೊಳಗೊಂಡಂತೆ ಹನ್ನೆರಡು ಆಳ್ವಾರರುಗಳ ಚರಿತ್ರೆ ಬಂದಿದೆ. ತೆರಕಣಾಂಬಿ ಈತನ ಜನ್ಮಸ್ಥಳವೆಂದೂ ತಿಳಿದುಬಂದಿದೆ.

ಕಾವ್ಯಗಳು. 'ವೆಂಕಟಗಿರಿ ಮಹಾತ್ಮ್ಯ' 'ಶ್ರೀರಂಗಮಹಾತ್ಮ್ಯ' 'ಯದುಗಿರಿ ಮಹಾತ್ಮ್ಯ' ಗದ್ಯಗ್ರಂಥಗಳು.

17ನೆ ಶತಮಾನಕ್ಕೆ ಸೇರಿದ ಇನ್ನೊಬ್ಬ ಪ್ರಸಿದ್ಧ ಕವಿ **ನರಹರಿ.** ಈತ 'ಪ್ರಹ್ಲಾದ ಚರಿತ್ರೆ'ಯನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾನೆ.

**ಬಸವಪ್ಪಶಾಸ್ತ್ರಿ :** ಹತ್ತನೆಯ ಚಾಮರಾಜ ಒಡೆಯರ ಕಾಲದಲ್ಲಿದ್ದ ಪ್ರಸಿದ್ಧ ವಿದ್ವಾಂಸ. ಕವಿ ಹಾಗೂ ನಾಟಕಕಾರ. ಈತ 'ಸಾವಿತ್ರಿ ಚರಿತೆ' ಎಂಬ ಗ್ರಂಥ ವನ್ನು ಷಟ್ಪದಿಯಲ್ಲೂ, 'ದಮಯಂತಿ ಸ್ವಯಂವರ' ಎಂಬ ಕಾವ್ಯವನ್ನು ಚಂಪೂ ವಿನಲ್ಲೂ, 'ಭರ್ತೃಹರಿ ಶತಕ'ವನ್ನು ಕಂದವೃತ್ತದಲ್ಲೂ ನೀಡಿದ್ದಾನೆ.

**ಇತರ ವೈದಿಕ ಸಾಹಿತ್ಯಕಾರರು :**

ಇತ್ತೀಚೆಗೆ ಅಂದರೆ 20ನೇ ಶತಮಾನದಲ್ಲಿ ಭಾಗವತ–ಪುರಾಣಗಳನ್ನು ಆಧರಿಸಿ ಬಹಳಷ್ಟು ಜನ ಬರೆದಿದ್ದಾರೆ. ಕವಿ ಹಾಗೂ ಕೃತಿಗಳ ಹೆಸರುಗಳು ಹೀಗಿವೆ." ಎಂದು ನುಡಿದು ತಮ್ಮ ಕೈಚೀಲದಿಂದ ಪುಸ್ತಕವೊಂದನ್ನು ಹೊರತೆಗೆದು ಓದಲು ಪ್ರಾರಂಭಿಸಿದರು.

"ವೀರಕೇಸರಿ ಸೀತಾರಾಮಶಾಸ್ತ್ರಿಗಳ 'ಶ್ರೀ ಮದ್ಭಾಗವತ ಮಹಾಪುರಾಣ', ಪಂಡಿತ ದೇವಶಿಖಾಮಣಿ ಅಳಸಿಂಗಾಚಾರ್ಯರ 'ಶ್ರೀ ಮದ್ಭಾಗವತ', ನಾಗೇಶ ರಂಗೋ ಕುಲಕರ್ಣಿಯವರ "ಶ್ರೀಮದ್ ದೇವಿ ಭಾಗವತ, ದೇವುಡುರವರು ಮಕ್ಕಳಿಗೆ ಬರೆದಿರುವ 'ಬಾಲ ಭಾಗವತ', ಮಠಿಯವರ 'ಶ್ರೀಮಹಾಭಾಗವತ', ಬಾ. ನಾ. ಜೇರೆಯವರು ಅನುವಾದಿಸಿರುವ ಭಾಮಿನಿ ಷಟ್ಪದಿಯ 'ಶ್ರೀ ವೇದವ್ಯಾಸ ಪ್ರಣೀತ ಶ್ರೀಮದ್ಭಾಗವತ ಮಹಾಪುರಾಣ, (ಮೂಲ ಶ್ಲೋಕ ಸಹಿತ)' ವೇದಮೂರ್ತಿ ರಂಗಾಚಾರ್ಯ ಜೋಶಿ (ತೇರದಾಳ) ರವರ 'ಶ್ರೀಮದ್ಭಾಗವತ ಮಹಾಪುರಾಣ', ಚಿ. ಶ್ರೀ ಕುಲಕರ್ಣಿಯವರ 'ಶ್ರೀಮತ್ ಭಾಗವತ ಕಥಾಮೃತ', ವಿದ್ವಾನ್ ನುಗ್ಗ ಹಳ್ಳಿ ವೆಂಕಟನಾಥಾಚಾರ್ಯ ಮತ್ತು ಪಂಡಿತರತ್ನ ಕೊತ್ತಮಂಗಲ ವರದಾಚಾರ್ಯರ 'ಶ್ರೀಮದ್ಭಾಗವತ' (ಕನ್ನಡ ಅನುವಾದ ಸಹಿತ), ಪಂಡರಿನಾಥಾಚಾರ್ಯ ಗಲಗಲಿ ಯವರು ಕನ್ನಡಿಸಿರುವ ವಿಷ್ಣು ಪುರಾಣ, ವರಾಹ ಪುರಾಣ, ವಾಮನ ಪುರಾಣ, ಶಿವಮಹಾ ಪುರಾಣ, ಮತ್ಸ್ಯಪುರಾಣ, ಪ್ರೊ॥ ಬಿ. ಭೀಮಸೇನರಾವ್‌ರವರ ವ್ಯಾಸ ಮಹರ್ಷಿ ಪ್ರಣೀತ ಉಪಪುರಾಣಗಳಲ್ಲಿ ಅಗ್ರಸ್ಥಾನ ಪಡೆದ ಶ್ರೀ ಗಣೇಶ ಪುರಾಣದ ಅನುವಾದ 'ಶ್ರೀ ಗಣೇಶ ಗೀತಾ', ಶ್ರೀನಿವಾಸ ಉಡುಪರ 'ಜನಪ್ರಿಯ ಭಾಗವತ', ವೈ. ಶೇ. ಅನಂತಪದ್ಮನಾಭರಾವ್‌ರವರ 'ಶ್ರೀಕೃಷ್ಣ ಚರಿತಾಮೃತ', ಕೃ. ಶ್ರೀ. ಕುಲಕರ್ಣಿಯವರ 'ಏಕನಾಥೀ ಭಾಗವತ', ಸುಬೋಧ ರಾಮರಾಯರ 'ಶ್ರೀಮದ್ ಭಾಗವತ ಕಥಾಸಾರ', ಬನ್ನಂಜೆ ಗೋವಿಂದಾಚಾರ್ಯರ 12 ಸ್ಕಂಧಗಳ 'ಸಂಗ್ರಹ ಭಾಗವತ', ಬೆಂಗಳೂರು ರಾಮಶೇಷ ಶಾಸ್ತ್ರಿಗಳ 'ಭಾಗವತ ಮಹಾ

ಪುರಾಣ', ಚಂದ್ರಶೇಖರಶಾಸ್ತ್ರಿಗಳ 'ದೇವಿ ಭಾಗವತ', ಭಾಗವತವನ್ನು ಸಂಕ್ಷಿಪ್ತ ವಾಗಿ ನಿರೂಪಿಸಿರುವ ವಿಷ್ಣುತೀರ್ಥರ 'ಭಾಗವತ ಸಾರೋದ್ಧಾರ' ಈ ದಿಸೆಯಲ್ಲಿ ಬಂದಿರತಕ್ಕ ಮುಖ್ಯ ಕೃತಿಗಳು. ಮೈಸೂರಿನ ಅನಂತಾಚಾರ್ಯರು ರಚಿಸಿರುವ 'ಯಾದವ - ರಾಘವ - ಪಾಂಡವೀಯ' ಒಂದು ಸ್ವಾರಸ್ಯಕರ ಕಾವ್ಯ. ಇದರಲ್ಲಿ ರಾಮಾಯಣ, ಮಹಾಭಾರತ, ಭಾಗವತದ ಕಥೆಗಳು ಏಕಕಾಲದಲ್ಲಿ ನಿರೂಪಿತ ವಾಗಿವೆ.

ಮೈಸೂರು ಅರಸು ಮನೆತನದವರು ಪುರಾಣ ಕಾವ್ಯಗಳನ್ನು ಹೊರತರಲು ಬಹಳ ಶ್ರಮಿಸಿದ್ದಾರೆ. 'ದೇವಿ ಮಹಾತ್ಮೆ' ಶ್ರೀ ಜಯಚಾಮರಾಜೇಂದ್ರ ಗ್ರಂಥ ಮಾಲೆಯವರು ಪ್ರಕಟಿಸಿದ ಅದ್ಭುತ ಗ್ರಂಥ. ಇದರಲ್ಲಿ ಮೂಲ ಸಂಸ್ಕೃತ ಶ್ಲೋಕ ದೊಡನೆ ಅನುವಾದ, ಸರಳ ಟಿಪ್ಪಣಿ. ತಾತ್ಪರ್ಯ ಒದಗಿಸಿದ್ದಾರೆ. ಈ ಅನುವಾದಕ್ಕೆ ವಿದ್ವಾಂಸರುಗಳಾದ ಪಾಟಣಕರ ಚಂದ್ರಶೇಖರಶಾಸ್ತ್ರಿ, ಶ್ರೀ ರಂಗರಾರ್ಯ. ಡಿ. ವಾಸು ದೇವಾಚಾರ್ಯ, ಎಂ. ಆರ್. ವರದಾಚಾರ್ಯ, ಯಜ್ಞೇಶ್ವರ ಶಾಸ್ತ್ರಿಗಳು ಮುಂತಾದ ವರುಗಳು ನೆರವು ನೀಡಿದ್ದಾರೆ, ಬೆನಗಲ್ ರಾಮರಾಯರು, ಪಾನ್ಯಂ ಸುಂದರಶಾಸ್ತ್ರಿ ಗಳೂ ಸೇರಿ ಸಂಪಾದಿಸಿರುವ 'ಪುರಾಣ ನಾಮ ಚೂಡಾಮಣಿ' ಒಂದು ಅದ್ವಿತೀಯ ಗ್ರಂಥ.

"ವೇದಗಳು, ಗೀತೆ ಕನ್ನಡಕ್ಕೆ ಅನುವಾದ ಆಗಿಲ್ವೆ?" ರಾಯರೇ ಮತ್ತೆ ಪ್ರಶ್ನಿಸಿದರು.

"ವೇದಗಳ ಪ್ರಕಟಣೆ ಬಗ್ಗೆ ಮೈಸೂರು ಅರಸರ ಶ್ರೀ ಜಯಚಾಮರಾಜೇಂದ್ರ 'ವೇದರತ್ನಮಾಲಿ'ಯವರು ಇನ್ನೊಂದು ಅಮೋಘ ಕಾರ್ಯ ಮಾಡಿದ್ದಾರೆ. ಋಗ್ವೇದ ಸಂಹಿತೆಯನ್ನು ಸಾಯಣ ಭಾಷ್ಯದೊಂದಿಗೆ 25 ಸಂಪುಟಗಳಲ್ಲಿ ಹೊರತಂದಿದ್ದಾರೆ. ಮುಖ್ಯ ಅನುವಾದಕರು ಎಚ್. ಪಿ. ವೆಂಕಟರಾಯರು. - ವೇದ ವಾಙ್ಮಯದ ಸ್ಥೂಲಪರಿಚಯವನ್ನು ವಿದ್ವಾನ್ ಎನ್. ಎಸ್. ಅನಂತರಂಗಾಚಾರ್‌ರವರು 'ವೈದಿಕ ಸಾಹಿತ್ಯ ಚರಿತ್ರೆ'ಯಲ್ಲಿ ಮಾಡಿಕೊಟ್ಟಿದ್ದಾರೆ. 'ಬ್ರಹ್ಮಸೂತ್ರ'ದಲ್ಲಿ ಎಂ. ಓ. ಎಸ್. ಅಯ್ಯಂಗಾರ್‌ರವರು ಪ್ರತಿ ಪದಾರ್ಥ ಮತ್ತು ಭಾಷ್ಯದ ಮೂಲಕ ಅದನ್ನು ಕನ್ನಡ ಓದುಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

17ನೇ ಶತಮಾನದ 'ಸಾಗರಸ'ನೆಂಬ ಕವಿ 'ಭಗವದ್ಗೀತೆ'ಯ ಪ್ರತಿಶ್ಲೋಕದ ಅರ್ಥವನ್ನೂ ಒಂದೊಂದು ಷಟ್ಪದಿಯಲ್ಲಿ ವಿವರಿಸಿದ್ದಾನೆ.

ಉಪನಿಷತ್ತುಗಳನ್ನು ಮೊದಲು ಕನ್ನಡಕ್ಕೆ ಪರಿಚಯ ಮಾಡಿಸಿದವರು **ರಂಗನಾಥ ರಾಮಚಂದ್ರ ದಿವಾಕರರು.** ಡಿ. ವಿ. ಜಿ. ಅವರು ಈಶೋಪನಿಷತ್ತನ್ನು ಅನುವಾದಿಸಿದ್ದಾರೆ. ಅನುವಾದ ಮತ್ತು ವ್ಯಾಖ್ಯೆಗಳು ಬಹಳ ಸುಂದರವಾಗಿವೆ. ಕನ್ನಡದ ಗೀತಾ ಸಾಹಿತ್ಯ ಬೆಳೆದಷ್ಟು ಇತರ ಧಾರ್ಮಿಕ ಸಾಹಿತ್ಯ ಬೆಳೆದಿಲ್ಲ. ಗೀತೆಯ

ಅನುವಾದಗಳನ್ನು ಹೋಳವನ ಹಳ್ಳಿ ಶೇಷಾಚಾರ್ಯರು. ಆಲೂರು ವೆಂಕಟರಾಯರು, ದಿವಾಕರ ರಂಗನಾಥರಾಯರು, ಡಿ. ವಿ. ಜಿ. ಮುಂತಾದವರುಗಳು ಮಾಡಿದ್ದಾರೆ. ಗೀತೆಗೆ ಪದ್ಯಾನುವಾದ ಬಂದಿರುವುದು ಕನ್ನಡದ ವೈಶಿಷ್ಟ್ಯ. **ಎಂ. ಶ್ರೀನಿವಾಸ ರಾಯರ** 'ಕರ್ನಾಟಕ ಭಗವದ್ಗೀತೆ' ಭಾಮಿನಿ ಷಟ್ಪದಿಯಲ್ಲಿದೆ. ಕುಸುಮ ಷಟ್ಪದಿ ಯಲ್ಲಿ ಬಳ್ಳಾರಿಯ ಎಂ. ಎಸ್. ಸುಬ್ಬಣ್ಣನವರು 'ಗೀತೆ'ಯನ್ನು ಹೊರತಂದಿದ್ದಾರೆ. ಸರಳವಾಗಿ ಜನಸಾಮಾನ್ಯರಿಗೆ ಅರ್ಥವಾಗುವಂತೆ ತಾಳಿಕೋಟೆಯ ನಾರಾಯಣರಾವ್ ಎಂಬುವವರು ಗೀತೆಯನ್ನು ಚೌಪದಿ ರೂಪದಲ್ಲಿ ಅನುವಾದ ಮಾಡಿದ್ದಾರೆ. ಮೈಸೂರು ರಾಮಕೃಷ್ಣಾಶ್ರಮದ ಸ್ವಾಮಿ ಆದಿದೇವಾನಂದರು ಗೀತೆಯನ್ನು ಮೂಲ, ಪ್ರತಿ ಪದಾರ್ಥ, ತಾತ್ಪರ್ಯ, ಟಿಪ್ಪಣಿ ಸಹಿತ 'ಶ್ರೀಮದ್ಭಗವದ್ಗೀತಾ' ಎಂಬ ಪುಸ್ತಕದಲ್ಲಿ ಹೊರತಂದಿದ್ದಾರೆ. ಗು. ಭೀ. ಜೋಶಿಯವರ 'ಗೀತಾವಲೋಕನ' ಗೀತಾಗ್ರಂಥದ ವಿವರಣೆ ನೀಡುತ್ತದೆ. ಡಿ.ವಿ.ಜಿ., ಆದ್ಯರಂಗಾಚಾರ್ಯ, ಆಲೂರು ವೆಂಕಟರಾಯರು ಮುಂತಾದವರುಗಳು ಗೀತೆ ಕುರಿತು ದೀರ್ಘ ವಿವೇಚನೆ ನಡೆಸಿದ್ದಾರೆ. ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯರು 'ಗೀತೆ'ಗೆ ವೀರಶೈವ ಪರವಾದ ಭಾಷ್ಯ ಬರೆದಿದ್ದಾರೆ."

"ನಾಳೆ ಇವೆಲ್ಲಾ ಹುಡುಕ್ಕೊಂಡು ತಂದೇಬಿಡ್ತೀನಿ ಮೇಷ್ಟ್ರೆ..." ರಾಯರು ನುಡಿದಾಗ ದಿನಕರ ನಗಾಡಿದ. "ಇನ್ನು ರಿಟೈರ್ಡ್ ಆಗ್ಲು 8–10 ವರ್ಷ ಇದೆ ಆಲ್ವೆ ಅಣ್ಣಾ...ಈಗ್ಲಿಂದ್ಲೇ ರಿಹರ್ಸಲ್ ಶುರು ಮಾಡ್ತೀರಾ?" ಮಾತು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು.

**"ಬೆಳ್ಳಾವೆ ನರಹರಿಶಾಸ್ತ್ರಿ, ನಂಜನಗೂಡು ಶ್ರೀಕಂಠಶಾಸ್ತ್ರಿ** ನಾಲ್ವಡಿ ಕೃಷ್ಣ ರಾಯರ ಆಸ್ಥಾನ ಕವಿಗಳಾಗಿದ್ರಲ್ವೆ..." ದಿನಕರನ ಸ್ನೇಹಿತ ರಘುನಾಥ ಪ್ರಶ್ನಿಸಿದ.

"ಹೌದು. ನಾಲ್ವಡಿ ಕೃಷ್ಣರಾಯರ* ಕಾಲ ಸಾಹಿತ್ಯದ 'ಸ್ವರ್ಣಯುಗ'. ನರಹರಿಶಾಸ್ತ್ರಿ, ಶ್ರೀಕಂಠಶಾಸ್ತ್ರಿ, ಶೇಷರಾಮಾಯಣದ ಕರ್ತೃ 'ಕವಿತಿಲಕ' ಸೋಸಲೆ ಅಯ್ಯಾಶಾಸ್ತ್ರಿ ಆಸ್ಥಾನದಲ್ಲಿದ್ದ ಪ್ರತಿಭಾನ್ವಿತ ಪಂಡಿತರುಗಳು. ಬೆಳ್ಳಾವೆ ನರಹರಿಶಾಸ್ತ್ರಿ ಗಳ ನಾಟಕಗಳಾದ 'ಕೃಷ್ಣಲೀಲಾ' ಶ್ರೀ ಕೃಷ್ಣ ಪಾರಿಜಾತ' 'ರುಕ್ಮಿಣಿ ಸ್ವಯಂವರ' 'ಕಬೀರ್ ದಾಸ್' ಬಹಳ ಜನಪ್ರಿಯತೆ ಗಳಿಸಿದ್ದುವು. ಶ್ರೀಕಂಠಶಾಸ್ತ್ರಿಗಳ ಪಾಂಡಿತ್ಯ, ಕವಿತಾ ಶಕ್ತಿ ಬೆಳ್ಳಾವೆಯವರನ್ನು ಮೀರಿಸುತ್ತದೆ. ಅದಲ್ಲದೆ ಇವರ ಕೃತಿಗಳಲ್ಲಿ ಆಧುನಿಕತೆಯ ಇಂಪು, ಕಂಪು ಸಹ ಕಾಣಬರುತ್ತದೆ. 'ಯದುರತ್ನಾನ್ವಯ ಚರಿತ್ರೆ' ಚಂಪೂಶೈಲಿಯ ಉದ್ಗ್ರಂಥ. ಇದಲ್ಲದೆ ನಾಟಕ ಕಾದಂಬರಿಗಳನ್ನು ಸಹ ರಚಿಸಿದ್ದಾರೆ. ಇದೇ ವಿಭಾಗದಲ್ಲಿ ಅಪೂರ್ವ ಕೊಡುಗೆ ನೀಡಿರುವ ಈ ಶತಮಾನದ ಕವಿವರ್ಯರು ಪು.ತಿ.ನ. 'ಗಣೇಶ ದರ್ಶನ' ಭಾಗವತ ಸಂಪ್ರದಾಯಕ್ಕೆ ಸಂದಿರುವ ವಿಶಿಷ್ಟ ಕಾಣಿಕೆ.

---

* ಕಾಲ: ಕ್ರಿ.ಶ. 1884–1940.

"ಹೂಂ...ಅನ್ನ ಆರಿಹೋಗ್ತಾ ಇದೆ. ಇನ್ನೂ ಮಾತಾಡ್ತಾ ಕೂತಿರ್ತೀರೋ ಊಟಕ್ಕೆ ಬರ್ತೀರೊ..." ಸೌಟನ್ನು ಕೈಯಲ್ಲಿ ಹಿಡಿದು ಪದ್ಮಮ್ಮ ಬಾಗಿಲಲ್ಲಿ ನಿಂತು ಕರೆದರು.

"ಹುಂ...ಏಳಿ...ಏಳಿ ಸಾಕು ಇವತ್ಗೆ...ದಿನಕರ ನಿನ್ನ ಸ್ನೇಹಿತರನ್ನು ಊಟಕ್ಕೆ ಕಳ್ಸಪ್ಪ ನಾಳೆ ಬೆಳಿಗ್ಗೆ ಬರ್ಲಿ." ರಾಯರು ನುಡಿದೊಡನೆ ಹುಡುಗರು ಮೇಲೆದ್ದು 'ನಮಸ್ಕಾರ ಸಾರ್' ಹೇಳಿ ಹೊರಗೆ ಓಡಿದರು. ದಿನಕರ, ದಿನೇಶ ಒಳಗೆ ಬಂದರು.

## (ಈ) 'ಜೈನ ಪುರಾಣ' ರಚನಕಾರರು

ಇದುವರೆಗೆ ಭಾರತ, ರಾಮಾಯಣ, ಭಾಗವತ ಹಾಗೂ ವೈದಿಕ ಪುರಾಣ ಗಳನ್ನು ಅವಲಂಬಿಸಿ ಬರೆದ ಕವಿಗಳ ಪರಿಚಯ ಸ್ವಲ್ಪದರಲ್ಲಿ ಮಾಡಿಕೊಟ್ಟಿದ್ದೇನೆ. ಇನ್ನೂ ನೂರಾರುಜನ ಕವಿಗಳಿದ್ದಾರೆ. ಇವರುಗಳು ತಮ್ಮ ಗ್ರಂಥರಚನೆಗೆ ವಿಷಯ ವನ್ನು ಬೇರೆ ಬೇರೆ ಮೂಲಗಳಿಂದ ಆರಿಸಿದ್ದಾರೆ, ಕಲ್ಪಿಸಿದ್ದಾರೆ. ಪ್ರಚಾರದಲ್ಲಿದ್ದ ಮತದ ಪ್ರಭಾವಕ್ಕೆ ಒಳಗಾಗಿ ಕೆಲವು ಕವಿಗಳು, ಧರ್ಮಪ್ರಚಾರವನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಕೃತಿ ರಚಿಸಿದ್ದಾರೆ. ಇನ್ನು ಕೆಲವರು ಆಶ್ರಿತರಾಜನ ತೃಪ್ತಿಗಾಗಿ ಕಾವ್ಯ ಹೆಣೆದಿದ್ದಾರೆ. ಪ್ರತಿಭಾನ್ವಿತ ಕೆಲ ಪಂಡಿತರು ಶಾಸ್ತ್ರಗ್ರಂಥ ಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಪುಷ್ಟಿಗೊಳಿಸಿದ್ದಾರೆ.

ಈಗ ಮೊದಲು ಧಾರ್ಮಿಕ ಗ್ರಂಥ ವಿಭಾಗದಡಿಯಲ್ಲಿ ಜೈನ ಪುರಾಣಗಳನ್ನು ಆಧರಿಸಿ ಬರೆದ ಕವಿಗಳನ್ನು ಪರಿಚಯ ಮಾಡಿಕೊಳ್ಳೋಣ.

ಜೈನಕವಿಗಳು ಅಂದೊಡನೆ ಜ್ಞಾಪಕಕ್ಕೆ ಬರುವ ಮೊದಲ ಹೆಸರು ಪಂಪ. ಅನಂತರ ಪೊನ್ನ, ರನ್ನರು. ಪಂಪ, ರನ್ನರ ವಿಷಯವಾಗಿ ನಾನಾಗಲೇ ಹೇಳಿದ್ದೇನೆ. ಈಗ ಪೊನ್ನನ ಬಗ್ಗೆ ಹೇಳುತ್ತೇನೆ.

**ಪೊನ್ನ :***

ಪೊನ್ನನು ರತ್ನತ್ರಯರಲ್ಲಿ ಒಬ್ಬ. ಈತನಿಗೆ ಕನ್ನಡ ಹಾಗೂ ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವಿತ್ತು. 'ಉಭಯಕವಿ ಚಕ್ರವರ್ತಿ' ಈತನ ಬಿರುದು. ತನ್ನನ್ನು 'ಕುರುಳ್ಗಳ ಸವಣ' ಎಂದು ಕರೆದುಕೊಂಡಿರುವುದರಿಂದ ಈತ ಸನ್ಯಾಸಿಯಂತಿದ್ದ

* ಕಾಲ : ಕ್ರಿ.ಶ. 950. ರಾಷ್ಟ್ರಕೂಟ ಚಕ್ರವರ್ತಿ 3ನೇ ಕೃಷ್ಣನ ಆಸ್ಥಾನಕವಿ. ಜಿನಾಕ್ಷರಮಾಲೆ 39 ಕಂದಪದ್ಯಗಳುಳ್ಳ ಜಿನಸ್ತೋತ್ರ ಗ್ರಂಥ.

ನೆಂದು ಊಹಿಸಲಾಗಿದೆ. ಈತ 4 ಕಾವ್ಯಗಳನ್ನು ರಚಿಸಿದ್ದಾನೆಂದು ಹೇಳಲಾದರೂ ಲಭ್ಯವಿರುವುದು ಎರಡು ಮಾತ್ರ. (1) ಶಾಂತಿಪುರಾಣ (2) ಜಿನಾಕ್ಷರಮಾಲೆ. ಭುವನೈಕ ರಾಮಾಭ್ಯುದಯ ಮತ್ತು ಗತಪ್ರತ್ಯಾಗತ ಲಭ್ಯವಿಲ್ಲ. 'ಶಾಂತಿಪುರಾಣ' 12 ಆಶ್ವಾಸಗಳುಳ್ಳ ರಮ್ಯ ಚಂಪೂಕಾವ್ಯ. ಹದಿನಾರನೆ ತೀರ್ಥಂಕರ ಶಾಂತಿನಾಥನ ಕಥೆಯೇ ಕಥಾವಸ್ತು. ಆತನ ಕಲ್ಪನಾಶಕ್ತಿ ಅಗಾಧವಾದದ್ದು. ಕಾವ್ಯದ ಶೈಲಿ ಬಹು ರಮ್ಯ. ಉದಾಹರಣೆಗೆ ಭತ್ತದ ಗದ್ದೆಯ ವರ್ಣನೆ ಕೇಳಿ—

'ಅಮಿತ ಗುಣ ವರ್ಣನ ಪ್ರ
ಕ್ರಮಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನರೋ
ತ್ತಮರಂತೆ ಭರದಿನೆಱಗಿದು
ವಮೇಯ ಪರಿಪಕ್ವ ಗಂಧಶಾಲಿ ವನಂಗಳ್.'

ಪೊನ್ನನಿಗೆ ಪೊನ್ನಿಗ, ಪೊನ್ನಮಯ್ಯ, ಸವಣ ಎಂಬ ಹೆಸರುಗಳೂ ಇದ್ದುವು. ಶಾಂತಿ ಪುರಾಣದಲ್ಲಿ ಕವಿ ತಾನು ಕನ್ನಡ ಕವಿ ವೃಷಭ, ಅಸಗ ಹಾಗೂ ಸಂಸ್ಕೃತ ಕವಿ ಸಾಮ್ರಾಟ ಕಾಳಿದಾಸನಿಗಿಂತಲೂ ನೂರ್ಮಡಿ ಮಿಗಿಲಾದವನೆಂದು ಹೇಳಿಕೊಂಡಿ ದ್ದಾನೆ. ಇದು ಉತ್ಪ್ರೇಕ್ಷೆಯಾದರೂ ಆತನಿಗೆ ತನ್ನ ಕಾವ್ಯದ ಮೇಲಿದ್ದ ಹೆಮ್ಮೆ ತಿಳಿಸುತ್ತದೆ.

**ಚಾವುಂಡರಾಯ*:** ಪಂಪನ ಪರಂಪರೆಯಲ್ಲಿ ನಡೆದ ಕವಿ. ಈತನ ಕಾಲ ಹತ್ತನೆಯ ಶತಮಾನದ ಉತ್ತರಾರ್ಧ. ಗಂಗ ದೊರೆ ರಾಚಮಲ್ಲನ ಮಂತ್ರಿ ಹಾಗೂ ಸೇನಾಪತಿಯಾಗಿದ್ದ. ಅನೇಕ ಯುದ್ಧಗಳಲ್ಲಿ ತನ್ನ ಶೌರ್ಯ ಪ್ರದರ್ಶನ ಮಾಡಿ 'ವೀರಮಾರ್ತಾಂಡದೇವ'ನೆಂಬ ಬಿರುದನ್ನು ಗಳಿಸಿದ್ದನು. ತಾನು ಗಳಿಸಿದ ವಿಜಯದ ನೆನಪಿಗಾಗಿ ಅಪಾರ ಧನ ವ್ಯಯ ಮಾಡಿ ಶ್ರವಣಬೆಳಗೊಳದ ಬೆಟ್ಟದ ಮೇಲೆ ಗೊಮ್ಮಟೇಶ್ವರನ ಮೂರ್ತಿಯನ್ನು ನಿಲ್ಲಿಸಿದನು. 'ಚಾವುಂಡರಾಯ ಪುರಾಣ' ಈತ ಬರೆದ ಉದ್ಗ್ರಂಥ. 'ವಡ್ಡಾರಾಧನೆ'† ದೊರೆಯುವ ಮೊದಲು ಕನ್ನಡದ ಮೊದಲ ಗದ್ಯಗ್ರಂಥವೆಂದು ಪ್ರಸಿದ್ಧವಾಗಿತ್ತು, ಅದು ದೊರೆತ ಮೇಲೂ ಇದರ ವಿಶಿಷ್ಟತೆಗೆ ಕುಂದೇನೂ ಇಲ್ಲ. ಹಳಗನ್ನಡ ಗದ್ಯಶೈಲಿಯಲ್ಲಿ ತನ್ನದೇ ಆದ ವೈಶಿಷ್ಟ್ಯ ಒಳಗೊಂಡಿದೆ. ಸಂಸ್ಕೃತ, ಹಳಗನ್ನಡ ಎರಡೂ ಹಿತಮಿತವಾಗಿ ಸಮ್ಮಿಳನಗೊಂಡು ಚಂಪೂಗ್ರಂಥದ ಅಲಂಕಾರ ಆಡಂಬರವಿಲ್ಲದೆ ಗದ್ಯ ಸುಲಲಿತವಾಗಿ ಹರಿದಿದೆ. ಚಾವುಂಡರಾಯ ಈ ಗ್ರಂಥವನ್ನು 'ತ್ರಿಷಷ್ಟಿ ಲಕ್ಷಣ ಮಹಾಪುರಾಣ'ವೆಂದು ಕರೆದಿ

---

* ಕಾಲ : ಸು. ಕ್ರಿ.ಶ. 978.

† ಶಿವಕೊಟ್ಯಾಚಾರ್ಯರಿಂದ ರಚಿಸಲ್ಪಟ್ಟ ಪ್ರಾಚೀನ ಗದ್ಯಗ್ರಂಥ. ಪಂಪಪೂರ್ವ ಯುಗದ ಅಪೂರ್ವ ಕೃತಿ. ಇದರಲ್ಲಿ 19 ಜೈನಕಥೆಗಳಿವೆ. ಕಥೆಗಳು ಸಾಂಪ್ರದಾಯಿಕ ಶೈಲಿಯಲ್ಲಿದ್ದರೂ ನೀತಿ, ವೈರಾಗ್ಯ ಬೋಧಿಸುತ್ತವೆ. ಈ ಕವಿಯ ಕಾಲ ಸು. ಕ್ರಿ.ಶ. 920.

ದ್ದಾನೆ. ಇದರಲ್ಲಿ ತೀರ್ಥಂಕರರುಗಳ ಚರಿತೆ ಇದೆ. ಈ ಗ್ರಂಥದಲ್ಲಿ ಪಂಪನ ಆದಿ ಪುರಾಣದ ಪ್ರಭಾವ ಕೆಲವೆಡೆ ಕಾಣಿಸಿದರೂ ಜಿನಸೇನ ಮತ್ತು ಗುಣಭದ್ರರ ಸಂಸ್ಕೃತ ಮಹಾಪುರಾಣದ ಕಥೆಯನ್ನೇ ಅವಲಂಬಿಸಿ ಗದ್ಯದಲ್ಲಿ ಈ ಗ್ರಂಥ ನಿರೂಪಿಸಿದ್ದಾನೆ. ಮಹಾಪುರಾಣವು ಜೈನಸಂಪ್ರದಾಯದ ಪವಿತ್ರ ಗ್ರಂಥವಾದ್ದುದರಿಂದ ಚಾವುಂಡ ರಾಯನೂ ತನ್ನ ನಿರೂಪಣೆಯಲ್ಲಿ ಹೆಚ್ಚು ಸ್ವಾತಂತ್ರ್ಯವಹಿಸದೆ ಬಹು ನಿಷ್ಠೆ ಯಿಂದಲೇ ಧರ್ಮದೊಡನೆ ಚರಿತೆಯನ್ನು ಸೇರಿಸಿ ಗ್ರಂಥ ರಚಿಸಿದ್ದಾನೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚಾವುಂಡರಾಯ ಗದ್ಯಕಾರನೆಂದು ಹೆಸರುಗಳಿಸಿದ್ದಾನೆ.

**ಎರಡನೆಯ ನಾಗವರ್ಮ**[*1] **:** ಹನ್ನೊಂದನೆ ಶತಮಾನದಲ್ಲಿದ್ದ ಪ್ರಸಿದ್ಧ ಜೈನ ಕವಿ. ಈತನು 'ವರ್ಧಮಾನ ಪುರಾಣ' ಎಂಬ ಸಾಂಪ್ರದಾಯಿಕ ಜೈನಪುರಾಣ ರಚಿಸಿದ್ದಾನೆ. ಇದರಲ್ಲಿ 24ನೇ ತೀರ್ಥಂಕರನಾದ ಮಹಾವೀರನ ಕಥೆ ಇದೆ. ಗುಣಭದ್ರನ 'ಉತ್ತರ ಪುರಾಣ', ಅಸಗನ 'ವರ್ಧಮಾನ ಪುರಾಣ' ಈ ಗ್ರಂಥಕ್ಕೆ ಆಕರಗಳು. ಛಂದಶ್ಶಾಸ್ತ್ರ ಪ್ರವೀಣನಾದ ಈತ ಹೆಚ್ಚು ಶಾಸ್ತ್ರಗ್ರಂಥಗಳನ್ನೇ ರಚಿಸಿರು ವುದರಿಂದ ಈತನ ವಿವರಗಳನ್ನು ಬೇರೆಡೆ ವಿವರಿಸುತ್ತೇನೆ.

**ನಾಗಚಂದ್ರ**[*2] **:** ಹನ್ನೆರಡನೆಯ ಶತಮಾನದ ಆಚಾರ್ಯ ಕವಿ ಎಂದು ಹೊಗಳಿ ಕೆಗೆ ಪಾತ್ರನಾಗಿದ್ದ ಈತ 'ಮಲ್ಲಿನಾಥ ಪುರಾಣ' ಎಂಬ ಸ್ವತಂತ್ರ ಕೃತಿ ರಚಿಸಿದ್ದಾನೆ. ಈತನ ವಿಷಯವನ್ನು 'ರಾಮಾಯಣ' ವಿಭಾಗದಲ್ಲಿ ಆಗಲೇ ಹೇಳಿದ್ದೇನೆ.

'ಆದಿಪುರಾಣ' ರಚಿಸಿದ ಪಂಪ[*3]ನ ಬಗ್ಗೆ, 'ಅಜಿತ ಪುರಾಣ' ರಚಿಸಿದ ರನ್ನ[*4]ನ ಬಗ್ಗೆ ಹಿಂದೆಯೇ ಹೇಳಿದ್ದೇನೆ.

**ಶಾಂತಿನಾಥ :**[*5] ಈತನ ಪ್ರಸಿದ್ಧ ಕೃತಿ 'ಸುಕುಮಾರ ಚರಿತ'. ಇದರಲ್ಲಿ ಸಾವಿರ ಪದ್ಯಗಳಿವೆ. ಸಂಸ್ಕೃತದ ಹರಿಷೇಣನ ಬೃಹತ್ ಕಥಾಕೋಶ ಹಾಗೂ ಶಿವ-ಕೊಟ್ಯಾಚಾರ್ಯನ 'ವಡ್ಡಾರಾಧನೆ' ಇದಕ್ಕೆ ಆಕರವಾಗಿದೆ ಎನ್ನಲಾಗುತ್ತದೆ. ಕಾವ್ಯದ ಶೈಲಿ ಚಂಪೂ. ಕಾವ್ಯದಲ್ಲಿ 12 ಆಶ್ವಾಸಗಳಿವೆ.

**ನಯಸೇನ :**[*] ಹನ್ನೆರಡನೆ ಶತಮಾನದ ಮೊದಲ ಭಾಗದಲ್ಲಿ ಬಾಳಿ ಮೆರೆದ ಕವಿ. ಈತನು ಬರೆದ 'ಧರ್ಮಾಮೃತ' ಜೈನಪುರಾಣವೆಂದು ಪ್ರಸಿದ್ಧವಾಗಿದೆ.

---

*1 ಕಾಲ ಸು. ಕ್ರಿ.ಶ. 1042. ತಂದೆ ದಾಮೋದರ, ತಾಯಿ ವೀರಕಬ್ಬೆ. ಈತ ರಚಿಸಿರುವ ಇತರ ಕೃತಿಗಳು ಕಾವ್ಯಾವಲೋಕನ, ಛಂದೋವಿಚಿತಿ, ಅಭಿಧಾನವಸ್ತುಕೋಶ, ಕರ್ಣಾಟಕ ಭಾಷಾ ಭೂಷಣ (ಛಂದೋವಿಚಿತಿ ಇನ್ನೂ ಲಭ್ಯವಿಲ್ಲ)

*2 ಪುಟ 26 ನೋಡಿ. *3 ಪುಟ 10 ನೋಡಿ. *4 ಪುಟ 13 ನೋಡಿ.

*5 ಕಾಲ ಸು. ಕ್ರಿ.ಶ. 1068. ಬನವಸೆ ನಾಡಿನ ಬಳ್ಳಿಗಾವೆಗೆ ಸೇರಿದ ಜೈನಕವಿ. ರಾಜಹಂಸ, ಚತುರಕವಿ ಮುಂತಾದ ಬಿರುದುಗಳಿದ್ದುವು.

*6 ಸು. ಕ್ರಿ.ಶ. 1112. ಈತನ ಕೃತಿ 'ಧರ್ಮಾಮೃತ'ದಲ್ಲಿ ಬರುವ ಪದ್ಯಗಳಿಂದ ಈತನು ಮುಳುಗುಂದದವನೆಂದೂ ಕ್ರಿ.ಶ. 1112ರಲ್ಲಿ ಈ ಕೃತಿ ರಚನೆಯಾಯಿತೆಂದೂ ತಿಳಿದುಬರುತ್ತದೆ.

ತೀರ್ಥಂಕರರು ಹಾಗೂ ಮಹಾರಾಜರುಗಳ ಮೇಲೆ ಗ್ರಂಥ ರಚಿಸುತ್ತಿದ್ದ ಸಂಪ್ರದಾಯ ವನ್ನು ಬಿಟ್ಟು ಮೊದಲ ಬಾರಿ ಜನತೆಗಾಗಿ ಹದಿನಾಲ್ಕು ಮಹಾಪುರುಷರ ಕಥೆಗಳನ್ನು 14 ಆಶ್ವಾಸಗಳಲ್ಲಿ ನಿರೂಪಿಸಿದ್ದಾನೆ. ಒಂದೊಂದು ಆಶ್ವಾಸದಲ್ಲಿ ಒಂದೊಂದು ಕಥೆ ಇದೆ. ಕಥೆಗಳ ನಿರೂಪಣೆಯಲ್ಲಿ ಜಾನಪದ ಕಥೆಗಾರನ ಕಥನಕೌಶಲ, ವಿಡಂಬನ, ಜೀವನಪ್ರಜ್ಞೆ ಎದ್ದು ಕಾಣುತ್ತಿದ್ದರೂ ಇವೆಲ್ಲವುಗಳಲ್ಲಿ ಪ್ರವಹಿಸುತ್ತಿರು ವುದು ಧರ್ಮಾಮೃತ. ಈ ಗ್ರಂಥದಲ್ಲಿ 'ಜಿನಮತದೊಳೆನಿತು ಸಾರಮದನಿತುಂ ಲೇಸಾಗಿ ತೋರ್ಪುದು' ಎಂದು ಕವಿ ಹೇಳಿದ್ದಾನೆ. ಅನಾವಶ್ಯಕವಾಗಿ ಕನ್ನಡ ಬರಹ ದಲ್ಲಿ ಸಂಸ್ಕೃತ ತುಂಬಬೇಡಿರೆಂದು ಅಂದಿನ ಚಂಪೂ ಯುಗದಲ್ಲೇ ಧೈರ್ಯವಾಗಿ ನುಡಿದು ಹಾಗೇ ನಡೆದುಕೊಂಡ ಕ್ರಾಂತಿಕಾರ ಕವಿ. ಸುಲಭ ಲಲಿತ ಕನ್ನಡ ಶೈಲಿಗೆ ಒಂದು ಉದಾಹರಣೆ :

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾಜಿದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥

**ಕರ್ಣಪಾರ್ಯ**[*1] : ಈತನ ಕಾವ್ಯ 'ನೇಮಿನಾಥ ಪುರಾಣ'. ಇದರಲ್ಲಿ 22ನೇ ತೀರ್ಥಂಕರನ ಚರಿತ್ರೆಯ ಜೊತೆಯಲ್ಲಿ ಬಲದೇವ, ವಸುದೇವ, ಕೃಷ್ಣ, ಬಲರಾಮರ ಕಥೆ ಬರುತ್ತದೆ. ಕಾವ್ಯದಲ್ಲಿ 14 ಆಶ್ವಾಸಗಳಿವೆ. ಶಾಂತಿರಸವೇ ಕಾವ್ಯದ ಪ್ರಧಾನ ರಸ. ಪೋಷಕರಾಜ ಲಕ್ಷ್ಮೀಧರನನ್ನು ವಿಷ್ಣುವಿಗೆ ಹೋಲಿಸಿ ಬಹಳ ಸ್ತುತಿಸಿದ್ದಾನೆ. ಗ್ರಂಥ ಚಂಪೂವಿನಲ್ಲಿದೆ. ಈತನ ಶೈಲಿಗೆ ಒಂದು ಉದಾ ಹರಣೆ :

ನೆಱೆದಕ್ಷೋಹಿಣಿ ಪನ್ನೊಂ
ದಱಿಕೆಯ ತುಕ್ಕಿರಥರ್ ಮಹಾರಥರೆಲ್ಲಂ
ತಱಿಸಂದೊಡವರೆ ಕೌರವ
ನಿಱಿ ಪೆಸನುಱುವಗೆಯೆ ಸುತ್ತುಮಿರದೆಟ್ಟಿಂದು ॥

**ನೇಮಿಚಂದ್ರ**[*2] : ಹನ್ನೆರಡನೆ ಶತಮಾನದ ಉತ್ತರಾರ್ಧದಲ್ಲಿ ಮೆರೆದ ಕವಿ. ಈತನೂ ಜೈನಸಂಪ್ರದಾಯಕ್ಕನುಗುಣವಾಗಿ ಒಂದು ಧಾರ್ಮಿಕ ಗ್ರಂಥ, ಇನ್ನೊಂದು

---

*1 ಕಾಲ ಕ್ರಿ.ಶ. 1140. ಕೊಲ್ಲಾಪುರ ಪ್ರಾಂತದವನೆಂದು ಊಹಿಸಲಾಗಿದೆ. ಆಶ್ರಿತ ರಾಜ್ಯ ಶಿಲಾಹಾರ ವಿಜಯಾದಿತ್ಯನ ಮಂತ್ರಿ ಲಕ್ಷ್ಮೀಧರ. ಈತನಿಗೆ ಭವ್ಯಜನವನ ಮಾರ್ತಾಂಡ, ಸಮ್ಯಕ್ತ್ವ ರತ್ನಾಕರ ಇತ್ಯಾದಿ ಬಿರುದುಗಳಿದ್ದುವು.

*2 ಕಾಲ : ಸುಮಾರು ಕ್ರಿ.ಶ. 1190 (ವೀರಬಲ್ಲಾಳನ ಕಾಲ ಕ್ರಿ.ಶ. 1173–1220). ಇವನಿಗೆ ಕವಿರಾಜ ಕುಂಜರ, ಸಾಹಿತ್ಯ ವಿದ್ಯಾಧರ, ಸುಕವಿಕಂಠಾಭರಣ, ಚತುರ್ಭಾಷಾ ಕವಿಚಕ್ರವರ್ತಿ

ಲೌಕಿಕ ಗ್ರಂಥ ರಚಿಸಿದ್ದಾನೆ. ಧಾರ್ಮಿಕ ಗ್ರಂಥ 'ನೇಮಿನಾಥ ಪುರಾಣ'. ಇದಕ್ಕೆ 'ಅರ್ಧನೇಮಿ' ಎಂದೂ ಹೆಸರು.

"ಅರ್ಧನೇಮಿ' ಬಾಳ ವಿಚಿತ್ರವಾಗಿದೆಯಲ್ಲ ಮೇಸ್ಟ್ರೆ ?" ಅದೇತಾನೇ ಒಳಗೆ ಬಂದಿದ್ದ ವಾಸುದೇವರಾಯರು ಪ್ರಶ್ನಿಸಿದರು.

'ನೇಮಿನಾಥ ಪುರಾಣ' ಅಪೂರ್ಣ ಕಾವ್ಯ. ಇದರ ಮುಕ್ತಾಯ ಬರೆಯುವ ಮುನ್ನವೇ ಬಹುಶಃ ಕವಿ ಗತಿಸಿದ್ದಿರಬಹುದು. ಆದರೂ ಇದು ಬೃಹತ್ ಕಾವ್ಯ, ಚಂಪೂ ಶೈಲಿಯಲ್ಲಿದೆ. ಇದರಲ್ಲಿ 22ನೆಯ ತೀರ್ಥಂಕರನಾದ ನೇಮಿನಾಥನ ಚರಿತೆ ಇದೆ. ತ್ರಿವೇಣಿ ಸಂಗಮದಂತೆ ಇದರಲ್ಲಿ ಜಿನವಂಶ, ಹರಿವಂಶ, ಕುರುವಂಶಗಳು ಒಂದೆಡೆ ಸೇರುತ್ತವೆ. ಜಿನನ ಪೂರ್ವಭವಾವಳಿ ಮತ್ತು ಪಂಚಕಲ್ಯಾಣ ವಿವರಣೆ ಗಳೊಂದಿಗೆ ಭಾರತ, ಭಾಗವತದ ಕಥೆಗಳು ವಿಚಿತ್ರ ರೀತಿಯಲ್ಲಿ ಮಿಳಿತಗೊಂಡಿವೆ. 'ಹರಿಹರ ಪುರಾಣ'ವೆಂದೂ ಹೆಸರಾಗಿರುವ ಈ ಗ್ರಂಥವನ್ನು 'ಜೈನ ಭಾಗವತ' ಎನ್ನಬಹುದು. 'ಜಿನಕಥೆಯೊಳ್ ಸಂಧಿಸಿ ವಸುದೇವಾಚ್ಯುತ ಕಂದರ್ಪರ ಕಥೆ ಗಳನಿತುಮಂ ವಿರಚಿಸುವೆಂ" ಎಂದಿದ್ದಾನೆ ಕವಿ. ನೇಮಿನಾಥನ ಚಾರಿತ್ರ್ಯ ನಿರೂಪಣೆ ಜೈನಮತಸ್ಥಾಪನೆಗೆ ಅನುಕೂಲವಾಗುವ ಹಾಗೆ ಭಾಗವತದ ಕಥೆಯಲ್ಲಿ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಆದರೂ ಹರಿವಂಶ, ಕುರುವಂಶಗಳ ಉತ್ಪತ್ತಿ, ವಾಸುದೇವ ಜನನ, ಬಾಲಲೀಲೆ, ಬಂದು ಕಂಸವಧಾಂತವಾಗಿ ಕಾವ್ಯವು

---

ಮುಂತಾದ ಬಿರುದುಗಳಿದ್ದುವು. ಕವಿಮಧುರ ಈತನನ್ನು ಜನ್ನನೊಡನೆ ಸೇರಿಸಿ ಕರ್ಣಾಟ ಕೃತಿಗೆ 'ಸೀಮಾ ಪುರುಷರ್' ಎಂದು ಹೊಗಳಿದ್ದಾನೆ.

'ಲೀಲಾವತಿ' ನೇಮಿಚಂದ್ರನ ಅತ್ಯುತ್ತಮ ಲೌಕಿಕ ಗ್ರಂಥ. ಚಂಪೂ ಶೈಲಿಯಲ್ಲಿದೆ. ಹದಿನಾಲ್ಕು ಆಶ್ವಾಸಗಳಲ್ಲಿ ಶೃಂಗಾರರಸವೊಂದೇ ಉಕ್ಕಿ ಹರಿದಿದೆ. ಇಂತಹ ಕಾಲ್ಪನಿಕ ಕೃತಿ ಕನ್ನಡ, ಸಂಸ್ಕೃತ ಭಾಷೆಯೆರಡರಲ್ಲೂ ಬಹು ವಿರಳ ಎಂದೇ ಹೇಳಬಹುದು. 'ಶೃಂಗಾರಮಂ ಕಾವ್ಯಬಂಧನದೊಳ್ ಸೆಜೆಗೆಯ್ದು ಮೆಯ್ಮೆ ತನ್ನದು' ಎಂದು ತನ್ನನ್ನೆ ಹೊಗಳಿಕೊಂಡಿದ್ದಾನೆ ಕವಿ. ಈ ಕಾವ್ಯದ ಕಥೆಗೆ 'ಸುಬಂಧು'ವಿನ ಸಂಸ್ಕೃತ ಕಾವ್ಯ 'ವಾಸವದತ್ತೆ' ಸ್ಫೂರ್ತಿ ಕೊಟ್ಟಿದೆ ಅನ್ನಿಸುತ್ತದೆ. ನಾಯಕ–ನಾಯಕಿ ಪರಸ್ಪರ ಕನಸು ಕಾಣುತ್ತಾರೆ. ಹುಡುಕಿ ಅಲೆಯುತ್ತಾರೆ. ಮತ್ತೆ ಒಂದುಗೂಡಿ ನಲಿಯುತ್ತಾರೆ. ಈ ಕಥೆಗೆ ಕಲ್ಪನೆಯ ತಿರುವು ಕೊಟ್ಟು ಒಲವು, ನಿಲುವು, ವಿರಹಕ್ಕೆ ಸೂಕ್ತ ಸನ್ನಿವೇಶಗಳನ್ನು ನಿರ್ಮಿಸಿ ಕುತೂಹಲವಾಗಿ ಕಥೆ ಹೆಣೆದಿರುವುದೇ ಈ ಕಾವ್ಯದ ಸತ್ವ. ಮೋಹಕ ಶೈಲಿ, ಶಬ್ದಮಾಧುರ್ಯ, ರಚನೆಯ ರಸಕೌಶಲತೆ ಕಾವ್ಯವನ್ನು ಮೋಹಕಗೊಳಿಸಿವೆ. ಇದು ಕವಿಯ ಮಹಾಕಾವ್ಯವಲ್ಲದಿದ್ದರೂ ಶೃಂಗಾರಕಾವ್ಯವಾಗಿ ಸಾಹಿತ್ಯದಲ್ಲಿ ಗಣ್ಯಸ್ಥಾನ ಗಳಿಸಿದೆ. ಇದಕ್ಕೆ ಉದಾಹರಣೆಯಾಗಿ ಒಂದು ಪದ್ಯ :

> ಕಟ್ಟುಗೆ ಕಟ್ಟಿದಿರ್ಕೆ ಕಡಲಂ ಕಪಿಸಂತತಿ ರಾಮನ ಕ್ರಮಂ
> ಮುಟ್ಟುಗೆ ಮುಟ್ಟಿದಿರ್ಕೆ ಮುಗಿಲಂ ಹರನಂ ನರನಿಕ್ಕ ಗಂಟಲಂ
> ಮೆಟ್ಟುಗೆ ಮೆಟ್ಟಿದಿರ್ಕೆ ಕವಿಗಳ್ ಕೃತಿ ಬಂಧಮನೊತ್ತಿ ಕಟ್ಟಿದರ್
> ಮುಟ್ಟಿದರೊತ್ತಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ ।

ನಿಂತುಹೋಗಿದೆ. ಆತನ ಉನ್ನತ ಶೈಲಿಯನ್ನು ತೋರಿಸಲು ಒಂದೇ ಒಂದು ಪದ್ಯ ಉದಾಹರಿಸುತ್ತೇನೆ.

ವಟು ಮರದುದ್ದ ವಾದನನಿತಲ್ಲದೊಡಿತ್ತಲೆ ಯುದ್ಧವಾದನ
ಕ್ಕಟ ಮದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂ
ತುಟು ಗಿರಿಯುದ್ದನಾದನಿದು ವಿಸ್ಮಯಮಾ ಮುಗಿಲುದ್ದವಾದನೋ
ವಟಮಟಿಗಂ ದಿಟಕ್ಕನೆ ಕರಂಬಳೆದಂ ಮನದಂತೆ ವಾಮನಂ

ವಾಮನನ ಬೆಳವಣಿಗೆ ಎಷ್ಟು ರಮ್ಯವಾಗಿದೆ!

"ಈ ಕವಿಯ ಆಶ್ರಯದಾತ ರಾಜ ಯಾರು ?" ರಾಯರು ಕಾಫಿ ಕುಡಿಯುತ್ತ ಪ್ರಶ್ನಿಸಿದರು.

'ಗ್ರಂಥ ಅರ್ಧಕ್ಕೆ ನಿಂತುಹೋಗಿರೋದಿಕ್ಕೆ ಆಶ್ರಿತರಾಜನ ಕೈವಾಡ ಇರ್ಬೋಹುದು ಅಂತ ಅಲ್ವೆ ನಿಮ್ಮ ಅನುಮಾನ? ಬಹುಶಃ ಯಾವ ಮನುಷ್ಯನ ಕೈವಾಡವೂ ಇದ್ದಿರಲಾರದು. ವಿಧಿಯ ಕೈವಾಡವೇ ಅರ್ಧ ನೇಮಿಗೆ ಹೇತುವಾಗಿರಬಹುದು. ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳ ದೇವಪ್ರಸಾದಾಸಾದಿತ ಮಹಾಪ್ರಧಾನ ಸಜ್ಜೆವುಳ್ಳ ಪದ್ಮನಾಭದೇವಕಾರಿತಂ' ಎಂದು ಕವಿಯೇ ಹೇಳಿಕೊಂಡಿರುವುದರಿಂದ ಈ ಕಾವ್ಯವು ಹೊಯ್ಸಳ ವೀರಬಲ್ಲಾಳನ ಮಹಾಪ್ರಧಾನ ಪದ್ಮನಾಭನ ಪ್ರೇರಣೆ ಯಿಂದ ರಚಿತವಾದದ್ದೆಂದು ಸಿದ್ಧವಾಗುತ್ತದೆ.

ಪ್ರಾಸಯಮಕಾದಿ ಶಬ್ದಾಲಂಕಾರ ಭೂಯಿಷ್ಠ ಪ್ರೌಢ ಕಾವ್ಯದ ಪದ್ಯ ಕೇಳಿ :

ಕಲಿಕೊಂಕಲ್ಕೇಕಕ್ಕುಂ
ಕೆಲಕ್ಕೆ ಕೋಲಿಕ್ಕೆಲಕ್ಕೆಕ್ಕೆಲ್ಲಂ ॥
ಕಲಿಕೊಲಲೆಕಲಕ್ಕಕ್ಕುಂ ।
ಕುಲಕಕ್ಕುಂ ಕಲಿಕಲಂಕೆ ಕೊಂಕೆಕಲಂಕಂ ॥

ಇದು '**ಆಚಣ್ಣ**'*1 ರಚಿತ 'ವರ್ಧಮಾನ ಪುರಾಣ'ದಿಂದ ಉದ್ಧೃತವಾದದ್ದು. ಆಚಣ್ಣ ಹನ್ನೆರಡನೆ ಶತಮಾನದ ಉತ್ತರಾರ್ಧದಲ್ಲಿದ್ದ ಪ್ರಸಿದ್ಧ ಕವಿ. ಈತನ ಇನ್ನೊಂದು ಗ್ರಂಥ 'ಶ್ರೀ ಪದಾಶೀತಿ'. ಈ ಧಾರ್ಮಿಕ ಗ್ರಂಥವು ಪಂಚ ಪದಗಳ ಮಹಿಮೆಯನ್ನು ತಿಳಿಸುತ್ತದೆ. ಇದು 94 ಕಂದಪದ್ಯಗಳ ಪುಟ್ಟ ಪ್ರೌಢ ಕಾವ್ಯ.

**ಬಂಧುವರ್ಮ***2 : 13ನೇ ಶತಮಾನದ ಪೂರ್ವಾರ್ಧದಲ್ಲಿದ್ದ ಜೈನಕವಿ. 'ಹರಿವಂಶಾಭ್ಯುದಯ' ಮತ್ತು 'ಜೀವಸಂಬೋಧನೆ' ಎಂಬ ಎರಡು ಉದ್ಗ್ರಂಥ

---

*1 ಕಾಲ : ಸು. 1195. 'ವಾಣೀವಲ್ಲಭ' ಈತನ ಬಿರುದು.

*2 ಕಾಲ : ಸು. 1200. 'ಜೀವಸಂಬೋಧನೆ' 12 ಅಧಿಕಾರಗಳ ಗ್ರಂಥ. ಲೋಕಾನುಭವದ ಉದಾಹರಣೆಗಳು, ನಾಣ್ಣುಡಿಗಳು ಈ ಗ್ರಂಥವನ್ನು ಜೈನೇತರರೂ ಮೆಚ್ಚುವಂತೆ ಮಾಡಿವೆ. ಇದು ಒಂದು ಕಥಾಸಂಕಲನವೂ ಹೌದು.

ಗಳನ್ನು ರಚಿಸಿದ್ದಾನೆ. 'ಹರಿವಂಶಾಭ್ಯುದಯ' 22ನೇ ತೀರ್ಥಂಕರ ನೇಮಿನಾಥನ ಚರಿತೆ, 14 ಆಶ್ವಾಸಗಳ ಚಂಪೂಕಾವ್ಯ. ತೀರ್ಥಂಕರನ ಭವಾವಳಿಗಳಿಗೆ ಈ ಗ್ರಂಥ ದಲ್ಲಿ ಪ್ರಾಶಸ್ತ್ಯ ದೊರೆತಿರುವುದಿಲ್ಲ. ಇದೇ ಶತಮಾನದ ಇನ್ನೊಬ್ಬ ಹೆಸರಾಂತ ಕವಿ **'ಪಾರ್ಶ್ವಪಂಡಿತ'**[*1]. 'ಪಾರ್ಶ್ವನಾಥ ಪುರಾಣ' ಈತನ ಪ್ರಸಿದ್ಧ ಚಂಪೂಕಾವ್ಯ. ಪರಂಪರಾನುಗತವಾಗಿ ಬಂದ ಪಾರ್ಶ್ವನಾಥನ 10 ಅವತಾರಗಳ ಕಥೆಯನ್ನು ಕೆಲವು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ರಮ್ಯವಾಗಿ ಚಿತ್ರಿಸಿದ್ದಾನೆ. ವರ್ಣನಾ ಚಮತ್ಕಾರ ಕಾವ್ಯದುದ್ದಕ್ಕೂ ಎದ್ದುಕಾಣುತ್ತದೆ.

ಹಸುರು ಬಣ್ಣದ ಗಿಳಿಗಳು ಕೆಂಪಾದ ಕೊಕ್ಕಿನಲ್ಲಿ ಹಳದಿ ಬಣ್ಣದ ತೆನೆಗಳನ್ನು ಕಚ್ಚಿಕೊಂಡು ವೃತ್ತಾಕಾರವಾಗಿ ಆಕಾಶದಲ್ಲಿ ಚಲಿಸುತ್ತ ಕಾಮನಬಿಲ್ಲನ್ನು ನಿರ್ಮಿಸುವ ಕಲ್ಪನೆ ಮನೋಹರವಾಗಿದೆ.

**'ಎರಡನೆ ಗುಣವರ್ಮ'**[*2] : ಹೆಸರಿಸಬೇಕಾದ ಇನ್ನೊಬ್ಬ ಜೈನಕವಿ. ಈತನು 'ಪುಷ್ಪದಂತ ಪುರಾಣ' ಮತ್ತು 'ಚಂದ್ರನಾಥಾಷ್ಟಕ'ವನ್ನು ಬರೆದಿದ್ದಾನೆ. ಪುಷ್ಪದಂತ ಪುರಾಣದಲ್ಲಿ ಒಂಬತ್ತನೆಯ ತೀರ್ಥಂಕರ ಪುಷ್ಪದಂತನ ಚರಿತೆ ನಿರೂಪಿತವಾಗಿದೆ. 'ಚಂದ್ರನಾಥಾಷ್ಟಕ' ಕೊಲ್ಲಾಪುರದ ತ್ರಿಭುವನ ತಿಲಕ ಚಂದ್ರನಾಥನನ್ನು ಸ್ತುತಿಸುವ ಗ್ರಂಥ.

**ಕಮಲಭವ**[*3] : ಈತನ ಗ್ರಂಥ 'ಶಾಂತೀಶ್ವರ ಪುರಾಣ'. ಇದು 16ನೇ ತೀರ್ಥಂಕರ 'ಶಾಂತಿನಾಥನ' ಕಥೆ, 16 ಆಶ್ವಾಸಗಳಿವೆ. ಆಶ್ವಾಸಗಳ ಕೊನೆಯಲ್ಲಿ ಕೆಲಭಾಗ ಗದ್ಯವಿದೆ. ಗ್ರಂಥ ಲಲಿತವಾಗಿದೆ. ವರ್ಣನಾಪೂರ್ಣವಾಗಿದೆ.

**ಜನ್ನ**[*4] :

ಪದಿಮೂರನೆ ಶತಮಾನದ ಕವಿಗಳಲ್ಲಿ ಶ್ರೇಷ್ಠನಾದವನು ಕವಿ ಜನ್ನ. ಹೊಯ್ಸಳ ನರಸಿಂಹನ ಆಸ್ಥಾನದಲ್ಲಿ ನಿಂದಿರೆ 'ದಂಡಾದೀಶಂ', ಕುಳ್ಳಿರೆ 'ಮಂತ್ರಿ',

---

*1 ಕಾಲ : ಸು. 1205. ಪಾರ್ಶ್ವನಾಥ ಪುರಾಣ ರಚಿತವಾದ ಕಾಲ 1222. ಕವಿಕುಲ ತಿಲಕ–ಬಿರುದು. ತಂದೆ ಲೋಕಣನಾಯಕ, ತಾಯಿ ಕಾಮಿಯಕ್ಕ, ಗುರು ಕುಮುದೇಂದು ರಾಮಾಯಣದ ಕರ್ತೃ ಕುಮುದೇಂದು ಮುನಿ. ಈತನ ಪೋಷಕ ರಾಜ 'ನಾಲ್ಕನೇ ಕಾರ್ತವೀರ್ಯ'.

*2 ಕಾಲ ಸು. 1235.

*3 ಕಾಲ ಕ್ರಿ.ಶ. 1235.

*4 ಕಾಲ ಸು. ಕ್ರಿ.ಶ. 1209. ಜನ್ನ ಎಂಬುದು ಜನಾರ್ಧನ ಎಂಬ ಹೆಸರಿನ ಸಂಕ್ಷಿಪ್ತ ರೂಪ. ಆಶ್ರಿತ ರಾಜ ಹೊಯ್ಸಳ ವೀರಬಲ್ಲಾಳ ಹಾಗೂ ಮಗ ನರಸಿಂಹ. ಜನ್ನನದು ವಿದ್ವಾಂಸರ ವಂಶ. ತಂದೆ ಶಂಕರ ಕವಿ. (ಸುಮನೋಬಾಣ) 'ಸೂಕ್ತಿಸುಧಾರ್ಣವ'ದ ಮಲ್ಲಿಕಾರ್ಜುನ ಈತನ ಸೋದರಿಯ ಗಂಡ. ಶಬ್ದಮಣಿದರ್ಪಣದ ಕರ್ತೃ ಕೇಶಿರಾಜ ಈತನ ಸೋದರಳಿಯ.

ತೊಡಂಕೆ 'ಕವಿ' ಆಗಿದ್ದ ಕಲಿಕವಿ ಜನ್ನ. ಈತನಿಗೆ ವೀರಬಲ್ಲಾಳ, 'ಕವಿಚಕ್ರವರ್ತಿ' ಎಂಬ ಬಿರುದನ್ನು ಸಹ ದಯಪಾಲಿಸಿದ್ದನು. ಈತನು ಬರೆದ ಕಾವ್ಯಗಳು ಎರಡು. ಒಂದನೆಯದು 'ಯಶೋಧರ ಚರಿತೆ', ಎರಡನೆಯದು 'ಅನಂತನಾಥ ಪುರಾಣ'.

ಯಶೋಧರ ಚರಿತೆಯಲ್ಲಿ ಯಾವ ತೀರ್ಥಕರನ ವಿಷಯವನ್ನು ಹೇಳದಿದ್ದರೂ ನಾಲ್ಕು ಪುರಾಣ ಮಾಡುವುದಕ್ಕಿಂತ ಅಧಿಕವಾಗಿ ಧರ್ಮ ಪ್ರಚಾರ ಮಾಡಿದೆ. ಆದರೆ ಕವಿ ಒಮ್ಮೆಯೂ ಎಲ್ಲೂ ಜೈನಧರ್ಮ ಮೇಲೆಂದಾಗಲಿ ಇತರ ಧರ್ಮ ಕೀಳೆಂದಾಗಲಿ ಹೇಳಿರುವುದಿಲ್ಲ. ಕೇವಲ ಕಥಾನಿರೂಪಣೆಯಲ್ಲಿ ಮಾರ್ಮಿಕವಾಗಿ ಇದನ್ನು ಮನ ಮುಟ್ಟುವಂತೆ ಮಾಡಿದ್ದಾನೆ. ಯಶೋಧರ ಚರಿತೆ ಸುಮಾರು 310 ಪದ್ಯಗಳುಳ್ಳ ಸಣ್ಣಕಾವ್ಯ. 'ಇತಿಹಾಸವೆಂಬ ವಿಮಳಾಮೃತವಾರ್ಧಿಯೊಳೋಗದಕಲ್ಪ ಕುಜದಂತೆ ರಸಾನ್ವಿತಮಾದೀಕೃತಿ' ಎಂದು ಕವಿಯೇ ಹೇಳಿಕೊಂಡಿದ್ದಾನೆ. ಈ ಕೃತಿಗೆ ವಾದಿರಾಜನ ಸಂಸ್ಕೃತ 'ಯಶೋಧರ ಚರಿತೆ' ಆಧಾರವಾಗಿದ್ದರೂ ಕವಿ ಜನ್ನ ತನ್ನ ಕಲ್ಪನಾ ಚಾತುರ್ಯ ನಿರೂಪಣಾ ಪ್ರತಿಭೆಯನ್ನು ಕಾವ್ಯದುದ್ದಕ್ಕೂ ವ್ಯಕ್ತಪಡಿಸಿದ್ದಾನೆ. ಯಶೋಧರನ ಹೆಂಡತಿ ಅಮೃತಮತಿ ಅರಮನೆಯ ಕುರೂಪಿ ಮಾವುತನ ಗಂಧರ್ವ ಗಾನ ಕೇಳಿ ಮನಸೋತು ಅವನ ನಲ್ಲೆಯಾದುದು ಈ ಕಥೆಯ ವಸ್ತು. ಯಶೋಧರ ಮತ್ತು ಅವನ ತಾಯಿ ಚಂದ್ರಮತಿಯರು ಅನೇಕ ಜನ್ಮಗಳೆತ್ತಿ ಕೊನೆಯ ಜನ್ಮದಲ್ಲಿ 'ಅಭಯ ರುಚಿ' 'ಅಭಯಮತಿ'ಗಳಾಗಿ ಹುಟ್ಟಿ ಬಾಲ್ಯದಲ್ಲೇ ಜಿನದೀಕ್ಷೆ ವಹಿಸುತ್ತಾರೆ. ಅಯೋಧ್ಯಾಪುರದರಸ 'ಮಾರಿದತ್ತ' ತನ್ನ ಇಷ್ಟದೈವಕ್ಕೆ ನರಬಲಿ ಕೊಡಲೆಂದು ಇವರಿಬ್ಬರನ್ನು ಹಿಡಿಸಿ ತರುತ್ತಾನೆ. ಈ ಅಣ್ಣತಂಗಿಯರು ತಮ್ಮ ಪೂರ್ವವೃತ್ತಾಂತ ವನ್ನು ಹೇಳಿ ಹಿಂಸೆಯ ದುಷ್ಫಲವನ್ನೂ ಅಹಿಂಸೆಯ ಮಹತ್ವವನ್ನೂ ವಿವರಿಸಿದ ಮೇಲೆ 'ಮಾರಿದತ್ತ'ನ ಮನಸ್ಸು ಕರಗಿ ಆತನೂ ಜಿನದೀಕ್ಷೆ ವಹಿಸುತ್ತಾನೆ. ಈತನ ವರ್ಣನೆಯ ವೈಖರಿಗೆ ಒಂದು ಉದಾಹರಣೆ :

> ಸಿಸಿರಮನೆ ಪಿಡಿದು ಪರಕೆಗೆ
> ಬಸಂತನಲರ್ವೋದಮಾವಿದಡಿ ಮಂಚಿಕೆಯೊಳ್
> ಕುಸುರಿದಜೀವದಗಿನಂತೆವೊ
> ಲೆಸೆದುವು ತದ್ವನದೊಳು ದಿರ್ದಿಮುತ್ತದಮುಗುಳ್ಗಳ್

'ಅನಂತನಾಥ ಪುರಾಣ' ಈತನ ಧಾರ್ಮಿಕ ಗ್ರಂಥ. ಇದರಲ್ಲಿ 14 ಆಶ್ವಾಸ ಗಳಿದ್ದು 14ನೇ ತೀರ್ಥಂಕರನ ಚರಿತೆಯನ್ನೊಳಗೊಂಡಿದೆ. ಜೈನಪುರಾಣವನ್ನು ಆಧರಿಸಿ ಬರೆದ ಈ ಚಂಪೂಕಾವ್ಯದಲ್ಲಿ ಪಂಪನ ಹಾಗೂ ಚಾವುಂಡರಾಯನ ಗ್ರಂಥಗಳ ಪ್ರಭಾವ ಅಲ್ಲಲ್ಲಿ ಸ್ಪಷ್ಟವಾಗಿ ಕಾಣಬರುತ್ತದೆ. ಇದು ಧರ್ಮಗ್ರಂಥದ ರೂಪದಲ್ಲಿರು ವುದರಿಂದ ಕಥೆಗೆ ಗೌಣಸ್ಥಾನ. ಅನಂತ ಜಿನನ ಪಂಚಕಲ್ಯಾಣಗಳ ವಿವರಣೆ ಭವ್ಯ ವಾಗಿದೆ. ಇಲ್ಲಿ ಪ್ರಸಂಗವಶಾತ್ ಸುಳಿದಿರುವ ವಸುಷೇಣನ' ಹೆಂಡತಿ ಹಾಗೂ

ಚಂಡಶಾಸನನ ಪ್ರೇಮದ ಪ್ರಸಂಗ ಬಹು ಆಕರ್ಷಣೀಯವಾಗಿದೆ. ವಸುಷೇಣನ ಹೆಂಡತಿ ಚಂಡಶಾಸನನ ಪ್ರಚೋದನೆ, ಪ್ರಲೋಭನೆಗೆ ಒಳಗಾಗದೆ ಮೋಡಿಕಾರ ಸೃಷ್ಟಿಸಿದ ತನ್ನ ಗಂಡನ ತಲೆಯನ್ನು ಕಂಡು ಆಕೆ ದುಃಖವನ್ನು ತಡೆಯಲಾರದೆ ತಲೆಯನ್ನೇ ಅಪ್ಪಿ ಮರಣವನ್ನೈದಿದಾಗ ನಿಜವಾದ ವಸುಷೇಣ ತನ್ನ ಹೆಂಡತಿಯ ದೇಹ ಆಲಂಗಿಸಿಕೊಂಡೇ ತಾನೂ ಸಾಯುತ್ತಾನೆ. ಈ ದುರ್ಭರ ಸನ್ನಿವೇಶವನ್ನು ನೋಡಿ ದುಃಖಗೊಂಡ ಚಂಡಶಾಸನ ತಪಸ್ವಿಯಾಗುತ್ತಾನೆ. ಈ ಗ್ರಂಥ ರಚನೆಯಲ್ಲಿ ಕವಿ ತನ್ನ ಪ್ರತಿಭೆಯನ್ನು ಬಹು ಚೆನ್ನಾಗಿ ಅಭಿವ್ಯಕ್ತಗೊಳಿಸಿದ್ದಾನೆ. ಪಾತ್ರವಿಕಾಸ ಸನ್ನಿವೇಶ ನಿರ್ಮಾಣ, ನಿರೂಪಣೆ ಶ್ರೇಷ್ಠ ಕವಿಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸಿದೆ.

ಉದಾಹರಣೆಗೆ ಒಂದು ಪದ್ಯ :

ಕಿವಿವೇಟಮನಿ ಜಿಸುತ್ತಿರೆ
ನವವರನಂ ನೋಡುವಪ್ಪುವೃತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯುಂ ಕನ್ನಮಿಕ್ಕಲಟಮಟ ಮಟಿಸಿದುವೋ ॥

ಜೈನಪುರಾಣ ಅವಲಂಬಿಸಿ ಕಾವ್ಯ ಬರೆದ ಇತರ ಪ್ರಮುಖರೆಂದರೆ ಅಗ್ಗಳ. ಪದ್ಮಣಾಂಕ, ಮಹಾಬಲ, ಭಾಸ್ಕರ, ಹಸ್ತಿಮಲ್ಲ, ಬಾಹುಬಲಿಪಂಡಿತ, ಮಧುರ, ಚಂದ್ರಸಾಗರ ವರ್ಣಿ ಮುಂತಾದವರು.

ಅಗ್ಗಳನ 'ಚಂದ್ರಪ್ರಭ ಪುರಾಣ', ಪದ್ಮಣಾಂಕನ 'ಪದ್ಮರಾಜ ಪುರಾಣ'ಗಳ ಕಥಾವಸ್ತು ಕೆರೆಯ ಪದ್ಮರಸನ ಚರಿತೆ. ಇಲ್ಲಿ ಪಾಂಡಿತ್ಯ ಪ್ರದರ್ಶನವಿದೆ. ಸುಂದರ ಕಲ್ಪನೆ, ಉತ್ಕೃಷ್ಟ ವರ್ಣನೆ ಮೆರೆದಿವೆ. ಭಾಸ್ಕರನ 'ಜೀವಂಧರ ಚರಿತೆ' ಅನುವಾದಿತ ಕಾವ್ಯ. ಭಾಮಿನೀ ಷಟ್ಪದಿಯಲ್ಲಿದೆ. ಹಸ್ತಿಮಲ್ಲ ಗದ್ಯಶೈಲಿಯಲ್ಲಿ 'ಆದಿಪುರಾಣ' ರಚಿಸಿದ್ದಾನೆ. ಬಾಹುಬಲಿ ಪಂಡಿತನ 'ಧರ್ಮನಾಥ ಪುರಾಣ' ಒಂದು ಚಂಪೂಕಾವ್ಯ.

14ನೇ ಶತಮಾನದ ಉತ್ತರಾರ್ಧದಲ್ಲಿದ್ದ ಮಧುರನು 'ಧರ್ಮನಾಥ ಪುರಾಣ' 'ಗೊಮ್ಮಟಾಷ್ಟಕ' ಬರೆದಿದ್ದಾನೆ. 'ಆದಿಪುರಾಣಂಗಳ್ ಪಟಿದಾದುವೆನಲ್ ಮತ್ತೆ ಮಧುರ ಕವಿತಾರಸಮುತ್ಪಾದಿಸೆ' ಎಂದು ಆತ್ಮಪ್ರಶಂಸೆ ಮಾಡಿಕೊಂಡಿದ್ದಾನೆ. ಈತನ ಕಾವ್ಯ ಓದಿದರೆ ಇದು ಉತ್ಪ್ರೇಕ್ಷೆ ಎನಿಸುವುದಿಲ್ಲ.

**ತೆರಕಣಾಂಬಿ ಬೊಮ್ಮರಸ*** : ವಿಜಯನಗರದರಸುಗಳ ಆಶ್ರಯದಲ್ಲಿದ್ದ ಜನಪ್ರಿಯ ಕವಿ. 'ಸನತ್ಕುಮಾರ ಚರಿತೆ' ಮತ್ತು ಜೀವಂಧರ ಚರಿತೆ ಈತನ ಮುಖ್ಯಕಾವ್ಯಗಳು. ಮೊದಲನೆಯದು ಭಾಮಿನಿ ಷಟ್ಪದಿಯಲ್ಲಿದೆ. ಎರಡನೆಯದು ಸಾಂಗತ್ಯದಲ್ಲಿದೆ.

---

* ಕಾಲ ಸು. 1485.

ಸನತ್ಕುಮಾರ ಕಥೆಗೆ ವಡ್ಡಾರಾಧನೆ ಆಧಾರವಾದಂತಿದೆ. ಜೀವಂಧರ ಚರಿತೆಯ ನಾಯಕ ಜೈನರ 24 ತೀರ್ಥಂಕರರಲ್ಲಿ ಕೊನೆಯವನಾದ ವರ್ಧಮಾನ ಮಹಾವೀರನ ಕಾಲದಲ್ಲಿದ್ದ ಪ್ರಸಿದ್ಧ ಮಹಾಪುರುಷ.

16ನೇ ಶತಮಾನದಲ್ಲಿ **ಶಾಂತಿಕೀರ್ತಿ ಮುನಿ** 'ಶಾಂತಿನಾಥ ಚರಿತ್ರೆ'ಯನ್ನು, **ಪದ್ಮಕವಿಯು** 'ವರ್ಧಮಾನ ಚರಿತೆ'ಯನ್ನು, **ದೊಡ್ಡಯ್ಯನು** 'ಚಂದ್ರಪ್ರಭ ಚರಿತೆ' ಯನ್ನು, **ದೊಡ್ಡಣಾಂಕನು** 'ಚಂದ್ರಪ್ರಭ ಷಟ್ಪದಿ'ಯನ್ನು ರಚಿಸಿದ್ದಾರೆ. 19ನೇ ಶತಮಾನದಲ್ಲಿ **ಚಂದ್ರಸಾಗರವರ್ಣಿ** 'ಜಿನಭಕ್ತಿಸಾರ', 'ಕದಂಬ ಪುರಾಣ', 'ಜಿನ ರಾಮಾಯಣ', 'ಬೆಟ್ಟವರ್ಧನ ಚರಿತೆ', ಮುಂತಾದವುಗಳನ್ನು ರಚಿಸಿದ್ದಾನೆ.

ಹದಿನೈದು ಹದಿನಾರನೆ ಶತಮಾನಗಳ ಮಧ್ಯದಲ್ಲಿದ್ದ ಇನ್ನೊಬ್ಬ ಪ್ರಸಿದ್ಧ ಕವಿ **'ಮೂರನೆ ಮಂಗರಸ'***—

ಸಾಸಿರದ ಮೇಲೆ ನಾನೂರ ಮೂವತ್ತೊಂದು
ಭಾಸುರಂಬಡೆದ ಶಕವರ್ಷ ದೆಸೆವಾಶ್ವಯುಜ
ಮಾಸದಾ ಶುಕ್ಲಪಕ್ಷದ ಪಾಡ್ಯಮುಂ ಮಂದವಾರದೊಳಗೀ ಕೃತಿಯನು

ಅಂದರೆ 'ಸಮ್ಯಕ್ತ್ವಕೌಮುದಿ'ಯನ್ನು ಬರೆದು ಮುಗಿಸಿದ್ದೇನೆಂದು ಹೇಳಿಕೊಂಡಿದ್ದಾನೆ. ಮೈಸೂರು ಅರಸು ಮನೆತನಗಳಲ್ಲಿ ಒಂದಾಗಿ ಅವನ ವಂಶವು ಇಂದಿನವರೆಗೂ ಬೆಳೆದು ಬಂದಿದೆ. ಈತನು ರಚಿಸಿರುವ ಕಾವ್ಯಗಳು (1) ಹರಿವಂಶಪುರಾಣ ಅಥವಾ ನೇಮಿಜಿ

---

* ಈತನ ಕಾಲ ಸು. ಕ್ರಿ.ಶ. 1508, ಜೈನಕವಿ. ತಂದೆ ಕಲ್ಲಹಳ್ಳಿಯ ವಿಜಯಭೂಪಾಲ. ತಾಯಿ ಪದ್ಮಾಜಮ್ಮಣ್ಣಿ. ಗುರು ಚಿಕ್ಕಪ್ರಭೇಂದು. ಈತನಿಗೆ 'ಪ್ರಭುರಾಜ', 'ಪ್ರಭುಕುಲರತ್ನ ದೀಪ' ಎಂಬ ಬಿರುದುಗಳಿದ್ದುವು.

'ಜಯನೃಪಕಾವ್ಯ' ಜಿನಸೇನಾಚಾರ್ಯರ 'ಪೂರ್ವಪುರಾಣ'ವನ್ನು ಅವಲಂಬಿಸಿ ಪರಿವರ್ಧಿನಿ ಷಟ್ಪದಿಯಲ್ಲಿ ಬರೆದಿರುವ ಹದಿನಾರು ಸಂಧಿಗಳ ಬೃಹತ್ ಕಾವ್ಯ. 'ಸಮ್ಯಕ್ತ್ವ ಕೌಮುದಿ' ಇದೂ ಒಂದು ಧಾರ್ಮಿಕ ಗ್ರಂಥ. ಉದಿತೋದಯ ಒಬ್ಬ ರಾಜ. 'ಅರ್ಹದ್ದಾಸ ವೈಶ್ಯತಿಲಕ'. ಈತನ ಏಳು ಜನ ಹೆಂಡತಿಯರು ಉದಿತೋದಯನಿಗೆ ಹೇಳಿದ ಕಥೆ ಕೇಳಿ ವೈರಾಗ್ಯ ಹುಟ್ಟಿ ಜಿನದೀಕ್ಷೆವಹಿಸಿ ಸ್ವರ್ಗಲೋಕದಲ್ಲಿ ಅಹಮಿಂದ್ರನಾಗುವುದೇ ಈ ಕಾವ್ಯದ ಕಥಾವಸ್ತು. ಇದೇ ಕವಿಯ 'ಶ್ರೀಪಾಲ ಚರಿತ', 'ಪ್ರಭಂಜನ ಚರಿತ'ಗಳು ಇನ್ನೂ ಅಚ್ಚಾಗಿಲ್ಲದ ಗ್ರಂಥಗಳು.

ಶ್ರೀಪಾಲಚರಿತೆಯಲ್ಲಿ 'ಕೇಳಿರೊ ಭವ್ಯರು ಪೇಳುವೆನು ಕಥೆಯ' ಎಂದು 1500 ಸಾಂಗತ್ಯ ಪದ್ಯಗಳಲ್ಲಿ ಶ್ರೀಪಾಲಮಹಾರಾಜನ ಕಥೆಯನ್ನು ವರ್ಣನಾಮಯವಾಗಿ ವಿವರಿಸಿದ್ದಾನೆ. ಕಾವ್ಯದ ಉದ್ದಕ್ಕೂ ಸ್ತ್ರೀಯರ ಒಲವು, ಚೆಲುವುಗಳ ವರ್ಣಣೆ ಹೇರಳವಾಗಿ ಸಿಗುತ್ತವೆ.

'ಪ್ರಭಂಜನ ಚರಿತೆ' ವೈರಾಗ್ಯಪರರಾದ ಎಂಟು ಮುನಿಗಳ ಕಥೆ. ಈ ಕಾವ್ಯ ಪೂರ್ಣರೂಪದಲ್ಲಿ ಉಪಲಬ್ಧವಿಲ್ಲ. ಉಪಲಬ್ಧ ಗ್ರಂಥದಲ್ಲಿ ಕೇವಲ ಮೂವರು ಮುನಿಗಳ ಕಥೆ ಇದೆ. ಈ ಗ್ರಂಥದಲ್ಲಿ ಚಿತ್ರಹೀನರ ಕಥೆ ಹೇರಳವಾಗಿ ಬಂದಿದ್ದರೂ ಅವರೆಲ್ಲಾ ಕೊನೆಗೆ ವೈರಾಗ್ಯಭಾವವನ್ನು ತಳೆದರೆಂದು ನಿರೂಪಿಸುವುದು ಈ ಶೃಂಗಾರ ಕಾವ್ಯದ ಉದ್ದೇಶ.

'ಸೂಪಶಾಸ್ತ್ರ' ಪಾಕಶಾಸ್ತ್ರದ ಮೇಲೆ ಬರೆದ ಸುಂದರ ಕೃತಿ.

ನೇಶ ಸಂಗತಿ (2) ಜಯನೃಪಕಾವ್ಯ (3) ಸಮ್ಯಕ್ತ್ವಕೌಮುದಿ (4) ಪ್ರಭಂಜನಚರಿತ (5) ಸೂಪಶಾಸ್ತ್ರ (6) ಶ್ರೀ ಪಾಲಚರಿತೆ. ಮೊದಲ ಮೂರು ಮಾತ್ರ ಪ್ರಕಟಗೊಂಡಿವೆ. ಶ್ರೀ ಪಾಲಚರಿತೆ, ಪ್ರಭಂಜನಚರಿತೆ ಮತ್ತು ಹರಿವಂಶ ಪುರಾಣಗಳನ್ನು ಸಾಂಗತ್ಯದಲ್ಲೂ ಜಯನೃಪ ಕಾವ್ಯವನ್ನು ಪರಿವರ್ಧಿನಿ ಷಟ್ಪದಿಯಲ್ಲೂ, ಉಳಿದೆರಡನ್ನು ವಾರ್ಧಿಕ ಷಟ್ಪದಿಯಲ್ಲೂ ರಚಿಸಿದ್ದಾನೆ. ಜಿನಸೇನಾಚಾರ್ಯರ ಹರಿವಂಶ ಪುರಾಣ'ವನ್ನು ಅವಲಂಬಿಸಿರುವ ಮಂಗರಸನ ಈ 'ನೇಮಿಜಿನೇಶಸಂಗತಿ', ಧಾರ್ಮಿಕಕಾವ್ಯ. ಇಪ್ಪತ್ತೆರಡನೆ ತೀರ್ಥಂಕರನ ಚರಿತ್ರೆಯೇ ಕಾವ್ಯದ ಮೂಲವಸ್ತು. ನೇಮಿಚಂದ್ರನ ನೇಮಿನಾಥಪುರಾಣದಂತೆಯೇ ಇಲ್ಲೂ ಮಹಾಭಾರತ, ಹರಿವಂಶ, ತೀರ್ಥಂಕರರ ಕಥೆ ಸಂಗಮಗೊಂಡು ಬೃಹತ್ ನದಿಯಾಗಿ ಭೋರ್ಗರೆದು ಸಾಗಿದೆ. ಐದು ಸಾವಿರದ ಮೂವತ್ತೈದು ಸಾಂಗತ್ಯ ಪದ್ಯಗಳು ಮೂವತ್ತೈದು ಸಂಧಿಗಳಲ್ಲಿ ಪರಡಿದೆ. ನೇಮಿನಾಥನ ಕಥೆ 22 ಮತ್ತು 32ನೇ ಸಂಧಿಗಳಲ್ಲಿ ಸುಳಿಯುತ್ತದೆ. ಉಳಿದುದೆಲ್ಲಾ ಕೌರವ, ಪಾಂಡವ ಮತ್ತು ಯಾದವರ ಕಥೆ. ಹೀಗೆ ಈ ನೇಮಿನಾಥನ ಅಲೌಕಿಕ ಜೀವನ ಅಪಾರ ಮೌಲ್ಯ ಉಳ್ಳದ್ದಾದ ಸತಿಯ ಮಾಂಗಲ್ಯಸೂತ್ರದ ಕರಿಮಣಿಯನ್ನು ಪೋಣಿಸಿರುವ ಚಿನ್ನದ ದಾರದಂತೆ ಕಥೆಗೆ ಏಕತೆ ರೂಪಿಸಿದೆ.

**ಬಾಹುಬಲಿ*** : ಈತನ 'ನಾಗಕುಮಾರಕಥೆ' 3600 ಪದ್ಯಗಳ ಬೃಹತ್‌ಕೃತಿ ಸಾಂಗತ್ಯದಲ್ಲಿದೆ.

"ಇದು ಹ್ಯಾಗೆ ಇಷ್ಟೊಂದು ವಿಷಯ ಜ್ಞಾಪ್ಕ ಇಟ್ಕೊಂಡಿದ್ದೀರಿ ಮೇಷ್ಟ್ರೆ" ಮೆಚ್ಚಿಗೆ ಸೂಚಿಸಿದರು ರಾಯರು. "ರತ್ನಾಕರವರ್ಣೀನ ಹೇಳೋದಾದ್ರೆ ದಯವಿಟ್ಟು ಈಗ ಹೇಳ್ಬೇಡಿ. ಸಾಯಂಕಾಲ ನಾನು ಬಂದ್ಮೇಲೆ ಹೇಳಿ. ಭರತೇಶ ವೈಭವದ ಕಥೆ ಕೇಳ್ಬೇಕು ಅಂತ ನಂಗೆ ಬಾಳ ಆಸೆ" ಆಫೀಸಿಗೆ ಹೋಗುತ್ತ ಮತ್ತೆ ನುಡಿದರು ರಾಯರು.

ಮುಗುಳ್ನಕ್ಕ ವ್ಯಾಸರಾಯರು ನಿಧಾನವಾಗಿ ಮೇಲೆದ್ದು ಒಮ್ಮೆ ಮೈ ಮುರಿದರು "ಹೂಂ, ಈಗ್ಗೆ ಸಾಕು. ಸಾಯಂಕಾಲ ಮುಂದುವರಿಸೋಣ. ಮಧ್ಯಾಹ್ನಾನೂ ಯಾರೂ ಹುಡುಗ್ರು ಬರ್ಬೇಡಿ. ಊಟ ಮಾಡಿ ಸೊಗಸಾಗಿ ಇವತ್ತು ನಿದ್ದೆ ಹೊಡೀತೀನಿ".

"ಸಿನಿಮಾ ನೋಡೋದಿಕ್ಕಿಂತ ನೀವು ಹೇಳೋ ಕಥೇನೆ ಇನ್ನೂ ಇಂಟರೆಸ್ಟಿಂಗಾಗಿದೆ" ದಿನಕರನ ಸ್ನೇಹಿತ ಮುರಳಿ ನುಡಿದು ಹೊರನಡೆದ, "ರಜಾನೆಲ್ಲಾ ವೇಸ್ಟ್ ಮಾಡ್ತಾ ಇದ್ವು ನೀವು ಸಿಕ್ದೆ ಹೋಗಿದ್ದಿದ್ರೆ" ಇನ್ನೊಬ್ಬ ಸ್ನೇಹಿತನೂ ದನಿಗೂಡಿಸಿದ. ವ್ಯಾಸರಾಯರು ತೃಪ್ತಿಯ ನಗೆ ಬೀರಿ ಅಭಿಮಾನದಿಂದ ಅತ್ತ ನೋಡಿದರು.

* * *

---

* ಕಾಲ ಸುಮಾರು 1560.

ಸಾಯಂಕಾಲ ಎಲ್ಲರೂ ಸೇರಿದೊಡನೆ ವ್ಯಾಸರಾಯರು ಕಥನ ಪ್ರಾರಂಭಿಸಿದರು.

**ರತ್ನಾಕರವರ್ಣಿ*** : ಕನ್ನಡದ ಕವಿಶ್ರೇಷ್ಠರುಗಳಲ್ಲಿ ಒಬ್ಬ. ಹದಿನಾರನೆ ಶತಮಾನದ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯ ಅವನತಿಗಿಳಿಯುತ್ತಿದ್ದ ಕಾಲದಲ್ಲಿ ಕವಿ ರತ್ನಾಕರನು ತನ್ನ ಅಮೂಲ್ಯ ಕಾವ್ಯ ರಚನೆಯಿಂದಾಗಿ ಕೀರ್ತಿಯ ಉತ್ತುಂಗ ಶಿಖರ ಏರಹೊರಟಿದ್ದನು. ಈತನ ಮುಖ್ಯ ಕೃತಿಗಳು 'ತ್ರಿಲೋಕಶತಕ', 'ಅಪರಾಜಿತೇಶ್ವರಶತಕ', 'ರತ್ನಾಕರಾಧೀಶ್ವರ ಶತಕ' ಮತ್ತು 'ಭರತೇಶವೈಭವ'. ಭರತೇಶವೈಭವ ರತ್ನಾಕರನ ಸಿದ್ಧಹಸ್ತದಿಂದ ನಿರ್ಮಾಣಗೊಂಡ ಶ್ರೇಷ್ಠ ಕೃತಿ. ಪೂರ್ವಪುರಾಣ, ಆದಿಪುರಾಣ ಹಾಗೂ ಚಾವುಂಡರಾಯ ಪುರಾಣಗಳಲ್ಲಿ ಬಂದಿರುವ ಕಥಾವಸ್ತುವೇ ಈ ಗ್ರಂಥಕ್ಕೆ ಕಥಾವಸ್ತುವಾಗಿದ್ದರೂ ಆದಿತೀರ್ಥಂಕರ ವೃಷಭನಾಥನ ಮಗನಾದ ಭರತನನ್ನೇ ಮುಖ್ಯ ಕಥಾನಾಯಕನನ್ನಾಗಿ ಮಾಡಿಕೊಂಡು ಅಮೋಘ ಕಾವ್ಯ ರಚನೆ ಮಾಡಿದ ಕೀರ್ತಿ ಇವನಿಗೇ ಲಭಿಸುತ್ತದೆ. 'ಭರತೇಶ ವೈಭವ' ರತ್ನಾಕರನ ಭಾವಗೀತೆ. ಕಾವ್ಯಲತೆ ಜಿನಧರ್ಮದ ಸಾರವತ್ತಾದ ಭೂಮಿಯ ಮೇಲೆ ದಾಂಗುಡಿ ಬಿಟ್ಟು ಐದು ಕವಲಾಗಿ ಹರಡಿ ಹತ್ತು ಸಹಸ್ರ ಹೂ ಅರಳಿಸಿ ಸೌರಭವನ್ನು ಜಗತ್ವ್ಯಾಪಿಯಾಗಿಸಿದೆ.

"ಸಾರ್ ನಂಗೆ ಅರ್ಥವಾಗ್ಲಿಲ್ಲ ನಿಮ್ಮ ವರ್ಣನೆ" ದಿನಕರ ನುಡಿನಾಗ ವ್ಯಾಸರಾಯರು ಮುಗುಳ್ನಕ್ಕು ವಾಸುದೇವರಾಯರತ್ತ ನೋಡಿದರು.

"ಭರತೇಶ ವೈಭವದಲ್ಲಿ ಬಹುಶಃ ಐದು ಆಶ್ವಾಸ ಅಥವ ಸಂಧಿಗಳಿರಬೇಕು. ಹತ್ತುಸಾವಿರ ಪದ್ಯಗಳಿರಬೇಕು ಅಲ್ವೆ ಮೇಸ್ಟ್ರೆ ?"

"ಭೇಷ್...ರಾಯರೇ ನಿಮ್ಮ ವ್ಯಾಖ್ಯಾನ ಸರಿ. ಭರತೇಶ ವೈಭವದಲ್ಲಿ ಐದು ಭಾಗಗಳಿವೆ. ಭೋಗ ವಿಜಯ, ದಿಗ್ವಿಜಯ, ಯೋಗ ವಿಜಯ, ಅರ್ಕ ಕೀರ್ತಿ ವಿಜಯ ಮತ್ತು ಮೋಕ್ಷ ವಿಜಯ ಇವನ್ನು ಕವಿ ಪಂಚಕಲ್ಯಾಣಗಳೆಂದು ಕರೆದಿದ್ದಾನೆ. ಕಾವ್ಯದಲ್ಲಿ ಒಟ್ಟು ಹತ್ತು ಸಾವಿರ ಪದ್ಯಗಳಿವೆ. ಇದನ್ನು ಬರೆದಿರುವ ಶೈಲಿ ಸಾಂಗತ್ಯ. ಚಂಪುವಿಗೆ ಪಂಪ, ರಗಳೆಗೆ ಹರಿಹರ ಹೇಗೋ ಹಾಗೆ ಸಾಂಗತ್ಯಕ್ಕೆ ರತ್ನಾಕರ.

'ಗಣನೆಯಿಲ್ಲದೆ ರಾಜ್ಯ ಸುಖದೊಳಾಡಿ ಧಾರಿಣಿ ಮೆಚ್ಚೆ ಜಿನಯೋಗಿಯಾಗಿ ಕ್ಷಣಕ್ಕೆ ಕರ್ಮವ ಸುಟ್ಟು ಜಿನನಾದ ಭೂಭುಜಾಗ್ರಣಿ' ಭರತನ ಕತೆಯೇ ಭರತೇಶ ವೈಭವ. ಭರತನ ಪಾತ್ರ ಚಿತ್ರಣ ಮಾಡುವಾಗ ಕವಿಗೆ ಶ್ರೀರಾಮನ

---

* ಕಾಲ ಕ್ರಿ.ಶ. ಸು. 1557. ದೇವಚಂದ್ರನ 'ರಾಜಾವಳಿ ಕಥೆ'ಯನುಸಾರ ಕವಿಯ ತಂದೆಯ ಹೆಸರು ಸೂರ್ಯವಂಶದ ದೇವರಾಜ. ವಿಜಯನಗರದರಸರ ಸಾಮಂತರಾಜ ಕಾರ್ಕಳದ ಭೈರಸರಾಜನ ಆಸ್ಥಾನದ ಶೃಂಗಾರಕವಿ. ಪಶ್ಚಿಮ ಕರಾವಳಿಯ ಮೂಡಬಿದಿರೆ ಈತನ ಜನ್ಮಸ್ಥಳ. ಗುರು 'ಚಾರುಕೀರ್ತಿ'.

ಆದರ್ಶ ಜೀವನ, ಭೋಗದಲ್ಲಿದ್ದೂ ಯೋಗಿಯ ದಿವ್ಯಶಕ್ತಿ ಹೊಂದಿದ್ದ ಶ್ರೀಕೃಷ್ಣನ ರಸಿಕ ಬಾಳು ನೆನಪಿನಲ್ಲಿದ್ದಿರಬಹುದು. ಕೃಷ್ಣನು ಹದಿನಾರು ಸಾವಿರ ಗೋಪಿಕಾ ಸ್ತ್ರೀಯರ ಪ್ರಿಯನಾದರೆ 'ಭರತ' ತೊಂಬತ್ತಾರು ಸಹಸ್ರ ರಾಣಿಯರಿಂದ ಸೇವೆ ಪಡೆಯುತ್ತಿದ್ದ ಭೋಗರಾಜ. 'ಭೋಗದೊಳಿದ್ದು ಯೋಗವ ಮಾಡಿ ಸಂಸೇವ್ಯ ನಾಗಿದ್ದ ಭೋಗರಾಜ. ಭೋಗದೊಳಿದ್ದು ಯೋಗವ ಮಾಡಿ ಭವಮುಕ್ತ'ನಾದ ಶ್ರೇಷ್ಠ ವ್ಯಕ್ತಿತ್ವ ಭರತನದು. ಇದನ್ನು ಕವಿ ಬಹು ರಮ್ಯವಾಗಿ ವಿವರಿಸಿದ್ದಾನೆ. ಈತನದು ಲಲಿತ ಶೈಲಿ. ನಿರೂಪಣೆ ಸರಳ. ಆಧ್ಯಾತ್ಮಿಕ ತತ್ವ ಬೋಧಿಸುವ ರೀತಿ ವಿಶಿಷ್ಟ ರೀತಿಯದು. ಉದಾಹರಣೆಗೆ ಈ ಕೆಲ ಪದ್ಯಗಳನ್ನು ನೋಡಿ.

> 'ಅಂಬರದೊಳಗಿದ್ದ ಸೂರ್ಯನೊಬ್ಬನು ಜಲ'
> ತುಂಬಿದ ಹಲವು ಕುಂಭದೊಳು
> ಬಿಂಬಿಸುವಂತೆಲ್ಲ ಪೆಂಗಳೆದೆಯೊಳೀತ
> ನಿಂಬುಗೊಂಡಿಪ ಪರಿಯೇನು ॥
>
> 'ಆರು ಬಲ್ಲರು ಹಂಸತತ್ವ ತಮ್ಮ ಶ ।'
> ರೀರ ತುಂಬಿರುತಿಹುದದನು
> ಹಾರದೆ ಸಾರದೆ ಹೊರ ಹೊರಗಾಡಿ ಸಂ
> ಸಾರ ದುಃಖದನುಣುತಿಹರು ॥
>
> 'ಒಳಗಿದ್ದ ದೇವನ ಕಾಣದೆ ಹೊರಗೆ ದೇ ।
> ಗುಲವ ಪೂಜಿಸುವೆಗ್ಗನಂತೆ
> ಒಳಗಣಾತ್ಮನ ಬಿಟ್ಟು ಮೈಯನೇ ತಾನೆಂದು
> ಸಲೆ ಹೊಗಳಿಸಿಕೊಳುತಿಹರು ॥

"ಕಥೆ ಹೇಳಿ ತಾತ..." ದಿನೇಶ ಕೂಗಿದ.

"ಹೇಳ್ತೀನಪ್ಪಾ...ಹೇಳ್ತೀನಿ. ಅದನ್ನೇ ಮರ್‍ತುಬಿಟ್ಟಿದ್ದೆ ಅಲ್ವೆ..." ಹುಸಿ ನಕ್ಕು ವಾಸುದೇವರಾಯರನ್ನು ನೋಡಿ ಕಥೆ ಪ್ರಾರಂಭಿಸಿದರು.

'ಆದಿ ತೀರ್ಥಂಕರರ ಹಿರಿಯ ಮಗ 'ಭರತ', ಈತ 96 ಸಹಸ್ರ ರಾಣಿಯ ರೊಡಗೂಡಿ ಭೋಗ ಜೀವನದಲ್ಲಿ ಬಹಳ ಕಾಲ ನಿರತನಾಗಿದ್ದ. ಅವರ ಆಯುಧಾಗಾರ ದಲ್ಲಿ ಪವಿತ್ರ ಚಕ್ರರತ್ನವೊಂದು ಉದಯಿಸಿ ದಿಗ್ವಿಜಯಕ್ಕೆ ಹೊರಡಬೇಕೆಂಬ ಸೂಚನೆ ಇತ್ತಿತು. ಭರತ ದಿಗ್ವಿಜಯಕ್ಕೆ ಹೊರಟ. ಹೋದೆಡೆಯಲ್ಲೆಲ್ಲಾ ಜಯ ಸಾಧಿಸಿ ಸ್ತ್ರೀ ರತ್ನಗಳನ್ನು ಧನಕನಕವನ್ನೂ ಕಪ್ಪಕಾಣಿಕೆಯಾಗಿ ಸ್ವೀಕರಿಸಿ ಜಯಭೇರಿ ಹೊಡಸಿ ಕೊಂಡು ಹಿಂತಿರುಗುತ್ತಿದ್ದಾಗ ಆ ಚಕ್ರ ಭರತನ ತಮ್ಮ 'ಬಾಹುಬಲಿ'ಯ ರಾಜಧಾನಿ ಯಾದ ಪೌದನಪುರದ ಬಾಗಿಲ ಮುಂದೆ ನಿಲ್ಲುತ್ತದೆ. ಬಾಹುಬಲಿ ಅಣ್ಣನೊಡನೆ

ಹೋರಾಡಲು ಸಿದ್ಧನಾಗುತ್ತಾನೆ. ಭರತನು ಅವನೊಡನೆ ಹೋರಾಡಲು ಬಯಸದೆ ಮಾತಿನಿಂದ ಅವನ ಮನವೊಲಿಸುತ್ತಾನೆ. ಬಾಹುಬಲಿ ವಿರಕ್ತನಾಗಿ ಜಿನದೀಕ್ಷೆ ಪಡೆದು ತಪಸ್ಸಿಗೆ ಹೋಗುತ್ತಾನೆ. ಊರಿಗೆ ಹಿಂದಿರುಗಿದ ಭರತ ತಾನೂ ವೈರಾಗ್ಯ ತಾಳಿ ತಪಸ್ಸು ಮಾಡಿ ಕೈವಲ್ಯ ಪಡೆಯುತ್ತಾನೆ. ಕಥೆ ಇಷ್ಟು ಚಿಕ್ಕದಾದರೂ ನಿರೂಪಣೆ, ಕಲ್ಪನೆಯ ಸೌಂದರ್ಯ ಉತ್ಕೃಷ್ಟ ಶೈಲಿಯಿಂದಾಗಿ ಅದ್ಭುತ ಕಾವ್ಯವಾಗಿ ಮೂಡಿ ಬಂದಿದೆ.

ಮಾತು ನಿಲ್ಲಿಸಿದ ವ್ಯಾಸರಾಯರು ಪಕ್ಕದಲ್ಲಿರಿಸಿದ್ದ ತಾಮ್ರದ ತಂಬಿಗೆಯಿಂದ ಪಂಚಪಾತ್ರೆಗೆ ನೀರನ್ನು ಬಗ್ಗಿಸಿಕೊಂಡು ಕುಡಿದರು.

"ಪುರಾಣ ಗ್ರಂಥಗಳಲ್ಲದೆ ಬೇರೆ ರೀತಿಯ ಧಾರ್ಮಿಕ ಮತ್ತು ಲೌಕಿಕ ಸಾಹಿತ್ಯ ರಚನೆ ಜೈನ ಸಾಹಿತ್ಯ ಕ್ಷೇತ್ರದಲ್ಲಿ ಆಗಿಲ್ಲವೇ ಸಾರ್ ?" ಪ್ರಶ್ನಿಸಿದ ರಘುನಾಥ.

"ಆಗಿವೆ. ಆದರೆ ಈ ಸಂಖ್ಯೆ ಕಡಿಮೆ ಎಂದೇ ಹೇಳಬಹುದು" ಎಂದು ನುಡಿದು ಪಕ್ಕದ ಕೈಪಿಡಿ ತೆಗೆದು ಹಾಳೆ ತಿರುವಿ ಓದಲು ಪ್ರಾರಂಭಿಸಿದರು. 15ನೇ ಶತಮಾನದ ಪೂರ್ವಾರ್ಧದಲ್ಲಿದ್ದ **ಕಲ್ಯಾಣ ಕೀರ್ತಿಯ** 'ಜಿನಸ್ತುತಿ', 'ಚಿನ್ಮಯ ಚಿಂತಾಮಣಿ', 'ಫಣಿಕುಮಾರ ಚರಿತೆ', ರತ್ನಾಕರವರ್ಣಿಯ ಸಮಕಾಲೀನನೆಂದು ಹೇಳಲಾಗುವ **ವಿಜಯಣ್ಣನ** ದ್ವಾದಶಾನುಪ್ರೇಕ್ಷೆ', **ಬ್ರಹ್ಮಶಿವನ** 'ಸಮಯ ಪರೀಕ್ಷೆ', 'ತ್ರೈಲೋಕ್ಯ ಚೂಡಾಮಣಿ ಸ್ತೋತ್ರ'. 16ನೇ ಶತಮಾನದಲ್ಲಿದ್ದ **ಪದ್ಮರಸನ** 'ಶೃಂಗಾರ ಕಥೆ', **ಬೊಪ್ಪಣ್ಣ ಪಂಡಿತನ** 'ಗೊಮ್ಮಟ ಜಿನಸ್ತುತಿ', 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ'. **ಶೃಂಗಾರ ಕವಿ ಹಂಸರಾಜನ** 'ರತ್ನಾಕರಾಧೀಶ್ವರ ಶತಕ', **ವೃತ್ತವಿಲಾಸನ** 'ಧರ್ಮಪರೀಕ್ಷೆ', **ಉಮಾಸ್ವಾತಿಯ** 'ತತ್ವರತ್ನ ಪ್ರದೀಪಿಕೆ', **ಅಮಿತಗತಿಯ** 'ಧರ್ಮಪರೀಕ್ಷೆ', **ಗುಣಭದ್ರನ** 'ಆತ್ಮಾನುಶಾಸನ' ಮೊದಲಾದ ಗ್ರಂಥಗಳು ಕನ್ನಡಕ್ಕೆ ಬಂದಿವೆ. ಅನುವಾದಕರಲ್ಲಿ ಮುಖ್ಯವಾದವರುಗಳೆಂದರೆ ಕಾರ್ಕಳದ **ಎ. ಶಾಂತಶಾಸ್ತ್ರಿ, ಎಸ್. ಚಂದ್ರರಾಜೇಂದ್ರಶಾಸ್ತ್ರಿ, ಕೆ. ಜಿ. ಕುಂದಣಗಾರ, ಮೂಡಬಿದ್ರೆ ಲೋಕಶಾಸ್ತ್ರಿ, ಸುಬ್ಬಯ್ಯಶಾಸ್ತ್ರಿ** ಮುಂತಾದವರುಗಳು. ಇದೇ ಕಾಲದಲ್ಲಿ ಹಲವು ಸ್ವತಂತ್ರ ಕೃತಿಗಳೂ ಬಂದಿವೆ. **ಬಂಕಾಪುರದ ಮಹದೇವ ಪ್ರಭಾಕರ ಪೂಜಾರರ** 'ಜೈನಧರ್ಮ ಪರಿಭಾಷೆ', ಧರ್ಮಸ್ಥಳದ **ಪುಟ್ಟಸ್ವಾಮಿಯವರ** 'ಜೈನತತ್ವಸಾರ ಸಂಗ್ರಹ', **ಶ್ರೀಕೃಷ್ಣದತ್ತಭಟ್ಟರ** 'ಜೈನಧರ್ಮ ಮುಂತಾದುವು ಗಳನ್ನು ಹೆಸರಿಸಬಹುದು.

ಇಂದಿನ ಪೀಳಿಗೆಯ ಸಾಹಿತಿಗಳಲ್ಲಿ ಜೈನಸಾಹಿತ್ಯದ ಬಗ್ಗೆ ಹೆಚ್ಚು ಶ್ರಮವಹಿಸಿ ಸಂಶೋಧನೆ ನಡೆಸಿ ಗ್ರಂಥಗಳನ್ನು ರಚಿಸಿರುವವರೆಂದರೆ. **ಮಿರ್ಜಿ ಅಣ್ಣಾರಾಯರು*:** ಇವರ ಪೂರ್ಣ ಹೆಸರು ಅಣ್ಣಪ್ಪ ಅಪ್ಪಣ್ಣ ಮಿರ್ಜಿ.

* ಜೀವಿತ ಕಾಲ ಕ್ರಿ.ಶ. 1918–1975. ಜನ್ಮಸ್ಥಳ ಬೆಳಗಾವಿ ಜಿಲ್ಲೆಯ ಸೇಡಬಾಳ.

ಇವರು ಒಕ್ಕಲು ಮನೆತನಕ್ಕೆ ಸೇರಿದವರು. ಶಾಲೆ ಸೇರಿ ಹೆಚ್ಚಿನ ವಿದ್ಯಾಭ್ಯಾಸ ಮಾಡದಿದ್ದರೂ ಮನೆಯಲ್ಲೆ ಓದಿ 'ಕನ್ನಡಜಾಣ'ರಾದರು. ಅನಂತರ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಕೆಲಸಕ್ಕೆ ಸೇರಿದರು. ಉದ್ಯೋಗದಲ್ಲಿದ್ದೇ ಮೆಟ್ರಿಕ್ ಪಾಸು ಮಾಡಿ ಶಿಕ್ಷಕರ ಟ್ರೈನಿಂಗ್ ಕಾಲೇಜಿನಲ್ಲಿ ಮೊದಲನೆ ತರಗತಿಯಲ್ಲಿ ಉತ್ತೀರ್ಣರಾದರು. ಸೇಡಬಾಳ ಜೀವನ ಶಿಕ್ಷಣ ಶಾಲೆಯಲ್ಲಿ ಶಿಕ್ಷಕರಾಗಿ ಸಾಹಿತ್ಯ ಸೇವೆಯಲ್ಲಿ ಬಹಳ ಕಾಲ ನಿರತರಾಗಿದ್ದರು. 1945ನೇ ವರ್ಷ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ 'ಕನ್ನಡ ಸಾಹಿತ್ಯದಲ್ಲಿ ಜೈನ ಸಾಹಿತ್ಯದ ಸ್ಥಾನ' ವಿಷಯದಲ್ಲಿ ಸಂಶೋಧಾತ್ಮಕ ಸುದೀರ್ಘ ಲೇಖನ ಬರೆದು ಪ್ರಥಮ ಬಹುಮಾನ ಗಳಿಸಿದರು. ಇದೇ ಇವರು ಜೈನ ಸಾಹಿತ್ಯದ ಮೇಲೆ ಆಸಕ್ತಿ ಬೆಳೆಸಲು ಕಾರಣವಾಯಿತೆಂದು ಹೇಳಬಹುದು 'ಜೈನಧರ್ಮ' ಇವರು ರಚಿಸಿರುವ ಸಾವಿರ ಪುಟಗಳ ಬೃಹತ್ ಕೃತಿ. ಇದರಲ್ಲಿ 14 ಪ್ರಕರಣಗಳಿವೆ. ಇದರಲ್ಲಿ ಜೈನಧರ್ಮದ ಲಕ್ಷಣಗಳು, ಮಾನವ ಜನಾಂಗದ ವಿಕಾಸ, ತೀರ್ಥಂಕರರ ಚರಿತ್ರೆ, ಮುಖ್ಯ ಜೈನತತ್ವಗಳನ್ನು ನಿರೂಪಿಸಿರುವುದಲ್ಲದೆ ಜೈನಧರ್ಮದ ವಿಶಿಷ್ಟವಾದ ವಿಚಾರಗಳನ್ನು ವೇದೋಪನಿಷತ್ತಿನ ವಿಚಾರಧಾರೆಯೊಡನೆ ತುಲನಾತ್ಮಕವಾಗಿ ವಿಮರ್ಶಿಸಿದ್ದಾರೆ. ಇಂದಿನ ಯಾಂತ್ರಿಕ ಯುಗದಲ್ಲಿ ಜಗತ್ತಿನ ಮುಂದೆ ಹೊಸ ಹೊಸ ಸಮಸ್ಯೆಗಳು ಉತ್ಪನ್ನವಾಗುತ್ತಿರುವಾಗ ಜೈನಧರ್ಮ ವಿಶ್ವಕಲ್ಯಾಣಕ್ಕಾಗಿ ಯಾವ ಕಾಣಿಕೆ ಕೊಡಬಲ್ಲದೆಂಬುದು ಮಾರ್ಮಿಕವಾಗಿ ವಿವರಿಸಲಾಗಿದೆ. ಈ ಬೃಹತ್ ಗ್ರಂಥಕ್ಕೆ ಕರ್ನಾಟಕ ವಿದ್ಯಾಪೀಠ, ಮೈಸೂರು ಸರ್ಕಾರ, ಧರ್ಮಸ್ಥಳದಲ್ಲಿ ಜರುಗಿದ ಸರ್ವಧರ್ಮ ಪರಿಷತ್ತು ಬಹುಮಾನವಿತ್ತು ಗೌರವಿಸಿದೆ. ಇವರು ರಚಿಸಿರುವ 'ನಿಸರ್ಗ' ಕಾದಂಬರಿಗೆ ದೇವರಾಜನಿಧಿಯ ಪ್ರಥಮ ವರ್ಗದ ಪರಿತೋಷಿಕ ಲಭಿಸಿದೆ. ಸಾಹಿತ್ಯ ಪರಿಷತ್ತು ಹರಪನ ಹಳ್ಳಿ ಸಾಹಿತ್ಯ ಸಮ್ಮೇಳನದಲ್ಲಿ 'ನಿಸರ್ಗ' ಉತ್ಕೃಷ್ಟ ಕಾದಂಬರಿ ಎಂದು ಪಾರಿತೋಷಿಕ ಇತ್ತು ಗೌರವಿಸಿದೆ. 'ರಾಷ್ಟ್ರಪುರುಷ' ಜೈನ ವಾತಾವರಣದಲ್ಲಿ ರೂಪುಗೊಂಡಿರುವ ಇನ್ನೊಂದು ಬೃಹತ್ ಕಾದಂಬರಿ. 'ಪ್ರತಿ ಸರಕಾರ', 'ರಾಮಣ್ಣ ಮಾಸ್ತರು', 'ಅಶೋಕ ಚಕ್ರ', 'ಭಸ್ಮಾಸುರ', 'ಶ್ರೇಯಾಂಸ', 'ಸಾಮ್ರಾಟ್ ಶ್ರೇಣಿಕ' ಇವರು ರಚಿಸಿರುವ ಇತರ ಕಾದಂಬರಿಗಳು. 'ದಶಭಕ್ತಿ', ಚಿನ್ಮಯ ಚಿಂತಾಮಣಿ', ಆಧ್ಯಾತ್ಮಿಕ ಗ್ರಂಥಗಳು. 'ಭಗವಾನ್ ಮಹಾವೀರ', 'ಖಾರವೇಲ', 'ಮಹಮ್ಮದ ಪೈಗಂಬರ', 'ಶ್ರೀ ಶಾಂತಿಸಾಗರರು', ಚರಿತ್ರ ಚಿತ್ರಣಗಳು. 'ಪ್ರಣಯ ಸಮಾಧಿ', 'ವಿಜಯಶ್ರೀ' ಕಥಾ ಸಂಕಲನಗಳು. ಇವಲ್ಲದೆ ಅನೇಕ ವ್ಯಕ್ತಿಚಿತ್ರಗಳು, ಪ್ರಬಂಧಗಳು, ಪ್ರವಾಸ ಲೇಖನಗಳು ಪ್ರಕಟಗೊಂಡಿವೆ. 'ರತ್ನಕರಂಡಕಶ್ರಾವಕಾಚಾರ' ಮತ್ತು 'ರವಿಷೇಣ ರಾಮಾಯಣ' ವಿದ್ವತ್‌ಪೂರ್ಣ ಗ್ರಂಥಗಳು. ರಾಜ್ಯಸರ್ಕಾರದ ಸಾಹಿತ್ಯ ಅಕಾಡೆಮಿ 1969ರಲ್ಲಿ ಪ್ರಶಸ್ತಿ ಇತ್ತು ಗೌರವಿಸಿದೆ. ಭಾರತ ಸರ್ಕಾರ 'ಆದರ್ಶ ಶಿಕ್ಷಕ'ರೆಂದು (1967) ಪ್ರಶಸ್ತಿ ನೀಡಿ ಸನ್ಮಾನಿಸಿದೆ.

ಜೈನಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿರುವ ಮತ್ತೊಬ್ಬ ವ್ಯಕ್ತಿ ಪಂಡಿತ **ಭುಜಬಲಶಾಸ್ತ್ರಿ***: ದಕ್ಷಿಣಕನ್ನಡ ಜಿಲ್ಲೆಯ ಕಿರೋಡಿ ಇವರ ಜನ್ಮಸ್ಥಳ. ಗಳಿಸಿದ ವಿದ್ಯೆಯಿಂದಾಗಿ 'ಶಾಸ್ತ್ರಿ', 'ನ್ಯಾಯಾಚಾರ್ಯ', 'ನ್ಯಾಯಭೂಷಣ' ಇತ್ಯಾದಿ ಉಪಾಧಿಗಳನ್ನು ಸಂಪಾದಿಸಿಕೊಂಡಿದ್ದಾರೆ. ಇವರು ಉತ್ತರ ಹಿಂದೂಸ್ಥಾನದ ಬಿಹಾರ ಪ್ರಾಂತ್ಯದ ಆರಾ ನಗರದಲ್ಲಿರುವ ಜೈನ ಸಿದ್ಧಾಂತ ಭವನದ ಸಂಚಾಲಕರಾಗಿಯೂ, ಜೈನಸಿದ್ಧಾಂತ ಭಾಸ್ಕರ ಎಂಬ ಹಿಂದಿ ಮಾಸಿಕದ ಸಂಪಾದಕರಾಗಿಯೂ ಹಲವು ವರ್ಷ ದುಡಿದಿದ್ದಾರೆ. ಇವರು ಕನ್ನಡದಲ್ಲಿ ಸುಮಾರು 32 ಕೃತಿಗಳನ್ನು, ಹಿಂದಿಯಲ್ಲಿ 2 ಕೃತಿಗಳನ್ನು, ಸಂಸ್ಕೃತದಲ್ಲಿ ಒಂದು ಗ್ರಂಥವನ್ನು ರಚಿಸಿದ್ದಾರೆ.

'ಜೈನ ಸಾಹಿತ್ಯ ವಿಶಾರದ', 'ಸಾಹಿತ್ಯ ಸುಧಾರಕ' ಬಿರುದು ಗಳಿಸಿರುವ **ಕೆ. ಎಸ್. ಧರಣೇಂದ್ರಯ್ಯ** ಜೈನ ಸಾಹಿತ್ಯ ಕ್ಷೇತ್ರದಲ್ಲಿ ನೆನೆಯಬೇಕಾದ ವ್ಯಕ್ತಿ. ಇವರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿಯೂ, ಸರ್ಕಾರದ ಸಂಸ್ಕೃತ ಅಭಿವೃದ್ಧಿ ಇಲಾಖೆಯ ನಿರ್ದೇಶಕರಾಗಿಯೂ, ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿಯೂ ವಿವಿಧ ಕ್ಷೇತ್ರಗಳಲ್ಲಿ ದುಡಿದಿದ್ದಾರೆ.

**ಪ್ರೊ|| ಹಂಪ. ನಾಗರಾಜಯ್ಯ**†: ಸಾಹಿತ್ಯಕ್ಷೇತ್ರದಲ್ಲಿ ಅದರಲ್ಲೂ ಜೈನ ವಿಭಾಗದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ, ಸಲ್ಲಿಸುತ್ತಿರುವ ವ್ಯಕ್ತಿ ಎಂದರೆ ಹಂಪಸಂದ್ರದ ನಾಗರಾಜಯ್ಯನವರು. ಪ್ರಸ್ತುತ ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾರೆ. ಹಿಂದೆ ಸುಮಾರು 8 ವರ್ಷಗಳ ಕಾಲ ಪರಿಷತ್ತಿನ ಕಾರ್ಯದರ್ಶಿಗಳಾಗಿಯೂ ದುಡಿದಿದ್ದಾರೆ, ಬಹುಮುಖ ಪ್ರತಿಭೆ ಇವರದು. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೊಡುಗೆಗಳನ್ನಿತ್ತಿದ್ದಾರೆ. ಸಂಪಾದಿಸಿರುವ ಕೃತಿಗಳು ಪಂಪ ಭಾರತ ಸಂಗ್ರಹ, ಜಯನೃಪ ಕಾವ್ಯ ಸಂಗ್ರಹ. ಭರತೇಶ ವೈಭವ, ಸಾಳ್ವ ಭಾರತ, ಧನ್ಯಕುಮಾರ ಚರಿತೆ, ನಾಗಕುಮಾರ ಷಟ್ಪದಿ, ರತ್ನಾಕರನ ಹಾಡುಗಳು, ನೇಮಿನಾಥ ಪುರಾಣ (ಇತರರೊಡನೆ), ಶಾಂತಿ ಪುರಾಣ.

ಅಜಾತ ಶತ್ರು, ಶಂಭವ ಸಾಗರ ಚರಿತೆ. ಮಹಾವೀರ ಮುಂತಾದ ಜೀವನ ಚರಿತೆಗಳನ್ನು ನಾಗಶ್ರೀ, ಸವ್ಯಸಾಚಿ ಪಂಪ ಎಂಬ ಕಾದಂಬರಿಗಳನ್ನು ರಚಿಸಿರುವು

---

* ಜನನ ಫೆಬ್ರವರಿ 1897.

† ಜನನ : 7-10-1936. ಜನ್ಮಸ್ಥಳ ಗೌರಿಬಿದನೂರು ತಾಲ್ಲೂಕಿನ ಹಂಪಸಂದ್ರ. ತಂದೆ ಶಾನುಭೋಗ ಪದ್ಮನಾಭಯ್ಯ. ತಾಯಿ ಪದ್ಮಾವತಮ್ಮ. ಸುಮಾರು 7 ವರ್ಷ (1978ರಿಂದ) ಕ.ಸಾ.ಪ. ಅಧ್ಯಕ್ಷರಾಗಿದ್ದಾರೆ. ಭಾಷಾವಿಜ್ಞಾನದಲ್ಲಿ ಅಪಾರ ಕೃಷಿ ಮಾಡಿದ್ದಾರೆ. ಮುಖ್ಯ ಕೃತಿಗಳು ದ್ರಾವಿಡ ಭಾಷಾ ವಿಜ್ಞಾನ, ಭಾಷಾ ವಿಜ್ಞಾನ, ಭಾರತ ಭಾಷಾ ಸಮಸ್ಯೆ. ಭಾಷೆ, ಭಾಷಾ ವಿಜ್ಞಾನಿಗಳು ಮುಂತಾದವು. 'ಸಾಂಗತ್ಯ ಕವಿಗಳು' ಇವರು ರಚಿಸಿರುವ ಒಂದು ಸಾಹಿತ್ಯ ಚರಿತ್ರೆ. ಸಂಶೋಧನಾ ಗ್ರಂಥಗಳು ; ಯಕ್ಷ-ಯಕ್ಷಿಯರು. ನೋಂಪಿಯ ಕಥೆಗಳು, ಗೊಮ್ಮಟ-ಬಾಹುಬಲಿ.

ದಲ್ಲದೆ ಶಿಶುಸಾಹಿತ್ಯದಡಿಯಲ್ಲಿ ನಾಡೋಜ ಪಂಪ, ಮಹಾಕವಿ ರನ್ನ, ಬಸವಪ್ಪ ಶಾಸ್ತ್ರಿ, ಮಹಾವೀರ ಮುಂತಾದ ಕೃತಿಗಳನ್ನು ಇತ್ತಿದ್ದಾರೆ. ಪ್ರಚಾರೋಪನ್ಯಾಸ ಮಾಲೆಯಲ್ಲಿ ಬಂದಿರುವ ಗ್ರಂಥಗಳು ವಡ್ಡಾರಾಧನೆ, ಮೂರನೆಯ ಮಂಗರಸ. ವಡ್ಡಾರಾಧನೆ ಮೇಲೆ ಸಂಶೋಧನೆ ನಡೆಸಿ ಡಾಕ್ಟರೇಟ್ ಗಳಿಸಿದ್ದಾರೆ.

**ಪ್ರೊ॥ ಕಮಲಾ ಹಂಪನಾ*:** ಈಕೆ ಹಂಪಾನಾಗರಾಜಯ್ಯನವರ ಪತ್ನಿ. ಈಕೆಯ ಸಾಹಿತ್ಯ ಕೃಷಿಯೂ ಬಹು ವ್ಯಾಪಕವಾದುದು. ಕಥೆ, ಕವನ, ವಿಮರ್ಶೆ, ಸಂಶೋಧನೆ, ಶಿಶು ಸಾಹಿತ್ಯ, ಜೀವನ ಚರಿತ್ರೆ, ಗ್ರಂಥ ಸಂಪಾದನೆ ಇತ್ಯಾದಿ ಕ್ಷೇತ್ರಗಳಲ್ಲಿ ಯಶಸ್ವಿಯಾಗಿ ದುಡಿಯುತ್ತಿದ್ದಾರೆ. ಜೈನ ಸಾಹಿತ್ಯಕ್ಕೂ ಅಪಾರ ಕೊಡುಗೆಗಳನ್ನಿತ್ತಿದ್ದಾರೆ. ಈ ದಿಸೆಯಲ್ಲಿನ ಅವರ ಮುಖ್ಯ ಕೃತಿಗಳು 'ಸುಕುಮಾರ ಚರಿತೆಯ ಸಂಗ್ರಹ', 'ಚಾವುಂಡರಾಯ ಪುರಾಣ', 'ಮಹಾವೀರ', 'ಶಾಂತಿನಾಥ', ಆದರ್ಶ ಜೈನ ಮಹಿಳೆಯರು, ಮಹಾವೀರನ ಜೀವನ ಸಂದೇಶ, ಜೈನ ಜೀವನ ಪರಿಸರ, ಅನೇಕಾಂತವಾದ, ಮುಂತಾದವುಗಳು. ಈಕೆಯ ಕೆಲ ಸಂಪಾದಿತ ಕೃತಿಗಳಿಗೆ ಹಂಪನಾ, ಕೆ. ಆರ್. ಶೇಷಗಿರಿ, ಪ್ರೊ॥ ಜಿ. ಬ್ರಹ್ಮಪ್ಪ ಮುಂತಾದವರುಗಳು ನೆರವು ನೀಡಿದ್ದಾರೆ. ಪ್ರಸ್ತುತ ಈಕೆ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ. ಕರ್ಣಾಟಕ ಸಾಹಿತ್ಯ ಅಕಾಡೆಮಿ 1985ರ ವಿಶೇಷ ಪ್ರಶಸ್ತಿ ನೀಡಿದೆ.

**ಪ್ರೊ॥ ಜಿ. ಬ್ರಹ್ಮಪ್ಪ†:** ಬಹುಮುಖ ಪ್ರತಿಭೆಯ ವ್ಯಕ್ತಿ. ಕಾದಂಬರಿ, ವಿಮರ್ಶೆ, ಜೀವನ ಚರಿತ್ರೆ, ಸಂಶೋಧನೆ, ಮಕ್ಕಳ ಸಾಹಿತ್ಯ, ಅನುವಾದ ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ದುಡಿದಿದ್ದಾರೆ. ರತ್ನಾಕರ ವರ್ಣಿಯ ಭರತೇಶ ವೈಭವ, ಶತಕ ಸಾಹಿತ್ಯ, ಕೃತಿಗಳನ್ನು ಸಂಪಾದಿಸಿದ್ದಾರೆ. ರತ್ನಾಕರ, ಅತ್ತಿಮಬ್ಬೆ, ನಮಸೇನ, ವೀರೇಂದ್ರ ಬಾಹುಬಲಿ ಕುರಿತು ಮಕ್ಕಳಿಗಾಗಿ ಪುಸ್ತಕ ರಚಿಸಿದ್ದಾರೆ. ಚಂದ್ರನಾಗರು, ಮುನಿಶ್ರೀವಿದ್ಯಾನಂದ, ವರ್ಧಮಾನ ಮಹಾವೀರರ ಜೀವನ ಚರಿತ್ರೆ ರಚಿಸಿದ್ದಾರೆ, ಜಿನಸೇನ ಮತ್ತು ಗುಣಭದ್ರರ ಮಹಾಪುರಾಣದ ಅನುವಾದ ಮಾಡಿದ್ದಾರೆ. ವಿದ್ಯಾನಂದ ಮುನಿಗಳ ನಿಕಟ ಸಂಪರ್ಕದಿಂದ ರಚಿಸಿದ 'ವಿದ್ಯಾನಂದ ವಾಣಿ' ಬ್ರಹ್ಮಪ್ಪನವರ ವಿಶಿಷ್ಟವಾದ ಕೃತಿ.

---

* ಜನನ : 28–10–35. ಜನ್ಮಸ್ಥಳ ಕ್ಯಾತಸಂದ್ರ, ತುಮಕೂರು ತಾಲ್ಲೋಕು. ಜೈನ ಮತಕ್ಕೆ ಹೊರತಾದ ಅವರ ಕೃತಿಗಳು : ನಕ್ಕಿತು ಹಾಲಿನ ಬಟ್ಟಲು, ರೆಕ್ಕೆ ಮುರಿದಿತ್ತು, ಚಂದನಾ, ಅಕ್ಕಮಹಾದೇವಿ, ಹಳವನಕಟ್ಟೆ ಗಿರಿಯಮ್ಮ, ವೀರವನಿತೆ ಓಬವ್ವ, ಡಾ॥ ಬಿ. ಆರ್. ಅಂಬೇಡ್ಕರ್, ಡಾ॥ ಡಿ. ಎಲ್. ನರಸಿಂಹಾಚಾರ್ಯರ ಆಯ್ದ ಲೇಖನಗಳು, ಬಿಂದಲಿ (ವಚನ ಸಂಕಲನ) ಮುಂತಾದವು.

† ಜನನ : ಮೇ 1924, ಸ್ಥಳ ; ಕೊರಟಗೆರೆ ತಾಲ್ಲೋಕು ಅರಸಾಪುರ.

## (ಉ) 'ವೀರಶೈವ ಪುರಾಣ' ರಚನಕಾರರು

ಈಗ ನಾವು ವೀರಶೈವ ಪುರಾಣಗಳು ಹಾಗು ಆದಿಶೈವ ಪುರಾಣಗಳಿಂದ ಉದ್ಧೃತ ಕಥೆಗಳ ಆಧಾರದ ಮೇಲೆ ಕಾವ್ಯ, ಚರಿತೆ, ವಚನ, ಹಾಡುಗಳನ್ನು ರಚಿಸಿದ ಮುಖ್ಯ ಕವಿಗಳ ಪರಿಚಯ ಮಾಡಿಕೊಳ್ಳೋಣ. ಈ ಸಂಪ್ರದಾಯದ ಕವಿಗಳಲ್ಲಿ ಮೊದಲು ನೆನಪಿಗೆ ಬರುವ ಕವಿಗಳೆಂದರೆ ಹರಿಹರ, ರಾಘವಾಂಕ ಮತ್ತು ಷಡಕ್ಷರ ದೇವ. ಇವರ ವಿಷಯವನ್ನು ನಾವು ಆಗಲೇ ಹಿಂದೆ ಅರಿತಿದ್ದೇವೆ. ಈಗ ಉಳಿದ ಶೈವ ಸಂಪ್ರದಾಯದ ಕವಿಗಳನ್ನು ಅರಿಯೋಣ.

ರಾಘವಾಂಕನ ತರುವಾಯ ಪುನಃ ಷಟ್ಪದಿಗೆ ಜೀವ ಕೊಟ್ಟವನು **'ಭೀಮಕವಿ'***1. ಈತ ಜೀವಿಸಿದ್ದುದು 14ನೇ ಶತಮಾನದ ಉತ್ತರಾರ್ಧದಲ್ಲಿ. ಈತನು ಬರೆದ 'ಬಸವ ಪುರಾಣ' ಭಾಮಿನಿ ಷಟ್ಪದಿಯಲ್ಲಿ ಬರೆದ ಮಹತ್ಗ್ರಂಥ. ಇದು ಪಾಲ್ಕುರಿಕೆ ಸೋಮನಾಥನ ತೆಲುಗು ಬಸವ ಪುರಾಣದ ಅನುವಾದ. ಆದರೂ ಕವಿ ನಿರೂಪಣೆ ಯಲ್ಲಿ ಅದರಲ್ಲೂ ಎರಡನೆಯ ಮುಕ್ಕಣ್ಣ ಬಸವಣ್ಣನ ಚರಿತ್ರೆಯನ್ನು ಹೇಳುವಲ್ಲಿ ತನ್ನ ಪ್ರತಿಭೆಯನ್ನು ತೋರಿದ್ದಾನೆ. ಈ ಕಾವ್ಯದಲ್ಲಿ ಬಸವಣ್ಣನವರ ವ್ಯಕ್ತಿತ್ವ ನಿರೂಪಣೆ, ಪವಾಡಗಳ ವರ್ಣನೆ ಪ್ರಧಾನವಾಗಿದೆ. ಪ್ರೌಢಶೈಲಿಯ ಜೊತೆಗೆ ದೇಸಿ ಪದ ಪ್ರಯೋಗವನ್ನು ಹಿತ ಮಿತವಾಗಿ ಮಾಡಿ ಕಾವ್ಯವನ್ನು ಹೆಚ್ಚು ಜನಪ್ರಿಯ ಮಾಡಲು ಪ್ರಯತ್ನಿಸಿದ್ದಾನೆ.

**'ಪದ್ಮಣಾಂಕ'** ಇದೇ ಕಾಲದ ಇನ್ನೊಬ್ಬ ಪ್ರಸಿದ್ಧ ಕವಿ. 'ಪದ್ಮರಾಜ ಪುರಾಣ'ದಲ್ಲಿ ತನ್ನ ಪಾಂಡಿತ್ಯವನ್ನು ಬಹು ಚೆನ್ನಾಗಿ ಪ್ರದರ್ಶಿಸಿದ್ದಾನೆ. ಈತನ ಕಾವ್ಯ ವಾರ್ಧಕ ಷಟ್ಪದಿಯಲ್ಲಿದ್ದರೂ ಸಂಸ್ಕೃತ ಪದಪ್ರಯೋಗ ಹೇರಳವಾಗಿ ಕಾಣು ತ್ತೇವೆ. ಈ ಕಾವ್ಯದಲ್ಲಿ ಕೆರೆಯ ಪದ್ಮರಸನ ಚರಿತ್ರೆ ನಿರೂಪಿತವಾಗಿದೆ. ಇದರಲ್ಲಿ ಪ್ರಾಸಂಗಿಕವಾಗಿ ಹರಿಹರನ ವಿಷಯವೂ ಬಂದಿದೆ. ವ್ಯಕ್ತಿಯೊಬ್ಬನನ್ನು ಕುರಿತಾದ ಇಂತಹ ಗ್ರಂಥ ನಮ್ಮ ಸಾಹಿತ್ಯದಲ್ಲಿ ವಿರಳವೆಂದು ಹೇಳಬಹುದು.

**ಚಾಮರಸ***2: ಈತನ 'ಪ್ರಭುಲಿಂಗಲೀಲೆ' 15ನೇ ಶತಮಾನದ ಉತ್ಕೃಷ್ಟ ಕೃತಿ. ಈ ಕಾವ್ಯದ ನಾಯಕ 'ಅಲ್ಲಮಪ್ರಭು'. ಕಥಾವಸ್ತು ಹರಿಹರನ ಪ್ರಭುದೇವ ರಗಳೆ ಹಾಗೂ ಈ ಕಾವ್ಯದಲ್ಲೂ ಒಂದೇ ಆಗಿದ್ದರೂ ಅಲ್ಲಮನ ಪಾತ್ರ

---

*1 ಈತ ರಚಿಸಿರುವ ಇನ್ನೊಂದು ಕೃತಿ 'ಭೀಮಕವೀಶ್ವರ ರಗಳೆ'.

*2 ಈತನ ಕಾಲ ಸು. ಕ್ರಿ.ಶ. 1430. ಪ್ರೌಢ ದೇವರಾಯನ ಆಸ್ಥಾನಕವಿ. ಕಾವ್ಯ ಭಾಮಿನಿ ಷಟ್ಪದಿಯಲ್ಲಿದೆ.

ನಿರೂಪಣೆಯಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಹರಿಹರನ ಅಲ್ಲಮನು ಮೋಹ ಪರವಶನಾಗಿ ವಿರಹದಲ್ಲಿ ಬೆಂದು ವೈರಾಗ್ಯ ಪಡೆದರೆ ಚಾಮರಸನ ಅಲ್ಲಮ ಮಾಯೆಯನ್ನೇ ಮರುಳುಗೊಳಿಸಿ ವೈರಾಗ್ಯ ಪಡೆಯುತ್ತಾನೆ. ಹೀಗೆ ಪ್ರಭುಲಿಂಗಲೀಲೆಯಲ್ಲಿ ಕವಿ ಕಾಳಗಕಥೆಯನ್ನಾಗಲಿ, ಸತ್ಪುರುಷರ ಚರಿತೆಯನ್ನಾಗಲಿ ಹೇಳದೆ ಶಿವಲೀಲೆಯನ್ನು ರಸಾತ್ಮಕವಾಗಿ ಬಣ್ಣಿಸಿದ್ದಾನೆ. ಕಾವ್ಯದುದ್ದಕ್ಕೂ ಕಲ್ಪನಾ ಸೌಂದರ್ಯ ಪ್ರಫುಲ್ಲವಾಗಿ ಮೆರೆದಿದೆ. ಈತನ ಶೈಲಿಯಲ್ಲಿ ಆಡಂಬರವಿಲ್ಲ. ಅತಿ ಅಲಂಕಾರವೂ ಇಲ್ಲ. ಉದಾಹರಣೆಗಾಗಿ ಒಂದು ಸಣ್ಣ ಪದ್ಯ—

ಬೀಱುತಿರ್ದಳು ಮುದ್ದುತನವನು
ಹೇಱುತಿರ್ದಳು ಸಕಲ ಚೆಲುವನು
ತೋಱುತಿರ್ದಳು ಜಗದ ಜಂಗುಳಿಗಾಡುವೊಸಲಾಗಿ ।
ಸಾಱುತಿರ್ದಳು ಸಕಲ ಸೊಬಗನು
ಮೀಱುತಿರ್ದಳು ದಿನ ದಿನಕೆ ಕಳೆ
ಯೇಱುತಿರ್ದಳು ಮಾಯೆ ವಿವಿಧ ವಿಲಾಸ ವೃತ್ತಿಯಲಿ ॥

ಇದೇ ಶತಮಾನದಲ್ಲಿದ್ದ **ಬೊಮ್ಮರಸ***1 ವಾರ್ಧಕ ಷಟ್ಪದಿಯಲ್ಲಿ 'ಸೌಂದರ ಪುರಾಣ' ಬರೆದಿದ್ದಾನೆ. ಇದರಲ್ಲಿ 63 ಶಿವಭಕ್ತರಲ್ಲಿ ಒಬ್ಬನಾದ ಸೌಂದರೇಶ ಅಥವಾ ನಂಬಿಯಣ್ಣ ಎಂಬುವನ ಚರಿತ್ರವು ವರ್ಣಿತವಾಗಿದೆ. **ಚತುರ್ಮುಖ ಬೊಮ್ಮರಸ***2ನು ವಾರ್ಧಕ ಷಟ್ಪದಿಯಲ್ಲಿ ಸಿದ್ಧೇಶ್ವರ ಪುರಾಣ ರಚಿಸಿದ್ದಾನೆ.

ಮಹಾದೇವಿಯಕ್ಕನ ಪುರಾಣ ಬರೆದ **ಚೆನ್ನಬಸವಾಂಕ**; 'ವೀರಶೈವಾಮೃತ ಪುರಾಣ' ಮತ್ತು 'ಭಾವ ಚಿಂತಾರತ್ನ'*3 ಬರೆದ **ಗುಬ್ಬಿಯ ಮಲ್ಲಣಾರ್ಯ**; 'ತೋಂಟದ ಸಿದ್ಧೇಶ್ವರಪುರಾಣ'*4 ಬರೆದಿರುವ **ಶಾಂತೇಶ**; 'ಚೆನ್ನಬಸವಪುರಾಣ'*5 ಬರೆದಿರುವ **ವಿರೂಪಾಕ್ಷ ಪಂಡಿತ**; ಸಿದ್ಧೇಶ್ವರ ಪುರಾಣ*6, ಪಾಲ್ಕುರಿಕೆ

---

*1 ಕಾಲ ಸು. ಕ್ರಿ.ಶ. 1450. *2 ಕಾಲ ಸು. ಕ್ರಿ.ಶ. 1500. *3 ವಾರ್ಧಕ ಷಟ್ಪದಿಯಲ್ಲಿದೆ. ಇದಕ್ಕೆ ಸತ್ಯೇಂದ್ರ ಚೋಳ ಕಥೆ ಎಂದೂ ಹೆಸರು. ಇದರಲ್ಲಿ ಪಂಚಾಕ್ಷರಿ ಮಹತ್ವದ ಬೋಧೆ ಇದೆ. ವೀರಶೈವಾಮೃತ ಪುರಾಣ 2000 ಪದ್ಯಗಳುಳ್ಳ ಬೃಹತ್ ಕೃತಿ. ಇದು ಶಿವತತ್ವ ಚಿಂತಾಮಣಿಗೂ ದೊಡ್ಡದಾದುದು.

*4 ಭಾಮಿನಿ ಷಟ್ಪದಿಯ ಕಾವ್ಯ. ಇದರಲ್ಲಿ ತೋಂಟದ ಸಿದ್ಧಲಿಂಗಯತಿಯ ಚರಿತೆ ಹೇಳಿದೆ.

*5 ಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ ಬಸವನ ಸೋದರಿ ನಾಗಲಾಂಬಿಕೆಯ ಪುತ್ರನಾದ ಚೆನ್ನಬಸವನ ಚರಿತೆ ವರ್ಣಿತವಾಗಿದೆ. ಅಲ್ಲದೆ ಶಿವನ ಲೀಲೆ, ಸೋಮ ಸೂರ್ಯಾನ್ವಯ, ಪರಶರಣರ ಚರಿತೆ, ದೀಕ್ಷಾ ವಿಧಾನ, ಷಟ್ಸ್ಥಲ, ಕಾಲಜ್ಞಾನ ವಿಷಯಗಳೂ ನಿರೂಪಿಸಲ್ಪಟ್ಟಿವೆ.

*6 ವಾರ್ಧಕ ಷಟ್ಪದಿ ಕಾವ್ಯ. ನಿರಂಜನ ಗಣೇಶ್ವರರ ಅಪರಾವತಾರವಾದ ತೋಂಟದ ಸಿದ್ಧಲಿಂಗಯತಿಯ ಚರಿತವು ವರ್ಣಿತವಾಗಿದೆ.

ಸೋಮೇಶ್ವರ ಪುರಾಣ*1, ಕರ್ಣಾಟಕ ಶಬ್ದಮಂಜರಿ, ಮನೋವಿಜಯ ತಾತ್ಪರ್ಯ ಬರೆದಿರುವ **ವಿರಕ್ತ ತೋಂಟದಾರ್ಯ** (ಅಂಕಿತ ನಾಮ 'ನಿರಂಜನ ಲಿಂಗ'); ಹದಿನಾರನೆ ಶತಮಾನದಲ್ಲಿದ್ದ ಪ್ರಸಿದ್ಧ ಕವಿಗಳು.

'ಭೈರವೇಶ್ವರ ಪುರಾಣ' ಬರೆದಿರುವ **ಸಿದ್ಧಲಿಂಗ ಶಿವಯೋಗಿ** ; 'ಶಿವಾಧಿಕ್ಯ ಪುರಾಣ' ಬರೆದಿರುವ **ಬಸವಲಿಂಗ** ; 'ಪ್ರಭುದೇವರ ಪುರಾಣ' ಬರೆದಿರುವ **ಹರೀಶ್ವರ** ; 'ನಂಜುಂಡೇಶ್ವರ ಪುರಾಣ*2' ಬರೆದಿರುವ **ವೀರಣಾರ್ಯ**; 'ಕೊಟ್ಟೂರು ಬಸವೇಶ್ವರ ಪುರಾಣ' ಬರೆದಿರುವ **ಬಸವಲಿಂಗ ಕವಿ** ; ಹದಿನೇಳನೆಯ ಶತಮಾನದ ಹೆಸರಾಂತ ಕವಿಗಳು.

**ವೈ. ನಾಗೇಶಶಾಸ್ತ್ರಿಗಳು***3 : ವೀರಶೈವ ಸಾಹಿತ್ಯವನ್ನು ಸಮೃದ್ಧಗೊಳಿಸಿದ ಆಧುನಿಕ ಕವಿಗಳಲ್ಲಿ ವೈ. ನಾಗೇಶಶಾಸ್ತ್ರಿಗಳು ಪ್ರಸಿದ್ಧರು. ಗವಿಸಿದ್ಧೇಶ್ವರ ಪುರಾಣ, ಮರಿಯೋಗೀಶ್ವರ ಪುರಾಣ, ಶ್ರೀ ಪಾಲಾಕ್ಷ ಶಿವಯೋಗೀಶ್ವರ ಪುರಾಣ ಮುಂತಾದ ಪುರಾಣ ಕೃತಿಗಳನ್ನು ರಚಿಸಿರುವುದಲ್ಲದೆ ಕಾಳಿದಾಸನ ರಘುವಂಶ, ಕುಮಾರ ಸಂಭವ ಮತ್ತು ಭಗವದ್ಗೀತೆ, ಚಂದ್ರಾಲೋಕ ಇವುಗಳನ್ನು ಷಟ್ಪದಿ ಚಂಪೂಶೈಲಿ ಯಲ್ಲಿ ರಚಿಸಿದ್ದಾರೆ. ವಿಜಯನಗರಾಭ್ಯುದಯ, ವಜ್ರಾಂಗುಲಿಯ ಇವರು ರಚಿಸಿರುವ ನಾಟಕಗಳು. ಶಿವಾನುಭವ ಸೂತ್ರಸಾರ, ಷಟ್ಸ್ಥಳತತ್ವದರ್ಪಣ, ಧಾರ್ಮಿಕ ಗ್ರಂಥ ಗಳು. ಇವರು 'ವಿದ್ಯಾ ವಿನೋದಿನಿ' 'ಅಭಿನವ ಗೀತೆ' ಎಂಬ ಎರಡು ಕಾದಂಬರಿ ಗಳನ್ನು ಬರೆದಿರುವುದಲ್ಲದೆ 'ಕರ್ನಾಟಕ ಬಂಧು' ಎಂಬ ವಾರಪತ್ರಿಕೆಯ ಸಂಪಾದ ನೆಯ ಕಾರ್ಯವನ್ನು ಹಲವು ವರ್ಷ ನಿರ್ವಹಿಸಿದ್ದಾರೆ. ನಾಗೇಶಶಾಸ್ತ್ರಿಗಳು ಬಾಲ್ಯದಲ್ಲಿ ಬಡತನದಿಂದಾಗಿ ಹೆಚ್ಚು ಓದಲು ಸಾಧ್ಯವಾಗದಿದ್ದರೂ ಉಪಾಧ್ಯಾಯ ರಾಗಿ ಜೀವನ ಪ್ರಾರಂಭಿಸಿ ಸ್ವಶ್ರಮದಿಂದ ಕನ್ನಡ, ಸಂಸ್ಕೃತ, ತೆಲುಗು, ಮರಾಠಿಯಲ್ಲಿ ಪ್ರೌಢಿಮೆ ಗಳಿಸಿದರು. ಬಳ್ಳಾರಿಯ ವಾರ್ಡ್ಲಾ ಹೈಸ್ಕೂಲು, ಮದನಪಲ್ಲಿಯ ಥಿಯಸಾಫಿಕಲ್ ಕಾಲೇಜು, ಬೆಳಗಾವಿಯ ಲಿಂಗರಾಜ ಕಾಲೇಜು, ಬಳ್ಳಾರಿಯ ವೀರ ಶೈವ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ನಿಷ್ಕಾಮ ಸೇವೆ, ವಿದ್ಯಾ ಪ್ರೌಢಿಮೆಯನ್ನು ಗುರುತಿಸಿ ಮೈಸೂರು ಮಹಾರಾಜರು ಇವರನ್ನು ಆಸ್ಥಾನ ವಿದ್ವಾಂಸರಾಗಿ 1930ರಲ್ಲಿ ನೇಮಿಸಿ ಗೌರವಿಸಿದ್ದರು. 1933ರಲ್ಲಿ ಕನ್ನಡ ಜನತೆ ಇವರನ್ನು ಹುಬ್ಬಳ್ಳಿಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಸನ್ಮಾನಿಸಿತ್ತು. ಇವರ ಕೀರ್ತಿ ಕರ್ನಾಟಕಕ್ಕೇ ಸೀಮಿತವಾಗಿರಲಿಲ್ಲ. 1925ರಲ್ಲಿ

---

*1 ವಾರ್ಧಕ ಷಟ್ಪದಿ ಕಾವ್ಯ. ಇದರಲ್ಲಿ ಭೃಂಗಿಯ ಅಪರಾವತಾರವಾದ ಪಾಲ್ಕುರಿಕೆ ಸೋಮೇಶ್ವರನ ಚರಿತವು ವರ್ಣಿತವಾಗಿದೆ. ನಿರಂಜನ ಲಿಂಗಸ್ತುತಿ ಸಹ ಇದೆ.

*2 ಭಾಮಿನಿ ಷಟ್ಪದಿ ಕಾವ್ಯ. ನಂಜನಗೂಡು ನಂಜುಂಡೇಶ್ವರನ ಮಹಿಮೆ ವರ್ಣಿತ ವಾಗಿದೆ. ಪಾರ್ವತಿ, ಗಂಗೆ, ಗಣೇಶ, ಬಸವ, ವೀರಭದ್ರ, ಭೃಂಗಿಯರ ಸ್ತುತಿಗಳಿವೆ.

*3 ಜೀವಿತಕಾಲ ಕ್ರಿ.ಶ. 1893–1975. ಹುಟ್ಟಿದ ಸ್ಥಳ : ಬಳ್ಳಾರಿ ಜಿಲ್ಲೆಯ ಏಳುಬಿಂಚಿ.

ಕಲ್ಕತ್ತಾ ವಿಶ್ವವಿದ್ಯಾನಿಲಯ 'ಸರ್ವ ದರ್ಶನ ತೀರ್ಥ', ಮದರಾಸು ವಿಶ್ವವಿದ್ಯಾ ನಿಲಯ 1927ರಲ್ಲಿ 'ಕನ್ನಡ–ಸಂಸ್ಕೃತ ವಿದ್ವಾನ್' ಪದವಿ ಇತ್ತು ಅವರ ಕೀರ್ತಿ ರಾಷ್ಟ್ರವ್ಯಾಪಿಯಾಗುವಂತೆ ಮಾಡಿವೆ.

ಇಪ್ಪತ್ತನೆಯ ಶತಮಾನದಲ್ಲಿ 'ಸಿದ್ಧರಾಮೇಶ್ವರ ಪುರಾಣ' ಪ್ರೌಢಕಾವ್ಯ ರಚಿಸಿ ಸಾಹಿತ್ಯಸಿರಿಯನ್ನು ಹೆಚ್ಚಿಸಿದ ವ್ಯಕ್ತಿ 'ಜಯದೇವಿತಾಯಿ'.* ಹತ್ತು ವರ್ಷಗಳ ಅವಿಶ್ರಾಂತ ಶ್ರಮದಿಂದಾಗಿ ರಚಿಸಿದ 600 ಪುಟಗಳ ಈ ಬೃಹತ್ ಕೃತಿ ಕನ್ನಡ ಕಾವ್ಯದಿಗಂತದಲ್ಲಿ ದಿವ್ಯತಾರೆಯಾಗಿ ವಿಜೃಂಭಿಸುತ್ತಿದೆ. ಸಂಚಿಯ ಹೊನ್ನಮ್ಮನ ನಂತರ ಕಾವ್ಯಸೃಷ್ಟಿಯಲ್ಲಿ ಅತ್ಯಂತ ಯಶಸ್ಸು ಗಳಿಸಿದ ಮಹಿಳೆ 'ಜಯದೇವಿತಾಯಿ'. ಕನ್ನಡ ಸಾಹಿತ್ಯ ಸಮ್ಮೇಳನದ ಮೊದಲ ಮಹಿಳಾ ಅಧ್ಯಕ್ಷಿಣಿಯಾದ ಯಶಸ್ಸು ಕೂಡ ಈಕೆಗೇ ಸಲ್ಲುತ್ತದೆ. ಸರ್ವಜ್ಞನ ಬಾಯಲ್ಲಿ ಕುಣಿದ 'ತ್ರಿಪದಿ' ಈಕೆಯ ಬಾಯಲ್ಲಿ ಸುಶ್ರಾವ್ಯ ಕಾವ್ಯ ಸಂಗೀತವಾಗಿ ಹರಿದಿದೆ. ಸಿರಿಮನೆತನದಲ್ಲಿ ಜನ್ಮತಾಳಿ, ಸಿರಿಲಿಗಾಡೆ ಮನೆತನದ ಚನ್ನಮಲ್ಲಪ್ಪನ ಸತಿಯಾಗಿ ಶೃಂಗಾರ ಜೀವನದ ಸಿಹಿ ಸಾಕಷ್ಟು ಅನುಭವಿಸಿದರೂ ತೃಪ್ತಿ ಕಾಣದ ಜಯದೇವಿ ತಾಯಿ ಕಾವ್ಯಶ್ರೀ ಮೊರೆಹೊಕ್ಕು ಸಿದ್ಧರಾಮನ ಮಹಿಮೆ ವರ್ಣಿಸುವಲ್ಲಿ ಶಾಂತಿ ಕಂಡರು. ಸಮಾಧಾನಗೊಂಡರು. 'ಎತ್ತ ನೋಡಿದರೂ ಸುತ್ತಲೂ ನಿನರೂಪ ಚಿತ್ರದ ಪಟಲ ವ್ಯಾಪಿಸಿದೆ. ಸಿದ್ಧರಾಮ ಎತ್ತರದೆತ್ತರ ಬೆಳಗಲು' ಹಾಡಿ ನಲಿದರು.

> 'ಪಂಡಿತರ ಮೆಚ್ಚಿಸಲು ಖಂಡಿತ ಬರೆದಿಲ್ಲ ।
> ಮಂಡಿಸಲು ವಾದ ಬಂದಿಲ್ಲ-ಮೂಡಿಹವು
> ಚೆಂಡ ಸಿದ್ಧೇಶನ ಒಲವಿದು ॥

ಕಾವ್ಯದ ಉದ್ದೇಶ ಈ ತ್ರಿಪದಿಯಲ್ಲೆ ಉಲ್ಲೇಖವಾಗಿದೆ. ತಾನು ಇಷ್ಟು ದೊಡ್ಡದಾದ ಗ್ರಂಥ ಬರೆದಿದ್ದೇನೆ ಎಂಬ ಹೆಮ್ಮೆ ಎಳ್ಳಷ್ಟೂ ಇರದ ಕಡು ನಿಗರ್ವಿ ಈಕೆ.

> ಎಲ್ಲ ಬಲ್ಲವಳೆಂಬ ಇಲ್ಲವದು ಭ್ರಮೆಯೆನಗೆ. ಬಲ್ಲವರ ಪಾದ
> ಹಿಂಡಿಯೂವೆ ಬಲ್ಲಿದರು ಕಲಿಸಲಿ ಮತ್ತೆ ನುಡಿಸಲಿ ॥

ಮೂವರು ಗಂಡು, ಇಬ್ಬರು ಹೆಣ್ಣುಮಕ್ಕಳ ತಾಯಿಯಾಗಿ 20 ವರ್ಷ ಕಾಲವಷ್ಟೆ ಜಯದೇವಿಯವರಿಗೆ ಲಭ್ಯವಾದ ಕೌಟುಂಬಿಕ ಸೌಖ್ಯ 1946ರಲ್ಲಿ ಇಲ್ಲವಾಯಿತು. ದುಃಖಾಬ್ಧಿಯಲ್ಲಿ ಮುಳುಗಿದ ಜಯದೇವಿ ಸನ್ಯಾಸ ಸ್ವೀಕರಿಸದೇ ಇದ್ದರೂ ವಿರಕ್ತರಾದರು. ದೇಶದ 'ತಾಯಿ'ಯಾಗಲು ಅಣಿಯಾದರು.

ಜಯದೇವಿ ಬಾಲ್ಯದಲ್ಲಿ ಕಲಿಯಲಾಗದ ಕನ್ನಡವನ್ನು ಮೂರು ಮಕ್ಕಳ

* ತಂದೆ ; ಚೆನ್ನಬಸಪ್ಪ, ತಾಯಿ : ಸಂಗವ್ವ. ಜನನ : ಜೂನ್ 23, 1912. ಸೊಲ್ಲಾಪುರದಲ್ಲಿ.

ತಾಯಿಯಾದ ಮೇಲೆ ಕಲಿತು ರೂಢಿಸಿಕೊಂಡರು. ಕಾವ್ಯ ಬರೆಯುವಷ್ಟು ಪ್ರಭುತ್ವ ಸಾಧಿಸಿಕೊಂಡರು. ಇವರು ರಚಿಸಿರುವ ಕೃತಿಗಳು (1) ಶ್ರೀ ಸಿದ್ಧರಾಮೇಶ್ವರ ಪುರಾಣ (2) ಜಯಗೀತ (3) ತಾರಕ ತಂಬೂರಿ (4) ತಾಯಿಯ ಪದಗಳು. ಮರಾಠಿಯಲ್ಲೂ ಪ್ರೌಢಿಮೆ ಗಳಿಸಿರುವ ಈ ಕವಿಯತ್ರಿ ಅನೇಕ ವಚನಗಳು ಹಾಗೂ ಗ್ರಂಥಗಳನ್ನು ಅನುವಾದಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳು 'ಸಿದ್ಧವಾಣಿ' (ಶರಣರ ವಚನಗಳು), 'ಬಸವದರ್ಶನ' (ಬಸವೇಶ್ವರ ವಚನಗಳ ಅನುವಾದ), 'ಮಹಾಯೋಗಿನಿ' (ಅಕ್ಕನ ವಚನಗಳ ಅನುವಾದ), 'ಸಮೃದ್ಧ ಕರ್ನಾಟಕಾಂಚೆ ರೂಪಲೇಖಾ' (ಮರಾಠಿಯಲ್ಲಿ ಬರೆದ ಸ್ವತಂತ್ರ ಕೃತಿ).

ಜಯದೇವಿ ಕವಿಯತ್ರಿ ಮಾತ್ರ ಅಲ್ಲ, ಕರ್ನಾಟಕ ಏಕೀಕರಣಕ್ಕಾಗಿ ದುಡಿದ ಧೀರೋದಾತ್ತ ಮಹಿಳೆ.

"ಸಿದ್ಧರಾಮನ ಕಥೆ ಹೇಳಿ ತಾತ..." ದಿನೇಶ ಕೂಗಿದ.

"ರಾಘವಾಂಕನ್ನ ವಿವರಿಸೋವಾಗ ಸಿದ್ಧರಾಮನ ಕಥೆ ಹೇಳಿದ್ದೀನಲ್ಲಾ ದಿನೇಶ, ಅದೇ ಕಥೆ. ಆದರೆ ಜಯದೇವಿ ತಮ್ಮ ಕಲ್ಪನೆ, ಹದವಾದ ಶೈಲಿ, ವರ್ಣನೆಗಳಿಂದ ಈ ಕಥೆಗೆ ಹೊಸ ರೂಪ ಕೊಟ್ಟಿದ್ದಾರೆ. ಆದ್ರೂ ನಾಲ್ಕು ಮಾತ್ನಲ್ಲಿ ನಿನಗೋಸ್ಕರ ಕಥೆ ಪುನಃ ಹೇಳ್ತೀನಿ. ಸಿದ್ಧರಾಮ, ಬಸವಣ್ಣ, ಅಲ್ಲಮರಂತೆ ಶ್ರೇಷ್ಠ ಶಿವಶರಣ ರಲ್ಲಿ ಒಬ್ಬ. ಪವಾಡಪುರುಷ ರೇವಣಸಿದ್ಧನ ಆಶೀರ್ವಾದದಿಂದ ಸಗ್ಗಲವ್ವೆ, ಮುದ್ದುಗೌಡರ ಮಗನಾಗಿ ಹುಟ್ಟಿದ ಧೂಳಿಮಾಕಾಳ ಬಾಲ್ಯದಲ್ಲಿ ಮೂಕನಾಗಿ, ಪೆಪ್ಪನಂತಿದ್ದ. ಶಿವಶರಣ ಮಲ್ಲಯ್ಯನ ಆಶೀರ್ವಾದದಿಂದಾಗಿ ಸಿದ್ಧರಾಮನಾಗಿ ಮಾತ ನಾಡುವ ಶಕ್ತಿ ಪಡೆಯುತ್ತಾನೆ. ಮಲ್ಲಯ್ಯ ಸಿದ್ಧರಾಮನನ್ನು ಮೊಸರು ಅನ್ನ ತರಲು ಮನೆಗೆ ಕಳುಹಿಸುತ್ತಾನೆ. ಮೊಸರು ಅನ್ನದೊಡನೆ ತನ್ನ ತಾಯನ್ನು ಜೊತೆ ಯಲ್ಲಿ ಕರೆದುಕೊಂಡು ಬಂದ ಸಿದ್ಧರಾಮ ಮಲ್ಲಯ್ಯನನ್ನು ಕಾಣದೆ ಪರಿತಪಿಸಿ, ಹುಡುಕುತ್ತ ಹೊರಡುತ್ತಾನೆ. ಹಲವು ದಿನ ಹುಡುಕಿ ಬಳಲಿಬೆಂಡಾಗಿ ಶ್ರೀಶೈಲದ ತನಕ ಹೋಗುತ್ತಾನೆ. ಮಲ್ಲಯ್ಯನಿಗೆ ಹುಡುಗನನ್ನು ಇನ್ನೂ ಪರೀಕ್ಷಿಸುವ ಆಸೆ ಆಗುತ್ತದೆ. ದರ್ಶನ ಕೊಡುವುದೇ ಇಲ್ಲ. ಬೇಸತ್ತ ಹುಡುಗ ಕಮರಿಗೆ ಹಾರಿದಾಗ ಮಲ್ಲಿಕಾರ್ಜುನ ಪ್ರತ್ಯಕ್ಷನಾಗಿ ಸಿದ್ಧರಾಮನನ್ನು ಹರಸುತ್ತಾನೆ. ಸಿದ್ಧನ ಬೇಡಿಕೆ ಮೇರೆಗೆ ಸೊನ್ನಲಿಗೆಯಲ್ಲಿ ನೆಲೆಸಲು ಒಪ್ಪಿ ಅಲ್ಲೇ ನೆಲೆಸುತ್ತಾನೆ. ಸಿದ್ಧರಾಮ ಶಿವಶರಣನಾಗಿ, ಅದ್ಭುತ ರೀತಿಯಲ್ಲಿ ವಿದ್ವತ್ ಗಳಿಸಿ ಮಲ್ಲಿಕಾರ್ಜುನನ ಬಲದಿಂದ ಮಹಿಮಾವಂತನಾಗುತ್ತಾನೆ. ತನ್ನ ಈ ಪ್ರತಿಭೆಯಿಂದಾಗಿಯೇ ಅನುಭವಮಂಟಪ ದಲ್ಲಿ ಸ್ಥಾನಗಳಿಸುತ್ತಾನೆ. ಇದೇ ಕಾವ್ಯದ ಸಾರಾಂಶ.

"ಇನ್ನೆರಡು ಕೃತಿಗಳು ಇವರು ಕನ್ನಡದಲ್ಲಿ ರಚಿಸಿದ್ದು ಅಂತಾ ಹೇಳಿದ್ರಲ್ಲಾ ಅವೂ ಕಾವ್ಯಗಳೇ?" ದಿನಕರ ಪ್ರಶ್ನಿಸಿದ.

"ಜಯಗೀತ" 'ಸರಳ ಸುಂದರ ಭಾವಗೀತೆ ಸಂಕಲನ. ಇದರಲ್ಲಿ ಸುಮಾರು 40 ಗೀತೆಗಳಿವೆ. ಉದಾಹರಣೆಗೆ ಒಂದು ಪುಟ್ಟಗೀತೆ.' ಭಾಗ್ಯ ಎಂಬ ಕವನದಿಂದ ಆಯ್ದುದು.

"ತುಂಬುವೆನು ಒಡಲೆಲ್ಲ ನಿಜದ ಸೀಯಾಳದಿಂದ
ಕುಳಿತಲ್ಲಿ ಎತ್ತರದಿ ತೆಂಗು ನೆಲದ ಸಾರವನೇ
ಈಂಟುವಂತೆ, ಸೀಯಾಳಗಟ್ಟಿ ಗೊಳ್ಳುತಕಾಯಿ
ಬೆಳ್ಳಗಾಗುವುದು, ಒಳಗಾಯಿಯಂತೆ ಬೆಳ್ಳಗೆ
ಬೆಳಗಾಗುತ ಎನ್ನ ಕಾಯ 'ಓ ಒಡೆಯ'
ಒಡೆಯುವೆನು ನಿನ್ನ ಅಡಿಗೆ ಈ ಕಾಯ."

'ತಾರಕ ತಂಬೂರಿ' ಇದು 39 ಪದಗಳ ಸಂಕಲನ, ದ್ವಿಪದಿಯಲ್ಲಿ ಭಕ್ತಿ ಭಾವ ಉಕ್ಕಿಹರಿದಿದೆ.

"ತಾರಕ್ಕ ತಂಬೂರಿ ನಾನದಕೆ ನುಡಿಸುವೆ । ತಾರ ತಂಬೂರಿಯೆ ।
ಗುರುವಿನ ಅಗಣಿತ ಮಹಿಮೆಯ ಸಾರುವೆ ।ತಾರ ತಂಬೂರಿಯೆ ।

## (ಅ) ಶಿವಶರಣರು

ವಚನ ವಾಙ್ಮಯದ ಕಾಲ ಬಸವಣ್ಣನವರಿಗಿಂತ ಒಂದು ಶತಮಾನದಷ್ಟು ಹಿಂದಿನದು ಎಂದು ಕೆಲವರ ಅಭಿಪ್ರಾಯ. ಆ ಕಾಲದ ಪ್ರಸಿದ್ಧ ವಚನಕಾರರು ಮಾದಾರ ಚೆನ್ನಯ್ಯ, ಜೇಡರ ದಾಸಿಮಯ್ಯ, ಶಂಕರ ದಾಸಿಮಯ್ಯ, ಸಕಲೇಶ ಮಾದರಸ, ಡೋಹರ ಕಕ್ಕಯ್ಯ, ಕೆರೂಂಡಗುಳಿ ಕೇಶಿರಾಜ, ಮೆರೆಮಿಂಡಯ್ಯ, ತೆಲುಗು ಬೊಮ್ಮಯ್ಯ ಮುಂತಾದವರುಗಳು.

**ಮಾದಾರ ಚೆನ್ನಯ್ಯ***1 : ಹನ್ನೆರಡನೆಯ ಶತಮಾನದಲ್ಲಿದ್ದ ವಚನಕಾರ. ಹರಿಹರನ 'ಮಾದಾರ ಚೆನ್ನಯ್ಯ ಮಹಾತ್ಮೆ'ಯ ವ್ಯಕ್ತಿ ಈತನೇ ಎಂದು ಊಹಿಸಲಾಗಿದೆ. ದೊರೆತಿರುವ ಈತನ ವಚನಗಳ ಸಂಖ್ಯೆ ಕೇವಲ ಹತ್ತು.

**ಜೇಡರ ದಾಸಿಮಯ್ಯ***2 : ಈತನದು ನೇಕಾರ ವೃತ್ತಿ. ಬೇರಾರೂ ಕೊಳ್ಳಲಾಗದಂಥ ಬಟ್ಟೆಯನ್ನು ಜಂಗಮರೂಪಿ ಶಿವನಿಗೆ ಮಾರಿ ತವನಿಧಿಯನ್ನು ಪಡೆದನೆಂದು ಪ್ರತೀತಿ. ಈತನ ವಚನಗಳ ಸಂಖ್ಯೆ ಸುಮಾರು 150. ಈ ವಚನಗಳಲ್ಲಿ ತ್ರಿಪದಿ, ಚೌಪದಿಗಳೂ ಇವೆ. ವಚನಗಳು ಗಾತ್ರದಲ್ಲಿ ತೀರಾ ಚಿಕ್ಕವು. ಭಾಷೆ ತೀರ ಸರಳ.

**ಸಕಲೇಶ ಮಾದರಸ***3 : ಆದ್ಯ ವಚನಕಾರರಲ್ಲಿ ಗಣ್ಯನಾದ ಸಾಧಕ. ಈತ ಬಸವಣ್ಣನವರ ಸಮಕಾಲೀನನೆಂದು ಊಹಿಸಲಾಗಿದೆ. ಆತನ ವಚನಗಳಲ್ಲಿ ಉತ್ಕಟ ಭಕ್ತಿ, ವಿರಕ್ತಿ ಮತ್ತು ಆಧ್ಯಾತ್ಮಿಕ ತತ್ವಗಳನ್ನು ಕಾಣಬಹುದು. ಸ್ವಂತ ಸಾಧನೆಯಿಂದ ಮಾತ್ರ ಶಿವನ ಸಾಕ್ಷಾತ್ಕಾರ ಸಾಧ್ಯ ಎಂಬ ನಿಲುವು ಆತನದು.

ಉದಾಹರಣೆ : "ಅಯ್ಯಾ ನಿಮ್ಮಲ್ಲಿ ಮುಕ್ತಿಯ ಬೇಡುವೆನೆ ? ಅದು ನಿಮ್ಮ ಪದವಿ, ಸಕಳೇಶ್ವರ ದೇವಾ ನಾನೇನುವನು ಒಲ್ಲೆ. ನಿಮ್ಮಾ ಶ್ರೀಪಾದ ಸೇವೆಯೇ ಸಾಕು."

**ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ** ಮುಂತಾದವರುಗಳಿಂದ ಮುಂದುವರಿದ

---

*1 ಕಾಲ ಸು. ಕ್ರಿ.ಶ. 1130. 'ನಿಜಾತ್ಮ ರಾಮರಾಮ' ಅಂಕಿತನಾಮ.

*2 ಕಾಲ ಸು. ಕ್ರಿ.ಶ. 1140. ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೋಕಿನ ಮುದೆನೂರಿನವನು. ಅಂಕಿತನಾಮ 'ರಾಮನಾಥ'.

*3 ಕಾಲ ಸು. ಕ್ರಿ.ಶ. 1150. ಅಂಕಿತನಾಮ 'ಸಕಲೇಶ್ವರ'.

ವಚನವಾಙ್ಮಯ **'ಅಲ್ಲಮಪ್ರಭು*'**ವಿನ ಕಾಲದಲ್ಲಿ ಪೂರ್ಣರೂಪದಲ್ಲಿ ವಿಕಸಿತ ಗೊಂಡಿತು. 'ಅಲ್ಲಮಪ್ರಭು' ಬಸವಣ್ಣನಿಗೆ ಹಿರಿಯನು ಮಾತ್ರವಲ್ಲ 12ನೇ ಶತಮಾನದ ಶರಣರಲ್ಲಿಯೇ ಶ್ರೇಷ್ಠನಾಗಿದ್ದವನು. ನೀತಿವಂತನಾಗಿ ಭೀತಿರಹಿತನಾಗಿ ಲೋಕನಿಂದೆಯ ಕಡೆಗಣಿಸಿ ನಿಷ್ಠುರ ವಿಮರ್ಶೆಗೆ ಗುರಿಯಾದರೂ ಎದೆಗುಂದದೆ ತನ್ನ ಆದರ್ಶಕ್ಕಾಗಿ ಬಾಳಿ ಅಳಿದ ಏಕೈಕ ಕೆಚ್ಚೆದೆಯ ಜ್ಞಾನಿ. ಸತ್ಯಪ್ರೇಮಿ, ಅನುಭವ ಮಂಟಪದ ಅಧ್ಯಕ್ಷನಾಗಿ, ಶೂನ್ಯ ಸಿಂಹಾಸನದ ದೊರೆಯಾಗಿ, ಎಲ್ಲಕ್ಕೂ ಮಿಗಿಲಾಗಿ ತತ್ವಜ್ಞಾನಿಯಾಗಿ ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿರುವ ಮಹಾನುಭಾವ. ಈತನ ವಚನಗಳಲ್ಲಿ ಹೆಚ್ಚಾಗಿ ಆಧ್ಯಾತ್ಮ ತತ್ವ ತುಂಬಿರುವುದರಿಂದ ಸುಲಭವಾಗಿ ಅರ್ಥವಾಗುವುದಿಲ್ಲ. 'ಮೈಮೇಲಂದಜ್ಯೋತಿರ್ಲಿಂಗ' ಎಂಬುದನ್ನು ಆತನ ವಚನ ಗಳು ಸ್ಪಷ್ಟಪಡಿಸುತ್ತವೆ. ಆತನ ವಚನದ ಕೆಲವು ಸಾಲುಗಳನ್ನು ಕೇಳಿ :

"ಬೆಟ್ಟಕ್ಕೆ ಚಳಿಯಾದರೆ ಏನ ಹೊದಿಸುವಿರಯ್ಯಾ ? ಬಯಲು ಬತ್ತಲೆಯಿದ್ದರೆ ಏನನುಡಿಸುವರಯ್ಯ ? ಭಕ್ತನುಭವಿಯಾದಡೆ ಏನನುಪಮಿಸುವೆನಯ್ಯ ಗುಹೇಶ್ವರಾ ?"

'ನಾನು ಘನ, ತಾನು ಘನವೆಂಬ ಹಿರಿಯರುಂಟೆ ? ಜಗದೊಳಗೆ ಹಿರಿಯರ ಹಿರಿತನದಿಂದೇನಾಯ್ತು ? ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೆ ಶರಣ ಗುಹೇಶ್ವರಾ'

ಹೀಗೆ ಭಕ್ತಿ, ಜ್ಞಾನ, ಮುಕ್ತಿ, ಪ್ರೇರಕಉಕ್ತಿಗಳಂತೆಯೇ ಆತ್ಮೋದ್ಧಾರಕ್ಕೆ ಪ್ರೇರಕವಾದ ವಚನಗಳೂ ಬಹಳ ಇವೆ.

ಅಲ್ಲಮಪ್ರಭು ಹುಟ್ಟಿ ಬೆಳೆದದ್ದು ಅರಸು ಮನೆತನವಾದರೂ ಎಳೆಯ ವಯಸ್ಸಿನಲ್ಲಿ ರೂಢಿಸಿಕೊಂಡದ್ದು ವೈರಾಗ್ಯ. 18 ವರ್ಷದ ಹರೆಯದಲ್ಲಿ ಗೃಹ ತ್ಯಜಿಸಿ ಮದ್ದಲೆ ಹಿಡಿದು ಹೊರಹೊರಟ ಅಲ್ಲಮಪ್ರಭು ಕಾಡುಮೇಡಿನಲ್ಲಿ ಅಲೆದು ಶಿವಭಕ್ತಿಯನ್ನು ಹೋದೆಡೆಯಲ್ಲೆಲ್ಲಾ ಪ್ರಚಾರ ಮಾಡಿ ಕೊನೆಯ ದಿನದಲ್ಲಿ ಶ್ರೀಶೈಲ ಸೇರಿದನು. ಅಲ್ಲಿಯೇ ವನದಲ್ಲಿ ಶಿವೈಕ್ಯನಾದನೆಂದು ಪ್ರತೀತಿ ಇದೆ.

"ಬಸವಣ್ಣನವರು ಇವರನ್ನು ಕಲ್ಯಾಣ ಮಂಟಪದಲ್ಲಿ ಊಟಕ್ಕೆ ಕರೆದರಂತೆ. ಇವರ ಆತಿಥ್ಯದಲ್ಲಿ ಮೈಮರೆತ ಬಸವಣ್ಣ ಇತರ ಜಂಗಮರನ್ನು ಕಡೆಗಣಿಸಿದರಂತೆ. ಆಗ ಅವರೆಲ್ಲಾ ಸಿಟ್ಟುಗೊಂಡು ಬಸವಣ್ಣನನ್ನು ಬೈದು ಹೊರಟುಹೋದರಂತೆ. ಅಲ್ಲಮಪ್ರಭು ಊಟ ಮಾಡಿದಾಗ ಜಂಗಮರಿಗೆಲ್ಲಾ ಹೊಟ್ಟೆ ತುಂಬಿಹೋಯ್ತಂತೆ.

* 'ಎರಡೆಂಬತ್ತು ಕೋಟಿ ವಚನವ ಹಾಡಿ ಹಲವ ಹಂಬಲಿಸಿತೆನ್ನ ಮನವು' ಎಂದು ಅಲ್ಲಮನೇ ಹೇಳಿಕೊಂಡಿರುವುದರಿಂದ ಆತನ ವಚನ ಸಂಖ್ಯೆ ಈಗ ದೊರೆತಿರುವುದಕ್ಕಿಂತ ಅಪಾರ ಹೆಚ್ಚಿನ ಸಂಖ್ಯೆಯಲ್ಲಿ ಇರಬೇಕು ಎಂದೆನಿಸುತ್ತದೆ. ಅಲ್ಲಮನ 'ವಚನಚಂದ್ರಿಕೆ'ಯಲ್ಲಿ 1294 ವಚನಗಳು ಮಾತ್ರ ಇವೆ. 'ಗುಹ್ಯೇಶ್ವರ' ಅಂಕಿತನಾಮ.

ನಮ್ಮ ಸ್ಕೂಲಲ್ಲಿ ಹೇಳಿದ್ರು ಮೇಸ್ಟ್ರು...ನಿಜವಾ ಮೇಸ್ಟ್ರೆ ಈ ಕಥೆ." ದಿನಕರ ಪ್ರಶ್ನಿಸಿದ.

"ಅಲ್ಲಮಪ್ರಭು ಪವಾಡ ಪುರುಷ. ಆತನ ಜೀವನದಲ್ಲಿ ಇಂತಹ ಘಟನೆಗಳು ಅಗಣಿತ ಮಗು" ನುಡಿದರು ವ್ಯಾಸರಾಯರು.

"ಬಸವಣ್ಣೋರ ವಚನ ಬಾಳ ರಸವತ್ತಾಗಿದೆ. ಸಣ್ಣ ಸಣ್ಣ ಮಾತ್ನಲ್ಲೆ ಒಳ್ಳೆ ವೈರಾಗ್ಯ ಇಟ್ಟಿದ್ದಾರೆ. ಸಮಾಜದ ಮೂಢನಂಬಿಕೆ, ಕಟ್ಟಾಚಾರಾನ ಕಟುವಾಗಿ ಟೀಕಿಸಿದ್ದಾರೆ. ನಂಗೆ ಇನ್ನು ಕೆಲವು ವಚನ ಜ್ಞಾಪಕ ಇದೆ. ಯಾವಾಗ್ಲೋ ಓದಿದ್ದು. ಮರೀಬೇಕು ಅಂದ್ರೂ ಮರ್‍ಯೋಕ್ಕೆ ಆಗ್ತಾ ಇಲ್ಲ. 'ಕಲ್ಲನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ', ಇನ್ನೊಂದು 'ಲೋಕದ ಡೊಂಕು ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ..." ಎಷ್ಟು ಚೆನ್ನಾಗಿವೆ ಅಲ್ವೆ ಮೇಸ್ಟ್ರೆ ನುಡಿದರು ಪದ್ಮಮ್ಮ.

"ಹೌದು...ಹೌದು ವಚನ ಒಂದಕ್ಕಿಂತ ಒಂದು ಸೊಗಸು. ಆಧ್ಯಾತ್ಮಿಕ ಹಾಲನ್ನು ಅನುಭವದ ಕಡಿಗೋಲಿನಲ್ಲಿ ಕಡೆದು ಭಕ್ತಿಯ ಉರಿ ಇಕ್ಕಿ ಕಾಯಿಸಿ ತೆಗೆದ ತುಪ್ಪವೆ ವೈರಾಗ್ಯ. ಬಸವಣ್ಣ ವಚನದ ಬಟ್ಟಲಿನಲ್ಲಿ ಹಿತಮಿತವಾಗಿ ಜನತೆಯ ಯೋಗ್ಯತೆ ನೋಡಿಕೊಂಡು ಹಂಚಿದ್ದಾನೆ. 'ಎನ್ನ ಕಾಲೇ ಕಂಬ! ದೇಹವೇ ದೇಗುಲ. ಶಿರವೇ ಹೊನ್ನಕಳಸವಯ್ಯಾ. ಕೂಡಲ ಸಂಗಮ ದೇವ ಕೇಳಯ್ಯಾ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ."

'ಹಾವಿನ ಬಾಯಕಪ್ಪೆ ಹಸಿದುಹಾರುವ ನೊಣಕ್ಕೆ ಆಸೆ ಮಾಡುವಂತೆ, ಶೂಲವನೇರುವ ಕಳ್ಳನು ಹಾಲು ತುಪ್ಪ ಕುಡಿದು ಮೇಲೇಸು ಕಾಲ ಬದುಕುವನೊ?, ಕೆಡುವ ಒಡಲ ನೆಚ್ಚಿ ಕಡುಹುಸಿಯನೆ ಹುಸಿದು ಒಡಲ ಹೊರೆವವರ ಕೂಡಲ ಸಂಗಮದೇವನೊಲ್ಲ ಕಾಣೆರಂಣಾ'

'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ'. ಆತನ ವಚನ ಒಂದಕ್ಕಿಂತ ಒಂದು ಸೊಗಸು.

"ವಚನ ಸಾಕು ಮೇಸ್ಟ್ರೆ. ಕಥೆ ಹೇಳಿ" ದಿನೇಶ ಕೂಗಿದ. ಹುಸಿನಕ್ಕ ವ್ಯಾಸರಾಯರು ಪ್ರಾರಂಭಿಸಿದರು.

ಧಾರ್ಮಿಕ ಕ್ರಾಂತಿಯನ್ನುಂಟುಮಾಡಿ ವೀರಶೈವ ಮತಕ್ಕೆ ಹೊಸಚೇತನವನ್ನಿತ್ತ **ಬಸವಣ್ಣ** ಇದ್ದುದು ಈಗ್ಗೆ ಸುಮಾರು 800 ವರ್ಷಗಳ ಹಿಂದೆ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಶಿವಭಕ್ತ ವೈದಿಕ ಮನೆತನದಲ್ಲಿ ಹುಟ್ಟಿ ಬೆಳೆದರೂ ಸಂಪ್ರದಾಯ ಮೂಢತೆ, ದೇವರ ಹೆಸರಿನಲ್ಲಿ ಪ್ರಾಣಿಹತ್ಯೆ ನೋಡಿ

ಬೇಸರಗೊಂಡ ಬಸವಣ್ಣ ಬಾಲ್ಯದಲ್ಲೇ ವೀರಶೈವ ಧರ್ಮವನ್ನು ಅನುಸರಿಸಿ ಭಕ್ತಿಯ ಹೊಸರೂಪ ತೋರಿಸಿದ. ಊರೂರು ಅಲೆದು ಶಿವಭಕ್ತಿಯನ್ನು ಉಪದೇಶಿಸಿದ. ಕಲ್ಯಾಣದ ಬಿಜ್ಜಳ ಈತನ ಆಶ್ರಯದಾತ ರಾಜ. ಸಾಮಾನ್ಯ ಹುದ್ದೆಯೊಂದಿಗೆ ಅರಮನೆ ಸೇರಿದ ಬಸವಣ್ಣ ಶ್ರದ್ಧೆ, ನಿಷ್ಠೆ ಹಾಗೂ ತೀಕ್ಷ್ಣಬುದ್ಧಿಯಿಂದಾಗಿ ಬೇಗ ಪ್ರಧಾನ ಮಂತ್ರಿಯಾದ. ಸೈನಾಧಿಕಾರಿ, ಕೋಶಾಧಿಕಾರಿಯ ಹುದ್ದೆಯನ್ನೂ ಕುಶಲತೆಯಿಂದ ನಿರ್ವಹಿಸಿದ್ದ. ಬಸವಣ್ಣನಿಗೆ ತನ್ನ ಹೊಸ ಧಾರ್ಮಿಕ ಪ್ರಜ್ಞೆ ಯಿಂದಾಗಿ ಜನಪ್ರಿಯತೆ ಹೆಚ್ಚಿದಂತೆಲ್ಲಾ ಅರಮನೆಯಲ್ಲಿ ಹಿತಶತ್ರುಗಳ ಕಾರಸ್ಥಾನ ಹೆಚ್ಚಿ ಗೌರವ, ಪ್ರಾಧಾನ್ಯತೆ ಕಡಿಮೆಯಾಗಹತ್ತಿದವು.

'ಅರಸು ಮುನಿದರೆ ನಾಡಿನೊಳಗಿರಬಾರದಯ್ಯಾ' ಎಂದು ಹಾಡುತ್ತಾ ರಾಜಧಾನಿ ಕಲ್ಯಾಣ ಬಿಟ್ಟು ಕೂಡಲ ಸಂಗಮಕ್ಕೆ ಹೊರಟ. ಅಲ್ಲೇ ಕ್ರಿ.ಶ. 1167ರ ಉತ್ತರಾರ್ಧದಲ್ಲಿ ಶಿವೈಕ್ಯನಾದ. ಈತ ಕಟ್ಟಿದ ವಚನಗಳ ಸಂಖ್ಯೆ ಸುಮಾರು 960. ಎಲ್ಲ ವಚನಗಳ ಅಂತ್ಯದಲ್ಲಿ 'ಕೂಡಲ ಸಂಗಮ' ಎಂದು ತನ್ನ ಇಷ್ಟದೇವರ ಹೆಸರನ್ನು ಸೇರಿಸಿದ್ದಾನೆ. ಈತ ಬಿಡಿಬಿಡಿಯಾದ ವಚನಗಳಲ್ಲದೆ 'ಷಟ್ಸ್ಥಲ ವಚನ', 'ಕಾಲಜ್ಞಾನ ವಚನ', 'ಮಂತ್ರಗೋಪ್ಯ' ಗ್ರಂಥಗಳನ್ನು ರಚಿಸಿದ್ದಾನೆ. "ಉಳ್ಳವರು ಶಿವಾಲಯ ಮಾಡುವರು. ನಾನೇನು ಮಾಡುವೆ ಬಡವನಯ್ಯ, ಎನ್ನ ಕಾಲೇ ಕಂಬ, ದೇಹವೇ ದೇಗುಲ ಎನ್ನುತಿದ್ದ ಬಸವೇಶ್ವರ ಕಲ್ಯಾಣದಲ್ಲಿದ್ದಾಗ, ಅನುಭವಮಂಟಪ ಎಂಬ ಚರ್ಚಾಕೂಟದಲ್ಲಿ ಶಿವಭಕ್ತರನ್ನೆಲ್ಲಾ ಸೇರಿಸಿ ಧಾರ್ಮಿಕ ಚರ್ಚೆಗಳಿಗೆ ಎಡವುಮಾಡಿಕೊಟ್ಟ. ಇಲ್ಲಿ ಸ್ತ್ರೀ, ಪುರುಷರಾದಿಯಾಗಿ ಎಲ್ಲ ಶಿವಶರಣರಿಗೂ ಅಭಿಪ್ರಾಯ ವ್ಯಕ್ತಪಡಿಸುವ ಪೂರ್ಣ ಸ್ವಾತಂತ್ರ್ಯ ಇತ್ತು. ಈ ಅನುಭವ ಮಂಟಪದಲ್ಲೇ ಬಸವಣ್ಣನಿಗೆ ಮಹಾದೇವಿಯಕ್ಕನ ಭೇಟಿ ಆದದ್ದು.

ಚೆನ್ನಮಲ್ಲಿಕಾರ್ಜುನನನ್ನೆ ತನ್ನ ಪತಿ ಎಂದು ಅಂಗೀಕರಿಸಿ ಮನವನ್ನರ್ಪಿಸಿದ **'ಅಕ್ಕಮಹಾದೇವಿ'** ಒಲಿದು ಬಂದ ಕೌಶಿಕ ಮಹಾರಾಜನ ಪ್ರೇಮಭಿಕ್ಷೆಯನ್ನು ತೃಣೀಕರಿಸಿ 'ಅಮೇಧ್ಯದ ಹಡಿಕೆ ಮೂತ್ರದ ಕುಡಿಕೆ ಎಲುವಿನ ತಡಿಕೆ ಕೀವಿನ ಹಡಿಕೆಯಾದ ಈ ದೇಹವನ್ನು ಮೋಹಿಸಿ ಕೆಡಬೇಡ' ಎಂದು ಕೌಶಿಕನಿಗೆ ಧರ್ಮೋಪದೇಶ ಮಾಡಿ, ಸುಂದರ ಕಾಯದ ಮೇಲಿನ ವ್ಯಾಮೋಹವನ್ನು ಸಂಪೂರ್ಣವಾಗಿ ತ್ಯಜಿಸಿ ನಿರ್ವಸ್ತ್ರಳಾಗಿ ಹೊರಬಿದ್ದಳು. 'ಅಳಿಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ ನಿಮ್ಮನಿಮ್ಮನೆಲ್ಲರನು ಒಂದ ಬೇಡುವೆನು. ಎನ್ನೊಡೆಯ ಚೆನ್ನ ಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ' ಎಂದು ಕಾನನದಲ್ಲೆಲ್ಲಾ ತಿರುಗಿ ಅರಸುತ್ತ ಅಲ್ಲಮಪ್ರಭು, ಬಸವೇಶ್ವರ, ಕಿನ್ನರಿ ಬ್ರಹ್ಮಯ್ಯ ಮುಂತಾದ ಪ್ರಸಿದ್ಧ ಶಿವಶರಣರಿದ್ದ ಅನುಭವಮಂಟಪ ಪ್ರವೇಶಿಸಿದಳು. ಅಲ್ಲಿ ಎಲ್ಲ ಶಿವಶರಣರ ಭೇಟಿ ಮಾಡಿ 'ಬಸವಣ್ಣ ಮೆಚ್ಚಲೊಗೆತನವ ಮಾಡುವೆ. ಚನ್ನಮಲ್ಲಿಕಾರ್ಜುನ

ಗಂಡನೆನಗೆ ಮಿಕ್ಕಿದ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ' ಎಂದು ನುಡಿದು ವಂದಿಸಿ ಹೊರಹೊರಟ ಅಕ್ಕ ಕದಳಿವನವನ್ನು ಹೊಕ್ಕು 'ಕದಳಿ ಎಂಬುದುತನು, ಕದಳಿ ಎಂಬುದು ಭವ ಘೋರಾರಣ್ಯ, ಕದಳಿವೆಂಬುದು ಗೆದ್ದುತವೆ ಬದುಕಿ ಬಂದು ಕದಳಿಯ ಬನದಲ್ಲಿ ಭವ ಹರನ ಕಂಡೆನು. ಭವಗೆಟ್ಟುಬಂದೆಯಾ ಮಗಳೇ ಎಂದು ಕರಣದಿಂ ತೆಗೆದು ಬಿಗಿದಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು' ಎನ್ನುತ್ತ ಶಿವೈಕ್ಯಳಾದಳು. ಇಂತಹ ಮಹಾತಾಯಿ ಅಕ್ಕಮಹಾದೇವಿ. ಈಕೆಯ ವಚನಗಳೂ ಬಹು ಸೊಗಸು. ವೇದಾಂತ ಭಟ್ಟಿ ಇಳಿದಿದೆ ಪ್ರತಿಯೊಂದು ನುಡಿಯಲ್ಲಿ. 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ, ಸಂತೆಯಲ್ಲೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೇತಯ್ಯ, ಜಲದ ಮಂಟಪದ ಮೇಲೆ ಉರಿಯ ಚಪ್ಪರವನ್ನಿಕ್ಕಿ ಆಲಿಕಲ್ಲ ಹಸೆಯ ಹಾಸಿ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು...'ಈ ವಚನಗಳಲ್ಲದೆ ಈಕೆ ಬರೆದಿರುವ ತ್ರಿಪದಿಯಲ್ಲಿನ '**ಯೋಗಾಂಗ ತ್ರಿವಿಧಿ**' ಚಿಕ್ಕದಾದರೂ ಚೊಕ್ಕ ಗ್ರಂಥ" ಮಾತು ನಿಲ್ಲಿಸಿದ ವ್ಯಾಸರಾಯರು ದಿನೇಶನತ್ತ ನೋಡಿ ಮುಗುಳ್ನಕ್ಕರು. ದಿನೇಶ ತೂಕಡಿಸುತ್ತಿದ್ದ. ಇನ್ನು ಹೆಚ್ಚೆ ಹೊತ್ತು ನಾನು ತೊಗೊಳ್ಳಲ್ಲ. ಬೇಗ ಪೂರೈಸಿಬಿಡ್ತೀನಿ. ಅನುಭವ ಮಂಟಪದಲ್ಲಿ ಸೇರಿದ್ದ ಶಿವ ಶರಣರ ಅನಂತರ ಬಂದು ಹೋದ ವಚನಕಾರರು ಬಹಳ ಜನರಿದ್ದಾರೆ. ಅವರಲ್ಲಿ ಬಹಳ ಮುಖ್ಯರಾದವರು ಅಂದರೆ 'ಷಟ್ಸ್ಥಲ ವಚನ', ಕರಣ ಹಸಿಗೆ, 'ಮಂತ್ರ ಗೋಪ್ಯ', 'ಕಾಲ ಜ್ಞಾನ'ಗಳಂತೆ ಅಪೂರ್ವ ಗ್ರಂಥಗಳ ರಚನೆ ಮಾಡಿದ ಮಹಾಜ್ಞಾನಿ **'ಚನ್ನ ಬಸವೇಶ್ವರ'**, ಮತ್ತು ಯೋಗಿಯೂ ಕವಿಯೂ ಆಗಿದ್ದ **'ಸಿದ್ಧರಾಮ'**. ಈತನ ರಚನೆ ಷಟ್ಸ್ಥಲ ತಿಲಕ. ಇದರಲ್ಲಿ ಷಟ್ಸ್ಥಲಗಳು ಗುರು ಶಿಷ್ಯ ಸಂವಾದ ರೂಪದಲ್ಲಿ ನಿರೂಪಿಸಲ್ಪಟ್ಟಿವೆ. **ಮಡಿವಾಳ ಮಾಚಯ್ಯ, ಸೊಂಡಳ ಬಾಚರಸ,** ಆಯ್ದಕ್ಕಿಯ ಮಾರಯ್ಯ, ಅಂಬಿಗರ ಚೌಡಯ್ಯ, ನುಲಿಯ ಚಂದಯ್ಯ, ನೀಲಮ್ಮ, ಮರುಳದೇವ, ಜೇಡರ ದಾಸಿಮಯ್ಯ, ಆದಯ್ಯ, ಬಾಹುರ ಬೊಮ್ಮಣ್ಣ, ಸುಂಕದ ಬಂಕಣ್ಣ, ಜೋದರ ಮಾಯಣ್ಣ, ಮಾದಾರ ಚೆನ್ನಯ್ಯ, ಸಮಾಜದ ಅಂಕುಡೊಂಕುಗಳನ್ನು ತಿದ್ದಿ ವೀರಶೈವ ಮತದ ಸಿದ್ಧಾಂತಗಳನ್ನು ಎತ್ತಿ ಹಿಡಿದರು.

**ಸೋಮರಾಜು :** ವೀರಶೈವ ಶರಣರಲ್ಲಿ ಒಬ್ಬನಾದ ಉದ್ಭಟನ ಕಥೆಯನ್ನು 12 ಆಶ್ವಾಸಗಳಲ್ಲಿ ಚಂಪೂವಿನಲ್ಲಿ ಬರೆದಿದ್ದಾನೆ. ಶೃಂಗಾರರಸಪ್ರಧಾನವಾದ ಗ್ರಂಥ. ಇದಕ್ಕೆ ಶೃಂಗಾರ ಸಾರ ಎಂದೂ ಹೆಸರು.

**ಕೆರೆಯ ಪದ್ಮರಸ** ಹರಿಹರ ರಾಘವಾಂಕರ ಸಮಕಾಲೀನ ಕವಿ. ಇವನು ಹಳೆಯ ಬೀಡಿನ ನರಸಿಂಹ ಬಲ್ಲಾಳನಲ್ಲಿ ಮಂತ್ರಿಯಾಗಿದ್ದ. ಈತನು 'ದೀಕ್ಷಾ ಬೋಧೆ' ಎಂಬ ಗ್ರಂಥ ಬರೆದಿದ್ದಾನೆ. ಇದರಲ್ಲಿ ವೀರಶೈವ ದೀಕ್ಷೆಯನ್ನು ಕೈಗೊಳ್ಳುವುದಕ್ಕೆ ಬೇಕಾದ ವಿಷಯಗಳು ಗುರು ಶಿಷ್ಯಸಂವಾದ ರೂಪದಲ್ಲಿ ವಿವರಿಸಲ್ಪಟ್ಟಿವೆ. ಈತನು ತನ್ನ

ಪಾಂಡಿತ್ಯದಿಂದಾಗಿ 'ತ್ರಿಭುವನತಾತ'ನೆಂಬ ವೈಷ್ಣವ ಪಂಡಿತನನ್ನು ವಾದದಲ್ಲಿ ಸೋಲಿಸಿ ವೀರಶೈವ ದೀಕ್ಷೆ ವಹಿಸುವಂತೆ ಮಾಡಿದನೆಂದು ಪ್ರತೀತಿ ಇದೆ.

**ಸೊನ್ನಲಿಗೆಯ ಸಿದ್ಧರಾಮ** : ಬಸವಣ್ಣನವರ ಸಮಕಾಲೀನ ವಚನಕಾರ. ಹೆತ್ತತಾಯಿ ಮಾತ್ರ ದೇವತಾ ಸಮಾನ ಎಂಬ ಪರಂಪರೆಯ ನಂಬಿಕೆಯನ್ನು ನಿಷೇಧಿಸಿ 'ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು, ತಾ ಮಾಡಿದ ಹೆಣ್ಣು ತೊಡೆಯ ನೇರಿತ್ತು. ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು. ತಾ ಮಾಡಿದ ಹೆಣ್ಣು ನಾರಾಯಣ ಎದೆಯ ನೇರಿತ್ತು. ಅದು ಕಾರಣ ಹೆಣ್ಣು ಹೆಣ್ಣಲ್ಲ, ರಾಕ್ಷಸಿ ಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ' ಎಂದು ಇಡಿಯ ಮಹಿಳಾ ಸಮಾಜಕ್ಕೆ ದೈವತ್ವ ದೊರಕಿಸಿಕೊಟ್ಟ ಮಹಾನುಭಾವ. ಎಂದು ನುಡಿದು ಮೇಲೆದ್ದರು ವ್ಯಾಸರಾಯರು.

* * *

ಬೆಳಗ್ಗೆ ರಾಯರ ಮನೆಗೆ 5-6 ಜನ ಅತಿಥಿಗಳು ಬಂದಿದುದರಿಂದ ಮಾಸ್ತರ ಕವಿ ಚರಿತ್ರೆ ಮುಂದುವರೆಯಲು ಸಾಧ್ಯವಾಗಲಿಲ್ಲ. ಮಧ್ಯಾಹ್ನ ಊಟ, ವಿಶ್ರಾಂತಿ, ಆದ ಮೇಲೆ ಕವಿ ಚರಿತ್ರೆಯನ್ನು ಪ್ರಾರಂಭಿಸಿದರು, ಪದ್ಮಮ್ಮನವರು ಮುಂದೆ ತಂದಿರಿಸಿದ ಚೌ ಚೌ ಸೇವಿಸುತ್ತ.

"ಬೆರಳಲ್ಲಿ ಚೌ ಚೌ ಹಿಡ್ಕೊಳ್ಳಿ ಎಷ್ಟೊಂದು ಬರುತ್ತೆ ಅಲ್ವೆ. ಆದರೆ ಇದ್ರಲ್ಲಿರೊ ಒಂದೊಂದು ವಸ್ತುವಿಗೂ ಒಂದೊಂದು ವಿಶಿಷ್ಟ ರುಚಿ ಇದೆ. ಆಕಾರವಿದೆ. ಸಂಖ್ಯಾಬಲವೂ ಇದೆ. ರುಚಿಯ ವೈವಿಧ್ಯತೆ ಇರೋದ್ರಿಂದ ಇದನ್ನ ತಿಂದಷ್ಟೂ ಇನ್ನೂ ಹೆಚ್ಚೆ ತಿನ್ಬೇಕು ಅನ್ಸುತ್ತೆ. ಹೀಗೆ ವೀರ ಶೈವ ಸಾಹಿತ್ಯ ತನ್ನ ವೈವಿಧ್ಯಪೂರ್ಣ ಪ್ರತಿಭೆ, ಇಂಪು ಕಂಪುನಿಂದಾಗಿ ಕನ್ನಡ ಸಾಹಿತ್ಯದ ಸೌರಭ ವನ್ನು ಬಹಳವಾಗಿ ಹೆಚ್ಚಿಸಿದೆ.

ಹದಿನೈದನೆಯ ಶತಮಾನದಲ್ಲಿದ್ದ ಮುಖ್ಯ ಕವಿಗಳೆಂದರೆ ಶಿವಯೋಗಾಂಗ ಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯ ಕಾವ್ಯ ಮುಂತಾದವುಗಳನ್ನು ರಚಿಸಿರುವ **'ಗುರುಬಸವ'**, 'ಷಟ್ಸ್ಥಳ ಜ್ಞಾನ ಸಾರಾಮೃತ'ದ ತೋಂಟದ ಸಿದ್ಧೇಶ್ವರ, ತ್ರಿಷಷ್ಟಿ ಪುರಾತನರ ಚರಿತ್ರೆಯ ಕರ್ತೃ **'ಸುರಂಗಕವಿ'**, ಶ್ವೇತನ ಸಾಂಗತ್ಯ ಕಾವ್ಯರಚಿಸಿರುವ ಮಲ್ಲಿಕಾರ್ಜುನ ಮುಂತಾ ದವರುಗಳು.

**ನಂಜುಂಡಕವಿ** : 16ನೇ ಶತಮಾನದಲ್ಲಿದ್ದ ಹೆಸರಾಂತ ಕವಿ. ಪವಾಡಪುರುಷ ರಾಮನಾಥನನ್ನು ಕುರಿತ 'ಕುಮಾರ ರಾಮ ಚರಿತ' ಈತನ ಕಾವ್ಯ. ಕಾವ್ಯದಲ್ಲಿನ ಅನುಪ್ರಾಸ ಬಹು ಸೊಗಸಾಗಿದೆ. ಕಾವ್ಯಶೈಲಿ ಸಾಂಗತ್ಯ.

15-16ನೇ ಶತಮಾನದಲ್ಲಿ ಮೆರೆದ ಇತರ ಹೆಸರಾಂತ ಕವಿಗಳೆಂದರೆ ದೇವರಾಜ, ಜಕ್ಕಣ್ಣಾರ್ಯ, ತೊಂಟದ ಸಿದ್ಧೇಶ್ವರ, ಗೂಳೂರಿನ ಸಿದ್ಧವೀರರಾಚಾರ್ಯ, ಆನಂದ

ಬಸವಲಿಂಗ ಯೋಗಿ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ಪಭೂಷಣ, ಲಕ್ಕಣ್ಣ, ಗುಬ್ಬಿಯ ಮಲ್ಲಣ್ಣಾರ್ಯ, ಚಾಮರಸ, ವಿರೂಪಾಕ್ಷ ಪಂಡಿತ ಮುಂತಾದ ವರುಗಳು.

**"ನಿಜಗುಣ ಶಿವಯೋಗಿ"** ಇವರೆಲ್ಲರಲ್ಲಿ ಅತಿ ಶ್ರೇಷ್ಠನಾದವನು. ಮಹಾಜ್ಞಾನಿ, ಮೇಧಾವಿ, ಸಿದ್ಧಿ ಪಡೆದ ತಪಸ್ವಿ. ಈತನ ಅಂಕಿತನಾಮ 'ಶಂಭುಲಿಂಗ'. ಶಂಭುಲಿಂಗನ ಬೆಟ್ಟದಲ್ಲಿ ಶಂಭುಲಿಂಗನ ದೇವಸ್ಥಾನವೂ ನಿಜಗುಣ ಶಿವಯೋಗಿ ತಪಸ್ಸು ಮಾಡಿದ ಗವಿಯು ಇಂದಿಗೂ ಇವೆ. ಕೈವಲ್ಯ ಪದ್ಧತಿ, ಪರಮಾನುಭವಬೋಧೆ, ಪರಮಾರ್ಥಗೀತೆ, ಅನುಭವಸಾರ, ಅರವತ್ತುಮೂವರ ತ್ರಿಪದಿ, ಪರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ ಇವು ಆತನ ಗ್ರಂಥಗಳು. ಕೊನೆಯ ಎರಡು ಗದ್ಯ ಗ್ರಂಥಗಳು. ಉಳಿದವುಗಳು ಪದ್ಯ ರೂಪದಲ್ಲಿವೆ. 'ಕೈವಲ್ಯಪದ್ಧತಿ'ಯಲ್ಲಿ ಶಿವಸ್ತುತಿ ಇದೆ. 'ಪರಮಾನುಭವಬೋಧೆ' ಇದು ವೇದ ವೇದಾಂತದೊಳು ಗೋಪ್ಯ ವಾದರ್ಥ,' ಯಜ್ಞವಲ್ಕ್ಯ ಮತ್ತು ಮೈತ್ರೇಯಿಯರ ಸಂವಾದ ರೂಪದಲ್ಲಿದೆ. 'ಪರಮಾರ್ಥಗೀತೆ' ಮೋಕ್ಷ ಸಾಧನವನ್ನು ತಿಳಿಸುತ್ತದೆ. ಅರವತ್ತುಮೂವರ ತ್ರಿಪದಿ. ತ್ರಿಪದಿಯಲ್ಲಿರುವ ಸ್ತೋತ್ರಗಳು. 'ವಿವೇಕ ಚಿಂತಾಮಣಿ' ಈತನ ಹಿರಿಯ ಕಾಣಿಕೆ. ಇದು ತಾತ್ವಿಕ, ಭೌಗೋಳಿಕ, ಸಾಹಿತ್ಯಕ ವಿಷಯಗಳನ್ನೊಳಗೊಂಡ ಜ್ಞಾನಕೋಶ ಬಹಳ ಉಪಯುಕ್ತ ಗ್ರಂಥ. ನಿಜಗುಣಯೋಗಿ ನಿಜವಾಗಿ ಕನ್ನಡ ಸಾಹಿತ್ಯ ದಿಗಂತದ ಪ್ರಜ್ವಲಿತ ತಾರೆ.

ವೀರಶೈವರ ವಿಶ್ವಕೋಶ 'ಶಿವತತ್ವಚಿಂತಾಮಣಿ'ಯ ಕರ್ತೃ **'ಲಕ್ಕಣ್ಣ'***1 ಪ್ರೌಢದೇವರಾಯನ ಮಹಾಪ್ರಧಾನನಾಗಿದ್ದ. ವಾರ್ಧಕ ಷಟ್ಪದಿಯ ಈ ಬೃಹತ್ ಗ್ರಂಥದಲ್ಲಿ ವೀರಶೈವ ಮತಕ್ಕೆ ಸಂಬಂಧಿಸಿದ ಸಕಲ ವಿವರಗಳು ಇವೆ. ಶಿವ ಗೀತೆಗಳು, ಬಸವ ಚರಿತೆ, ಗಣಪ್ರಶಂಸೆ, ಪಂಚಾಕ್ಷರಿ ಮಹಾತ್ಮ್ಯೆ, ಲಿಂಗಧಾರಣೆ, ಶಿವಪೂಜಾವಿಧಿ, ಷಟ್ಸ್ಥಳ, ಬಹಳ ಚೆನ್ನಾಗಿ ವರ್ಣಿತವಾಗಿವೆ.

**'ಮಗ್ಗೆಯ ಮಾಯಿದೇವ'***2 ಶತಕ ಬರೆದ ಕವಿಗಳಲ್ಲಿ ಅಗ್ರಗಣ್ಯ. ಈತನು 'ಶಿವಾಧವಶತಕ'ದಲ್ಲಿ ಜ್ಞಾನವನ್ನು, 'ಶಿವಾವಲ್ಲಭಶತಕ'ದಲ್ಲಿ ಭಕ್ತಿಯನ್ನು, 'ಐಪುರೀಶ್ವರ ಶತಕ'ದಲ್ಲಿ ವೈರಾಗ್ಯವನ್ನು ವಿದ್ವತ್‌ಪೂರ್ಣ ಶೈಲಿಯಲ್ಲಿ ವಿವರಿಸಿದ್ದಾನೆ. ಈತನ ಇತರ ಗ್ರಂಥಗಳು—ಅನುಭವ ಸೂತ್ರ, ಏಕೋತ್ತರ ಶತಸ್ಥಲಷಟ್ಪದಿ, ಷಟ್ಸ್ಥಳ ಗದ್ಯ, ಪ್ರಭುಗೀತಿ, ಮಗ್ಗೆಯ ಮಾಯಿದೇವ ವಚನ.

---

*1 ಕಾಲ ಸು. 1424.

*2 ಕಾಲ ಸು. ಕ್ರಿ.ಶ. 1430. ಈತ ಐಪುರದ ಸೋಮನಾಥ ದೇವರ ಭಕ್ತ. ಪ್ರೌಢ ರಾಯನ ಕಾಲದಲ್ಲಿದ್ದನು.

16ನೇ ಶತಮಾನದಲ್ಲಿ ಬೃಹತ್ ಕೃತಿಯೊಂದನ್ನು ರಚಿಸಿದ ಕವಿ **'ವಿರೂಪಾಕ್ಷ ಪಂಡಿತ.'*** 'ಚೆನ್ನಬಸವ ಪುರಾಣ' ಕೇವಲ ಚೆನ್ನಬಸವನ ಚರಿತೆಗೇ ಮೀಸಲಾಗಿರದೆ ಇದರಲ್ಲಿ ಶಿವಲೀಲೆ, ಶರಣರ ಚರಿತೆ, ಮತ ಸಿದ್ಧಾಂತ, ಮುಂತಾದ ಅನೇಕ ವಿಷಯುಗಳನ್ನು ಒಳಗೊಂಡು ವೀರಶೈವ ಮತದ ಕೈಪಿಡಿಯುಂತಿದೆ.

"ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳೊಂದೊಂದು ನುಡಿಗಲಿತುವಿದ್ಯದ
ಪರ್ವತವೆ ಆದ ಸರ್ವಜ್ಞ"

ಜೀವನದ ಆಗು ಹೋಗುಗಳನ್ನು ಅನುಭವದ ಮೂಸೆಯುಲ್ಲಿರಿಸಿ ಅದಕ್ಕೆ ಪಾಂಡಿತ್ಯದ ಬೆಂಕಿಯುನ್ನೊಡ್ಡಿ ಕರಗಿಸಿ ಪುಟವಿಟ್ಟು ನುಡಿ ಮುತ್ತುಗಳನ್ನು ಹೊರ ತೆಗೆದ ಸಾಹಿತ್ಯದ ಪವಾಡಪುರುಷ **ಸರ್ವಜ್ಞ**ಮೂರ್ತಿ. ಈತನ ಪ್ರತಿ ಮಾತಿನಲ್ಲಿ ಕಟು ಸತ್ಯವಿದೆ. ಮೂಢನಂಬಿಕೆಯುನ್ನು ಕಿತ್ತೊಗೆಯುವ ಛಲವಿದೆ. ಸಮಾಜವನ್ನು ತಿದ್ದುವ ಹುಮ್ಮಸ್ಸಿದೆ. ಈತ ಹುಟ್ಟಿ ಬೆಳೆದ ಕಾಲ ನಿಖರವಾಗಿ ಗೊತ್ತಿಲ್ಲದೆ ಇದ್ದರೂ 15ನೇ ಶತಮಾನದವನೆಂದು ಊಹೆ. ಈತ ಬರೆದಿರುವುದು 'ತ್ರಿಪದಿ'ಗಳಾದರೂ 'ಸರ್ವಜ್ಞ' ವಚನಕಾರನೆಂದೇ ಪ್ರಸಿದ್ಧನಾಗಿದ್ದಾನೆ. ತಮಿಳಿನ 'ತಿರುವಳ್ಳುವರ್' **'ತೆಲುಗಿನ'** 'ವೇಮನ'ನಂತೆ ಕನ್ನಡದಲ್ಲಿ ಸರ್ವಜ್ಞ ವಿಶಿಷ್ಟ ಸ್ಥಾನಗಳಿಸಿದ್ದಾನೆ. ಸರ್ವಜ್ಞನ ತ್ರಿಪದಿಗಳಲ್ಲಿ ಕಥೆಯಿಲ್ಲ. ವರ್ಣನೆ ಇಲ್ಲ. ಶೃಂಗಾರ ಕುಶಲತೆ ಇಲ್ಲ. ಆದರೆ ವೈರಾಗ್ಯ ಹಣಕಿ ನೋಡುತ್ತಿದೆ. ಅನುಭವ ತುಂಬಿದೆ. ವಿವೇಕ ಸಮೃದ್ಧ ಹರಡಿದೆ. ಈತ ಮುಚ್ಚುಮರೆ ಇಲ್ಲದೆ ಎಲ್ಲವನ್ನು ಟೀಕಿಸಿದ್ದಾನೆ. ಸರಿಕಂಡದ್ದನ್ನು ಧೈರ್ಯದಿಂದ ಹೇಳಿದ್ದಾನೆ. ನಂಗೆ ಜ್ಞಾಪ್ಕ ಇರೋ ಕೆಲವನ್ನು ಹೇಳ್ತೀನಿ ಕೇಳಿ.

ದಾನಭಕ್ತಿಗಳಲ್ಲಿ 'ನಾನು' ಮರೆದಿರಬೇಕು
ನಾನೆಂಬ ರೋಗ ನೀಗಿದರೆ ಗುರುಬೋಧೆ
ತಾನೆ ಫಲಿಸುವುದು ಸರ್ವಜ್ಞ ॥

ಇದ್ದಲಿಂ ಕರಿದಿಲ್ಲ ಬುದ್ಧಿಯಿಂ ಹಿರಿದಿಲ್ಲ
ವಿದ್ಯದಿಂದಧಿಕ ಧನವಿಲ್ಲ ; ದೈವತಾ
ರುದ್ರನಿಂದಿಲ್ಲ ಸರ್ವಜ್ಞ ॥

ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಂಗೆ
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ
ಕಟ್ಟಿಹುದು ಬುತ್ತಿ ಸರ್ವಜ್ಞ ॥

---

* ಕಾಲ ಸು. 1583. ಕಾವ್ಯಶೈಲಿ–ವಾರ್ಧಕ ಷಟ್ಪದಿ.

ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು
ಕಣ್ಣಿನಲಿ ಕಂಡು ಮನದಲಿ ಬಯಸದಿಹ
ಅಣ್ಣಗಳು ಯಾರ ಸರ್ವಜ್ಞ ॥

ವಿದ್ಯೆ ಕಲಿಸದ ತಂದೆ ಬುದ್ಧಿ ಹೇಳದ ಗುರುವು
ಬಿದ್ದಿರಲು ಬಂದು ನೋಡದ ತಾಯಿಯು
ಶುದ್ಧ ವೈರಿಗಳು ಸರ್ವಜ್ಞ ॥

ಸಿರಿಯು ಸಂಸಾರವನು ಸ್ಥಿರವೆಂದು ನಂಬದಿರು
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ
ಹರಿದು ಹೋದಂತೆ ಸರ್ವಜ್ಞ ॥

16–17ನೇ ಶತಮಾನದಲ್ಲಿದ್ದ ಇತರ ಹೆಸರಾಂತ ಕವಿಗಳೆಂದರೆ ಶಿವಲಿಂಗಕವಿ, ಶಾಂತಕವಿ, ಚೆನ್ನ, ಕಿಕ್ಕೇರಿಯಾರಾಧ್ಯ–ಕುಮಾರ ಚೆನ್ನಬಸವ, ಮರುಳಸಿದ್ಧೇಶ ಮುಂತಾದವರುಗಳು. ಚೆನ್ನನ 'ಗುಂಡು ಬ್ರಹ್ಮಯ್ಯನ ಚರಿತೆ' ತ್ರಿಪದಿ ಕಾವ್ಯಗಳಲ್ಲಿ ಗಮನಾರ್ಹವಾಗಿದೆ.

ಸರ್ವಜ್ಞನ ವಚನಗಳನ್ನು ಸಂಗ್ರಹಿಸಿ ಪರಿಷ್ಕರಿಸಿ ಪ್ರಕಾಶಿಸಿದ ಶ್ರೇಯಸ್ಸು ರೆವರೆಂಡ್ **ಚೆನ್ನಪ್ಪ ಉತ್ತಂಗಿ***ಯವರಿಗೆ ಸೇರತಕ್ಕದ್ದು. ಅವಿಶ್ರಾಂತ ಶ್ರಮವಹಿಸಿ ನಾಡಿನಾದ್ಯಂತ ಸುತ್ತಿ ವೀರಶೈವ ಮಠಗಳಿಗೆಲ್ಲ ಭೇಟಿ ಇತ್ತು, ಸಾವಿರಾರು ಹಿರಿಯರನ್ನು ಕಂಡು ಮಾತನಾಡಿ 3000 ವಚನಗಳುಳ್ಳ ಸಂಕಲನ ಸಿದ್ಧಪಡಿಸಿದರು, 1934 ರಲ್ಲಿ. ಹೀಗೆ ಸರ್ವಜ್ಞನ ಸಮಗ್ರದರ್ಶನ ಇವರಿಂದ ಸಾಹಿತ್ಯ ಪ್ರೇಮಿಗಳಿಗೆ ಆಯಿತು. ಸರ್ವಜ್ಞನ ಬಗ್ಗೆ, ಆತನ ವಚನಗಳ ಬಗ್ಗೆ ಇವರಿಗೆ ಎಷ್ಟೊಂದು ಪ್ರೀತಿ! ಸಂಗ್ರಹಿಸಲು ಎಷ್ಟೊಂದು ಶ್ರದ್ಧೆ, ಆಸಕ್ತಿ ! ಈ ಬಗ್ಗೆ ಅವರ ಮಾತು ಕೇಳಿ, ಮಾರ್ಮಿಕವಾಗಿವೆ. ಕಾವ್ಯಮಯವಾಗಿವೆ. 'ಸರ್ವಜ್ಞನ ವಚನಗಳೆಂಬ ಸುವಾಸನೆಯ ಸಣ್ಣಕ್ಕಿ ಕಾಳುಗಳೆ ಕನ್ನಡನಾಡಿನ ನಡುಬೀದಿಯ ಮಣ್ಣಿನಲ್ಲಿ ಬೆರೆತು ಬಿದ್ದದ್ದೇ ರಸಗೊಂಡು ಹಬ್ಬವಾಯಿತು. ದಿನಾಲು ಅದನ್ನು ಮಣ್ಣಿನೊಡನೆ ಕಟ್ಟಿತಂದು ಹಸನು ಮಾಡಿ, ತೊಳೆದು, ಎಸರಿಟ್ಟು ಬಿಸಿ ಬೋನವನ್ನು ಬಸಿದಿಡಲು ಕೇಳುವುದೇನಿದೆ ! ಬಡಿಸಿದರೆ ಮನೆಯಲ್ಲಿ ಗಮಗಮ ವಾಸನೆ. ಬಾಯಲ್ಲಿ ಹಾಕಿಕೊಂಡರೆ ಬಲುರುಚಿ.' ವೀರಶೈವ ಧರ್ಮಸಿದ್ಧಾಂತಗಳ ಮೇಲೆ ಇವರಿಗೆ ಅಪಾರ ಅಭಿಮಾನ, 'ಮೋಳಿಗೆ

---

* ಜೀವಿತಕಾಲ: ಡಿಸೆಂಬರ್ 1881ರಿಂದ ಆಗಸ್ಟ್ 1962. ಹುಟ್ಟಿದ ಊರು; ಉತ್ತಂಗಿ ಗ್ರಾಮ. ಚೆನ್ನಪ್ಪನವರ ಪೂರ್ವಿಕರು ಕ್ರೈಸ್ತ ದೀಕ್ಷೆ ಪಡೆದಿದ್ದವರು. ಪಾರುಪತ್ಯೆಗಾರ ವಂಶಕ್ಕೆ ಸೇರಿದವರು.

ಮಾರಯ್ಯ ಮತ್ತು ರಾಣಿ ಮಹಾದೇವಿಯ ವಚನಗಳು', 'ಅನುಭವಮಂಟಪದ ಐತಿಹಾಸಿಕತೆ', 'ಆದಯ್ಯನ ವಚನಗಳು', 'ಸಿದ್ಧರಾಮ ಸಾಹಿತ್ಯ ಸಂಗ್ರಹ' ಇವು ಅವರ ಅಪೂರ್ವ ಕಾಣಿಕೆಗಳು. 'ಬನಾರಸಕ್ಕೆ ಬೇತ್ಲೆಹೇಮಿನ ವಿನಂತಿ' ಉಪನ್ಯಾಸ ಗ್ರಂಥ. ಇದರಲ್ಲಿ ಕ್ರಿಸ್ತನ ಜೀವನ ತತ್ವಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿದ್ದಾರೆ. 'ಮಕ್ಕಳಶಿಕ್ಷಣಪಟ', 'ಹಿಂದೂ ಸಮಾಜದ ಹಿತಚಿಂತಕ', 'ನಾರಾಯಣವಾಮನ ತಿಲಕರ ಜೀವನ ಚರಿತ್ರೆ', 'ದೃಷ್ಟಾಂತ ದರ್ಪಣ', 'ಬಸವೇಶ್ವರರೂ ಅಸ್ಪೃಶ್ಯರ ಉದ್ಧಾರವೂ' ಇವು ಅವರ ಇತರ ಕೃತಿಗಳು. ಇವರ ಸಿದ್ಧರಾಮ ಸಾಹಿತ್ಯ ಸಂಗ್ರಹ ದೇವರಾಜ ಬಹದ್ದೂರ್ ನಿಧಿಯ ಬಹುಮಾನ ಗಳಿಸಿದೆ. ಇವರ ಅಪಾರ ಸೇವೆಯನ್ನು ಮೆಚ್ಚಿದ ಕನ್ನಡ ಜನತೆ ಇವರನ್ನು 32ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ 'ಕಲಬುರ್ಗಿ'ಯಲ್ಲಿ ಗೌರವಿಸಿತ್ತು.

ಗೋಳಗುಮ್ಮಟ ಬಿಜಾಪುರದ ಅದ್ಭುತ ಕಲಾಸೌಂದರ್ಯವಾದರೆ **ಡಾಕ್ಟರ್ ಫಕೀರಪ್ಪ ಗುರುಬಸಪ್ಪ ಹಳಕಟ್ಟಿ*** ಬಿಜಾಪುರದ ಭವ್ಯ ವ್ಯಕ್ತಿ. ಸಾಹಿತ್ಯ ಕ್ಷಿತಿಜದಲ್ಲಿ ಸದಾ ಮೆರಗುವ ತಾರೆ. ಶಿಕ್ಷಣ ಹಾಗೂ ಸಮಾಜಸೇವೆ ಕ್ಷೇತ್ರದಲ್ಲಿ ಅಮರ ಸ್ಥಾನ ಗಳಿಸಿರುವ ವ್ಯಕ್ತಿ. ಇವರ ಅಮೂಲ್ಯ ಸೇವಾಗುಣವನ್ನು ಮೆಚ್ಚಿದ ಬ್ರಿಟಿಷ್ ಸರಕಾರ ಇವರಿಗೆ ರಾವ್ ಬಹದ್ದೂರ್ ಪ್ರಶಸ್ತಿ ಇತ್ತು ಗೌರವಿಸಿದ್ದರೆ ಅಪಾರ ಸಾಹಿತ್ಯ ಸೇವೆಯಿಂದ ಕನ್ನಡ ಕೃತಿ ಸಂಪತ್ತನ್ನು ವೃದ್ಧಿಸಿದ ಇವರಿಗೆ ಕರ್ನಾಟಕ ವಿಶ್ವವಿದ್ಯಾನಿಲಯ 'ಗೌರವ ಡಾಕ್ಟರೇಟ್' ಇತ್ತು ಸನ್ಮಾನಿಸಿ ಕೃತಜ್ಞತೆ ಅರ್ಪಿಸಿತ್ತು. ಕನ್ನಡ ಜನತೆ ಇವರನ್ನು 1926 ಬಳ್ಳಾರಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಗೌರವಿಸಿತ್ತು. ಇವರನ್ನು ವಚನಶಾಸ್ತ್ರ ಪಿತಾಮಹರೆಂದೂ ಕರೆಯುವುದುಂಟು.

ಇವರು ಜನಿಸಿದ್ದು ಧಾರವಾಡದಲ್ಲಿ, ಬಿ. ಎ. ಎಲ್. ಎಲ್. ಬಿ. ಮುಗಿಸಿ ವಕೀಲಿ ವೃತ್ತಿ ಕೈಗೊಂಡರೂ ಸಾಹಿತ್ಯ ಪ್ರೇಮಿಯಾಗಿ ಮುಂದುವರಿದರು. ವಚನ ಸಾಹಿತ್ಯವನ್ನು ಬೆಳಕಿಗೆ ತರಲು ಇವರು ಪಟ್ಟ ಶ್ರಮ, ತೋರಿದ ನಿಷ್ಠೆ ಅಪೂರ್ವವಾದುದು. ಊರು ಊರು ತಿರುಗಿ ಮನೆ ಮನೆಯಲ್ಲಿ ಬೇಡಿ ಹುಡುಕಿ ವಚನ ಸಾಹಿತ್ಯದ ಓಲೆಗರಿ ಗ್ರಂಥಗಳನ್ನು ಓದಿ ಪರಿಷ್ಕರಿಸಿ ಪ್ರಕಟಿಸಿದರು. 'ಶಿವಾನುಭವ', 'ನವ ಕರ್ನಾಟಕ' ಇವರು ನಡೆಸಿದ ಪ್ರಸಿದ್ಧ ಪತ್ರಿಕೆಗಳು. ಈ ಪತ್ರಿಕೆಗಳ ಮೂಲಕ ವಚನ ಸಾಹಿತ್ಯವನ್ನು ಬಹುತೇಕ ಬೆಳಕಿಗೆ ತಂದ ಕೀರ್ತಿ ಇವರಿಗೆ ಲಭಿಸುತ್ತದೆ. ಇವರು ರಚಿಸಿದ ಕೃತಿಗಳು 'ಶಿವಾನುಭವ ಶಬ್ದಕೋಶ', 'ಶಿವಶರಣರ ಚರಿತ್ರೆಗಳು', 'ಏಳುನೂರು ಎಪ್ಪತ್ತು ಗಣಾಧೀಶ್ವರರ ಚರಿತ್ರೆಗಳು'. 'ವಚನಶಾಸ್ತ್ರಸಾರ' ಬೃಹತ್ ಗ್ರಂಥ, ಇವಲ್ಲದೆ ಇವರು 50-60 ಕೃತಿಗಳನ್ನು ಸಂಪಾದಿಸಿದ್ದಾರೆ. ಸಾಹಿತ್ಯ ಸೇವೆಯೇ ಇವರ ಜೀವನದ ಮುಖ್ಯ ಗುರಿ ಆಗಿದ್ದರೂ ಜನತಾ ಸೇವೆಯಲ್ಲೂ ಆಸಕ್ತಿಯನ್ನು ಹೊಂದಿ

---

* ಜೀವಿತ ಕಾಲ ; ಜುಲೈ 2, 1880–ಆಗಸ್ಟ್ 27, 1964.

ದ್ದರು. ಮುಂಬಯಿಯ ಶಾಸನ ಸಭೆಯ ಸದಸ್ಯರಾಗಿ, ಸೆನೆಟ್ ಸದಸ್ಯರಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ. ಅವರು ಇಂದು ಇಲ್ಲದಿದ್ದರೂ ಅವರ ಕೃತಿಗಳು ಅಮರವಾಗಿವೆ.

ಇಂದಿನ ಶತಮಾನದಲ್ಲಿ ವಚನ ಸಾಹಿತ್ಯಕ್ಕೆ ಅಪಾರ ಕೊಡುಗೆ ಇತ್ತಿರುವವರು ಜ.ಚ.ನಿ.* ಇವರ ಅಂಕಿತನಾಮ 'ನಿಡುಮಾಮಿಡಿ ಶ್ರೀ ಗಿರಿಸೂರ್ಯ ಸಿಂಹಾಸನಾಧೀಶ್ವರ'. ಪೂರ್ಣ ಹೆಸರು 'ಜಗದ್ಗುರು ಶ್ರೀ ಚನ್ನಬಸವರಾಜದೇಶಿಕೇಂದ್ರಶಿವಾಚಾರ್ಯರು ನಿಡುಮಾಡಿ'. ಇವರು ಸುಮಾರು 4000 ವಚನಗಳನ್ನು ರಚಿಸಿದ್ದಾರೆ. ಇವರ ವಚನಗಳಲ್ಲಿ ಧರ್ಮಾಭಿಮಾನಕ್ಕಿಂತ ದೇಶಾಭಿಮಾನಕ್ಕೆ ಹೆಚ್ಚು ಪ್ರಾಮುಖ್ಯತೆ ಕಂಡುಬರುತ್ತದೆ. 'ವಿಶ್ವವೇ ಮನೆ! ವಿಶ್ವೇಶ್ವರನೆ ತಂದೆ! ವಿಶ್ವೇಶ್ವರಿಯೇ ತಾಯಿ! ವಿಶ್ವದ ಮಾನವರೆಲ್ಲ ಮಕ್ಕಳು, ಕಂಡಯ್ಯ! ಬಣ್ಣ, ಭಾಷೆ, ಧರ್ಮ, ಕರ್ಮ, ದೇಶಗಳ ವಿವಾದವೇನು? ಮಾನವ್ಯ ಬಾಂಧವ್ಯವೆ ವಿಶ್ವೈಕ್ಯದ ಜೀವಾಳ ಕಂಡಯ್ಯ...'

ಇವರು ವಚನ ರೂಪದಲ್ಲಿ ಬರೆದಿರುವ ಧರ್ಮಗ್ರಂಥಗಳು 'ವಚನಾಂಜಲಿ', 'ವಚನ ಮಂಜರಿ', 'ವಚನವಲ್ಲರಿ', 'ಮಣಿ ವಚನಗಳು'. ಇವರ ವಚನಗಳಲ್ಲಿ ಒಳ್ಳೆಯ ಸಾಹಿತ್ಯವಿದೆ. ಭಾಷಾಸೌಂದರ್ಯವಿದೆ. ಭವ್ಯ ಸಂಸ್ಕೃತಿಯ ಪ್ರದರ್ಶನವಿದೆ. 'ಅನುಭವವಿಲ್ಲದೆ ಅಮರ ಸಾಹಿತ್ಯ ಲಭಿಸದು. ಅಭ್ಯಾಸವಿಲ್ಲದೆ ಅರಿವು ಅಳವಡದು.' ಇವರ ಮಾತು ಇವರ ಮಟ್ಟಿಗೆ ನೂರುಪಾಲು ಸತ್ಯ. ಅನುಭವ ಆತ್ಮಜ್ಞಾನದ ರಸಪಾಕವೇ ಅವರ ವಚನಾಮೃತ. ಆದಿರೇಣುಕರ ಸಂಸ್ಕೃತ ಗ್ರಂಥ 'ಸಿದ್ಧಾಂತ ಶಿಖಾಮಣಿ'ಯನ್ನು 'ಮಣಿಕಾಂತಿ' ಎಂಬ ಹೆಸರಿನಿಂದ ಗದ್ಯರೂಪದಲ್ಲೂ 'ಮಣಿಮುಕುರಂ' ಎಂಬ ಹೆಸರಿನಿಂದ ಕಾವ್ಯರೂಪದಲ್ಲೂ ಕನ್ನಡಕ್ಕೆ ಅನುವಾದಿಸಿರುವುದಲ್ಲದೆ ಇದೇ ಸಿದ್ಧಾಂತ ಗ್ರಂಥವನ್ನು 'ಮಣಿ ವಚನಗಳು' ಎಂಬ ಹೆಸರಿನಲ್ಲಿ ವಚನರೂಪದಲ್ಲೂ ರಚಿಸಿ 'ವಚನ ಪರಮಾಚಾರ್ಯ'ರೆನಿಸಿಕೊಂಡಿದ್ದಾರೆ. ಇವರ ಕೃತಿಗಳು ಸುಮಾರು 140.

ಇದೇ ಶತಮಾನದಲ್ಲಿ ವಚನ ವಾಙ್ಮಯಕ್ಕೆ ಸೇವೆ ಸಲ್ಲಿಸಿದ ಇತರ ಕವಿಗಳು ಶ್ರೀ ದಿವಾಕರ ರಂಗರಾಯರು ತಮ್ಮ 'ಅಂತರಾತ್ಮನಿಗೆ' ವಚನ ಕೃತಿ ಮೂಲಕವೂ ಶ್ರೀಕಂಠಯ್ಯನವರು 'ಸೂಕ್ತಿಸುಧೆ' ಹರಿಸಿ, ಶ್ರೀ ಜೇರಿಗೆಕಟ್ಟಿ ಬಸಪ್ಪನವರು 'ಕಟ್ಟಿಯ ಬಸವೇಶ್ವರ ವಚನಗಳು' ಮೂಲಕವೂ ಕನ್ನಡದ ಸಾಹಿತ್ಯ ಸಿರಿಯನ್ನು ಹೆಚ್ಚಿಸಿದ್ದಾರೆ. ಆಧುನಿಕ ವಚನ ಸಾಹಿತ್ಯದಲ್ಲಿ **ಕಟ್ಟಿ ಬಸವಪ್ಪ**ನವರ ವಚನಗಳು ಬಹಳ ಹೆಸರುವಾಸಿಯಾಗಿವೆ. 'ಗುರು ಲಿಂಗ ಜಂಗಮವೆಂದೆಂಬರು. ಗುರುವಾದಡೆ ಶಿಷ್ಯ ಮೆಚ್ಚಬೇಕು. ಲಿಂಗವಾದಡೆ ಮನ ಮೆಚ್ಚಬೇಕು. ಜಂಗಮವಾದಡೆ ಭಕ್ತ ಮೆಚ್ಚಬೇಕು. ಶಿಷ್ಯ ಮೆಚ್ಚದ, ಮನ ಮೆಚ್ಚದ, ಭಕ್ತ ಮೆಚ್ಚದ ಗುರು ಲಿಂಗ ಜಂಗಮ ನಮ್ಮ ಬಸವಲಿಂಗ ಪ್ರಿಯಕಟ್ಟಿಯ ಬಸವೇಶ್ವರಂಗೆ ದೂರ...ದೂರ...ದೂರ...'. ಇದು

---

* ಜನನ : 28-9-1911. ಹುಟ್ಟಿದ ಊರು : ಬೆಳಗಾವಿ ಜಿಲ್ಲೆ ಅಂಬಡಗಟ್ಟಿ.

ವೀರಶೈವರಿಗೆ ಪ್ರಮುಖ ತತ್ವತ್ರಯವಾಗಿರುವ ಗುರು, ಲಿಂಗ, ಜಂಗಮ ಸ್ವರೂಪ ವನ್ನು ನಿರೂಪಿಸಿದೆ. ಹೀಗೆ ವಚನಸಾಹಿತ್ಯ ಜಾತಿ, ಮತ, ಪಂಗಡಗಳೆಂಬ ಭೇದ ವಿಲ್ಲದೆ ಸರ್ವತೋಮುಖವಾಗಿ ಈ ಯುಗದಲ್ಲೂ ಬೆಳೆದುದು ಕನ್ನಡ ನುಡಿಯ ಸೌಭಾಗ್ಯವೆನ್ನಬೇಕು.

ಎಸ್. ವಿ. ರಂಗಣ್ಣನವರ 'ರಂಗಬಿನ್ನಪ*' ಈ ಶತಮಾನದ ಒಂದು ಅಪೂರ್ವ ಕೃತಿ. ಹೊರನಾಡಿನಲ್ಲಿದ್ದು ಕನ್ನಡಕ್ಕಾಗಿ ದುಡಿದ ವಿದ್ವಾಂಸರು **ಆರ್. ತಾತಾಚಾರ್ಯ**† 'ಗಿರಿಮಲ್ಲಿಕಾರ್ಜುನ ಶತಕಂ' ಹಾಗೂ 'ಮುರುನಂದನ ಶತಕ' ರಚಿಸಿದ್ದಾರೆ.

ಇತ್ತೀಚಿನ ಕೃತಿಗಳು : **ಎಸ್. ಎಸ್. ಭೂಸರೆಡ್ಡಿ ಮತ್ತು ಡಾ॥ ವೀರಣ್ಣ ರಾಜೂರ** ಸಂಪಾದಿಸಿರುವ 'ಸಿದ್ಧಲಿಂಗ ಶತಕ', **ಡಾ॥ ವೀರಣ್ಣ ರಾಜೂರ** ಮತ್ತು **ಪ್ರೊ॥ ಕಾಶಿಪುಟ್ಟ ಸೋಮಾರಾಧ್ಯ** ಆಯ್ದು ಇತ್ತಿರುವ 'ಶರಣರ ನುಡಿಮುತ್ತುಗಳು', **ಟಿ. ಸಿ. ಗುಬ್ಬಿ ಹುಚ್ಚಪ್ಪನವರ** 'ಲಿಂಗಧರ್ಮದ ಪ್ರಾಚೀನತೆ ಮತ್ತು ಶರಣ ಮಾರ್ಗ', **ರಂಗನಾಥ ದಿವಾಕರರ** 'ವಚನ ಶಾಸ್ತ್ರ ರಹಸ್ಯ', **ಎಂ.ಆರ್.ಶ್ರೀ.**ಯವರ 'ಭಕ್ತ ಭಂಡಾರಿ ಬಸವಣ್ಣನವರು' ಮತ್ತು 'ವಚನ ಧರ್ಮ ಸಾರ', **ಶಂಕರ ಬಾಲಕೃಷ್ಣ ಜೋಶಿ**ಯವರ 'ಶಿವ ರಹಸ್ಯ', **ಹರ್ಡೇಕರ ಮಂಜಪ್ಪ**ನವರ 'ಬಸವ ಚರಿತ್ರೆ', **ಶಿ. ಶಿ. ಬಸವನಾಳರ** 'ಬಸವಣ್ಣನವರ ಷಟ್‌ಸ್ಥಲ ವಚನಗಳು', **ಆರ್. ಸಿ. ಹಿರೇಮಠ** ಸಂಪಾದಿಸಿರುವ 'ಭಕ್ತಭಂಡಾರಿ ಬಸವಣ್ಣ', **ಶ್ಯಾಮಸುಂದರ ಬಿದರಕುದಿ**ಯವರ 'ಅಲ್ಲಮಪ್ರಭು ವಾದ ಮತ್ತು ಇತರ ಪದ್ಯಗಳು', **ನಾ. ಮಾ. ದೊಡ್ಡಯ್ಯ ಶಾಸ್ತ್ರಿ**ಗಳ 'ಶ್ರೀ ಜಗದ್ಗುರು ಸಿದ್ಧಲಿಂಗೇಶ್ವರ ಶತಕ', **ಎ. ದಾಸೇಗೌಡರ** 'ಚನ್ನಕೇಶ್ವರ ಸ್ವಾಮಿ ಮಹಾತ್ಮ್ಯೆ', **ನಾ. ನಂಜುಂಡಯ್ಯ**ನವರ 'ಕನ್ನಡ ವಚನಗುಚ್ಛ', **ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳ** 'ವಚನ ವಲ್ಲರಿ', **ಸುಜನಾ**ರವರ 'ಬಸವಣ್ಣನವರ ವಚನಗಳಲ್ಲಿ ಪ್ರಾಣಿ ರೂಪಕ', **ಜಗದ್ಗುರು ಮಾತೆ ಮಹಾದೇವಿ**ಯವರ 'ವಿಶ್ವಗುರು ಬಸವಣ್ಣ', **ಕೊಟ್ಟಲಗಿ**ಯವರ '**ಸರ್ವಜ್ಞಸಾರ**' ಮತ್ತು 'ಸೋಮೇಶ್ವರ ಶತಕ', **ಡಾ॥ ಎಸ್. ವಿದ್ಯಾಶಂಕರ**ರವರ 'ಶಾಂತಿ ಪುರಾಣ ಸಂಗ್ರಹ', ಮತ್ತು 'ಜನ್ನನ ಅನಂತ ಪುರಾಣ ಸಂಗ್ರಹ', **ಎಲ್. ಬಸವರಾಜು**ರವರು ಸಂಪಾದಿಸಿರುವ 'ಅಲ್ಲಮನ ವಚನಗಳು', 'ಅಕ್ಕನವಚನಗಳು', 'ಬಸವಣ್ಣನವಚನಗಳು', 'ದೇವರ ದಾಸಿಮಯ್ಯನ

---

* 'ರಂಗಬಿನ್ನಪ'ದಲ್ಲಿ 1212 ವಚನಗಳಿವೆ. 1 ಸಾಲಿನ ವಚನಗಳಿಂದ ಹಿಡಿದು ಹತ್ತೆಂಟು ಪುಟಗಳವರೆಗೆ ಹಬ್ಬಿದೆ.

† ಜೀವಿತ ಕಾಲ : 1876–1932. ಜೈನ ಸಾಹಿತ್ಯಕ್ಕೆ ಇವರ ಕೊಡುಗೆ ನಯಸೇನನ ಧರ್ಮಾಮೃತ ಆಧರಿಸಿರುವ 'ಗುರುದತ್ತಗಾಯನ ಚರಿತ್ರೆ'. ಇವರು ಮದರಾಸಿನ ರಾಜಮಹೇಂದ್ರ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ಅನಂತರ ಟೀಚರ್ಸ್ ಟ್ರೈನಿಂಗ್ ಕಾಲೇಜಿನಲ್ಲಿ ವೈಸ್ ಪ್ರಿನ್ಸಿಪಾಲರಾಗಿದ್ದರು. 1927ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಕನ್ನಡ ಜನತೆ ಅವರನ್ನು ಗೌರವಿಸಿತ್ತು.

ವಚನಗಳು', **ಕೆ. ಶಿವರಾಮ ಐತಾಳರು** ಸಂಪಾದಿಸಿರುವ 'ದೇವರ ದಾಸಿಮಯ್ಯನ ಷಟ್ಪದಿಗಳು', **ಸಂ. ಶ್ರೀ. ಭೂಸನೂರಮಠ**ರವರು ಸಂಪಾದಿಸಿರುವ 'ವಚನ ಸಾಹಿತ್ಯ ಸಂಗ್ರಹ', ಮತ್ತು 'ಶೂನ್ಯ ಸಂಪಾದನೆಯ ಪರಾಮರ್ಶೆ', **ಸೋಮಶೇಖರ ದಾನಪ್ಪ ಜತ್ತಿ**ಯವರ 'ಚೈತನ್ಯ ಚೇತನ', **ಪಿ. ಎಸ್. ಹಿರೇಮಠ**ರವರ 'ಕೊಪ್ಪದ ಶ್ರೀ ಚನ್ನ ಬಸವಸ್ವಾಮಿಗಳ ಚರಿತ್ರೆ', **ಸಿದ್ಧಣ್ಣ ಲಂಗೋಟಿ**ಯವರ 'ಬಸವಣ್ಣನ ಬಯ್ಗುಳಗಳು' ಮತ್ತು 'ಅಂಬಿಗರ ಚೌಡಯ್ಯ', **ಎಸ್. ಎಸ್. ಭೂಸರೆಡ್ಡಿ**ಯವರು ಸಂಪಾದಿಸಿರುವ 'ಸತ್ಯಕ್ಕನ ವಚನಗಳು', **ಡಾ॥ ಮಲ್ಲಿಕಾರ್ಜುನ ಸಿಂದಗಿ**ಯವರ 'ಶ್ರೀ ಸಿದ್ಧಾರೂಢ ಸ್ವಾಮಿಗಳು' ಮತ್ತು 'ಶ್ರೀ ಸಿದ್ಧಾರೂಢ ವೈಭವ' ನಾಟಕ, **ಚೆನ್ನವೀರ ಜಂಗಮ ದೇವರ** 'ಷಟ್‌ಸ್ಥಲ ವಲ್ಲಭ', **ಡಾ॥ ಎಂ. ಎಂ. ಕಲಬುರ್ಗಿ**ಯವರು ಸಂಪಾದಿಸಿರುವ 'ಶಾಸನಗಳಲ್ಲಿ ಶಿವಶರಣರು', **ಎಸ್. ಎಸ್, ಭೂಸರೆಡ್ಡಿ** ಮತ್ತು **ವೀರಣ್ಣ ರಾಜೂರ** ಸಂಪಾದಿಸಿರುವ 'ಸರ್ವಜ್ಞನ ವೀರಗಣಸ್ತೋತ್ರದ ವಚನಗಳು'. **ಎಂ. ಎ. ಜಯ ಚಂದ್ರ** ಸಂಗ್ರಹಿಸಿರುವ 'ವಚನ ಚಿಂತನ', **ಜಿ. ಎಚ್. ಹನ್ನೆರಡು ಮಠದ**ರವರ 'ಚಿತ್ರ ರಗಿ ಚಿಜ್ಜ್ಯೋತಿ', **ಎಸ್. ಎಸ್. ಭೂಸರೆಡ್ಡಿ**ಯವರ 'ವಚನಕಾರ ಉರಿಲಿಂಗದೇವರು ಮತ್ತು ನವಿಲುಗುಂದದ ಗವಿ ಮಠದ ಪುಣ್ಯಮೂರ್ತಿ, **ಕೆ. ಮರುಳಸಿದ್ದಪ್ಪ** ಮತ್ತು **ಕೆ.ರಂ. ನಾಗರಾಜ**ರವರ 'ವಚನ ಕಮ್ಮಟ', **ಕಾವ್ಯಪ್ರೇಮಿ** ಸಂಪಾದಿಸಿರುವ 'ಅಲ್ಲಮನ ಸುಧೆ', **ಡಾ॥ ಫ. ಗು. ಹಳಕಟ್ಟಿ** ಸಂಪಾದಿಸಿರುವ 'ಹರಿಹರನ ರಗಳೆಗಳು' **ಮಹಾದೇವ ಬಣಗಾರ**ರ 'ವಚನದೀಪ್ತಿ', **ಡಿ. ಟಿ. ರಂಗಸ್ವಾಮಿ** ಸಂಪಾದಿಸಿರುವ 'ಚೂಡಾರತ್ನ ಶತಕ', **ಡಾ॥ ಲಠ್ಠೆ**ರವರ 'ಚೆನ್ನಬಸವ ಶಿವಯೋಗಿಗಳ ಭಜನೆಯ ಪದಗಳು', **ವಿ. ರು. ಕೊಪ್ಪಳ** ಸಂಪಾದಿಸಿರುವ 'ಲಿಂಗಸ್ತೋತ್ರದ ವಚನಗಳು', **ಹಳಪೇಟ ಚಿಂತಾಮಣಿ**ಯವರ 'ಶರಣ ಸಂಸ್ಕೃತಿ ದರ್ಶನ', **ಶಿವಶಂಕರ**ರವರ 'ವೀರಧರ್ಮ ತತ್ವಗಳು', **ಆರ್.ಸಿ. ಹಿರೇಮಠ** ಸಂಪಾದಿಸಿರುವ ಚೆನ್ನಬಸವಣ್ಣ, ಬಸವಣ್ಣ, ಸಿದ್ಧರಾಮೇಶ್ವರರ ವಚನಗಳು, **ಪಿ. ಎಸ್. ಹಿರೇಮಠ**ರವರ ತೊಪ್ಪದ ಶ್ರೀ ಚನ್ನಬಸವಸ್ವಾಮಿಗಳ ಚರಿತ್ರೆ, **ಡಾ॥ ಜ.ಚ.ನಿ.**ಯವರ 'ಶಿವಾದ್ವೈತ ದರ್ಶನ', **ಚೆನ್ನವೀರ ಜಂಗಮದೇವರ** 'ಷಟ್‌ಸ್ಥಲ ವಲ್ಲಭ', **ಎಂ. ಎ. ಜಯಚಂದ್ರ**ರವರ 'ವಚನ ಚಿಂತನ', **ಮಹಾಂತ ಪ್ರಿಯ**ರ 'ಶಿವಯೋಗಿ ದೊಡ್ಡಬಸವೇಶ್ವರ' ನಾಟಕ ಮುಂತಾದವುಗಳು.

## (ಆ) ಹರಿದಾಸರು

"ಇದೇನ್ ಮೇಸ್ಟ್ರೇ ಪುರಂದರದಾಸರು, ವ್ಯಾಸರಾಯರು, ಜಗನ್ನಾಥದಾಸರು, ಇವ್ರೆಲ್ಲಾ ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಮಾಡಿಲ್ವೆ ?" ಏಕಾಕಿ ಇನ್ನೂ ಇವರಲ್ಲಿ

ಯಾರ ಬಗ್ಗೇನೂ ಹೇಳೆ ಇಲ್ವಲ್ಲಾ ?" ರಾಯರು ಪ್ರಶ್ನಿಸಿದಾಗ ವ್ಯಾಸರಾಯರು ಪಕ್ಕಕ್ಕೆ ತಿರುಗಿ ನೋಡಿ ಮುಗುಳ್ನಕ್ಕರು.

"ನೀವು ಬಂದಿದ್ದೇ ನಾನು ನೋಡ್ಲಿಲ್ವಲ್ಲ?"

"ನಾನು ಆಗ಼್ೇ ಬಂದೆ. ಶಿವಶರಣರ ವಿಷಯ ಕೇಳ್ತಾ ಹಾಗೇ ತಲೆದೂಗ್ತಾ ಕೂತ್ಕೊಂಡ್ಬಿಟ್ಟಿದ್ದೆ".

"ವಚನ ಸಾಹಿತ್ಯ ಪೂರೈಸ್ತು. ಈಗ ಹರಿದಾಸರುಗಳ ಬಗ್ಗೆ ಕೊಂಚ ತಿಳ್ಕೊಳ್ಳೋಣ. ಬಳಕೆಯ ಮಾತು ಉಪಯೋಗಿಸಿಕೊಂಡು ಹಾಡು ಕಟ್ಟಿ ಹಾಡಿ ಜನ ಸಾಮಾನ್ಯರನ್ನು ರಮಿಸಿ ವೇದಾಂತದ ಉಪದೇಶವನ್ನು ಜನತೆಗೆ ಉಣಬಡಿಸಿ ತಣಿಸಿದ ಯಶಸ್ಸು ಈ ದಾಸರುಗಳಿಗೆ ಸೇರುತ್ತದೆ.

13ನೇ ಶತಮಾನದ ಸುಮಾರಿನಲ್ಲಿದ್ದ **ಮಧ್ವಾಚಾರ್ಯರೇ** ದ್ವೈತ ಸಿದ್ಧಾಂತದ ಪ್ರವರ್ತಕರು. ಇವರು ಜನಿಸಿದ್ದು ಉಡುಪಿಯ ಬಳಿಯ ಒಂದು ಗ್ರಾಮದಲ್ಲಿ. ಧರ್ಮ ಪ್ರಚಾರವಾದದ್ದು ಮುಖ್ಯವಾಗಿ ದಕ್ಷಿಣ ಭಾರತದಲ್ಲಿ. ಇವರು ಉಪದೇಶಿಸಿದ್ದು ಭಕ್ತಿಮಾರ್ಗ. ಕೃಷ್ಣಾಮೃತ ಮಹಾರ್ಣವ ತಂತ್ರಸಾರ, ಬ್ರಹ್ಮಸೂತ್ರಭಾಷ್ಯ, ಋಗ್ಭಾಷ್ಯ, ಗೀತಾಭಾಷ್ಯ, ಗೀತಾತಾತ್ಪರ್ಯ, ಮಹಾಭಾರತತಾತ್ಪರ್ಯನಿರ್ಣಯ. ಭಾಗವತ ತಾತ್ಪರ್ಯ ಮುಂತಾದ ಸುಮಾರು 37 ಗ್ರಂಥ ರಚಿಸಿದ್ದಾರೆ.

ಇವರ ನಂತರ ಈ ಪಂಥದ ಪ್ರಮುಖ ವ್ಯಕ್ತಿಯೆಂದರೆ **ನರಹರಿತೀರ್ಥರು**. ಈ ದಾಸ ವಾಙ್ಮಯದ ಮೂಲಪುರುಷರು ಎನ್ನಬಹುದು. ಇವರು ಇದ್ದ ಕಾಲ ಸುಮಾರು 14ನೇ ಶತಮಾನದ ಪೂರ್ವಭಾಗ. ಇವರು ಹಲವು ದೇವರ ನಾಮಗಳನ್ನು ರಚಿಸಿದ್ದಾರೆ. ನರಹರಿತೀರ್ಥರ ಮೊದಲ ಹೆಸರು ಸ್ವಾಮಿಶಾಸ್ತ್ರಿ. ಮಧ್ವ ಮತ ಸಂಸ್ಥಾಪಕರಾದ ಮಧ್ವಾಚಾರ್ಯರ ದ್ವೈತ ಮತ ಪ್ರತಿಪಾದನೆಗೆ ಸಹಾಯ ಮಾಡಿದ್ದಲ್ಲದೆ ಅವರ ಮುಖ್ಯ ಶಿಷ್ಯರಾಗಿದ್ದರು. ಅವರ ಅಂಕಿತನಾಮ 'ರಘುಕುಲ ತಿಲಕ'. ಈ ಆಚಾರ್ಯರು ಅಚ್ಚಕನ್ನಡಿಗರು. ಭಗವದ್ಗೀತಾ ಟೀಕೆ, ಬ್ರಹ್ಮಸೂತ್ರ ಹಾಗೂ ದಶೋಪನಿಷತ್ತುಗಳಿಗೆ ಭಾಷ್ಯ ಮತ್ತು ಮಹಾಭಾರತ ತಾತ್ಪರ್ಯ ನಿರ್ಣಯ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.

15ನೇ ಶತಮಾನದ **ಶ್ರೀಪಾದರಾಯರ*** ಸೇವೆಯನ್ನು ನಾವು ಇಲ್ಲಿ ಮರೆಯುವಂತಿಲ್ಲ. ಇವರ ಮೊದಲ ಹೆಸರು ಲಕ್ಷ್ಮೀನಾರಾಯಣಮುನಿ. ಮುಳುಬಾಗಿಲ ಮಠದ ಒಂಬತ್ತನೇ ಪೀಠಾಧೀಶ್ವರ. ಇವರು ರಚಿಸಿದ 'ಭ್ರಮರಗೀತೆ', 'ವೇಣುಗೀತೆ', **'ಗೋಪಿಗೀತೆ'** ಒಂದಕ್ಕಿಂತ ಇನ್ನೊಂದು ಸೊಗಸು. ಪ್ರಾಸಮಯವಾದ ಭಾಷೆಯಲ್ಲಿ ಲಾಲಿತ್ಯ ತುಂಬಿರುವುದಲ್ಲದೆ ಶಾಂತಿ, ಭಕ್ತಿರಸ, ನಿರರ್ಗಳವಾಗಿ ಹರಿದಿದೆ. ಇವರ ಅಂಕಿತನಾಮ 'ರಂಗವಿಠಲ'.

---

* ತಂದೆ ಶೇಷಗಿರಿ ಆಚಾರ್ಯ. ತಾಯಿ ಗಿರಿಯಮ್ಮ. ಜನ್ಮಸ್ಥಳ: ಚನ್ನಪಟ್ಟಣ ತಾಲ್ಲೋಕಿನ ಅಬ್ಬೂರು.

ಇವರ ಶಿಷ್ಯರಾದ **ವ್ಯಾಸರಾಯರು*** ಗುರುವನ್ನೇ ಮೀರಿದ ಪ್ರತಿಭಾವಂತರು ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಒದಗಿದ್ದ ಕುಹುರೋಗ ವನ್ನು ನಿವಾರಿಸಿ ರಾಜ ಗುರುಗಳಾದರು. ಇವರು ಸಂಸ್ಕೃತ ಹಾಗೂ ಕನ್ನಡ ಎರಡ ರಲ್ಲೂ ಗ್ರಂಥರಚನೆ ಮಾಡಿದ್ದಾರೆ. ನೂರಾರು ಜನ ಸಾಮಾನ್ಯರಿಗೆ ಹಿಡಿಸುವಂತಹ ಕೀರ್ತನೆಗಳನ್ನು ರಚಿಸಿದ್ದಲ್ಲದೆ ವೃತ್ತನಾಮದಲ್ಲಿ ಭಗವದ್ಗೀತೆಯನ್ನು ಬರೆದಿದ್ದಾರೆ. ಗ್ರಂಥಗಳು ; ತರ್ಕತಾಂಡವ, ನ್ಯಾಯಾಮೃತ, ಚಂದ್ರಿಕಾ.

**ವಾದಿರಾಜರು**†: ವಾದಿರಾಜರು ವ್ಯಾಸರಾಯರ ಸಮಕಾಲೀನರು. ವ್ಯಾಸಕೂಟ —ದಾಸಕೂಟ ಎರಡರಲ್ಲೂ ಹೆಸರಾದವರು. ಸೋದೆಮಠದ ಸ್ವಾಮಿಯಾಗಿ ವಾದಿರಾಜತೀರ್ಥರೆಂದು ಪ್ರಸಿದ್ಧರಾಗಿದ್ದರು. ಸಂಸ್ಕೃತದಲ್ಲಿ ಪಂಡಿತರಾಗಿದ್ದ ಇವರು ತಂತ್ರಸಾರಟೀಕಾ, ಯುಕ್ತಿಮಲ್ಲಿಕಾ, ತೀರ್ಥಪ್ರಬಂಧ, ಪಾಷಂಡಮತಖಂಡನ, ಸಂಕಲ್ಪ ಪದ್ಧತಿ, ಸರಸ ಭಾರತಿವಿಲಾಸ ಮುಂತಾದ 16 ಗ್ರಂಥಗಳನ್ನು, ಕನ್ನಡದಲ್ಲಿ ವೈಕುಂಠವರ್ಣನೆ, ಲಕ್ಷ್ಮೀಶೋಭನೆ, ಸ್ವಪ್ನಗದ್ಯ, ಕೀಚಕವಧ, ಕೇಶವನಾಮ, ಗುಂಡ ಕ್ರಿಯಾ, ಭ್ರಮರಗೀತ ಮುಂತಾದ ಗ್ರಂಥಗಳನ್ನಲ್ಲದೆ ನೂರಾರು ಕೀರ್ತನೆ ಮತ್ತು ಸುಳಾದಿ, ಉಗಾಭೋಗಗಳನ್ನೂ ಬರೆದಿದ್ದಾರೆ ಈ ಎಲ್ಲ ಗ್ರಂಥಗಳಲ್ಲೂ ಮಧ್ವಮತದ ತತ್ವಗಳೂ ಪ್ರತಿಪಾದಿಸಲ್ಪಟ್ಟಿವೆ.

ದಾಸಶ್ರೇಷ್ಠ **ಪುರಂದರದಾಸರು**‡ ದಾಸಸಾಹಿತ್ಯಕ್ಕೆ ಅಪಾರ ಕೊಡುಗೆ ಇತ್ತಿದ್ದಾರೆ. ಅವರು ಬರೆದಿರುವ ಕೀರ್ತನೆಗಳು ನಾಲ್ಕುಲಕ್ಷ ಎಪ್ಪತ್ತೈದುಸಾವಿರ ಎಂದು ಅವರ ಕೀರ್ತನೆಯಲ್ಲಿ ಅವರೆ ಹೇಳಿಕೊಂಡಿದ್ದಾರೆ. ಆದರೆ ಈಗ ನಮಗೆ ಲಭ್ಯವಿರುವುದು ಕೆಲವೇ ಸಾವಿರಗಳು ಮಾತ್ರ. ಇವರ ಅಂಕಿತನಾಮ 'ಪುರಂದರ ವಿಠಲ'. ಇವರ ಕೀರ್ತನೆಗಳಲ್ಲಿ ಭಕ್ತಿಯೇ ಪ್ರಧಾನವಾಗಿದ್ದರೂ ಲಘು ಉಪದೇಶ ವಿದೆ. ಸಮಾಜದ ಬಗ್ಗೆ ವಿಡಂಬನೆ ಇದೆ. ಒಳ್ಳೆಯ ಸಂಗೀತಗಾರರೂ ಆಗಿದ್ದ ಇವರು ತಮ್ಮ ಕೀರ್ತನೆಗಳಲ್ಲಿ ಕಲ್ಪನಾಮಾಧುರ್ಯಕ್ಕೆ ನಾದಸೌಂದರ್ಯವನ್ನು ಸೇರಿಸಿ ಸಾಹಿತ್ಯಕ್ಕೆ ನವಚೇತನ ನೀಡಿದ್ದಾರೆ.

"ಇವ್ರು ಹೆಂಡ್ತೀನೆ ಅಲ್ವೆ ವ್ಯಾಸಣ್ಣ ಒಬ್ಬ ಬಡ ಮುದುಕನಿಗೆ ಮೂಗುತಿ ದಾನ ಮಾಡಿದ್ದು– ?" ಪದ್ದಮ್ಮ ಪ್ರಶ್ನಿಸಿದರು.

"ಹೌದು ಈ ಘಟನೆಯೇ ಕಡು ಲೋಭಿ ಶ್ರೀನಿವಾಸನಾಯಕನನ್ನು ಪುರಂದರ ದಾಸ ಮಾಡಿದ್ದು".

---

* ಕಾಲ ಸು. ಕ್ರಿ.ಶ. 1447–1539.

† ಕಾಲ ಸು. ಕ್ರಿ.ಶ. 1480–1600.

‡ ಪುರಂದರದಾಸರ ಪೂರ್ವಾಶ್ರಮದ ಹೆಸರು ಶ್ರೀನಿವಾಸ. ಇವರ ಕಾಲ ಕ್ರಿ.ಶ. 1484–1564.

"ಈ ಕಥೆ ಹೇಳಿ ತಾತ..." ದಿನೇಶ ಅಂಗಲಾಚಿದ.

"ಪಂಡರಾಪುರದ ಬಳಿಯಲ್ಲಿ ಪುರಂದರಗಡ ಎಂಬ ಒಂದು ಊರು. ಅಲ್ಲಿ ವರದಪ್ಪನಾಯಕ ಎಂಬ ಶ್ರೀಮಂತನಿದ್ದ. ಆತನ ಹೆಂಡತಿ ಲಕ್ಷ್ಮೀಬಾಯಿ. ಇವರ ಮಗನೇ ಶ್ರೀನಿವಾಸನಾಯಕ. ತಂದೆಯಂತೆಯೇ ಮಗ ವ್ಯಾಪಾರದಲ್ಲಿ ಬಹಳ ಬುದ್ಧಿವಂತನಾಗಿದ್ದ. ದೊಡ್ಡವನಾದ ಮೇಲೆ ಅಪಾರ ಹಣಗಳಿಸಿದ. ಹಣಶೇಖರಣೆ ಹೆಚ್ಚಿದಂತೆಲ್ಲ ಇವನ ಲೋಭ ಬುದ್ಧಿ ಬೆಳೆಯಿತು. ಒಂದು ದಿನ ಒಬ್ಬ ಬಡ ಬ್ರಾಹ್ಮಣ ಹಣ್ಣು ಹಣ್ಣು ಮುದುಕ ತನ್ನ ಮಗನ ಉಪನಯನಕ್ಕಾಗಿ ಸಹಾಯ ಬೇಡಿದ. ಶ್ರೀನಿವಾಸನಾಯಕ ಒಂದು ಕಾಸೂ ಕೊಡದೆ ಹೊರ ಅಟ್ಟಿದ. ಈ ಮುದುಕ ನಾಯಕನ ಹೆಂಡತಿ ಹತ್ತಿರ ಹೋದ. ಕಣ್ಣೀರು ಸುರಿಸಿ ಅಂಗಲಾಚಿದ. ಆಕೆಗೆ ಮರುಕ ಹುಟ್ಟಿದರೂ ಸಹಾಯ ಮಾಡಲು ಹಣ ಇರಲಿಲ್ಲ. ಮುದುಕನ ಗೋಳನ್ನು ನೋಡಲಾಗದೆ ತನ್ನ ಮೂಗಿನಲ್ಲಿದ್ದ ವಜ್ರದ ಮೂಗುತಿಯನ್ನೇ ದಾನ ಮಾಡಿದಳು. ಆ ಮುದುಕ ಆ ಮೂಗುತಿಯನ್ನು ಮಾರಲು ಶ್ರೀನಿವಾಸನಾಯಕನ ಅಂಗಡಿಗೆ ತಂದ. ಹೆಂಡತಿಯ ಮೂಗುತಿಯನ್ನು ಗುರುತಿಸಿದ ನಾಯಕನಿಗೆ ಹೆಂಡತಿಯ ಮೇಲೆ ಅಪಾರ ಸಿಟ್ಟು ಬಂತು. ದಂಡಿಸಲು ಮನೆಗೆ ಧಾವಿಸಿದ. ಏಟು ತಿಂದು ಗಂಡನಿಂದ ಸಾಯುವುದಕ್ಕಿಂತ ವಿಷ ಕುಡಿದು ಸಾಯುವುದೇ ಒಳಿತೆಂದು ಭಾವಿಸಿದ ಆಕೆ ವಿಷ ಕುಡಿಯಲು ಯತ್ನಿಸಿದಾಗ ಈ ಮೂಗುತಿ ವಿಷದ ಬಟ್ಟಲಿನಲ್ಲಿ ಬಿತ್ತು. ಸಂತೋಷ ಗೊಂಡ ಆಕೆ ಅದನ್ನು ತಂದು ಗಂಡನಿಗೆ ಒಪ್ಪಿಸಿದಳು. ನಾಯಕ ಮೂಗುತಿ ಕಂಡು ಆಶ್ಚರ್ಯಗೊಂಡ. ಅಂಗಡಿಗೆ ಹೋಗಿ ಕಬ್ಬಿಣದ ಪೆಟ್ಟಿಗೆ ತೆಗೆದು ನೋಡಿದ. ಮೂಗುತಿ ಕಾಣಲಿಲ್ಲ. ಈ ಘಟನೆ ಶ್ರೀನಿವಾಸನಾಯಕನನ್ನು ಸಂಪೂರ್ಣವಾಗಿ ಪರಿವರ್ತಿಸಿತು. ದೈವದ ಮಹತ್ವ ಅರಿವಾಯಿತು. ಜೀವನದಲ್ಲಿ ವಿರಕ್ತಿ ಹುಟ್ಟಿತು. ತನ್ನ ಸರ್ವಸ್ವವನ್ನೂ ತ್ಯಜಿಸಿ ತಂಬೂರಿ ಹಿಡಿದು ವಿರಾಗಿಯಾಗಿ, ವ್ಯಾಸರಾಯರಿಂದ ಮಂತ್ರೋಪದೇಶ ಪಡೆದು ದಾಸನಾಗಿ ದೇಶಾಟನೆಗೆ ಹೊರಟ. ಜನಜೀವನ ದರ್ಶನ ಆದಂತೆ ಈತನ ಕಲ್ಪನಾಶಕ್ತಿ ಹೆಚ್ಚೆಚ್ಚು ಚುರುಕಾಯಿತು. ಸ್ಫೂರ್ತಿ ಬಂದಂತೆ ಏಕನಾದ ಮಿಡಿದು ಕೀರ್ತನೆ ಕಟ್ಟಿ ಹಾಡಿದ. 'ಕಂಡು ಕಂಡು ಎನ್ನ ಕೈಬಿಡುವರೆ', 'ಇನ್ನೂ ದಯ ಬಾರದೆ ದಾಸನ ಮೇಲೆ', 'ಬಂದದ್ದೆಲ್ಲ ಬರಲಿ ಗೋವಿಂದನ ದಯ ನಮಗಿರಲಿ' ಈ ಕೀರ್ತನೆಗಳಲ್ಲಿ ದೈನ್ಯತೆ, ಆತ್ಮಸಮರ್ಪಣ ಭಾವ ಇದ್ದರೆ, 'ಆಡಿದನು ರಂಗ ಅದ್ಭುತದಿಂದಲಿ ಕಾಳಿಂಗನ ಫಣಿಯಲಿ', 'ಪೋಗದಿರಲೊ ರಂಗ ಬಾಗಿಲಿಂದಾಚೆಗೆ', 'ಕೃಷ್ಣಾ ನೀ ಬೇಗನೆ ಬಾರೋ । ಮುಖವನೆ ತೋರೊ', 'ಸುಂದರ ಮೂರುತಿ ಮುಖ್ಯ ಪ್ರಾಣ ಬಂದ ಮನೆಗೆ' ಈ ಗೀತೆಗಳಲ್ಲಿ ದೇವರ ಲೀಲೆ ಹಾಗೂ ಮಹಾತ್ಮ್ಯ ಅರಳಿ ನಿಂತಿವೆ. 'ತನುವ ನೀರೊಳಗದ್ದಿ ಫಲವೇನು ?', 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ, ಮಲವ ತೊಳೆಯಬಲ್ಲರಲ್ಲದೆ ಮನವ ತೊಳೆಯಬಲ್ಲರೆ', ಈ ಕೀರ್ತನೆಗಳಲ್ಲಿ ಕಡು ವಿಮರ್ಶೆ ಇದೆ. ಡಾಂಭಿಕತೆಯ ಮೇಲೆ ಸಿಟ್ಟಿದೆ.

ಪುರಂದರದಾಸರು ಹಲವಾರು ಸುಳಾದಿಗಳನ್ನು ಉಗಾಭೋಗಗಳನ್ನೂ ಬರೆದಿದ್ದಾರೆ. ಇವುಗಳಲ್ಲಿಯೂ ಭಕ್ತಿ ರಸಧಾರೆಯಾಗಿ ಹರಿದಿದೆ. 'ದಾಸರೆಂದರೆ ಪುರಂದರ ದಾಸರಯ್ಯ' ಎಂಬ ಹೊಗಳಿಕೆಗನುಗುಣವಾಗಿ ಇವರು ದಾಸಕೂಟ ಸ್ಥಾಪಿಸಿದರು. ಅಪಾರವಾದ ಕೀರ್ತನೆಗಳನ್ನು ರಚಿಸಿ ಸಾಹಿತ್ಯ ಕೋಶವನ್ನು ತುಂಬಿದುದಲ್ಲದೆ ಕರ್ಣಾಟಕ ಸಂಗೀತ ಶಾಸ್ತ್ರಕ್ಕೆ ಅಪೂರ್ವ ಕೊಡುಗೆಗಳನ್ನಿತ್ತು ಸಂಪನ್ನಗೊಳಿಸಿದ್ದಾರೆ.

ದಾಸವಾಙ್ಮಯದ ಇನ್ನೊಬ್ಬ ಹಿರಿಯ ವ್ಯಕ್ತಿ ಕನಕದಾಸರು. ಇವರು ಪುರಂದರದಾಸರ ಸಮಕಾಲೀನರು. ಇವರ ವಿಷಯವನ್ನು ಈ ಮೊದಲೇ ನಾನು ಹೇಳಿರುವುದರಿಂದ ಈಗ ಇನ್ನೊಬ್ಬ ದಾಸಕೂಟದ ಪ್ರಮುಖ ವ್ಯಕ್ತಿಯ ವಿಷಯವನ್ನು ಹೇಳುತ್ತೇನೆ.

**ರಾಘವೇಂದ್ರ ತೀರ್ಥರು***1 ತಿರುಪತಿ ಶ್ರೀನಿವಾಸನ ವರಪ್ರಸಾದದಿಂದ ಜನಿಸಿದ ಇವರು 18 ವರ್ಷ ತುಂಬುವುದರಲ್ಲಿ ತರ್ಕ, ವೇದಾಂತ, ವ್ಯಾಕರಣ ಶಾಸ್ತ್ರಗಳಲ್ಲಿ ಪಾರಂಗತರಾಗಿ ಸುಧೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹದಿಂದ 'ಪರಿಮಳ' ಎಂಬ ಉದ್ಗ್ರಂಥ ರಚಿಸಿ 'ಪರಿಮಳಾಚಾರ್ಯ' ಎಂಬ ಬಿರುದನ್ನು ಸಹ ಸಂಪಾದಿಸಿದರು. ಸನ್ಯಾಸ ಸ್ವೀಕರಿಸಿ ಶ್ರೀರಾಘವೇಂದ್ರ ತೀರ್ಥರೆಂದು ಹೆಸರು ಪಡೆದು ಧರ್ಮ ದಿಗ್ವಿಜಯಕ್ಕಾಗಿ ದೇಶಾದ್ಯಂತ ಚಲಿಸಿದರು. ಮುಖ್ಯ ಕೃತಿಗಳು : ತತ್ವಮಂಜರಿ, ನ್ಯಾಯ ಮುಕ್ತಾವಳಿ, ತಂತ್ರದೀಪಿಕಾ, ಸೂತ್ರಭಾಷ್ಯ, ಅಣುಭಾಷ್ಯ, ಭಾವದೀಪ, ತಾತ್ಪರ್ಯ ನಿರ್ಣಯ, ಪ್ರಾತಃಸಂಕಲ್ಪಗದ್ಯ ಮುಂತಾದವುಗಳು. ಕ್ರಿ. ಶ. 1671 ರಲ್ಲಿ ಸಶರೀರರಾಗಿ ಇವರು ಬೃಂದಾವನ ಪ್ರವೇಶ ಮಾಡಿದರು.

17ನೇ ಶತಮಾನದಲ್ಲಿದ್ದ ಕವಯಿತ್ರಿ **ಶೃಂಗಾರಮ್ಮ** ತಿರುಪತಿ ಶ್ರೀನಿವಾಸ-ಪದ್ಮಾವತಿಯರ ಮದುವೆ ವಸ್ತುವಾಗಿಟ್ಟುಕೊಂಡು **'ಪದ್ಮಿನೀಕಲ್ಯಾಣ'** ಎಂಬ ಸಣ್ಣ ಕಾವ್ಯ ರಚಿಸಿದ್ದಾಳೆ.

**ಪ್ರಸನ್ನವೆಂಕಟದಾಸರು :—** ವಿಜಯದಾಸರ ಸಮಕಾಲೀನರು. ದಾಸರಿಗಿಂತ ವಯಸ್ಸಿನಲ್ಲಿ ಚಿಕ್ಕವರು. ಪುರಂದರದಾಸರಿಂದ ಬಹಳ ಪ್ರಭಾವಿತರಾಗಿ ಇವರು ಹಾಡುಗಳನ್ನು ರಚಿಸಿದ್ದಾರೆ. ಮುದವೀಡು ಕೃಷ್ಣರಾಯರಿಗಂತೂ ಇವರ ಹಾಡುಗಳನ್ನು ಹಾಡುವುದೆಂದರೆ ಬಹಳ ಪ್ರೀತಿ.

**ವಿಜಯದಾಸ***2 **ಗೋಪಾಲದಾಸ***3 ಮತ್ತು **ಜಗನ್ನಾಥದಾಸ***4 ಮುಂತಾದ

---

*1 ತಂದೆ ತಿಮ್ಮಣ್ಣ ಭಟ್ಟ. ತಾಯಿ ಗೋಪಮ್ಮ. ಪೂರ್ವಾಶ್ರಮದ ಹೆಸರು ವೆಂಕಟ ಭಟ್ಟ. ಗುರುಗಳು : ಮಧುರೆಯ ಲಕ್ಷ್ಮೀನೃಸಿಂಹಾಚಾರ್ಯ ಮತ್ತು ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು.

*2 ಕಾಲ : ಸು. 18ನೇ ಶತಮಾನದ ಆದಿಭಾಗ. ಪೂರ್ವಾಶ್ರಮದ ಹೆಸರು ದಾಸಪ್ಪ.

*3 ಕಾಲ : ಸು. ಕ್ರಿ.ಶ. 1717–1755. ಜನ್ಮಸ್ಥಳ : ರಾಯಚೂರು ಜಿಲ್ಲೆಗೆ ಸೇರಿದ 'ಮೊಸರು ಕಲ್ಲು'. ಪೂರ್ವಾಶ್ರಮದ ಹೆಸರು ಭಾಗಣ್ಣ. ಅಂಕಿತನಾಮ 'ಗೋಪಾಲ ವಿಠಲ'.

ವರುಗಳು ಕೀರ್ತನೆ, ಸುಳಾದಿ ಪದಗಳಿಂದ ಸಾಹಿತ್ಯ ಸಿರಿಯನ್ನು ಹೆಚ್ಚಿಸಿದ್ದಾರೆ. ಮಹಾಪಂಡಿತನಾಗಿದ್ದ ಜಗನ್ನಾಥದಾಸ 'ತಂತ್ರಸಾರ', 'ತತ್ವಸುವಾಲಿ', 'ಹರಿಕಥಾಮೃತಸಾರ', 'ನೃಸಿಂಹಸುಳಾದಿ'ಗಳಲ್ಲದೆ ನೂರಾರು ಕೀರ್ತನೆಗಳನ್ನು ರಚಿಸಿದ್ದಾನೆ. ತಂತ್ರಸಾರದಲ್ಲಿ ವಿಷ್ಣುಸ್ತುತಿ ಇದೆ. ತತ್ವಸುವಾಲಿ ತ್ರಿಪದಿಯ 600 ಪದ್ಯಗಳುಳ್ಳ ಗ್ರಂಥ. ಹರಿಕಥಾಮೃತಸಾರ ಸಾವಿರ ಪದ್ಯಗಳುಳ್ಳ ಭಾಮಿನಿ ಷಟ್ಪದಿಯ ಗ್ರಂಥ. ಮಧ್ವ ಮತದ ತತ್ವ ವಿವರವಾಗಿ ವಿವೇಚಿಸಲ್ಪಟ್ಟಿದೆ. ಈತನ ಕೃತಿಗಳಲ್ಲಿ ಉತ್ಕಟ ಭಕ್ತಿ, ಆಧ್ಯಾತ್ಮಿಕ ಅನುಭವ ಪ್ರತಿಭೆಯೊಡನೆ ಬಹು ಮಧುರವಾಗಿ ಮಿಲನಗೊಂಡು ಸಂಗೀತವಾಗಿ ಹರಿದಿದೆ.

**ಹೆಳವನಕಟ್ಟೆ ಗಿರಿಯಮ್ಮ**[*1] : ಈಕೆಯ ಜನ್ಮಸ್ಥಳ ರಾಣೀಬೆನ್ನೂರು. ಈಕೆ ರಚಿಸಿರುವ ಹಾಡುಗಳು ಹಾಗೂ ಚಂದ್ರಹಾಸ, ಕಾಲೀಯ ಮರ್ಧನ ಕಥೆಗಳು ಉತ್ತರ ಕರ್ನಾಟಕದಲ್ಲಿ ಬಹಳ ಜನಪ್ರಿಯವಾಗಿವೆ. ಎಲ್ಲರಂತೆ ಈಕೆಗೂ ಮದುವೆ ಆದರೂ ಸಂಸಾರಿಯಾಗಿ ಜೀವನ ನಡೆಸಲಿಲ್ಲ. ಮುಂಚಿನಿಂದಲೂ ದೈವಭಕ್ತೆಯಾಗಿದ್ದು ವಿರಾಗಿಯಂತಿದ್ದ ಆಕೆ ಮುಂದೆ ಹಾಗೆಯೇ ಉಳಿದಳು. ಎಲ್ಲರಿಂದಲೂ 'ಅಮ್ಮನವರು' ಎನಿಸಿಕೊಂಡಳು. ಆಕೆ ಇದ್ದ ಕಾಲ ಹದಿನೆಂಟನೆ ಶತಮಾನ.

ದಾಸವಾಙ್ಮಯದಲ್ಲಿ ಹೆಸರಿಸಬಹುದಾದ ಇತರ ಮುಖ್ಯ ವ್ಯಕ್ತಿಗಳೆಂದರೆ ಅಣ್ಣಾವಧೂತರು, ಸುರಪುರದ ಆನಂದದಾಸರು, ಮೊದಲಕಲ್ಲು ಶೇಷದಾಸರು (ಅಂಕಿತನಾಮ 'ಗುರುವಿಜಯ ವಿಠಲ'), ಶ್ರೀನಿವಾಸದಾಸರು (ಅಂಕಿತನಾಮ 'ಜಯವಿಠಲ') ಹರಪನಹಳ್ಳಿ ರಾಮಾಚಾರ್ಯರು.

ಇಪ್ಪತ್ತನೇ ಶತಮಾನದಲ್ಲಿ ದಾಸಸಾಹಿತ್ಯ ಹೆಚ್ಚು ಪ್ರವರ್ಧಮಾನಕ್ಕೆ ಬಾರದೆ ಇದ್ದರೂ ಹಿಂದಿನ ಶತಮಾನದಲ್ಲಿ ಮುಸುಕಿದ್ದ ಮಂಜಿನ ಹೊದಿಕೆಯನ್ನು ಹೊರತೆಗೆದು ತನ್ನ ಪ್ರತಿಭೆಯನ್ನು ಹೊರಬೀರತೊಡಗಿದೆ. ಇದಕ್ಕೆ **ತುಳಸೀರಾಮದಾಸರು, ಭದ್ರಗಿರಿ ಕೇಶವದಾಸರು, ಅಚ್ಯುತ ಪೈ, ವೇಣುಗೋಪಾಲದಾಸರು,** ಶ್ರೀ ಕರ್ನಾಟಕ ಭಕ್ತವಿಜಯದ ಕರ್ತೃ **ಶ್ರೀ ಬೇಲೂರು ಕೇಶವದಾಸರು** ಬಹಳ ಶ್ರಮವಹಿಸಿದ್ದಾರೆ. **ಬೇಲೂರು ಕೇಶವದಾಸರು**[*2] ಸುಪ್ರಸಿದ್ಧ ಹರಿದಾಸ ಶ್ರೀ ವಿಜಯದಾಸರ ಪೀಳಿಗೆಗೆ ಸೇರಿದವರು. ಇವರು ಒಳ್ಳೆಯ ಕೀರ್ತನಕಾರರೂ ಆಗಿದ್ದರು. ಇವರ ಕೀರ್ತನೆಯನ್ನು ಕೇಳಿ 'ಪಂಡಿತ ಮದನಮೋಹನ ಮಾಳವೀಯ'ರವರು ಇವರಿಗೆ 'ಕೀರ್ತನಾಚಾರ್ಯ' ಎಂಬ ಬಿರುದನ್ನು ಅನುಗ್ರಹಿಸಿದ್ದರು. ಇವರು ರಚಿಸಿರುವ ಕೃತಿಗಳು : ಶ್ರೀ ರಾಘ

---

*4 ಕಾಲ : ಕ್ರಿ.ಶ. ಸು. 1727-1809. ಪೂರ್ವಾಶ್ರಮದ ಹೆಸರು 'ಶ್ರೀನಿವಾಸ'. ಅಂಕಿತನಾಮ 'ಜಗನ್ನಾಥ ವಿಠಲ'.

*1 ಅಂಕಿತನಾಮ : ಹೆಳವನಕಟ್ಟೆ ರಂಗ.

*2 ಕಾಲ : ಕ್ರಿ.ಶ. 1884-1948.

ವೇಂದ್ರ ವಿಜಯ ವಿಸ್ತಾರ, ಶ್ರೀ ಕನ್ಯಕಾ ಪುರಾಣ, ಹರಿದಾಸ ಸಾಹಿತ್ಯ ವಿಮರ್ಶೆ, ಶ್ರೀ ರಾಮಕೃಷ್ಣ ವಚನಾಮೃತ ಮತ್ತು ಶ್ರೀ ಕರ್ಣಾಟಕ ಭಕ್ತ ವಿಜಯ.

"ಪುರಂದರದಾಸರ ಸಮಗ್ರ ಕೀರ್ತನೆಗಳ ಸಂಗ್ರಹ ದೊರೆತಿಲ್ಲ ಅಂತ ಕೇಳಿದ್ದೇನೆ. ಹಾಗೆ ಉಳಿದ ದಾಸಶ್ರೇಷ್ಠರ ಕೀರ್ತನೆ, ಸುಳಾದಿಗಳೂ ದೊರೆತಿರಲಾರದು. ಇವನ್ನು ಸಂಗ್ರಹಿಸಲು ಯಾರೂ ಪ್ರಯತ್ನ ಪಟ್ಟೇ ಇಲ್ವೆ ? ಇಂತಹ ಜನಪ್ರಿಯ ಸಾಹಿತ್ಯ ಅದೂ ಅಲ್ದೆ ಸಂಗೀತಕ್ಕೆ ಅಷ್ಟು ಚೆನ್ನಾಗಿ ಅಳವಡೋ ಹಾಡುಗಳು ನಮ್ಮ ಮುಂದಿನ ಪೀಳಿಗೆಗೆ ದೊರಕ್ದೆ ಹೋದ್ರೆ ಬಾಳ ನಷ್ಟ ಅಲ್ವೆ ಮೇಸ್ಟ್ರೇ..." ರಾಯರು ಪ್ರಶ್ನಿಸಿದರು.

"ಹೌದು ಹಾಗಾದ್ರೆ ಅದು ತುಂಬಲಾರದ ನಷ್ಟವೇ ಸರಿ. ಆದ್ರೆ ಹಾಗಾಗಿಲ್ಲ. ಹರಿದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಲು ಕೀರ್ತನೆಗಳ ಸಂಗ್ರಹಣೆಯಲ್ಲಿ **ಸುಬೋಧ ರಾಮರಾಯರು, ರಂಗನಾಥ ದಿವಾಕರರು, ಹನುಮಂತ ವೆಂಕಟರಾವ್ ಕುಲಕರ್ಣಿ, ಬೆಟಗೇರಿ ಕೃಷ್ಣಶರ್ಮ** ಬಹಳ ಶ್ರಮವಹಿಸಿದ್ದಾರೆ. 1964ರಲ್ಲಿ ನಡೆದ ಪುರಂದರದಾಸರ ಚತುರ್ಥ ಶತಮಾನೋತ್ಸವ ಸಂದರ್ಭದಲ್ಲಿ ದೇಶಾದ್ಯಂತ ಅನೇಕ ಸಮಿತಿಗಳು ಏರ್ಪಟ್ಟು ಮಾಸ್ತಿ ವೆಂಕಟೇಶ ಐಯ್ಯಂಗಾರ್ ಕೆ. ಸಂಪದ್ಗಿರಿರಾವ್, ಎಸ್. ಕೆ. ರಾಮಚಂದ್ರರಾಯರು, **ಬುರ್ಲಿ ಬಿಂದುಮಾಧವ***, ಬೆಂಗೇರಿ ಹುಚ್ಚುರಾಯರು ಮುಂತಾದವರುಗಳು 'ಕೀರ್ತನೆಸಂಗ್ರಹಣೆ'ಯಲ್ಲಿ ಬಹಳ ಶ್ರಮಿಸಿದ್ದಾರೆ. ರಂಗನಾಥ ದಿವಾಕರರ 'ಹರಿಭಕ್ತಸುಧೆ' ಕುಲಮದಾನಿ ಗುರುರಾಯರ ಹರಿದಾಸರ ಕಥೆಗಳು '**ರಾಘವೇಂದ್ರಾಚಾರ್ಯ ಪಂಚಮುಖಿ**' ಅವರ ಕರ್ನಾಟಕದ ಹರಿದಾಸಸಾಹಿತ್ಯ ಈ ಶತಮಾನದ ಪ್ರಮುಖ ಬರವಣಿಗೆಗಳು. **ಎಲ್. ರಾಜಾರಾಯರು, ಎನ್. ಚನ್ನಕೇಶವಯ್ಯನವರು** ಈ ದಾಸಕೀರ್ತನೆಗಳಿಗೆ ಸ್ವರಪ್ರಸ್ತಾರ ಹಾಕಿ ಸಂಗೀತಮಾಧ್ಯಮಕ್ಕೆ ಅಳವಡಿಸಿ ಹೆಚ್ಚು ಜನಪ್ರಿಯಗೊಳಿಸುವ ಸ್ತುತ್ಯಾರ್ಹ ಕಾರ್ಯ ಮಾಡಿದ್ದಾರೆ. ಗಾನಕಲಾಸಿಂಧು ಎನ್. ಕೇಶವಯ್ಯನವರ 'ಹರಿದಾಸಕೀರ್ತನ ಸುಧಾಸಾಗರ' ಅಮೂಲ್ಯ ಕೃತಿ. ಇದರ 3 ಸಂಪುಟಗಳು ಪ್ರಕಟವಾಗಿವೆ. ಇದಲ್ಲದೆ ಶ್ರೀಪಾದರಾಜರು, ವ್ಯಾಸತೀರ್ಥರು, ವಾದಿರಾಜರು, ಕನಕದಾಸರು, ಪುರಂದರದಾಸರು ಮೊದಲಾದ ದಾಸಶ್ರೇಷ್ಠರ 200 ಕೃತಿಗಳಿಗೆ ಸ್ವರ ಸಂಯೋಜನೆ ಹಾಕಿ ಅರ್ಥಸಹಿತ ಮುದ್ರಿಸಿ ಪ್ರಕಟಿಸಿದ್ದಾರೆ. ರಾಜ್ಯ ಹಾಗೂ ಕೇಂದ್ರ ಸರಕಾರ ಅಕಾಡೆಮಿಗಳು ಇವರನ್ನು ಸನ್ಮಾನಿಸಿವೆ. 1971ರಲ್ಲಿ ರಾಜ್ಯೋತ್ಸವ ಸನ್ಮಾನವೂ ಲಭಿಸಿದೆ. '**ಗಾನಕಲಾಸಿಂಧು**' ಇವರ ಬಿರುದು.

---

* ಜೀವಿತ ಕಾಲ : 1899–1981. 'ಮಿಂಚಿನ ಬಳ್ಳಿ' (1937) ಪ್ರಕಾಶನದ ಮೂಲಕ ಕನ್ನಡ ಸಾಹಿತ್ಯ ಭಂಡಾರವನ್ನು ಸಂಪನ್ನಗೊಳಿಸಿದ ಕೀರ್ತಿ ಇವರದು, ರಾಜಕಾರಣ, ಅರ್ಥಶಾಸ್ತ್ರ, ಇತಿಹಾಸ, ಮತ, ಧರ್ಮಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ, ಕಲೆ ಮುಂತಾದ ಪ್ರಕಾರಗಳಲ್ಲಿ 100ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದರು.

ಬೆಂಗಳೂರು ವಿಶ್ವವಿದ್ಯಾಲಯದ ಅಧ್ಯಾಪಕರಾದ **ಡಾ॥ ಕೆ. ಎಂ. ಕೃಷ್ಣ ರಾಯರು** ದಾಸಸಾಹಿತ್ಯದ ಮೇಲೆ ಬಹಳ ಸಂಶೋಧನೆ ನಡೆಸಿದ್ದಾರೆ. **ಬೆಂಗೇರಿ ಆನಂದಕಂದ** ಸಂಪಾದಿಸಿರುವ ಕನಕದಾಸರ ಹಾಡುಗಳು, **ಕಾವ್ಯಪ್ರೇಮಿ** ಸಂಪಾದಿಸಿರುವ ಪುರಂದರದಾಸರು, ಜಗನ್ನಾಥದಾಸರು, ಪ್ರಸನ್ನವೆಂಕಟದ್ದಾಸರು, ಶ್ರೀಪಾದ ರಾಯರು, ವ್ಯಾಸರಾಯರು, ವಿಜಯದಾಸರು, ಗೋಪಾಲದಾಸರು ಮತ್ತು ವಾದಿರಾಜರ ಹಾಡುಗಳು, **ಪಂಚಮುಖಿಯವರ** 'ಶ್ರೀ ರಾಘವೇಂದ್ರಗುರು–ಕಥಾಮೃತಸಾರ, **ಆದ್ಯ ರಾಮಾಚಾರ್ಯ**ರ 'ಶ್ರೀಪಾದರಾಜ ಸತ್ಯನಿಧಿತೀರ್ಥರು', **ಕೊರಟಿ ಶ್ರೀನಿವಾಸರಾವ್** ರಚಿಸಿರುವ ಶ್ರೀ ವಾದಿರಾಜರು, ಶ್ರೀ ಜಯತೀರ್ಥರು, ಶ್ರೀ ಪುರಂದರದಾಸರು, **ಶ್ರೀ ಜಯಸಿಂಹ**ರವರ ಗುರುರಾಘವೇಂದ್ರ, ವಾದಿರಾಜರು, ಹೆಳವನಕಟ್ಟೆ ಗಿರಿಯಮ್ಮ, ದಾಸಸಾಹಿತ್ಯ ವಿಭಾಗದಲ್ಲಿ ಹೊರಬಂದಿರುವ ಇತ್ತೀಚಿನ ಕೃತಿಗಳು.

---

## (ಅ) ಲಕ್ಷಣಶಾಸ್ತ್ರ ರಚನಕಾರರು

ಇದುವರೆಗೆ ನಾವು ಮಹಾಭಾರತ, ರಾಮಾಯಣ, ಭಾಗವತ, ವೈದಿಕ, ಜೈನ ಹಾಗೂ ವೀರಶೈವ ಪುರಾಣಗಳ ಹಿನ್ನೆಲೆಯಲ್ಲಿ ಕೃತಿ ರಚಿಸಿದ ಕವಿವರ್ಯರುಗಳ ಪರಿಚಯವನ್ನು ಮಾಡಿಕೊಂಡೆವು. ವಚನ ಸಾಹಿತ್ಯ, ಹರಿದಾಸ ಸಾಹಿತ್ಯ ರಚನಕಾರರ ವಿಷಯ ಅರಿತು ಕೃತಿಗಳ ಸ್ವಲ್ಪ ಸವಿಯನ್ನುಂಡೆವು. ಈಗ ಸಾಹಿತ್ಯದ ಇತರ ಪ್ರಕಾರಗಳಲ್ಲಿ ತಮ್ಮ ಪ್ರತಿಭೆಯ ಕುಂಚ ಆಡಿಸಿರುವ ಕವಿ, ಸಾಹಿತಿಗಳ ಸ್ವಲ್ಪ ಪರಿಚಯ ಮಾಡಿಕೊಳ್ಳೋಣ. ಲಕ್ಷಣ ಶಾಸ್ತ್ರ, ನಿಘಂಟು, ವ್ಯಾಕರಣ. ಶೃಂಗಾರ ಕಾವ್ಯ, ಕಾಮಶಾಸ್ತ್ರ, ಜ್ಯೋತಿಷ್ಯ ಗ್ರಂಥ, ವೈದ್ಯ ಗ್ರಂಥ—ಮುಂತಾದ ಸಾಹಿತ್ಯ ವಿಭಾಗಗಳಲ್ಲಿ ಸೇವೆ ಸಲ್ಲಿಸಿರುವ ಪಂಡಿತರೂ ಕವಿಗಳಂತೆಯೇ ಪ್ರಾಮುಖ್ಯರು.

'ಕವಿರಾಜಮಾರ್ಗ'ವೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಲಭ್ಯವಿರುವ ಪ್ರಥಮ ಗ್ರಂಥ. ಇದೊಂದು ಅಲಂಕಾರಶಾಸ್ತ್ರ. ಅಲಂಕಾರ ಗ್ರಂಥದಂಥ ಸಾಹಿತ್ಯಕ ಕೃತಿ ರಚನೆಯಾಗಬೇಕಾದರೆ ಅದರ ಹಿಂದೆ ಸಂಪನ್ನ ಸಾಹಿತ್ಯ ಕೃಷಿ ಇದ್ದೇ ತೀರಬೇಕು. ಇದರ ಕರ್ತೃ ನೃಪತುಂಗನೆಂದು ಹಿಂದೆ ಊಹಿಸಲಾಗಿದ್ದರೂ ಈಗ ಶ್ರೀವಿಜಯನೆಂಬುವನು ಇದರ ಕರ್ತೃವೆಂದು ಹಲವು ಆಧಾರಗಳಿಂದ ನಿರ್ಣಯಿಸಿದ್ದಾರೆ. ಈ ಕೃತಿ ರಚನೆಯ ಕಾಲ ಕ್ರಿ.ಶ. ಸುಮಾರು 9ನೇ ಶತಮಾನ. ಇದಕ್ಕೆ ಹಿಂದೆ 'ಗುಣಗಾಂಕಿಯಂ' ಎಂಬೊಂದು ಗ್ರಂಥವಿತ್ತೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖವಿದ್ದರೂ ಇದುವರೆಗೆ ಅದು ಲಭ್ಯವಿಲ್ಲ. ಇದಾದ ನಂತರ ನಮಗೆ ದೊರೆಯುವ ಲಕ್ಷಣಶಾಸ್ತ್ರ **1ನೇ ನಾಗವರ್ಮನ*** 'ಛಂದೋಂಬುಧಿ' ಸಂಸ್ಕೃತದ ಛಂದಶ್ಶಾಸ್ತ್ರಜ್ಞ ಪಿಂಗಳನನ್ನು ಅನುಸರಿಸಿದಂತಿದೆ. ಉಮೆಗೆ ಈಶ್ವರನು ಹೇಳಿದ ಛಂದಶ್ಶಾಸ್ತ್ರವನ್ನು ಕವಿಯು ಕನ್ನಡ ಜನತೆಗೆ ತನ್ನ ಮಡದಿಗೆ ಹೇಳುವ ರೀತಿಯಲ್ಲಿ ಪರಿಚಯ ಮಾಡಿಸಿದ್ದಾನೆ. ಈ ಗ್ರಂಥದಲ್ಲಿ 6 ಅಧಿಕಾರಗಳಿವೆ. ವರ್ಣ ಮತ್ತು ವೃತ್ತಗಳ ಉಗಮ, ಮಾತ್ರೆ, ಗಣ, ಪ್ರತ್ಯಯ, ತ್ರಿಪದಿ, ಚೌಪದಿ, ಷಟ್ಪದಿ ಮುಂತಾಗಿ ಛಂದಶ್ಶಾಸ್ತ್ರದ ಮುಖ್ಯ ವಿಷಯಗಳನ್ನೆಲ್ಲಾ ವಿವರಿಸಿದ್ದಾನೆ.

---

* ಈತನ ಕಾಲ ಸು. ಕ್ರಿ.ಶ. 990. 'ಕರ್ಣಾಟಕ ಕಾದಂಬರಿ' ಈತನ ಎರಡನೆ ಕೃತಿ. ಬಾಣನ ಸಂಸ್ಕೃತ ಕಾದಂಬರಿಯ ಅನುವಾದವಾದರೂ ಕವಿಯ ಪ್ರತಿಭೆ ಕಾವ್ಯದುದ್ದಕ್ಕೂ ಕಾಣಿಸುತ್ತದೆ. ಈ ಕೃತಿಯ ಗದ್ಯಾನುವಾದವನ್ನು ಹ. ವೆ. ನಾರಾಯಣಶಾಸ್ತ್ರಿಗಳು ಮಾಡಿದ್ದಾರೆ. ಇದನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದೆ.

ಉದಾ : ತ್ರಿಪದಿಯ ಲಕ್ಷಣ ಹೇಳುವ ವಿಧಾನ ನೋಡಿ :

> ಬಿಸಿರು ಹೋದ್ಭವಗಣಂ ರಸದಶಸ್ಥಾನದೊಳ್
> ಬಿಸುರುವ ನೇತ್ರ ಗಣವೆ ಬರ್ಕುಟಿದುವು
> ಬಿಸರುಹ ನೇತ್ರೇ ತ್ರಿಪದಿಗೆ ॥

**2ನೇ ನಾಗವರ್ಮ**[*1] : ಈತ ಇದ್ದುದು 11ನೇ ಶತಮಾನದ ಪೂರ್ವಾರ್ಧ. ಈತನ ಕೃತಿಗಳು ಕರ್ಣಾಟಕ ಭಾಷಾಭೂಷಣ, ಕಾವ್ಯಾವಲೋಕನ, ಅಭಿಧಾನ ವಸ್ತುಕೋಶ, ಛಂದೋವಿಚಿತಿ (ಇನ್ನೂ ಲಭ್ಯವಿಲ್ಲ.) ಕಾವ್ಯಾವಲೋಕನ 'ಕವಿಗಳ್ಗೆ ಇದು ಕೈಗನ್ನಡಿ, ಕವಿತೆಗೆ ಬಾಳ್ಮೊದಲ್, ವಾಗ್ದೇವತೆಗೆ ಉದ್ಭವ ಹೇತು ಕೋಶ ಗೃಹಂ'–ಕನ್ನಡದಲ್ಲಿನ ಉತ್ಕೃಷ್ಟ ಅಲಂಕಾರ ಗ್ರಂಥ. ಅಭಿಧಾನ ವಸ್ತುಕೋಶ– ಪ್ರಾಚೀನ ಕನ್ನಡ ಸಾಹಿತ್ಯದ ಬೃಹತ್ ನಿಘಂಟು ಕಂದವೃತ್ತದಲ್ಲಿದೆ. ಸಂಸ್ಕೃತ ಪದಗಳಿಗೆ ಕನ್ನಡದಲ್ಲಿ ಅರ್ಥವಿವರಣೆ ನೀಡಲಾಗಿದೆ. 'ಕರ್ಣಾಟಕ ಭಾಷಾ ಭೂಷಣ' —ವ್ಯಾಕರಣ ಗ್ರಂಥ. ಇದರಲ್ಲಿ ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತ ನಿಯಮ, ಅವ್ಯಯ ನಿರೂಪಣ ಮತ್ತು ನಿಪಾತ ನಿರೂಪಣ ಎಂಬ ಹತ್ತು ಪರಿಚ್ಛೇದಗಳಿವೆ.

**ಉದಯಾದಿತ್ಯ**[*2] : 'ಉದಯಾದಿತ್ಯಾಲಂಕಾರ' ಎಂಬ ಚಿಕ್ಕ ಅಲಂಕಾರ ಗ್ರಂಥ ರಚಿಸಿದ್ದಾನೆ. ಹೊಸದಾಗಿ ಅಲಂಕಾರಶಾಸ್ತ್ರವನ್ನು ಅಭ್ಯಸಿಸುವವರಿಗೆ ಬಹಳ ಉಪಯುಕ್ತ ಗ್ರಂಥ. ಕಾವ್ಯ, ಲಕ್ಷಣ, ಕಾವ್ಯಭೇದ, ರೀತಿ, ಕಾವ್ಯಾಂಗಗಳು, ಗುಣ ಮತ್ತು ಅಲಂಕಾರಗಳು ಸಂಕ್ಷಿಪ್ತವಾಗಿ ವಿವರಿಸಲ್ಪಟ್ಟಿವೆ.

**ಕವಿ ಕಾಮ**[*3] : ಲಕ್ಷಣಶಾಸ್ತ್ರ ಬರೆದ ಕವಿ. 'ಶೃಂಗಾರ ರತ್ನಾಕರ' ಈತನ ಕೃತಿ. ರಸ ನಿರೂಪಣೆಗೆ ಪ್ರಾಧಾನ್ಯತೆ ಕೊಟ್ಟಿದ್ದಾನೆ. ಈತ ಉತ್ತಮ ಕವಿಯೂ ಆಗಿರುವುದು ಆತನ ಕೃತಿಯಿಂದ ವ್ಯಕ್ತಪಡುತ್ತದೆ.

> ಶ್ರೀ ನಿಧಿ ವಿದೇಕ ನಿಧಿ ಕವಿ
> ತಾನಿಧಿ ಸೌಭಾಗ್ಯ ನಿಧಿಯಶೋನಿಧಿ ವರ ವಿ ।
> ದ್ಯಾನಿಧಿ ವಿಳಾಸ ನಿಧಿ ಮಹಿ
> ಮಾನಿಧಿ ಮಾನನಿಧಿ ದಾನನಿಧಿ ಕವಿ ಕಾಮಂ ॥

ಕವಿ ಮಲ್ಲಿಕಾರ್ಜುನ ಬಹುಶಃ ಈತನಿಂದ ಸ್ಫೂರ್ತಿ ಪಡೆದಿದ್ದಾನೆ. ಈತನ ಅನೇಕ ಸೂಕ್ತಿಗಳನ್ನು ತನ್ನ ಗ್ರಂಥದಲ್ಲಿ ಉದಾಹರಿಸಿದ್ದಾನೆ.

---

[*1] ಪುಟ 58 ನೋಡಿ.

[*2] ಕಾಲ : ಸು. ಕ್ರಿ.ಶ. 1150. ಸಾಹಿತ್ಯ ವಿದ್ಯಾಧರ, ಕವಿ ರತ್ನಶೇಖರ, ರಾಜ ಸುಕವಿರತ್ನ ಭೂಷಣ, ಸಾಹಿತ್ಯ ರತ್ನಾಕರ ಮುಂತಾದ ಬಿರುದುಗಳಿದ್ದವು,

[*3] ಕಾಲ : ಸು. ಕ್ರಿ.ಶ. 1200.

**ಕೇಶಿರಾಜ***[1] : ಕವಿ ಮಲ್ಲಿಕಾರ್ಜುನನ*[2] ಮಗ. 'ಶಬ್ದಮಣಿದರ್ಪಣ' ಪ್ರಸಿದ್ಧ ಲಕ್ಷಣ ಗ್ರಂಥ. 2ನೇ ನಾಗವರ್ಮನ ಕಾವ್ಯಾವಲೋಕನದ 'ಶಬ್ದಸ್ಮೃತಿ' ವಿಭಾಗವನ್ನು ಅನುಸರಿಸಿದಂತಿದೆ. ಆದರೆ ವ್ಯಾಕರಣಕ್ಕೆ ಸಂಬಂಧಿಸಿದ ವಿಚಾರಗಳನ್ನು ನಾಗವರ್ಮನಿಗಿಂತಲೂ ಹೆಚ್ಚು ವಿಶದವಾಗಿ ಸಮರ್ಥಿಸಿದ್ದಾನೆ. ಪೂರ್ವಕವಿಗಳ ಉತ್ತಮ ಉದಾಹರಣೆಗಳನ್ನು ಉದ್ಧರಿಸಿದ್ದಾನೆ. ವ್ಯಾಕರಣಾಭ್ಯಾಸದಿಂದ ಮುಕ್ತಿ ದೊರೆಯುವುದೆಂದೂ ಹೇಳುತ್ತಾನೆ. ಈ ಕಾವ್ಯದ ವೈಶಿಷ್ಟ್ಯತೆಯೂ ರಮಣೀಯತೆಯೂ ಕಾಣುವುದು ಆತನ ಪ್ರಯೋಗ ಸಂಪತ್ತಿನಲ್ಲಿ, ವರ್ಣಾತ್ಮಕ ವ್ಯಾಕರಣಾಂಶಗಳಲ್ಲಿ-

ಉದಾಹರಣೆ :

ಅನಿಯೋಗ ಸಂಧಿಗೆ :
ಮಾಮರನಲ್ಲದಿಲ್ಲ ತನಿಗಂಪಿನ ಮಲ್ಲಿಗೆಯಲ್ಲದಿಲ್ಲ...

ನಿಯೋಗ ವಿಸಂಧಿಗೆ :
ಮಾಮರನದೆ ಇನಿದಪ್ಪ ತನಿವಣ್ಣನೀಗಂ.

ಭಾಗಾರ್ಥದರೆಯ ಸಂಧಿಗೆ :
ಕುರುಪತಿಯುಂ ವಿಪ್ಪು ಬೇಡಿದಂ ಧರೆಯುರೆಯುಂ

ವರ್ಣಾತ್ಮಕ ವ್ಯಾಕರಣಾಂಶಗಳು : ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱ ಕಾರಂ ಪುಟ್ಟುಗುಂ, ಡ ಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ೞ ಟ ವೆಸರ ೞ ಕಾರಂ ಪುಟ್ಟುಗಂ, ಇತ್ಯಾದಿ.

**ಈಶ್ವರ ಕವಿ***[3] : ಈತನ ಕಾವ್ಯ 'ಕವಿಜಿಹ್ವಾಬಂಧನ' ಇದು ಛಂದಸ್ಸನ್ನು ಬೋಧಿಸುವ ಗ್ರಂಥ. ಕಂದವೃತ್ತದಲ್ಲಿದೆ. ಹೆಂಡತಿಯನ್ನು ಸಂಬೋಧಿಸಿ ಗಂಡ ಗ್ರಂಥ ಬರೆದಿದ್ದಾನೆ.

---

*1 ಕಾಲ : ಸು. ಕ್ರಿ.ಶ. 1260. ಜನ್ನನ ಸೋದರಳಿಯ. ಚೋಳಪಾಲಕ ಚರಿತ, ಸುಭದ್ರಾ ಹರಣ, ಪ್ರಬೋಧ ಚಂದ್ರ, ಕಿರಾತ, ಶ್ರೀ ಚಿತ್ರಮಾಲೆ ಎಂಬ ಗ್ರಂಥಗಳನ್ನು ಬರೆದಿದ್ದಾನೆಂದು ಹೇಳಲಾಗುತ್ತದೆ. 'ಶಬ್ದಮಣಿ ದರ್ಪಣ' ಗ್ರಂಥವನ್ನು ಕ್ರಿ. ಶ. 1868 ರಲ್ಲಿ ಜೆ. ಗ್ಯಾರೆಟ್, ಕ್ರಿ.ಶ. 1872ರ ಸುಮಾರಿನಲ್ಲಿ ರೆವರೆಂಡ್ ಕಿಟ್ಟೆಲ್ (ಮೂರು ಪರಿಷ್ಕೃತ ಮುದ್ರಣಗಳು) ಪರಿಷ್ಕರಿಸಿ ಹೊರತಂದಿದ್ದಾರೆ. ಡಿ. ಕೆ. ಭೀಮಸೇನರಾಯರು ಕ್ರಿ. ಶ. 1951ರಲ್ಲಿ ಪರಿಷ್ಕರಿಸಿದ ಪ್ರತಿ ಹೊರತಂದಿದ್ದಾರೆ. ಡಾ॥ ಡಿ. ಎಲ್. ನರಸಿಂಹಾಚಾರ್‌ರವರು ಕೇಶಿರಾಜನ 'ಶಬ್ದಮಣಿದರ್ಪಣಂ' ಕೃತಿಯನ್ನು ನಿಟ್ಟೂರು ನಂಜಯ್ಯನ ಟೀಕೆ ಸಹಿತ 1958ರಲ್ಲಿ ಸಂಪಾದಿಸಿ ಹೊರತಂದಿದ್ದಾರೆ. ಇದು ಈಗಾಗಲೇ 6 ಮರುಮುದ್ರಣಗಳನ್ನು ಕಂಡಿದೆ.

*2 ಈತನ ಪ್ರಮುಖ ಕಾವ್ಯ 'ಸೂಕ್ತಿ ಸುಧಾರ್ಣವ'

*3 ಕಾಲ : ಸು. ಕ್ರಿ.ಶ. 1500. 'ಅಭಿನವ ಕೇಶಿರಾಜ' ಬಿರುದು.

**ಸಾಳ್ವ***1 : 'ರಸರತ್ನಾಗರ' ಈತ ಬರೆದಿರುವ ಲಕ್ಷಣ ಗ್ರಂಥ. ಇದರಲ್ಲಿ ರಸಪ್ರತಿಪಾದನೆಯಿದೆ. ಶೃಂಗಾರ ಪ್ರಪಂಚ. ರಸ ವಿವರಣ, ನಾಯಕ ನಾಯಿಕಾ ವಿವರಣ ಭಾವಾಧಿಕರಣ ಈ ಗ್ರಂಥದಲ್ಲಿರುವ ಆಶ್ವಾಸಗಳು.

**ಭಟ್ಟಾಕಳಂಕದೇವ***2 : ಮಹಾವಿದ್ವಾಂಸ. 'ಶಬ್ದಾನುಶಾಸನ' ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಕನ್ನಡ ವ್ಯಾಕರಣ ಗ್ರಂಥ, ಬೃಹತ್ ಕೃತಿ. ಪಂಪ, ರನ್ನ, ಪೊನ್ನ, ನಾಗಚಂದ್ರ, ನೇಮಿಚಂದ್ರ ಮುಂತಾದವರುಗಳನ್ನು ಉದಾಹರಿಸಿದ್ದಾನೆ. ಕನ್ನಡದ ಕೀರ್ತಿಯನ್ನು ಸಂಸ್ಕೃತ ಪಂಡಿತರಿಗೆ ಸಾರಿರುವುದು ಈ ಕೃತಿಯ ವೈಶಿಷ್ಟ್ಯ. ಶಬ್ದಮಣಿದರ್ಪಣಕ್ಕಿಂತಲೂ ಹೆಚ್ಚು ವಿಷಯ ಒಳಗೊಂಡಿದೆ.

**ಗುಣಚಂದ್ರ***3 : 'ಛಂದಸ್ಸಾರ' ಸಂಗ್ರಹರೂಪದ ಛಂದೋಗ್ರಂಥ. ಇದರಲ್ಲಿ 5 ಅಧ್ಯಾಯಗಳಿವೆ. ಸಂಜ್ಞಾಪ್ರಕರಣ, ಮಾತ್ರಾ ಛಂದೋಲಕ್ಷಣ, ಸಮವೃತ್ತ ಪ್ರಕರಣ, ಸಂಕೀರ್ಣ ಪ್ರಕರಣ ಈ ನಾಲ್ಕು ಅಧ್ಯಾಯಗಳಲ್ಲಿ ಸಂಸ್ಕೃತ ಛಂದಸ್ಸಿನ ವಿಷಯವಿದೆ. 5ನೆಯದರಲ್ಲಿ 'ತಾಳ'ಗಳನ್ನು ವಿವರಿಸಿದ್ದಾನೆ.

**ತಿರುಮಲಾರ್ಯ***4 'ಅಪ್ರತಿಮ ವೀರ ಚರಿತ' ಈ ಗ್ರಂಥದ ಹೆಸರು ಸ್ವಲ್ಪ ವಿಚಿತ್ರವೆನಿಸಿದರೂ ಇದು ಒಂದು ಅಲಂಕಾರ ಗ್ರಂಥ. ಇದರಲ್ಲಿ ಕಾವ್ಯಲಕ್ಷಣ, ಗುಣ, ಅಲಂಕಾರಗಳು ವಿವರಿಸಲ್ಪಟ್ಟಿವೆ.

**ಶೃಂಗಾರ ಕವಿ***5 'ಕರ್ಣಾಟಕ ಸಂಜೀವನ'ವೆಂಬ ಕನ್ನಡ ನಿಘಂಟು ರಚಿಸಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಜ ಟ ಕು ಟ ಕ್ಷ ಳ ಗಳನ್ನುಳ್ಳ ಕನ್ನಡ ಪದಗಳ ಅರ್ಥ ನೀಡಿದ್ದಾನೆ.

**ಚೆನ್ನಕವಿ***6 ಈತನ 'ನಾನಾರ್ಥ ಕಂದ', ಸಂಸ್ಕೃತ ಶಬ್ದಗಳ ನಾನಾರ್ಥ ತಿಳಿಸುವ ನಿಘಂಟು. ಕಂದವೃತ್ತದಲ್ಲಿದೆ.

**ಅಭಿನವ ಮಂಗರಾಜ***7 ಈತನ 'ಅಭಿನವನಿಘಂಟು' ವಾರ್ಧಕ ಷಟ್ಪದಿಯಲ್ಲಿರುವ ಅಪೂರ್ವ ಗ್ರಂಥ. ಇದರಲ್ಲಿ ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಹೇಳಲಾಗಿದೆ.

ಭರತನ ನಾಟ್ಯಶಾಸ್ತ್ರ (ಅಲಂಕಾರ ಭಾಗ)ವನ್ನು **ಡಾ॥ ಜಿ. ಮರುಳಸಿದ್ಧಯ್ಯ**ನವರು ಸಂಪಾದಿಸಿದ್ದಾರೆ. ಮೈಸೂರು ಕನ್ನಡ ಅಧ್ಯಯನ ಸಂಸ್ಥೆ ಪ್ರಕಾಶಿಸಿದೆ. **ಬಿ. ಕೆ. ಶಿವರಾಮಯ್ಯ**ನವರ 'ಅಲಂಕಾರ ಶಾಸ್ತ್ರ'ವೂ ಸಹ ಇದೇ ಸಂಸ್ಥೆಯಿಂದ ಹೊರಬಂದಿದೆ.

---

*1 ಪುಟ 18 ನೋಡಿ. 'ವೈದ್ಯ ಸಾಂಗತ್ಯ' ಈತನ ಇನ್ನೊಂದು ಪ್ರಮುಖ ಕೃತಿ.

*2 ಕಾಲ : ಸು. ಕ್ರಿ.ಶ. 1604. *3 ಕಾಲ : ಸು. ಕ್ರಿ.ಶ. 1650. ಜೈನಕವಿ.

*4 ಪುಟ 52 ನೋಡಿ. 'ಅಪ್ರತಿಮ ವೀರ' ಚಿಕ್ಕದೇವರಾಯನ ಬಿರುದು.

*5 *6 ಕಾಲ : ಸು. ಕ್ರಿ.ಶ. 1600. *7 ಕಾಲ : ಸು. ಕ್ರಿ.ಶ. 1667.

**ಜಾನ್ ಮೆಕ್ರಿನ್** : ಕ್ರಿ. ಶ. 1820 ರಲ್ಲಿ 'ಕರ್ಣಾಟಕ ವ್ಯಾಕರಣ' ಎಂಬ ಗ್ರಂಥ ರಚಿಸಿದ ಕೀರ್ತಿ ಇವನಿಗೆ ಸೇರುತ್ತದೆ.

**ಜಾರ್ಜ್ ವೂರ್ತ್** : ಛಂದೋಶಾಸ್ತ್ರದ ಬಗ್ಗೆ ವ್ಯಾಸಂಗ ನಡೆಸಿದ ಐರೋಪ್ಯ ಸಾಹಿತಿಗಳಲ್ಲಿ ಮೊದಲಿಗ. ಈತ 'ಕರ್ಣಾಟಕ ಕಾವ್ಯಮಾಲಿಕೆ' ಎಂಬ ಗ್ರಂಥ ಸಂಪಾದಿಸಿದ್ದಾನೆ. ಇದರಲ್ಲಿ ಪ್ರಾಚೀನ ಕಾವ್ಯಗಳ ಉತ್ತಮಭಾಗವನ್ನು ಸಂಗ್ರಹಿಸಲಾಗಿದೆ.

"ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ–ಕನ್ನಡ ನಿಘಂಟನ್ನು ನಿರ್ಮಿಸುತ್ತಿದೆ. ನಮ್ಮ ತಂದೇನೂ ಅದನ್ನ ತರಿಸ್ತಾ ಇದ್ದಾರೆ. ವಿದ್ವತ್‌ಪೂರ್ಣವಾದ ಈ ನಿಘಂಟು ವಿದ್ಯಾರ್ಥಿಗಳಿಂದ ಮೊದಲಾಗಿ ಪಂಡಿತರವರೆವಿಗೆ ಬಹು ಉಪಯುಕ್ತವಾಗಿದೆ. ಮೈಸೂರು ವಿಶ್ವವಿದ್ಯಾಲಯವೂ ಒಂದು ನಿಘಂಟನ್ನು ನಿರ್ಮಿಸಿದೆ. ಇದು ಸ್ತುತ್ಯಾರ್ಹ. **'ಕರ್ಣಾಟಕ ಸಂಜೀವನ'** 'ಶೃಂಗಾರ ಕವಿ' ರಚಿಸಿದ್ದಾನೆ ಅಂತ ಈಗ ತಾನೆ ಹೇಳಿದ್ರಿ. ಇನ್ಯಾರಾರು ಕನ್ನಡದಲ್ಲಿ ನಿಘಂಟು ರಚಿಸಿದ್ದಾರೆ ಸ್ವಲ್ಪ ವಿವರಿಸ್ತೀರಾ ಮೇಸ್ಟ್ರೆ" ದಿನಕರ ಪ್ರಶ್ನಿಸಿದ.

"ಓಹೋ–ಹೇಳ್ತೀನಿ ಒಂದು ನಿಮಿಷ" ಎಂದು ವ್ಯಾಸರಾಯರು ಎದ್ದು ತಮ್ಮ ಕೋಟಿನಿಂದ ಒಂದು ಸಣ್ಣ ಪುಸ್ತಕ ತೆಗೆದು "ಇದು ನನ್ನ ಸಾಹಿತ್ಯ 'ಎನ್‌ಸೈಕ್ಲೋಪಿಡಿಯಾ'" ಮುಗುಳ್ನಗುತ್ತ ಕೆಲವು ಪುಟಗಳನ್ನು ತಿರುವಿಹಾಕಿ ಪ್ರಾರಂಭಿಸಿದರು.

"'ರನ್ನಕಂದ' ಕವಿ ಚಕ್ರವರ್ತಿಗಳಲ್ಲಿ ಒಬ್ಬನಾದ **ಕವಿ ರನ್ನ**ನಿಂದ ರಚಿತವಾದ ಕನ್ನಡದ ಮೊದಲ ನಿಘಂಟು. ಹನ್ನೆರಡನೆ ಶತಮಾನದ ಎರಡನೆ ನಾಗವರ್ಮ ರಚಿಸಿದ 'ಅಭಿದಾನ ವಸ್ತುಕೋಶ' ಸಂಸ್ಕೃತ-ಕನ್ನಡ ನಿಘಂಟು. ಇದು ಕಂದವೃತ್ತದಲ್ಲಿ ರಚಿತವಾಗಿದೆ. 'ನಾಚಿರಾಜೀಯು' ಸಂಸ್ಕೃತದ ಸುಪ್ರಸಿದ್ಧ ನಿಘಂಟು ಅಮರಕೋಶದ ಕನ್ನಡ ವ್ಯಾಖ್ಯಾನ. ಇದನ್ನು ಕ್ರಿ. ಶ. 1300ರಲ್ಲಿದ್ದ **ನಾಚಿರಾಜ** ರಚಿಸಿದ್ದಾನೆ. ಇದೇ ಶತಮಾನದ ಇನ್ನೊಬ್ಬ ಕವಿ **'ಅಮೃತ ನಂದಿ'** ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟ ನಿಘಂಟೊಂದನ್ನು ರಚಿಸಿದ್ದಾನೆ. ಇದರ ಹೆಸರು 'ಅಕರಾದಿ ವೈದ್ಯ ನಿಘಂಟು'. 14ನೆ ಶತಮಾನದಲ್ಲಿ ರಚಿತವಾದ 'ಕರ್ಣಾಟಕ ಶಬ್ದಸಾರ' ಕನ್ನಡ-ಕನ್ನಡ ನಿಘಂಟಿನ ಕರ್ತೃ ಯಾರೆಂಬುದು ಸರಿಯಾಗಿ ತಿಳಿದಿಲ್ಲ. ಸುಮಾರು ಕ್ರಿ. ಶ. 1500 ರಲ್ಲಿದ್ದ ನಿಜಗುಣ ಶಿವಯೋಗಿ 'ವಿವೇಕ ಚಿಂತಾಮಣಿ' ಎಂಬ ಜ್ಞಾನಕೋಶ ರಚಿಸಿದ್ದಾನೆ. 'ಚತುರಾಸ್ಯ ನಿಘಂಟು' 15ನೇ ಶತಮಾನದಲ್ಲಿದ್ದ **ಚತುರಾಸ್ಯ ಬೊಮ್ಮರಸ**ನಿಂದ ರಚಿತವಾದದ್ದು. 16ನೇ ಶತಮಾನದ ಲಿಂಗಮಂತ್ರಿ ರಚಿತ 'ಕಬ್ಬಿಗರ ಕೈಪಿಡಿ' ಹಳಗನ್ನಡ ಶಬ್ದಗಳಿಗೆ ಅರ್ಥವನ್ನು ವಿವರಿಸಿರುವ ಅರ್ಥಕೋಶ. ಇದೇ ಶತಮಾನದ ಇನ್ನೊಂದು ನಿಘಂಟು **ತೋಂಟದಾರ್ಯ** ರಚಿತ 'ಕರ್ಣಾಟಕ ಶಬ್ದಮಂಜರಿ'. ಇದು ಬಹಳ ಪ್ರಸಿದ್ಧವಾಗಿದ್ದ ಕೃತಿ. ಇದಕ್ಕೆ ಬಹಳ ಜನ ಟೀಕೆಗಳನ್ನು ಬರೆದಿದ್ದಾರೆ.

'ನಾನಾರ್ಥ ರತ್ನಾಕರ' ಕ್ರಿ.ಶ. ಸುಮಾರು 1600ರಲ್ಲಿ ರಚಿತವಾದ ಸಂಸ್ಕೃತ-ಕನ್ನಡ ನಿಘಂಟು. ಇದರ ಕರ್ತೃವೇ **ದೇವೋತ್ತಮ.** 'ಕವಿ ಕಂಠಹಾರ' ಪ್ರಾಚೀನ ಕನ್ನಡ ಪದಗಳಿಗೆ ಅರ್ಥ ನೀಡಿರುವ ನಿಘಂಟು. ಇದರ ಕಾಲ ಕ್ರಿ.ಶ. 1640. ಬರೆದವನು **ಸೂರ್ಯ ಕವಿ.** ಕೃತಿ ಶೈಲಿ ಕಂದವೃತ್ತ.

**ರೆ|| ರೀವ್**ರವರ 'ಕನ್ನಡ-ಇಂಗ್ಲೀಷ್ ನಿಘಂಟು' ಕ್ರಿ.ಶ. 1832ರಲ್ಲಿ ನಿರ್ಮಿತವಾದದ್ದು, ರೆ|| ಕಿಟ್ಟೆಲ್ ಅವರ ನಿಘಂಟಿಗಿಂತ ಹಿಂದಿನದು. ಇದರಲ್ಲಿ ಕನ್ನಡ, ಸಂಸ್ಕೃತ ಪದಗಳಿಗೆ ಇಂಗ್ಲಿಷಿನಲ್ಲಿ ಅರ್ಥ ಹೇಳಿದೆ.

**ಜೆ. ಗ್ಯಾರೆಟ್***ರವರು ಕ್ರಿ.ಶ. ಸುಮಾರು 1868ರಲ್ಲಿ 'ಇಂಗ್ಲಿಷ್-ಕನ್ನಡ ನಿಘಂಟ'ನ್ನು, **ಜೈಗ್ಲರ್**ರವರು ಕ್ರಿ.ಶ. 1876ರಲ್ಲಿ 'ಇಂಗ್ಲಿಷ್-ಕನ್ನಡ ಶಬ್ದಕೋಶ'ವನ್ನು ಸಂಪಾದಿಸಿದ್ದಾರೆ. ಇದೇ ಕಾಲದಲ್ಲಿದ್ದ **ಚಾರ್ಲ್ಸ್ ಬ್ರೌನ್** 'ಇಂಗ್ಲಿಷ್-ಕನ್ನಡ ಸಂಭಾಷಣಾ ಗ್ರಂಥ' ಸಂಪಾದಿಸಿದ್ದರು.

ರೆ|| ಎಫ್. ಕಿಟ್ಟೆಲ್‌ರವರು ಕ್ರಿ.ಶ. 1893ರಲ್ಲಿ ಪ್ರಕಟಿಸಿದ 'ಕಿಟ್ಟೆಲ್ ನಿಘಂಟು' ಕನ್ನಡ ಗ್ರಂಥ ಭಂಡಾರಕ್ಕೆ ಸಂದ ಒಂದು ಅಪೂರ್ವ ಕೊಡುಗೆ. ಕನ್ನಡ ಸಂಸ್ಕೃತ ಪದಗಳಿಗೆ ಸವಿಸ್ತಾರವಾಗಿ ಕನ್ನಡದಲ್ಲಿ ಅರ್ಥ ಕೊಟ್ಟಿದೆ. ಪ್ರತಿಯೊಂದು ಪದಕ್ಕೂ ಹಿಂದಿನ ಗ್ರಂಥಗಳಿಂದ ಆಯ್ದು ಆಧಾರಗಳನ್ನು ಉಲ್ಲೇಖಿಸಿದೆ.

'ಕನ್ನಡ ನಿಘಂಟುಗಳ ನಿಘಂಟು'-ಇದು ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆ. 1930ರಲ್ಲಿ ಪ್ರಕಟಗೊಂಡಿದೆ.

'ಸಿರಿಗನ್ನಡ ಅರ್ಥಕೋಶ' ಸಾಹಿತ್ಯದ ಎಲ್ಲ ವಿಭಾಗಗಳಲ್ಲೂ ಅಮೂಲ್ಯ ಕೃತಿಗಳನ್ನಿತ್ತಿರುವ ಡಾ|| ಶಿವರಾಮ ಕಾರಂತರು ಈ ವಿಭಾಗದಲ್ಲೂ ತಮ್ಮ ಪ್ರತಿಭಾ ಪ್ರದರ್ಶನ ಮಾಡಿದ್ದಾರೆ. ಪ್ರಕಟಣೆ 1940. ಕನ್ನಡ-ಸಂಸ್ಕೃತ ಅನ್ಯದೇಶ್ಯ ಶಬ್ದಗಳಿಗೆ ಕನ್ನಡದಲ್ಲಿ ಅರ್ಥ ಹೇಳಿದೆ.

ಸಚಿತ್ರ ಕನ್ನಡ-ಕನ್ನಡ ಕಸ್ತೂರಿ ಕೋಶ **ಪಂಡಿತ ಜಿ. ಎ. ಕವಲಿ** ಅವರಿಂದ ರಚಿತಗೊಂಡದ್ದು. ಇದರಲ್ಲಿ ಪದಗಳಿಗೆ ಸಂಬಂಧಿಸಿದಂತೆ ಅನೇಕ ಚಿತ್ರಗಳನ್ನು ನೀಡಿರುವುದು ಈ ಕೃತಿಯ ವೈಶಿಷ್ಟ್ಯ.

**ಆರ್. ಎಸ್. ರಾಮರಾಯರ** 'ಕನ್ನಡ - ಕನ್ನಡ ಇಂಗ್ಲಿಷ್ ನಿಘಂಟು', **ಗುರುನಾಥ ಜೋಶಿ** ಮತ್ತು **ಜಿ. ಅಶ್ವತ್ಥ** ಸಂಕಲಿಸಿರುವ 'ಕನ್ನಡ-ಕನ್ನಡ ಶಬ್ದಕೋಶ', **ಡಿ. ಕೆ. ಭಾರದ್ವಾಜರ** 'ಇಂಗ್ಲಿಷ್-ಇಂಗ್ಲಿಷ್ ಕನ್ನಡ ನಿಘಂಟು', **ಗುರುನಾಥ ಜೋಶಿ** ಹಾಗೂ **ಬಿ. ಅಶ್ವತ್ಥನಾರಾಯಣ ರಾವ್** ಜೊತೆಗೂಡಿ ನಿರ್ಮಿಸಿರುವ 'ಕನ್ನಡ-ಕನ್ನಡ

---

* ಇವರ ಕೃತಿ 'ಕನ್ನಡದ ಭಗವದ್ಗೀತೆ', ಕನ್ನಡದಲ್ಲಿ ಈ ಬಗ್ಗೆ ಬಂದ ಪ್ರಥಮ ಕೃತಿ. ಸಂಪಾದಿಸಿರುವ ಕೃತಿಗಳು: ಶಬ್ದಮಣಿ ದರ್ಪಣ, ದಾಸರ ಹಾಡುಗಳು, ಪಂಚತಂತ್ರ, ಭಾಷಾ ಮಂಜರಿ, ವಸ್ತುಕೋಶ ಮುಂತಾದವುಗಳು.

ಹಿಂದಿ ಶಬ್ದಕೋಶ', **ಮಂಚ್ಚಿಮಲೆ ಶಂಕರನಾರಾಯಣ ರಾವ್, ಆರ್. ಎಸ್. ನಾವೂರುಕ್ಕಾರ್** ಸಂಪಾದಿಸಿರುವ 'ಕನ್ನಡ ನಿಘಂಟು', **ಎಚ್. ವಿ. ರಮಾಕಾಂತರಾವ್** ರವರ 'ಕನ್ನಡ-ಕನ್ನಡ ಶಬ್ದಕೋಶ'; **ಬಿ. ಜಿ. ಸಂಕೇಶ್ವರ**ರ 'ಹಿಂದಿ ಕನ್ನಡ ಶಬ್ದ ಕೋಶ', **ವೆಂಕಟರಮಣಯ್ಯ** ಸಂಪಾದಿಸಿರುವ 'ಕನ್ನಡ ಪಡೆನುಡಿಗಳ ಕೋಶ', 'ಕನ್ನಡ-ಗಾದೆಗಳ ಕೋಶ', **ಎನ್ಕೆ** ಸಂಪಾದಿಸಿರುವ 'ಕುಮಾರವ್ಯಾಸ ನಿಘಂಟು', **ತ. ಸು. ಶಾಮರಾಯರ** 'ಕುಮಾರವ್ಯಾಸ ಭಾರತ ನಿಘಂಟು', **ರಮಾನಂದರ** 'ಸುಭಾಷಿತ ರತ್ನಾವಲಿ' ಮತ್ತು 'ನಿಬಂಧ ಸಾಗರ', **ತ. ಸು. ಶಾಮರಾಯ** ಮತ್ತು **ಪ. ನಾಗರಾಜಯ್ಯ** ಸಂಪಾದಿಸಿರುವ ಜೈನಪರಿಭಾಷಾ ರತ್ನಕೋಶ', **ಪಂಡಿತ ಯಜ್ಞ ನಾರಾಯಣ ಉಡುಪರೆಯ**ವರ 'ಪುರಾಣ ಭಾರತ ಕೋಶ' (ಸಮಗ್ರ ಭಾರತ ವರ್ಷದ ವಸ್ತು, ವ್ಯಕ್ತಿ, ನಿಘಂಟು), **ಟಿ. ವಿ. ವೆಂಕಟರಮಣಯ್ಯ** ಸಂಪಾದಿಸಿರುವ 'ನುಡಿ ರತ್ನಕೋಶ'. **ಬಿ. ಎಸ್. ಸಣ್ಣಯ್ಯ** ಸಂಪಾದಿಸಿರುವ 'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ', **ಕೆ. ಎನ್. ಷಡಕ್ಷರಿ** ಸಂಪಾದಿಸಿರುವ 'ನುಡಿಮುಕ್ತಕ', **ಬಿ. ಬಿ. ಬಿರಾದಾರ**ರವರ 'ಬೆತ್ತಲೆ ಗಾದೆಗಳು', **ಡಾ॥ ಎಂ. ಚಿದಾನಂದಮೂರ್ತಿ** ಗಳವರ 'ವಾಗರ್ಥ', **ಕಾವ್ಯಪ್ರೇಮಿ** ಸಂಪಾದಿಸಿರುವ 'ಜನಪ್ರಿಯ ಗಾದೆಗಳ ನಿಘಂಟು', **ಪ್ರೊ॥ ಜಿ. ವೆಂಕಟಸುಬ್ಬಯ್ಯ**ನವರ ಪ್ರಧಾನ ಸಂಪಾದಕತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಹೊರತಂದಿರುವ 'ಸಂಕ್ಷಿಪ್ತ ಕನ್ನಡ ನಿಘಂಟು' (1975), ಜೆಮ್ ನಿಘಂಟು ಮಾದರಿಯ 'ಕನ್ನಡ ರತ್ನಕೋಶ', **ಶಾಂತಾರಾಮ ಬಾಳೆಗುಳಿ** ಸಂಗ್ರಹಿಸಿರುವ '101 ಜಾಣ್ಣುಡಿಗಳು', **ನಾ. ಕಸ್ತೂರಿ**ಯವರ 'ಅನರ್ಥಕೋಶ', **ಫ. ಗು. ಹಳಕಟ್ಟಿ**ಯವರ 'ಶಿವಾನುಭವ ಶಬ್ದಕೋಶ', **ಚಿಂತಾಮಣಿ ಪೇಠಕರ**ರವರ 'ಸಂಸ್ಕೃತ ಕನ್ನಡ ವ್ಯುತ್ಪತ್ತಿಕೋಶ', **ಗು. ಬೀ. ಜೋಷಿ**ಯವರ 'ಸಂಸ್ಕೃತ-ಕನ್ನಡ ಶಬ್ದಕೋಶ' ಮುಂತಾದವುಗಳು ಈ ವಿಭಾಗದಲ್ಲಿ ಬಂದಿರುವ ಮುಖ್ಯ ಕೃತಿಗಳು.

'ಲೇಖಕರ ಸೂಚಿ' ಒಂದು ಉಪಯುಕ್ತ ಗ್ರಂಥ. ಇದರ ಸಂಪಾದಕರು ಎಂ. ಆರ್. ಸಣ್ಣರಾಮೇಗೌಡ. 'ಆಧುನಿಕ ಕನ್ನಡ ಒರಹಗಾರರು' ಕನ್ನಡ ಲೇಖಕ-ಲೇಖಕಿಯರ ಇತಿವೃತ್ತವನ್ನು ಒದಗಿಸುವ ಒಂದು ಕೋಶ. 'ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ' ಕರ್ನಾಟಕದ ಸಮಸ್ತ ವಿಷಯದ ಮೇಲೆ ಬೆಳಕು ಚೆಲ್ಲುವ ಗ್ರಂಥ. ಈ ಮೂರೂ ಮೈಸೂರು ವಿಶ್ವವಿದ್ಯಾನಿಲಯದ ಕೊಡುಗೆಗಳು.

'ಜ್ಞಾನಗಂಗೋತ್ರಿ' ಏಳು ಸಂಪುಟಗಳ ಕಿರಿಯರ ವಿಶ್ವಕೋಶ. ಇದರ ಪ್ರಧಾನ ಸಂಪಾದಕರು **ನಿರಂಜನ.** ಮನುಕುಲದ ಕಥೆ, ಜೀವಜಗತ್ತು, ಭೌತ ಜಗತ್ತು, ಯಂತ್ರ ಜಗತ್ತು, ಕಲೆ-ಸಾಹಿತ್ಯ-ಕ್ರೀಡೆ, ಮನೋಲ್ಲಾಸ, ಭಾರತದ ಕಥೆ—ಇವೇ ಆ ಏಳು ಸಂಪುಟಗಳು.

'ನಮ್ಮ ಲೇಖಕಿಯರು' ಕನ್ನಡ ಸಾಹಿತ್ಯ ಪರಿಷತ್ತಿನ ಕೊಡುಗೆ. ಇದರಲ್ಲಿ 124 ಕನ್ನಡ ಲೇಖಕಿಯರ ಸಂಕ್ಷಿಪ್ತ ಪರಿಚಯ ಕೊಡಲಾಗಿದೆ.

ಪರಿಷ್ಕೃತ ಮತ್ತು ವಿಸ್ತೃತ 'ಕಿಟ್ಟೆಲ್ಲರ ಕನ್ನಡ-ಇಂಗ್ಲಿಷ್ ನಿಘಂಟು' ಕಿಟ್ಟೆಲ್ಲರ ನಿಘಂಟಿಗೆ ಹೊಸ ರೂಪ ಕೊಟ್ಟು ವಿಸ್ತೃತಗೊಳಿಸಿದ ಅಮೋಘ ಕೆಲಸ ಮಾಡಿದವರು ಪ್ರೊ॥ ಮರಿಯಪ್ಪ ಭಟ್ಟರು. ಇವರನ್ನು ಅಭಿನವ ಕಿಟ್ಟೆಲ್ ಎಂದೂ ಕರೆಯು ತ್ತಾರೆ. ಇದು ಮದರಾಸು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡಿದೆ.

"ಕಿಟ್ಟೆಲ್ ಯಾರು ಸಾರ್? ಅವನೇಕೆ ಕನ್ನಡದಲ್ಲಿ ನಿಘಂಟು ಬರೆದ?" ದಿನಕರನ ಸ್ನೇಹಿತ ಪ್ರಶ್ನಿಸಿದ.

"**ರೆವರೆಂಡ್ ಕಿಟ್ಟೆಲ್***1 1832ರಲ್ಲಿ ಜರ್ಮನಿಯಲ್ಲಿ ಜನಿಸಿ ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿ 1853ರಲ್ಲಿ ಇಂಡಿಯಾಕ್ಕೆ ಪಾದ್ರಿಯಾಗಿ ಬಂದರು. ಇಲ್ಲಿ ಕನ್ನಡವನ್ನು ಕಲಿತುದಲ್ಲದೆ ಮಹಾಪಾಂಡಿತ್ಯ ಗಳಿಸಿ ನಿಘಂಟು ರಚಿಸುವ ಸಾಹಸಕ್ಕೆ ಕೈಹಾಕಿದರು. ಇವರು ಕನ್ನಡ ಸಾಹಿತ್ಯಕ್ಕೆ ಬಹಳ ಅಮೋಘ ಸೇವೆ ಮಾಡಿದ್ದಾರೆ. 16 ವರ್ಷಗಳ ಅವಿಶ್ರಾಂತ ಶ್ರಮದ ಫಲವಾಗಿ 1894ರಲ್ಲಿ ಮಂಗಳೂರಿನಲ್ಲಿ ಪ್ರಕಟ ಗೊಂಡಿತು ಈ ನಿಘಂಟು. ಇದನ್ನು ಹೊರತಂದ ಕೀರ್ತಿ ಬಾಸೆಲ್ ಮಿಷನ್‌ಗೆ ಸಲ್ಲು ತ್ತದೆ. ಈ ಗ್ರಂಥವಲ್ಲದೆ ಇವರು ನಾಗವರ್ಮನ ಕನ್ನಡ ಛಂದಸ್ಸು, ಪಂಚತಂತ್ರದ ಬಗ್ಗೆಯೂ ಬರೆದಿದ್ದಾರೆ. ಇವರ 'ಕನ್ನಡ ವ್ಯಾಕರಣ' ಇನ್ನೊಂದು ಅಮೋಘ ಕೊಡುಗೆ."

"**ಪ್ರೊಫೆಸರ್ ಮರಿಯಪ್ಪ ಭಟ್ಟರು***2 ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಇದ್ರಲ್ವೆ?" ರಾಯರು ಪ್ರಶ್ನಿಸಿದರು.

"ಹೌದು. ಹೊರನಾಡಿನಲ್ಲೇ ಇದ್ದುಕೊಂಡು ಕನ್ನಡಕ್ಕೆ ಅಪಾರ ಸೇವೆ ಮಾಡಿ ದ್ದಾರೆ. ಸಂಶೋಧಕರಾಗಿ, ಲೇಖಕರಾಗಿ ಅವಿಶ್ರಾಂತ ಶ್ರಮಿಸಿದ್ದಾರೆ. ಸುಮಾರು 10 ಹಳಗನ್ನಡ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಅವುಗಳಿಗೆ ಸಂಶೋಧ ನಾತ್ಮಕವಾದ ಮುನ್ನುಡಿ ಬರೆದು ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಅನೇಕ ಸಮಸ್ಯೆಗಳ ಮೇಲೆ ಹೊಸಬೆಳಕು ಚೆಲ್ಲಿದ್ದಾರೆ. ಇವರ ಅಪಾರ ಸಾಹಿತ್ಯ ಸೇವೆಯ ಗೌರವಾರ್ಥವಾಗಿ ರಾಜ್ಯ ಸಾಹಿತ್ಯ ಅಕಾಡೆಮಿ 1967ರಲ್ಲಿ ಪ್ರಶಸ್ತಿ ನೀಡಿ ಗೌರವಿ ಸಿದೆ. ಡಾ॥ ದೇ.ಜ.ಗೌ. ಒಂದೆಡೆ ಹೇಳಿರುವ ಮಾತು ಸತ್ಯ. 'ಶ್ರೀ ಮರಿಯಪ್ಪ

---

*1 ಕಾಲ ಕ್ರಿ.ಶ. 1832–1903.

*2 ಇವರು ಸಂಪಾದಿಸಿರುವ ಕೃತಿಗಳು: ಖಗೇಂದ್ರಮಣಿ ದರ್ಪಣ, ಅಭಿನವ ಮಂಗ ರಾಜ ನಿಘಂಟು, ಗುಣಚಂದ್ರನ ಛಂದಸ್ಸಾರ, ವರ್ಧಮಾನ ಪುರಾಣ, ಪಾರ್ಶ್ವ ಪುರಾಣ, ಜಾತಕ ತಿಲಕ, ವಿಷ್ಣುಪುರಾಣ, ಸಂಗೀತ ರತ್ನಾಕರ, ವ್ಯವಹಾರ ಗಣಿತ, ಸದ್ಗುರು ರಹಸ್ಯ. 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' ಶ್ರೀ ಭಟ್ಟರ ಇನ್ನೊಂದು ಪ್ರಮುಖ ಕೃತಿ. ಜೀವಿತ ಕಾಲ: 1906–1980. ಹುಟ್ಟಿದೂರು ಪುತ್ತೂರಿನ ಬಳಿಯ ಒಂದು ಹಳ್ಳಿ. ಮದ್ರಾಸಿನ ಕ್ರಿಶ್ಚಿಯನ್ ಕಾಲೇಜೊಂದರಲ್ಲಿ ಅಧ್ಯಾಪಕರಾಗಿ ಸೇರಿ ಪ್ರಾಧ್ಯಾಪಕರಾಗಿ ನಿವೃತ್ತರಾದರು. ಅನಂತರ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಕಾರ್ಯಭಾರ ಬಹುಕಾಲ ನಿರ್ವಹಿಸಿದರು.

ಭಟ್ಟರನ್ನು ಪಾಂಡಿತ್ಯ ಪ್ರತಿಭೆಗಳಲ್ಲಿ ಮೀರಿಸುವ ಜನ ಕನ್ನಡನಾಡಿನಲ್ಲಿ ಸಿಗಬಹುದು, ಆದರೆ ಅವರಂಥ ಸುಸಂಸ್ಕೃತ ವ್ಯಕ್ತಿಗಳು ತೀರ ವಿರಳ.'

ಇತ್ತೀಚೆಗೆ ವ್ಯಾಕರಣ ಮತ್ತು ಛಂದಸ್ಸು ಪ್ರಕಾರಗಳಲ್ಲಿ ಹೊರಬಂದಿರುವ ಕೃತಿಗಳು : **ಪ್ರೊ॥ ರಂಗಸ್ವಾಮಿಯವರ** 'ಕನ್ನಡ ವ್ಯಾಕರಣ', **ತೀ. ನಂ. ಶ್ರೀ.** ರವರ 'ಕನ್ನಡ ಮಾಧ್ಯಮ ವ್ಯಾಕರಣ' ಮತ್ತು 'ಹೊಸ ಕನ್ನಡ ಛಂದಸ್ಸು', **ದೊಡ್ಡಸ್ವಾಮಿಗಳ** 'ಹಳಗನ್ನಡ ವ್ಯಾಕರಣಗಳ ತೌಲನಿಕ ವಿಶ್ಲೇಷಣೆ', **ನಾಗರಾಜ ಭಟ್ಟರ** 'ಛಂದಃಶಾಸ್ತ್ರ ಪರಿಚಯ', **ಟಿ. ವಿ. ವೆಂಕಟಾಚಲಶಾಸ್ತ್ರಿಗಳ** 'ಕನ್ನಡ ಛಂದಸ್ಸು', **ನೀ. ಗಿರಿಗೌಡರವರ** 'ಕನ್ನಡ ಛಂದಸ್ಸಿನ ಪ್ರವೇಶಿಕೆ', **ಡಾ॥ ಡಿ. ಎಸ್. ಕರ್ಕಿಯವರ** 'ಕನ್ನಡ ಛಂದೋವಿಕಾಸ', **ಡಾ॥ ಎಲ್. ಬಸವರಾಜ್‌ರವರ** 'ಕನ್ನಡ ಛಂದಸ್ಸಂಪುಟ', **ಕುಕ್ಕಿಲ ಕೃಷ್ಣಭಟ್ಟರವರ** 'ಛಂದೋಂಬುಧಿ', **ಧೊಂ. ನ. ಮುಳಬಾಗಿಲುರವರ** 'ಛಂದಸ್ಸಾರ', **ಪ್ರೊ॥ ಎಂ. ವಿ. ಸೀತಾರಾಮಯ್ಯನವರ** 'ಪ್ರಾಚೀನ ಕನ್ನಡ ವ್ಯಾಕರಣಗಳು', **ಬಸವರಾಜ ಅಂಗಡಿಯವರ** 'ಕನ್ನಡ ಸಂಕ್ಷಿಪ್ತ ವ್ಯಾಕರಣ ಮತ್ತು ಛಂದಸ್ಸಾರ' ಮುಂತಾದವುಗಳು.

## (ಆ) ಸಂಕೀರ್ಣ ಗ್ರಂಥ ನಿರ್ಮಾಪಕರು

"ಈ ವಿಭಾಗದಡಿಯಲ್ಲಿ ವೈದ್ಯ, ಜ್ಯೋತಿಷ, ಪಾಕ, ಗಣಿತ, ಕಾಮಶಾಸ್ತ್ರ ಮುಂತಾದ ವಿಶಿಷ್ಟ ಕೃತಿಗಳನ್ನು ರಚಿಸಿರುವ ಪಂಡಿತರುಗಳ ವಿಷಯವನ್ನು ಹೇಳುತ್ತೇನೆ" ಎಂದು ಮಾತು ಪ್ರಾರಂಭಿಸಿದರು ವ್ಯಾಸರಾಯರು.

'ಕವಿರಾಜ ಮಾರ್ಗ' ಗ್ರಂಥಕ್ಕೆ ಹಿಂದೆ ರಚಿತಗೊಂಡಿದ್ದ ಕೃತಿಗಳು ಗಜಶಾಸ್ತ್ರ ಮತ್ತು ಗಜಾಷ್ಟಕ. ಇವುಗಳ ಕರ್ತೃ **ಶೈಗೊಟ್ಟ ಶಿವಮಾರ.** ಈತ ಇದ್ದ ಕಾಲ ಸುಮಾರು ಕ್ರಿ.ಶ. 800. ಈತನ ಗಜಶಾಸ್ತ್ರ ಗದ್ಯದಲ್ಲಿರಬಹುದೇನೋ. 'ಗಜಾಷ್ಟಕ' ಪದ್ಯರೂಪದಲ್ಲಿರಬಹುದೆಂದೂ ಊಹಿಸಲಾಗಿದೆ. ಆನೆಗಳ ಬಗ್ಗೆ ಪೂರ್ಣ ಮಾಹಿತಿ ದೊರೆಯುತ್ತದೆ. ಆಗಿನ ಕಾಲದಲ್ಲಿ ಬಹುಶಃ ಇವು ಒನಕೆ ಹಾಡಾಗಿ ಪ್ರಚಲಿತವಿದ್ದಿರಬಹುದು.

**2ನೇ ಚಾವುಂಡರಾಯ*** : ಈತನ ಅಪೂರ್ವ ಕೃತಿ 'ಲೋಕೋಪಕಾರ'

---

* ಕಾಲ ಸು. ಕ್ರಿ.ಶ. 1025. ಬ್ರಾಹ್ಮಣ ಕವಿ. ಚಾಲುಕ್ಯ ಚಕ್ರವರ್ತಿ 2ನೇ ಜಯಸಿಂಹನ ಆಶ್ರಯದಲ್ಲಿದ್ದ ಕವಿ.

ಗೃಹವಿಶ್ವಕೋಶವೆಂದು ಪ್ರಸಿದ್ಧಗೊಂಡಿದೆ. ಈ ಗ್ರಂಥದ ಹನ್ನೆರಡು ಪ್ರಕರಣಗಳಲ್ಲಿ ಪಂಚಾಂಗ ಫಲ ವರ್ಣನ, ಶುಭಕರ ಲಗ್ನಗಳ ವಿವರಣೆ, ಗೃಹನಿರ್ಮಾಣ, ಪ್ರಾಣಿಗಳ ಉತ್ಪಾತ, ಜಲಶೋಧನೆ, ತೋಟಗಾರಿಕೆ, ಸೂಪಶಾಸ್ತ್ರ, ಶಕುನ, ವಿಷ ಪರಿಹಾರ, ಪ್ರಾಣಿಗಳ ಲಕ್ಷಣ ಮುಂತಾಗಿ ಸಮಸ್ತ ವಿಷಯವೂ ಒಳಗೊಂಡಿದೆ.

**ಚಂದ್ರರಾಜ*1 :** ಬ್ರಾಹ್ಮಣ ಕವಿ. 'ಮದನ ತಿಲಕ' ಈತನ ಪೇರು ಕೃತಿ. ಕಾಮಶಾಸ್ತ್ರ ಕುರಿತ ಪ್ರಥಮ ಗ್ರಂಥವೆನ್ನಬಹುದು. ಸ್ತ್ರೀಯರ ಮುಖ ಲಕ್ಷಣ ಹಾಗೂ ಆಕಾರದಿಂದ ಅವರ ಗುಣಗಳನ್ನು ವಿಂಗಡಿಸಿದ್ದಾನೆ. 'ಅನುಭವಣೆಗಂ ಆಗಮಕ್ಕಂ ಅಳವಡೆ ಪೇಟ್ವೆಂ' ಎಂದು ಶಾಸ್ತ್ರೀಯವಾಗಿ ಕಾಮಶಾಸ್ತ್ರವನ್ನು 'ಪೊಸಗನ್ನಡ'ದಲ್ಲಿ ವಿವರಿಸಿದ್ದಾನೆ.

**ದುರ್ಗಸಿಂಹ*2 :** ಒಳ್ಳೆಯ ಕಥೆಗಾರ. 'ವಡ್ಡಾರಾಧನೆ'ಯ ನಂತರ ಕಥಾ ಸಾಹಿತ್ಯಕ್ಕೆ ಭದ್ರಬುನಾದಿ ಹಾಕಿದ ಶ್ರೇಯಸ್ಸು ಈತನಿಗೆ ಸಲ್ಲುತ್ತದೆ. ವಸುಭಟ್ಟನೆಂಬ ಜೈನಕವಿಯ 'ಪಂಚತಂತ್ರ'ವನ್ನು ಅನುಸರಿಸಿ 'ಪೊಸತಾಗಿರೆ ವಿರಚಿಸುವಾ' ಎಂದು ದುರ್ಗಸಿಂಹ ಹೇಳಿಕೊಂಡಿದ್ದಾನೆ. ಈ ಕಥೆಗಳು ವಿಷ್ಣುಶರ್ಮನ ಕಥೆಗಳಿಂದ ಸ್ವಲ್ಪ ವಿಭಿನ್ನವಾಗಿವೆ. ದುರ್ಗಸಿಂಹನ ಪಂಚತಂತ್ರದಲ್ಲಿ 65 ಕಥೆಗಳಿವೆ. ಇಲ್ಲಿನ ಕಥೆಗಳ ಗುರಿ ಪ್ರಾಣಿಗಳ ಬದುಕಿನ ಮೂಲಕ ಮನುಷ್ಯನ ಬಾಹ್ಯ ವ್ಯವಹಾರಗಳನ್ನು, ರಾಜನೀತಿ, ಕುಟಿಲೋಪಾಯಗಳನ್ನು ನಿರೂಪಿಸುವುದೇ ಆಗಿವೆ.

**ಜಗದ್ದುರು ಸೋಮನಾಥ*3 :** 'ಕಲ್ಯಾಣಕಾರಕ' ಎಂಬ ವೈದ್ಯಗ್ರಂಥ ರಚಿಸಿದ್ದಾನೆ. ಜೈನಪಂಡಿತ ಪೂಜ್ಯಪಾದನ ಸಂಸ್ಕೃತ 'ಕಲ್ಯಾಣಕಾರಕ' ಈ ಗ್ರಂಥಕ್ಕೆ ಆಕರ. ಇದರಲ್ಲಿ 11 ಅಧ್ಯಾಯಗಳಿವೆ. ಜ್ವರೋತ್ಪತ್ತಿ, ಅತಿಸಾರ, ರಕ್ತಪಿತ್ತ, ಕ್ಷಯರೋಗ, ಉದರ ರೋಗ, ಮೂಲವ್ಯಾಧಿ ಮುಂತಾದ ರೋಗಗಳಿಗೆ ಚಿಕಿತ್ಸಾ ವಿಧಾನವನ್ನು ವಿವರಿಸಿದ್ದಾನೆ. 800 ವರ್ಷಗಳ ಹಿಂದೆಯೇ ಬಂದ ಈ ವೈದ್ಯ ಶಾಸ್ತ್ರದಲ್ಲಿ ಆಧುನಿಕ ವೈದ್ಯಶಾಸ್ತ್ರದ ಎಲ್ಲ ರೂಪರೇಖೆಗಳನ್ನು ಕಾಣುತ್ತೇವೆ. ಇದೊಂದು ಗಮನಾರ್ಹ ಕೃತಿ. ಉದಾಹರಣೆಗೆ ಒಂದು ಪದ್ಯ :—

ಜ್ವರದಾದಿಯೊಳುಪವಾಸಂ
ಜ್ವರಮಧ್ಯಮದಲ್ಲಿ ಗಂಜಿ ಪೇಟ್ವ ಕಷಾಯಂ ।
ಜ್ವರಪಾಕದೊಳಸ್ತ್ರಮಿತ
ಜ್ವರದೊಳ್ ಮಲಹರಣಮಿನಿತಿವಾರೋಗ್ಯಕರಂ ॥

---

*1 ಕಾಲ : ಸು. ಕ್ರಿ.ಶ. 1030.

*2 ಕಾಲ : ಸು. ಕ್ರಿ.ಶ. 1031. ಚಾಲುಕ್ಯ ಜಯಸಿಂಹನ ಸಂಧಿವಿಗ್ರಹಿ. ಎನ್. ಅನಂತರಂಗಾಚಾರ್‌ರವರು ಈ ಗ್ರಂಥವನ್ನು 'ಕರ್ಣಾಟಕ ಪಂಚತಂತ್ರ' ಎಂಬ ಹೆಸರಿನಲ್ಲಿ ಹೊರ ತಂದಿದ್ದಾರೆ.

*3 ಕಾಲ : ಸು. ಕ್ರಿ.ಶ. 1175. ಸುಮನೋಬಾಣ ಈತನ ಸಮಕಾಲೀನ ಕವಿ.

**ಕೀರ್ತಿವರ್ಮ**[1] : 'ಗೋವೈದ್ಯ'ವೆಂಬ ವಿಶಿಷ್ಟ ಕೃತಿ ರಚಿಸಿದ್ದಾನೆ. ಇದು ಕನ್ನಡ ಸಾಹಿತ್ಯದಲ್ಲಿನ ಪ್ರಥಮ ವೈದ್ಯಶಾಸ್ತ್ರ. ವ್ಯಾಧಿಗಳಿಗೆ ಔಷಧಕ್ರಮ, ಯಂತ್ರ ಕಟ್ಟುವ ವಿಧಾನ, ಬರೆ ಹಾಕುವ ಪದ್ಧತಿ ಮುಂತಾದವುಗಳನ್ನು ವಿವರಿಸಲಾಗಿದೆ.

**ಶ್ರೀಧರಾಚಾರ್ಯ**[2] : ಈತನ ಕೃತಿ 'ಜಾತಕ ತಿಲಕ'. ಜ್ಯೋತಿಷ್ಯ ಶಾಸ್ತ್ರ ಕುರಿತಿರುವ ಕನ್ನಡದ ಪ್ರಥಮ ಗ್ರಂಥ. ಕಾವ್ಯಶೈಲಿ-ಕಂದವೃತ್ತ. 'ಕತ್ತಲೆ ಮನೆಯ ವಸ್ತುವಂ ತೋರ್ಪ ಸೊಡರ ಬೆಳಗಿನ ತೆರದಿಂ' ಎಂದು ಜ್ಯೋತಿಷ್ಯ ಶಾಸ್ತ್ರದ ಹಿರಿಮೆಯನ್ನು, ಪ್ರಯೋಜನವನ್ನು ಕವಿ ಎತ್ತಿಹಿಡಿದಿದ್ದಾನೆ.

ಕ್ರಿ.ಶ. ಸು. 1120ರ ಸುಮಾರಿನಲ್ಲಿದ್ದ **'ರಾಜಾದಿತ್ಯ'** ಎಂಬುವವನು ರಚಿಸಿರುವ 'ಕ್ಷೇತ್ರಗಣಿತ'ವೇ ಕನ್ನಡ ಸಾಹಿತ್ಯದಲ್ಲಿನ ಪ್ರಥಮ ಗಣಿತಶಾಸ್ತ್ರವೆಂದು ಪರಿಗಣಿಸಲಾಗಿದೆ. ಈತನ ಇತರ ಕೃತಿಗಳು 'ವ್ಯವಹಾರ ಗಣಿತ' ಮತ್ತು 'ಲೀಲಾವತಿ'.

**ಆಂಡಯ್ಯ**[3] :—ಈತನ ಅಪೂರ್ವ ಕಾವ್ಯ 'ಕಬ್ಬಿಗರ ಕಾವ'. ಇದಕ್ಕೆ ಸೊಬಗಿನ ಸುಗ್ಗಿ, ಕಾವನ ಗೆಲ್ಲ, ಮದನ ವಿಜಯವೆಂಬ ಹೆಸರುಗಳೂ ಇವೆ.

> 'ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ
> ಪೇಟಲಾಱರಿನಿತುಂ ಸಲೆಮುನ್ನಿನ ಪೆಂಪನಾಳ್ದ ಕಬ್ಬಿಗರದು...'

ಸಂಸ್ಕೃತ ಬೆರೆಸದೆ ಅಚ್ಚಗನ್ನಡದಲ್ಲಿ ಕವಿಗಳೂ ಮೆಚ್ಚುವಂತಹ ಕಾವ್ಯ ರಚಿಸಲು ಸಾಧ್ಯ ಎಂಬುದನ್ನು ತನ್ನ ಕಾವ್ಯದಲ್ಲಿ ಮೂಡಿಸಿದ್ದಾನೆ. ಈ ಕಾವ್ಯದ ಕಥೆ ಜಿನಕಥೆಯಲ್ಲ. ಇನ್ನಾವುದೇ ಲೌಕಿಕ ಹಿನ್ನೆಲೆಯಲ್ಲಿ ರಚಿಸಿದ ಕಾವ್ಯವಲ್ಲ. ಇದು ಕಾಮನ ಕಥೆ. ಆದ್ದರಿಂದಲೇ ಈ ಕಾವ್ಯಕ್ಕೆ 'ಕಾವನ ಗೆಲ್ಲ' ಎಂದು ಹೆಸರು. ಕವಿ ಆಂಡಯ್ಯ ತನ್ನ ಈ ಕೃತಿಗೆ ಹಿಂದಿನ ಯಾವ ಗ್ರಂಥದಲ್ಲೂ ದೊರಕದ ಒಂದು ವಿಶಿಷ್ಟ ವಿಷಯವನ್ನು ವಸ್ತುವನ್ನಾಗಿ ಆರಿಸಿಕೊಂಡಿದ್ದಾನೆ. 'ಕಾಮ' ಇಲ್ಲಿ ಬಹಳ ನ್ಯಾಯಸಮ್ಮತವಾದ ರಾಜ. ಶಿವನು ಇವನ ಪರಿವಾರದ ಚಂದ್ರನನ್ನು ಅಪಹರಿಸಿಕೊಂಡು ಹೋದಾಗ ಕಾಮ ತನ್ನ ದೂತನಾದ ತಂಗಾಳಿಯನ್ನು ಶಿವನ ಬಳಿಗೆ ಸಂಧಾನಕ್ಕೆ ಕಳುಹಿಸುತ್ತಾನೆ. ಸಂಧಾನ ವಿಫಲವಾದಾಗ ಶಿವನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ಅರೆಹೆಣ್ಣು ಮಾಡುತ್ತಾನೆ. ಶಿವನ ಶಾಪದಿಂದಾಗಿ ಇವನು ಕೆಲಕಾಲ ತಲೆಮರೆಸಿಕೊಂಡು ಇರಬೇಕಾಗುತ್ತದೆ. ಪುರಾಣದ ಕಥೆಗಳಂತೆ ಇವನು ದಹಿಸಿಹೋಗುವುದಿಲ್ಲ. ಇಂತಹ ಧೀರ ಕಾಮ ಸವಣನೊಡನೆ ಸೆಣಸಿದಾಗ

---

1 ಕಾಲ : ಸು. ಕ್ರಿ.ಶ. 1070.

2 ಕಾಲ : ಸು. ಕ್ರಿ.ಶ. 1049. 'ಚಂದ್ರಪ್ರಭ ಚರಿತೆ' ಈತ ಬರೆದಿರುವ ಇನ್ನೊಂದು ಕೃತಿ. 8ನೇ ತೀರ್ಥಂಕರನ ಕಥೆ ಚಂಪೂವಿನಲ್ಲಿದೆ.

3 ಕಾಲ : ಸು. ಕ್ರಿ.ಶ. 1235.

ಸೋಲುತ್ತಾನೆ. ಶ್ರೀ ಬೇಂದ್ರೆಯವರು ಹೇಳುವಂತೆ 'ಕಾಮ-ರತಿ, ಶ್ರವಣ-ವಿರಕ್ತಿ, ಶಿವ-ಶಕ್ತಿ ಈ ತ್ರಿಕೂಟ ದ್ವಂದ್ವದ ಕಾವ್ಯವು ಕಬ್ಬಿಗರ ಕಾವದಲ್ಲಿ ನಿರೂಪಿತವಾಗಿದೆ. ಈ ಕಾವ್ಯದಲ್ಲಿ ಕಾಮನ ಗೆಲುವು ಕಾವ್ಯತತ್ವ, ಶಿವನ ಗೆಲುವು ಸೃಷ್ಟಿತತ್ವ, ಶ್ರವಣನ ವಿರಕ್ತಿ ಮುಕ್ತಿತತ್ವ ನಿರೂಪಿಸುತ್ತದೆ.'

ಕನ್ನಡ ಪರಾವಲಂಬಿಯಾಗಿ ಬದುಕಬೇಕಾಗಿಲ್ಲ. ತನ್ನದೇ ಆದ ವ್ಯಕ್ತಿತ್ವವಿದೆ. ಕನ್ನಡ ಕನ್ನಡತನ ಮೆರೆಸಿಯೇ ಶೋಭಿಸಬಲ್ಲದು ಎಂಬುದನ್ನು ತೋರಿಸಿ ಕೊಟ್ಟ ಅಚ್ಚ ಕನ್ನಡ ಕವಿ ಆಂಡಯ್ಯ. ಇವನ ಕನ್ನಡದ ಉತ್ಕಟ ಅಭಿಮಾನ 'ಆಂಡಯ್ಯ ಅಭಿಮಾನ'ವೆಂದು ಖ್ಯಾತವಾಗಿದೆ.

13ನೇ ಶತಮಾನದಲ್ಲಿ ತನ್ನ ವಿಶಿಷ್ಟ ಕೃತಿಯಿಂದ ಮೆರೆದ ಕವಿ **ಮಲ್ಲಿಕಾರ್ಜುನ.** 'ಸೂಕ್ತಿಸುಧಾರ್ಣವ' 18 ಆಶ್ವಾಸಗಳ ಕಾವ್ಯ. 15 ಆಶ್ವಾಸಗಳು ಮಾತ್ರ ಲಭ್ಯವಿದೆ. ಸಮುದ್ರ, ಪರ್ವತ, ಪುರ, ನಾಯಕಾಭ್ಯುದಯ, ವಿವಾಹ, ಕುಮಾರೋದಯ, ಚಂದ್ರೋದಯ, ಸೂರ್ಯೋದಯ, ಋತು, ವನಕ್ರೀಡೆ, ಜಲಕ್ರೀಡೆ, ಮದ್ಯಪಾನ, ಸುರತ ಕ್ರೀಡೆ, ವಿಪ್ರಲಂಭ, ಸೋಮೇಶ್ವರ ಸ್ತುತಿ, ವರ್ಣನಾರೂಪವಾದ ಪದ್ಯಗಳನ್ನು ಪೂರ್ವಕವಿಗಳ ಗ್ರಂಥಗಳಿಂದ ಉಲ್ಲೇಖಿಸಿ ಒಂದೊಂದು ಅಂಗವನ್ನು ಒಂದೊಂದು ಆಶ್ವಾಸದಲ್ಲಿ ವಿವರಿಸಿದ್ದಾನೆ. ಈ ಗ್ರಂಥಕ್ಕೆ 'ಕಾವ್ಯಸಾರ' ಎಂಬ ಹೆಸರೂ ಉಂಟು.

ಕ್ರಿ.ಶ. 1200ರ ಸುಮಾರಿನಲ್ಲಿದ್ದ **ದೇವೇಂದ್ರ ಮುನಿ** ಎಂಬವನು 'ಬಾಲಗ್ರಹ ಚಿಕಿತ್ಸೆ' ಗ್ರಂಥ ರಚಿಸಿದ್ದಾನೆ. ಇದೇ ಕಾಲದ ಇನ್ನೊಬ್ಬ ಕವಿ **'ರಟ್ಟಕವಿ'***[1] (ಅರ್ಹದಾಸ). 'ರಟ್ಟಮತ' ಎಂಬ ಒಂದು ಅಪೂರ್ವ ಗ್ರಂಥ ರಚಿಸಿದ್ದಾನೆ. ಇವರಲ್ಲಿ ಮಳೆಯ ಕುರುಹು ಮುಂತಾದ ವರ್ಷಾಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳನ್ನು ಬಹಳ ಚೆನ್ನಾಗಿ ವಿವರಿಸಿದ್ದಾನೆ. ಈ ಗ್ರಂಥದಲ್ಲಿ ವೃತ್ತ, ಕಂದ, ರಗಳೆ, ತ್ರಿಪದಿಗಳು ಸೇರಿ 'ಮಳೆ'ಯ ವೈವಿಧ್ಯತೆಯನ್ನು ಚೆನ್ನಾಗಿ ನಿರೂಪಿಸುತ್ತವೆ.

**1ನೇ ಮಂಗರಸ**[2]**:** ಈತನು 'ಖಗೇಂದ್ರ ಮಣಿದರ್ಪಣ' ಎಂಬ ವಿಷ ವೈದ್ಯ ಗ್ರಂಥವನ್ನು ಕಂದರೂಪದಲ್ಲಿ ಬರೆದಿದ್ದಾನೆ.

ಕ್ರಿ.ಶ. ಸು. 1530ರ ಸುಮಾರಿನಲ್ಲಿದ್ದ **ಶ್ರೀಧರದೇವನ** ಚಿಕಿತ್ಸಾವಿಧಾನ ನಿರೂಪಿಸಿರುವ 'ವೈದ್ಯಾಮೃತ' ಚಂಪೂಕಾವ್ಯ. **'ಬಾಚರಸ'ನ** 'ಅಶ್ವವೈದ್ಯ', **ಲಕ್ಷ್ಮಣಾಂಕನ** 'ಶಕುನಸಾರ', **ಚಾಕರಾಜನ** 'ಶಕುನ ಪ್ರಪಂಚ' (ಕಂದವೃತ್ತ).

---

1 ಈ ಕವಿಯ ಕಾಲ, ವಿಚಾರಗಳ ಬಗ್ಗೆ ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ ಮತ್ತು ಸೀತಾರಾಮ ಜಾಗೀರ್‌ದಾರ್ ಇತ್ತೀಚೆಗೆ ವಿಚಾರಪೂರ್ಣ ಲೇಖನಗಳನ್ನು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಹೆಚ್. ಶೇಷಯ್ಯಂಗಾರ್‌ರವರು 'ಜಟ್ಟಮತ-ಜಟ್ಟಕವಿ' ಎಂಬ ಕೃತಿ ಪ್ರಕಟಿಸಿದ್ದಾರೆ.

2 ಕಾಲ: ಸು. ಕ್ರಿ.ಶ. 1350.

**ಅಭಿನವ ಚಂದ್ರನ** 'ವಾಜಿಶಾಸ್ತ್ರ' (ಇದನ್ನು 'ಅಶ್ವ ಶಾಸ್ತ್ರ' ಎಂಬ ಹೆಸರಿನಲ್ಲಿ ಹೆಚ್. ಶೇಷಯ್ಯಂಗಾರ್ ಮತ್ತು ಡಾ|| ಶ್ರೀನಿವಾಸರಾವ್ ಸಂಪಾದಿಸಿ ಪ್ರಕಟಿಸಿದ್ದಾರೆ.) ಹೆಸರಿಸಬಹುದಾದ ಕೃತಿಗಳು.

**3ನೇ ಮಂಗರಸ**[1] : ಪಾಕಶಾಸ್ತ್ರ ಕುರಿತ 'ಸೂಪಶಾಸ್ತ್ರ'[2] ಈತನ ಒಂದು ಸುಂದರ ಕೃತಿ. ವಾರ್ಧಕ ಷಟ್ಪದಿಯಲ್ಲಿದೆ. ಪಿಷ್ಟಪಾಕ, ಪಾನಕ, ಕಳಮಾನ್ನ ಪಾಕ, ಶಾಕಪಾಕ ಮುಂತಾದ ಷಡ್ರಸವಿಪಾಕಭೇದವನ್ನು ವಿವರಿಸಿದ್ದಾನೆ. ಉತ್ತಮ ಶೈಲಿಗೆ ಉದಾಹರಣೆ 'ಘರಿವಿಳಂಗಾಯಿ' ತಯಾರಿಕೆಯ ವರ್ಣನೆ :

ಹುರಿದ ತೆಂಗಾಯಿ ನಸುಬೆಂದ ಬೇಳೆಯ ಹೆಸರು
ಹುರಿದು ಬೇಯಿಸಿದ ಸೊಜ್ಜಿಗೆಯಿವನು ಕೂಡಿ ಸ
ಕ್ಕರೆಯಿಕ್ಕಿ ಕರ್ಪೂರವನು ತಳಿದು ಪಿಂಡವಂ ಮಾಡಿಯೇ ಸಣ್ಣನಾಗಿ
...ನಾಲಿಗೆಯ ಕೊನೆಗೆ ಪೀಯೂಷವಾಯ್ತು.

**ನಂಜುಂಡ ಕವಿ**[3] : ಈತನ 'ರಾಮನಾಥ ಚರಿತೆ' ಒಂದು ವಿಶಿಷ್ಟ ಕೃತಿ. ಇದು ರಾಮಾಯಣ, ಭಾಗವತ, ಪುರಾಣ, ಭಾರತ ಕಥೆಯನ್ನು ಅವಲಂಬಿಸಿ ಬರೆದುದಲ್ಲ. ಅಥವಾ ಯಾವುದೇ ಶಾಸ್ತ್ರಗ್ರಂಥದ ಗುಂಪಿಗೂ ಸೇರಿದುದಲ್ಲ. ಚಾರಿತ್ರಿಕ ಘಟನೆಯನ್ನು ವಸ್ತುವಾಗುಳ್ಳ ವೀರಗಾಥಾ. ಈ ಗ್ರಂಥಕ್ಕೆ 'ಕುಮಾರ ರಾಮ ಸಾಂಗತ್ಯ'ವೆಂದೂ ಹೆಸರಿದೆ. ಕನ್ನಡದ ಅನುಪಮ ಕಲಿಯೆಂದೂ ಪರನಾರಿ ಸೋದರನೆಂದೂ ಕೀರ್ತಿಪನಾಗಿರುವ ಕುಮಾರರಾಮನ ಕಥೆ ಇದರಲ್ಲಿ ವರ್ಣಿತ ವಾಗಿದೆ. ಕಾವ್ಯದ 22 ಆಶ್ವಾಸಗಳಲ್ಲಿ ಹೊಯ್ಸಳಬಲ್ಲಾಳ, ಕಾಕತೀಯ ಮೊದಲಾದ ರಾಜರಿಗೂ ಕಂಪರಾಜನಿಗೂ ನಡೆದ ಯುದ್ಧಗಳ ವರ್ಣನೆ ಇದೆ. ದಿಲ್ಲಿಯ ಸುಲ್ತಾನನಿಗೂ ಕುಮಾರರಾಮನಿಗೂ ನಡೆದ ಯುದ್ಧದ ವರ್ಣನೆ ಅಮೋಘವಾಗಿದೆ.

"ಕುಮಾರರಾಮ ಯಾವಾಗ ಇದ್ದ ಸಾರ್ ?" ಪ್ರಶ್ನಿಸಿದ ಚಂದ್ರು.

ವಿಜಯನಗರ ಸ್ಥಾಪನೆಗೆ 10-15 ವರ್ಷಗಳ ಹಿಂದೆ. ಕುಮಾರರಾಮ ಆಗ ಬಹಳ ಜನಪ್ರಿಯನಾಗಿದ್ದ ರಾಜ. ಈತನನ್ನು ಕುರಿತು ಪಾಂಚಾಳ ಗಂಗ, ನಾಗ ಸಂಗಯ್ಯ, ಮಹಲಿಂಗಸ್ವಾಮಿ, ಕವಿ ಜಾಣಗಂಗಯ್ಯ ಮುಂತಾದವರುಗಳು ಕಾವ್ಯ ಗಳನ್ನು ರಚಿಸಿದ್ದಾರೆ. ಯಕ್ಷಗಾನಗಳೂ ಹಲವು ಹುಟ್ಟಿಕೊಂಡಿವೆ.

---

1 ಪುಟ 65 ನೋಡಿ.

2 ಎಸ್. ಎನ್. ಕೃಷ್ಣ ಜೋಯಿಸರು ಇದನ್ನು ಸಂಪಾದಿಸಿ ಮೈಸೂರು ವಿಶ್ವವಿದ್ಯಾ ನಿಲಯ ಅಧ್ಯಯನ ಸಂಸ್ಥೆಯ ಮೂಲಕ ಹೊರತಂದಿದ್ದಾರೆ.

3 ಕಾಲ: ಸು. ಕ್ರಿ.ಶ. 1525.

ಹದಿನಾರನೇ ಶತಮಾನದಲ್ಲಿದ್ದು ಈ ವಿಭಾಗದಲ್ಲಿ ಕೃತಿ ರಚಿಸಿರುವ ಕೆಲ ಮುಖ್ಯ ಗ್ರಂಥಕಾರರ ವಿವರ ಈರೀತಿ ಇದೆ, ಎಂದು ಹೇಳಿ ಕೈಪಿಡಿ ಕೈಗೆತ್ತಿಕೊಂಡು ಓದಲುತೊಡಗಿದರು ವ್ಯಾಸರಾಯರು.

**ಲಿಂಗಮಂತ್ರಿ**[1] : 'ಕಬ್ಬಿಗರ ಕೈಪಿಡಿ'ಯನ್ನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ. ಹಳಗನ್ನಡ ಪದಗಳಿಗೆ ಅರ್ಥ ಹೇಳಿದ್ದಾನೆ.

**ಗಂಗಾಧರ**[2] : ಈತನ ಕೃತಿ 'ರಟ್ಟನ ಜಾತಕ'. ಕಂದವೃತ್ತದಲ್ಲಿರುವ ಜ್ಯೋತಿಷ್ಯ ಗ್ರಂಥ.

**ಚೆನ್ನರಾಜ**[3] : ಈತನ ಕೃತಿ 'ವೈದ್ಯ ಸಾರಸಂಗ್ರಹ'. ಇದರಲ್ಲಿ ಹಲವು ವಿಧದ ಚಿಕಿತ್ಸೆಗಳು ಹೇಳಿವೆ.

**ಕವಿ ವಿಠಲ**[4] : ಈತನು ಅಮರಕೋಶಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಈತ ಇದ್ದ ಕಾಲ 17ನೇ ಶತಮಾನದ ಪೂರ್ವಾರ್ಧ.

**ಪದ್ಮಣ ಪಂಡಿತ**[5] : ಇದೇ ಶತಮಾನದಲ್ಲಿದ್ದ ಈ ಜೈನಕವಿ 'ಹಯಸಾರ ಸಮುಚ್ಚಯ'ವನ್ನು ಕಂದವೃತ್ತದಲ್ಲಿ ರಚಿಸಿದ್ದಾನೆ. ಕುದುರೆಗಳ ಬಗ್ಗೆ ಸಾಕಷ್ಟು ಮಾಹಿತಿ ನೀಡಿದ್ದಾನೆ.

**ಭಾಸ್ಕರ**[6] : ಈತನ ಪ್ರಸಿದ್ಧ ಕೃತಿ 'ಬೇಹಾರ ಗಣಿತ' ಕಂದವೃತ್ತದಲ್ಲಿದೆ. ಈತನಿಗೆ ಶಾರದೆಗುವರ, ಗಣಿತ ವಿಳಾಸ ಎಂಬ ಬಿರುದುಗಳಿದ್ದವು. ಗ್ರಂಥದ 8 ಅಧಿಕಾರಗಳಲ್ಲಿ ಚಕ್ರಬಡ್ಡಿಯ ಸೂತ್ರ, ಪದಪಿನ ಸೂತ್ರ, ಮಟ್ಟದ ಸೂತ್ರ, ಅಡುಗೂಲಿ ಸೂತ್ರ ಮುಂತಾದ ವಿಷಯಗಳಿವೆ. ಸೂತ್ರ, ಟೀಕೆ, ಉದಾಹರಣೆಗಳನ್ನೊಳಗೊಂಡಿದೆ. ಉದಾಹರಣೆ :

> ದ್ವಾದಶಜಿನ ಚೈತ್ಯಾಲಯಂಗಳ ಮುಂದೆ
> ದ್ವಾದಶ ತಾವರೆಗೊಳನು
> ವೇದಜ್ಞ ಮಟುಗೆ ದ್ವಿಗುಣಸಂಖ್ಯ ಪೂಜೆಗೆ
> ಯಾದುದ ಪೇಟು ಲೆಕ್ಕಿಗನೇ

(ಉತ್ತರ : ತಂದ ಪುಷ್ಪಗಳು 4095, ಅರ್ಚನೆಯ ಪುಷ್ಪಗಳು 4096)

**ಹೊನ್ನಮ್ಮ**[7] : ಈಕೆಯ ಪ್ರಸಿದ್ಧ ಕೃತಿ 'ಹದಿಬದೆಯ ಧರ್ಮ'. ಚಿಕ್ಕದೇವರಾಯನ (ಕ್ರಿ.ಶ. 1672–1704) ಸಂಚಿಯ ಊಳಿಗದಲ್ಲಿದ್ದಂತೆ ಹೇಳಿಕೊಂಡಿದ್ದಾಳೆ. ಕಾವ್ಯ ಸಾಂಗತ್ಯದಲ್ಲಿದೆ. ಪತಿವ್ರತಾಸ್ತ್ರೀಯ ಧರ್ಮವನ್ನು ಕಾವ್ಯದಲ್ಲಿ

---

1. ಕಾಲ : ಸು. ಕ್ರಿ.ಶ. 1530.
2. ಸು. ಕ್ರಿ.ಶ. 1550.
3. ಸು. ಕ್ರಿ.ಶ. 1570.
4. ಸು. ಕ್ರಿ.ಶ. 1600.
5. ಸು. ಕ್ರಿ.ಶ. 1627.
6. ಸು. ಕ್ರಿ.ಶ. 1650.
7. ಸು. ಕ್ರಿ.ಶ. 1680.

ನಿರೂಪಿಸಿದ್ದಾಳೆ. ಗ್ರಂಥಾವತಾರದಲ್ಲಿ ಪಶ್ಚಿಮರಂಗಧಾಮನ ಸ್ತುತಿ ಇದೆ. ಬಳಿಕ ರಂಗನಾಯಕಿಯನ್ನು ಸ್ತುತಿಸಿ ಮೈಸೂರು ರಾಜರ ಪರಂಪರೆಯನ್ನು ಸಂಕ್ಷಿಪ್ತವಾಗಿ ಹೇಳಿದ್ದಾಳೆ. "ಈ ಹೊನ್ನಿ ಸರಸಸಾಹಿತ್ಯದ ವರದೇವತೆ, ಕಾವ್ಯಾಲಂಕಾರ ನಾಟಕಗಳ ಪವಣೆಗೆಯ ಬಲ್ಲವಳ್" ಎಂದು ಕವಿ ಅಳಸಿಂಗರಾರ್ಯರು ಈಕೆಯನ್ನು ಹೊಗಳಿದ್ದಾರೆ. ಕಾವ್ಯದ ಸೊಬಗಿಗೆ ಒಂದು ಉದಾಹರಣೆ :

"ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಟುಗಳೆವರು
ಕಣ್ಣು ಕಾಣದ ಗಾವಿಲರು."

**ತಿಮ್ಮರಸ :** ಈತನ ಕಾಲ ಸು. ಕ್ರಿ.ಶ. 1700. ಕಂದವೃತ್ತದಲ್ಲಿ 'ಕ್ಷೇತ್ರ ಗಣಿತ' ಎಂಬ ಉದ್ಗ್ರಂಥ ರಚಿಸಿದ್ದಾನೆ.

ಸಮಚತುರಕ್ಕೆ ಓಜಾ ಸೂತ್ರದ ನಿರೂಪಣೆ ನೋಡಿ ಎಷ್ಟು ಚೆನ್ನಾಗಿದೆ :

ಮೂಡಣ ಪಡುವಣ ದೆಸೆಯಂ
ಕೂಡರ್ಧಿಸಿ ತೆಂಕ ಬಡಗಲಾಕ್ರಮದಿಂದಂ
ನೋಡಿಪ್ರತಿಯಿಟ್ಟು ಗುಣಿಸಲು
ರೂಢಿಯ ಸಮಭುಜಕೆ ಕಂಭ ತಪ್ಪದೆ ಬರ್ಕುಂ !

ಸುಮಾರು ಕ್ರಿ.ಶ. 1750ರಲ್ಲಿ ರಚಿತಗೊಂಡಿರುವ 'ಸಂಗೀತ ರತ್ನಾಕರ'. ಸಂಸ್ಕೃತದ ಶಾರಂಗದೇವನ 'ಸಂಗೀತ ರತ್ನಾಕರ' ಗ್ರಂಥವನ್ನು ಅನುಸರಿಸಿ ಬರೆದಿರುವ ಗ್ರಂಥ. ಇದರ ಲೇಖಕ ಯಾರೆಂದು ತಿಳಿದುಬಂದಿರುವುದಿಲ್ಲ. ಇದರಲ್ಲಿ ಕರ್ಣಾಟಕ ಸಂಗೀತದ 72 ರಾಗಗಳೂ ವಿವರಿಸಲ್ಪಟ್ಟಿವೆ.

**ರಂಗನಾಥ ಕವಿ**[1] : 'ಅಖಿಳ ವೇದಾಂತಾರ್ಥವನು ನಾ ಯುಕುತಿಯಲಿ ಸಂಗ್ರಹಿಸಿ ಪೇಳುವೆ ಸಕಲರಿಗೆ ತಿಳಿವಂತೆ ಸುಲಭೋಪಾಯದಿಂದೊಲಿದು' ಎಂದು ಸುಲಿದ ಬಾಳೆಯ ಹಣ್ಣಿನಂದದಿ ವೈರಾಗ್ಯ, ಜೀವನ್ಮುಕ್ತಿ, ನಿರ್ಗುಣಾರಾಧನೆ ಮುಂತಾದ ವಿಷಯಗಳನ್ನು 'ಅನುಭವಾಮೃತ' ದ್ವಾರಾ ಅದ್ವೈತ ಮತದ ಪ್ರಮುಖ ತತ್ವಗಳನ್ನು ತಿಳಿಯಾದ ಭಾಷೆಯಲ್ಲಿ ವಿವರಿಸಿದ್ದಾನೆ.

**ಚಿದಾನಂದಾವಧೂತ :** ಇದೇ ಶತಮಾನದಲ್ಲಿದ್ದ ಪ್ರಸಿದ್ಧ ಕವಿ. 'ಜ್ಞಾನ ಸಿಂಧು' ಅದ್ವೈತ ಸಿದ್ಧಾಂತದ ಮೇಲೆ ಬರೆದಿರುವ ಗ್ರಂಥ. 'ಸರ್ವಶಾಸ್ತ್ರಾರ್ಥವನು ಪೇಳುಹೆ ಸರ್ವಗೀತಗಳರ್ಥ ಸಾರವಸಿದಜಿಹೊಳುಸಿರಿರ್ಪೆಂ' ಎಂದು ಕವಿ ಹೇಳಿದ್ದಾನೆ.

---

1. ಕಾಲ : ಸು. ಕ್ರಿ.ಶ. 1675

20ನೇ ಶತಮಾನದಲ್ಲಿ ಹಸ್ತಸಾಮುದ್ರಿಕ, ಜ್ಯೋತಿಷ್ಯ ಶಾಸ್ತ್ರ ಕುರಿತು ಹೊರಬಂದಿರುವ ಕೃತಿಗಳು :— **ಆರ್. ಜಿ. ರಾವ್**ರವರ 'ಸಾಮುದ್ರಿಕ ಸುಧಾ' (ಸಚಿತ್ರ), **ಕಮಲದಾನಿ**ಯವರ 'ಕೈಗನ್ನಡಿ', **ರಮಾಕಾಂತ**ರವರ 'ಜ್ಯೋತಿರ್ಗನ್ನಡಿ', **ಎಚ್. ಎಸ್.. ಲಕ್ಷ್ಮೀನರಸಿಂಹಶಾಸ್ತ್ರಿ**ಗಳ 'ಚಮಕಾಧ್ಯಾಯ ಭಾಷ್ಯ' ಮತ್ತು 'ಪುರುಷಸೂಕ್ತ ಭಾಷ್ಯ', **ಎನ್. ಕೆ. ಜೋಗಳೇಕರ**ರ 'ಪಂಚಾಂಗ ಪ್ರದೀಪ', 'ಅಜ್ಞಾತ ಜಾತಕ ದರ್ಶನ', 'ಶಕುನ ಜ್ಯೋತಿಷ್ಯ', 'ಅಧಿಕಾರಿ ಜ್ಯೋತಿಷ್ಯ', 'ಗ್ರಹಗತಿ', 'ಆಕಸ್ಮಿಕ ಧನಯೋಗ', 'ಚುನಾವಣೆಯ ಜ್ಯೋತಿಷ್ಯ', 'ಶಕುನ', 'ಶಿಕ್ಷಣ', **ಕುರಡೂರ**ರವರ 'ಕಾಲನಿರ್ಣಯದ ಕೈಗನ್ನಡಿ', **ಬಿ. ಜಿ. ಆಚಾರ್ಯ**ರವರ 'ಗುಳಿಕ ಅಥವಾ ಮಾಂದಿ', 'ಜ್ಯೋತಿಷ್ಯ ಬೋಧಿನಿ', 'ಷಟ್‌ಪಂಚಾಶಿಕಾ', **ಪ್ರಸನ್ನಶ್ರೀನಿವಾಸದಾಚಾರ್ಯ**ರವರ 'ನವಗ್ರಹ ಸ್ತೋತ್ರಮಾಲೆ', **ಕೆರೆಗೋಡು ನಂಜುಂಡಾರಾಧ್ಯ**ರ 'ಸಂಕ್ಷಿಪ್ತ ಆರಾಧ್ಯ ನಿತ್ಯಕರ್ಮ', **ಪ॥ ಕೇಶವಶರ್ಮ ಗಲಗಲಿ**ಯವರ 'ದೈವದರ್ಶನ', 'ಪ್ರಶ್ನಜ್ಯೋತಿಷ್ಯ' ಮತ್ತು 'ಅಷ್ಟಕ ಮಾರ್ಗ ಪದ್ಧತಿ ಮುಂತಾದವುಗಳು.

ಇತ್ತೀಚೆಗೆ ಹೊರಬಂದಿರುವ ಕಾಮಶಾಸ್ತ್ರಕ್ಕೆ ಸಂಬಂಧಿಸಿರುವ ಕೃತಿಗಳು : **ಭಸ್ಮೆ**ಯವರ 'ವಾತ್ಸ್ಯಾಯನ ಕಾಮಸೂತ್ರ', **ವಿಹಾರಿ**ಯವರ 'ಕಾಮಕುಂಜ', 'ಕೋಕಶಾಸ್ತ್ರ', 'ರತಿ ರಹಸ್ಯ', 'ಕಾಮಶಾಸ್ತ್ರ', 'ಅನಂಗರಂಗ', **ಡಾ॥ ಶ್ರೀಮತಿ ಆಶಾ ಧಾರವಾಡಕರ**ರವರ 'ಸ್ತ್ರೀ', **ಡಾ॥ ಆನಂದ ಧಾರವಾಡಕರ**ರವರ 'ಪುರುಷ' ಮುಂತಾದವುಗಳು,

## ಕ್ರೈಸ್ತಮತೀಯ ಸಾಹಿತ್ಯ ರಚನಕಾರರು

ಕರ್ನಾಟಕಕ್ಕೆ ಪಾಶ್ಚಿಮಾತ್ಯರ ಸಂಪರ್ಕ ಬಂದುದು ಕ್ರಿ. ಶ. 16ನೇ ಶತಮಾನದ ಮಧ್ಯದಿಂದ ಎನ್ನಬಹುದು. **ಲಿಯೋ ನಾರ್ಡೋ ಚಿನ್ನಮಿ**[1] ಶ್ರೀರಂಗಪಟ್ಟಣದಲ್ಲಿ ಮಿಶನ್ ಕೇಂದ್ರ ಸ್ಥಾಪಿಸಿ ಪ್ರಚಾರ ಕಾರ್ಯ ಕೈಗೊಂಡನು. ಈತ ರಚಿಸಿದ ಕೃತಿಗಳು 'ಕ್ರೈಸ್ತ ಧರ್ಮದ ರಹಸ್ಯ ತತ್ವ ವಿವೇಚನೆ', ಮೈಸೂರ ಜನರ ಧರ್ಮ, ಜನಜೀವನ ವಿಚಾರಣೆ, 'ಕನ್ನಡ ವ್ಯಾಕರಣ ಹಾಗೂ ಕೋಶ' ಎಂದು ಹೇಳಲಾದರೂ ಒಂದೂ ಲಭ್ಯವಿಲ್ಲ.

**ವಿಲಿಯಂ ಕೇರಿ**[2] : ಪ್ರಪ್ರಥಮವಾಗಿ ಕಲಕತ್ತಾದಲ್ಲಿ ಮುದ್ರಣ ಯಂತ್ರ ಸ್ಥಾಪಿಸಿ 49 ಭಾಷೆಗಳಲ್ಲಿ ಬೈಬಲ್ ಅನುವಾದ ಪ್ರಕಟಿಸಿದ ಮಹಾಸಾಹಸಿ.

**ಜಾನ್ ಹ್ಯಾಂಡ್ಸ್** : ಬಳ್ಳಾರಿಯಲ್ಲಿ ಮಿಶನರಿ ಕೇಂದ್ರ ಸ್ಥಾಪಿಸಿ ಬೈಬಲ್ಲಿನ ಸಮಗ್ರ ಅನುವಾದವನ್ನು ಕೈಗೊಂಡನು (1820–1832)

1. ಕಾಲ : ಸು. (1609–1679). 2. ಕಾಲ : ಸು. (1761–1834).

**ವಿಲಿಯಂ ರೀವ್** : 'ಯೇಸುಕ್ರಿಸ್ತನ ಅವತಾರ' ಈತನ ಕೃತಿ. ಭಾಷಾ ಕೋವಿದನಾಗಿದ್ದುದರಿಂದ ಸರಕಾರದ ಆದೇಶದ ಮೇರೆಗೆ ಶಬ್ದಕೋಶ ರಚಿಸಿದ. ಮೂರು ಸಾವಿರ ಪುಟಗಳ ಈ ಶಬ್ದಕೋಶವೇ ಮುಂದಿನ ಎಲ್ಲ ಶಬ್ದಕೋಶಗಳಿಗೆ ಮಾದರಿಯಾಯಿತು.

**ಜಾನ್ ರೀಡ್**[1] : ಹ್ಯಾಂಡ್ಸ್, ರೀವ್ ಅನುವಾದಿತ ಕನ್ನಡ ಬೈಬಲ್ಲನ್ನು ಪರಿಷ್ಕರಿಸಿದನು.

**ಹರ್ಮನ್ ಮೊಗ್ಲಿಂಗ್**[2] : ಈತನ ಕೃತಿಗಳು 'ಜಾತಿ ವಿಚಾರಣೆ' 'ದೇವ ವಿಚಾರಣೆ', ಬೈಬಲ್ಲಿನ ಕೆಲ ಕತೆಗಳು ಮುಂತಾದವುಗಳು.

**ಬೆಂಜಮಿನ್ ಎಚ್. ರೈಸ್**[3] : 'ವೇದ ಸಂಗ್ರಹ'–ಬೈಬಲಿನ ಸಂಗ್ರಹಾನುವಾದ ಈತನ ಮಹತ್ವದ ಕೃತಿ. ಚರ್ಚ್ ಇತಿಹಾಸ, ಬೈಬಲ್ ಇತಿಹಾಸ ಮುಂತಾದ ಮತ್ತೀಯ ಪುಸ್ತಕ ರಚಿಸಿದ್ದಾನೆ.

**ಎಲ್. ಚಾರ್ಬೋನಾ**[4] : ದೈವ ಪರೀಕ್ಷೆ, ದಿವ್ಯ ಮಾತೃಕೆ, ಜಪದ ಪುಸ್ತಕ ಮತ್ತೀಯ ಗ್ರಂಥಗಳು.

## (ಇ) ಶಾಸನ ಸಾಹಿತ್ಯ ಕರ್ತೃಗಳು

'ಶಾಸನ ಎಂಬ ಪದ ಸಂಸ್ಕೃತದ 'ಶಾಸ್' ಧಾತುವಿನಿಂದ ಬಂದಿದೆ. ಇದರ ಅರ್ಥ ಆಜ್ಞೆ ಮಾಡು; ಘೋಷಣೆ ಮಾಡು; ನಿಯಂತ್ರಿಸು. ಈ ಪದಕ್ಕೆ 'ಕಾನೂನು' ಎಂಬ ಅರ್ಥವೂ ಪ್ರಚಲಿತದಲ್ಲಿದೆ. ಸಾಮಾನ್ಯವಾಗಿ ಶಾಸನಗಳು ಲೋಹದ ಹಾಳೆ, ಲೋಹದ ಸ್ತಂಭ, ಕಲ್ಲುಬಂಡೆ, ಕಲ್ಲು ಸ್ತಂಭ, ಮಣ್ಣಿನ ವಸ್ತುಗಳು, ದಂತ, ಚರ್ಮ, ಮುಂತಾದವುಗಳ ಮೇಲೆ ಲಿಖಿತಗೊಂಡಿರುತ್ತವೆ. ಈ ಶಾಸನಗಳು ಕ್ರಿಸ್ತಪೂರ್ವಕಾಲದಿಂದ ಇದ್ದರೂ ನಮ್ಮ ಭಾರತದಲ್ಲಿ ಇವುಗಳನ್ನು ಗುರುತಿಸಿದವನು ಜೇಮ್ಸ್ ಪ್ರೆನ್ಸೆಪ್ ಎಂಬ ವಿದ್ವಾಂಸ. ಕ್ರಿ.ಶ. 1834ರ

---

1. ಕಾಲ: ಸು. (1806–1841). ಈತ ಭೂಗೋಳ ಪತ್ಯಪುಸ್ತಕ ರಚಿಸಿದ್ದಾನು.

2. ಕಾಲ: ಸು. (1811–1881). ಗಾದೆಗಳ ಸಂಗ್ರಹ ಹಾಗೂ ಲಿಪಿ ಸುಧಾರಣೆಗಾಗಿ ಶ್ರಮಿಸಿದ್ದಾನೆ. ಜೈಮಿನಿ ಭಾರತ, ಬಸವ ಪುರಾಣ, ಗಾದೆಗಳು, ದಾಸರ ಪದಗಳು, ತೊರವೆ ರಾಮಾಯಣ, ಸಂಪಾದಿಸಿ ಪ್ರಥಮತಃ ಪ್ರಕಟಿಸಿದ್ದಾನೆ. 'ಮಂಗಳೂರ ಸಮಾಚಾರ' ಹಾಗೂ 'ಕನ್ನಡ ಸುವಾರ್ತಿಕ' ಪತ್ರಿಕೆ ನಡೆಸಿದ ಶ್ರೇಯಸ್ಸು ಈತನದು.

3. ಕರ್ನಾಟಕದಲ್ಲಿದ್ದ ಕಾಲ: ಸು. (1837–1887). 'ಅರುಣೋದಯ' ಕನ್ನಡ ಪತ್ರಿಕೆಯ ಸಂಪಾದಕ.

4. ಕರ್ನಾಟಕದಲ್ಲಿದ್ದ ಕಾಲ: ಸು. (1850–1873). ಕನ್ನಡ–ಲ್ಯಾಟಿನ್ ಲ್ಯಾಟಿನ್–ಕನ್ನಡ ಶಬ್ದಕೋಶ ಸಾವಿರ ಪುಟಗಳ ಕೃತಿ.

ಸುಮಾರಿಸಲ್ಲಿ. ಕರ್ನಾಟಕದಲ್ಲಿ ಈ ಬಗ್ಗೆ ಪ್ರಥಮ ಕೆಲಸ ಮಾಡಿದ ಶ್ರೇಯಸ್ಸು **ಲೂಯಿ ರೈಸ್**[1]ರವರಿಗೆ ಸೇರುತ್ತದೆ. 1886ರಲ್ಲಿ 'ಎಪಿಗ್ರಾಫಿಕಾ ಕರ್ನಾಟಕ' ಪ್ರಕಟಿಸಿದರು. 1906ರ ವರೆಗೆ ಸುಮಾರು 9010 ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದರು. ಈ ಶಾಸನ ವಿಭಾಗದಲ್ಲಿ ದುಡಿದಿರುವ ಇತರ ಮುಖ್ಯ ವ್ಯಕ್ತಿಗಳೆಂದರೆ ಎಂ. ಎಚ್. ಕೃಷ್ಣ, ಆರ್. ನರಸಿಂಹಾಚಾರ್, ಡಾ॥ ಎಸ್. ಶ್ರೀಕಂಠ ಶಾಸ್ತ್ರಿ, ಕೀಲ್ ಹಾರ್ನ್, ಜೆ. ಎಫ್. ಫ್ಲೀಟ್[2], ಲಕ್ಷ್ಮೀನಾರಾಯಣರಾವ್, ಕೃಷ್ಣಶಾಸ್ತ್ರಿ, ಸರ್ಕಾರ್, ಪಿ. ಬಿ. ದೇಸಾಯಿ, ಪಂಚಮುಖಿ, ಜಿ. ಎಸ್. ಗಾಯಿ, ಕೆ. ಬಿ. ಪಾಠಕ್, ಕೆ. ಜಿ. ಕುಂದಣಗಾರ, ಎಸ್. ಸಿ. ನಂಧೀಮಠ, ಎ. ಎಂ. ಅಣ್ಣಿಗೇರಿ, ಮೇವುಂಡಿಮಲ್ಲಾರಿ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಎಂ. ಎಸ್. ನಾಗರಾಜರಾವ್, ಡಾ॥ ಕೆ. ವಿ. ರಮೇಶ್, ಜಾ. ರಾ. ಗೋಪಾಲ್ ಮುಂತಾದವರುಗಳು.

ಕ್ರಿ.ಶ. ಸು. 450ರಲ್ಲಿ ರಚಿತವಾಗಿರುವ ಹಲ್ಮಿಡಿ ಶಾಸನ, ದೊರೆತಿರುವ ಶಾಸನಗಳಲ್ಲೆಲ್ಲಾ ಪುರಾತನವಾದುದು. ಕದಂಬರಾಜ ಕಾಕುತ್ಸ್ಥವರ್ಮನ ಕಾಲದ ದಾನಶಾಸನ. ಈ ಶಾಸನದ ಕವಿಯ ಹೆಸರು ಉಲ್ಲೇಖವಿಲ್ಲ.

**ರವಿಕೀರ್ತಿ** : ಐಹೊಳೆ ಶಾಸನದ ಕರ್ತೃ. ಕಾಲ ಸು. ಕ್ರಿ.ಶ. 634. ಈತನ ಶಾಸನ ಐಹೊಳೆ ಗ್ರಾಮದ ಮೇಗುತಿ ದೇವಾಲಯದ ಗೋಡೆಯ ಮೇಲಿದೆ. ಈ ಶಾಸನದಿಂದಲೇ ನಮಗೆ ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿದ ವಿಷಯ ತಿಳಿದುಬಂದಿರುವುದು. ಈ ಐತಿಹಾಸಿಕ ದಾಖಲೆ ಬಹು ಮಹತ್ವದ್ದು. ಈ ಶಾಸನದಲ್ಲಿ ಚಾಲುಕ್ಯರಾಜರ ವಂಶಾವಳಿಯು ವರ್ಣಿತವಾಗಿದೆ.

**ಬಾಹುಬಲಿ**[3] : ಅತ್ತಿಮಬ್ಬೆಯ ಲಕ್ಕುಂಡಿ ಶಾಸನದ ಕರ್ತೃ. ಜೈನಕವಿ. 'ಸಿರಿಪಾಳ ಸೆಟ್ಟಿಯಾತ್ಮಜನುದ್ಯಚ್ಚರಿತಂ ಬಾಹುಬಲಿ ಸವಿಸ್ತರದಿಂದಂ ಬರೆದನ್' ಎಂಬ ಕಾವ್ಯದ ಮಾತಿನಿಂದ ಶಾಸನ ಕವಿ ಸಿರಿಪಾಲನ ಮಗ ಬಾಹುಬಲಿ ಎಂದು ಗೊತ್ತಾಗುತ್ತದೆ. ಈ ಶಾಸನದ ಎರಡು ಪ್ರತಿಗಳು ಲಕ್ಕುಂಡಿ ಜೈನ ಬಸದಿಯಲ್ಲಿ ಕಾಣಸಿಗುತ್ತದೆ. ಶಾಸನ 53 ತ್ರುಟಿತವಾಗಿದೆ. ಇದರ ಕರ್ತೃ 'ರನ್ನ'ನಿರಬಹುದೆಂದು ಊಹಿಸಲಾಗಿದೆ. ಈ ಶಾಸನಕ್ಕೆ ಕೆಲ ಭಾಗಗಳನ್ನು ಸೇರಿಸಿ ಬಾಹುಬಲಿ ಶಾಸನ 52ನ್ನು ಬರೆದಿದ್ದಾನೆಂದು ಊಹಿಸಲಾಗಿದೆ.

---

1. ಈ ವಿಭಾಗಕ್ಕೆ ಇವರ ಕೊಡುಗೆಗಳು ಅಪಾರ. ಶಾಸನಗಳ ಸಂಗ್ರಹ, ಸಂಸ್ಕೃತ ಹಳೆಗನ್ನಡ ಪರಿಷ್ಕರಣೆ ಮತ್ತು ಕವಿರಾಜಮಾರ್ಗ, ಭಾಷಾಭೂಷಣ, ಶಬ್ದಾನುಶಾಸನ, ಪಂಪ ರಾಮಾಯಣ, ಅಮರಕೋಶ ಮುಂತಾದವುಗಳ ಪ್ರಕಟಣೆ. ಈತನ ಕಾಲ (1837–1927).

2. ಕಾಲ: ಸುಮಾರು (1841–1911). ಇವರು ಸಂಶೋಧಿಸಿದ ಲೇಖನಗಳು ಇಂಡಿಯನ್ ಆಂಟಿಕ್ವೆರಿ ಮತ್ತು ಎಪಿಗ್ರಾಫಿಕ್ ಇಂಡಿಯಾದಲ್ಲಿ ಪ್ರಕಟಗೊಂಡಿವೆ.

3. ಕಾಲ : ಸುಮಾರು ಕ್ರಿ.ಶ. 1007

**ಬೊಪ್ಪಣ ಪಂಡಿತ**[1] : ಈತನಿಗೆ 'ಸುಜನೋತ್ತಂಸ' ಎಂಬ ಬಿರುದಿತ್ತು. ಈತ ಜೈನಕವಿ. ಈತನು 'ಗೊಮ್ಮಟ ಜಿನಸ್ತುತಿ' ಎಂಬ ಶಾಸನವನ್ನು ರಚಿಸಿದ್ದಾನೆ. ಇದನ್ನು ಶ್ರವಣಬೆಳಗೊಳದ ಗೊಮ್ಮಟ ಸ್ವಾಮಿಯ ದ್ವಾರಪಾಲಕರಿರುವ ಬಾಗಿಲ ಎಡಭಾಗದಲ್ಲಿರುವ ದೊಡ್ಡ ಶಿಲಾಫಲಕದಮೇಲೆ ಕೆತ್ತಲಾಗಿದೆ. ಇದರಲ್ಲಿ 72 ಸಾಲುಗಳಿವೆ, ಶಾಸನಭಾಷೆ ಹಳಗನ್ನಡ. ಪ್ರಾಚೀನ ಭಾವಗೀತೆಯಂತಿದೆ. ಇದೇ ಕಾಲದಲ್ಲಿದ್ದ ಇತರ ಶಾಸನ ಕವಿಗಳು ದೇವಪ್ರಿಯ, ಶ್ರೀ ವಿರೂಪಾಕ್ಷ ಪಂಡಿತ, ಕಲ್ಲಯ್ಯ ಮುಂತಾದವರುಗಳು.

**ಮಧುರ**[2] : ಈತ ವಿಜಯನಗರದ ಸಂಗಮದೇವರಾಯನ ಕಾಲದಲ್ಲಿದ್ದ ಪ್ರಸಿದ್ಧ ಜೈನ ಕವಿ. ಲಕ್ಷ್ಮೀಧರ ದೇವರಾಯನ ಮಂತ್ರಿ. ಲಕ್ಷ್ಮೀಧರನ ಗುಣ ವರ್ಣನೆ, ಪ್ರಶಂಸೆಯೇ ಹಂಪಿಯ ಶಾಸನದ ವಸ್ತು. ಶಾಸನ ಚಂಪೂಶೈಲಿಯಲ್ಲಿದೆ.

**ಚಾನ್ಧವನು**[3] : ದೇಕಬ್ಬೆಯ ಶಾಸನದ ಕರ್ತೃ. ಈ ಶಾಸನವನ್ನು ಶಿಲಾಸ್ತಂಭದ ಮೇಲೆ ಕೆತ್ತಲಾಗಿದೆ. (ಮಾಸ್ತಿಕಲ್ಲು) 36 ಸಾಲುಗಳಿವೆ. ದೇಕಬ್ಬೆಯ ವಿವಾಹ, ಗಂಡ 'ಬಿಚ'ನ ಮರಣ ಮತ್ತು ದೇಕಬ್ಬೆ ಸತ್ತುಹೋದ ವಿವರ ಬರುತ್ತದೆ. ಭಾಷೆ ಪ್ರೌಢ ಹಳಗನ್ನಡ.

ಕನ್ನಡ ಸಾಹಿತ್ಯಕ್ಕೆ ಹೊಯ್ಸಳಯುಗದ ಮತ್ತೊಂದು ಶ್ರೀಮಂತವಾದ ಬಳುವಳಿ ಆ ಕಾಲದ ಶಾಸನಗಳು. ಸಾಹಿತ್ಯದ ಪ್ರತಿಭೆಯನ್ನು ಈ ಶಾಸನಗಳಲ್ಲಿ ಕಾಣಬಹುದು. ಜನ್ನ ಕೂಡ ಒಬ್ಬ ಶಾಸನ ಕವಿ. ಈತನ ಶಾಸನಗಳ ಒಂದು ಸಂಕಲನವೇ ಪ್ರಕಟಗೊಂಡಿದೆ.

**ಶಾಂತಿನಾಥನು** ಶಿಕಾರಿಪುರದ ಶಾಸನವನ್ನು. **ಜಿನವಲ್ಲಭ** (ಪಂಪನ ತಮ್ಮ) ಕುರ್ಕಾಲ ಶಾಸನವನ್ನು, ಮೂರನೇ ಗೋವಿಂದನ ಕಾಲದ ತಾಮ್ರಪಟಗಳನ್ನು ಆತನ ಸಂಧಿ ವಿಗ್ರಹಾಧಿಪತಿಯಾಗಿದ್ದ ಶ್ರೀಧರನೂ, ರವಿನಾಗಭಟ್ಟನು ದಂಡಾಪುರ ಶಾಸನವನ್ನೂ ರಚಿಸಿದ್ದಾರೆ.

ಬಹಳಷ್ಟು ಶಾಸನಗಳನ್ನು ರಚಿಸಿದವರು ಉತ್ತಮ ಕವಿಗಳೇ ಆಗಿದ್ದರು ಎಂಬುದರಲ್ಲಿ ಸಂದೇಹವಿಲ್ಲ. ಈ ಶಾಸನಗಳಲ್ಲಿ ಒಳ್ಳೆಯ ಪ್ರಬುದ್ಧ ಸಾಹಿತ್ಯ ಕಾವ್ಯಧಾರೆ ಹರಿಯುವುದಲ್ಲದೆ ಲಕ್ಷಣಗ್ರಂಥಗಳ ನಿಯಮಗಳಿಗೆ ಅನುರೂಪವಾಗಿರುವುದೂ ಕಂಡುಬರುತ್ತದೆ. ಈ ಸಾಹಿತ್ಯ ಸೌಂದರ್ಯಕ್ಕೆ ಮನಸೋತೇ ರಾ॥ ನರಸಿಂಹಾಚಾರ್ಯರು 'ಶಾಸನ ಪದ್ಯಮಂಜರಿ' ರಚಿಸಿದ್ದಾರೆ.

---

1. ಕಾಲ ಸು. ಕ್ರಿ.ಶ. 1180. 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ' ಈತನ ಇನ್ನೊಂದು ಕೃತಿ.
2. ಕಾಲ ಸು. ಕ್ರಿ.ಶ. 1410. ಈತನ ಇತರ ಕೃತಿ 'ಧರ್ಮನಾಥ ಪುರಾಣ'.
3. ಕಾಲ ಸು. ಕ್ರಿ.ಶ. 1057. (ಈ ಶಾಸನದ ಕರ್ತೃವಿನ ಹೆಸರನ್ನು 'ಕವಿಮಲ್ಲ' ನೆಂದು ಕೆಲವರು ಭಾವಿಸಿದ್ದಾರೆ.)

ಕ್ರಿ.ಶ. ಏಳನೆಯ ಶತಮಾನದ 'ಕಪ್ಪೆ ಅರಭಟ್ಟ' ಶಾಸನದಲ್ಲಿನ ಒಂದು ಪ್ರಸಿದ್ಧ ತ್ರಿಪದಿ ಈ ರೀತಿಯಿದೆ:

'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್
ಮಾಧವನೀತನ್ ಪೆರನಲ್ಲ'

ಜಾತಿಮತ ಐಕ್ಯತೆ ಐತಿಹ್ಯವನ್ನು ನಿರೂಪಿಸುವ ಇನ್ನೊಂದು ಮಹತ್ವಪೂರ್ಣ ಶಾಸನ ಶ್ಲೋಕ: (ಇದು ವಿಜಯನಗರ ಕಾಲದ್ದು)

'ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾ ॥'

ಎಷ್ಟು ವಿದ್ವತ್‌ಪೂರ್ಣವಾಗಿದೆ ಅಲ್ಲವೇ ?

ಹೀಗೆ ಶಾಸನಸಾಹಿತ್ಯದಲ್ಲಿ ಸತ್ವವಿದೆ. ಕಾವ್ಯಪ್ರೌಢಿಮೆ ಇದೆ. ವಿನಯ ಗಾಂಭೀರ್ಯದಿಂದ ತುಂಬಿತುಳುಕುತ್ತಾ ಇವು ಸಾಹಿತ್ಯಪ್ರಪಂಚಕ್ಕೆ ಒಂದು ಉತ್ತಮ ಕೊಡುಗೆಯಾಗಿವೆ.

**ಎಂ. ಬಿ. ನೇಗಿಲಹಾಳ** ಎಂಬುವವರು ಪ್ರಾಚೀನ ಶಾಸನಗಳ ಭಾಷೆಯಮೇಲೆ ಅಧ್ಯಯನ ನಡೆಸಿ 'ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ' ಎಂಬ ಗ್ರಂಥ ರಚಿಸಿದ್ದಾರೆ.

## (ಅ) ಹಳೆಯ ತಲೆಮಾರಿನ ಸಾಹಿತ್ಯ ದಿಗ್ಗಜರುಗಳು

"ಇನ್ನು ಈಗ ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ಬೆಳವಣಿಗೆಯನ್ನು ಪರಿಶೀಲಿಸೋಣ. ಈ ದಿಸೆಯಲ್ಲಿ ಯೋಚಿಸಹೊರಟಾಗ ನಮಗೆ ನೆನಪು ಬರುವ ಮೊದಲ ವ್ಯಕ್ತಿ ಅಭಿನವ ಕಾಳಿದಾಸನೆಂದು ಖ್ಯಾತನಾಗಿದ್ದ ಬಸವಪ್ಪಶಾಸ್ತ್ರಿ.* ಅನಂತರ ಬಿ. ವೆಂಕಟಾಚಾರ್, ಕೆರೂರು ವಾಸುದೇವಾಚಾರ್ಯ, ಎಚ್. ವಿ. ನಂಜುಂಡಯ್ಯ, ಹೊಸಕೋಟೆ ಕೃಷ್ಣಶಾಸ್ತ್ರಿ, ಕರ್ಪೂರ ಶ್ರೀನಿವಾಸರಾವ್, ಬೆಳ್ಳಾವೆ ವೆಂಕಟನಾರಣಪ್ಪ, ಮುದವೀಡು ಕೃಷ್ಣರಾಯರು, ಪಂಜೆ ಮಂಗೇಶರಾಯರು, ಬೆನಗಲ್ ರಾಮರಾಯರು, ಆಲೂರ ವೆಂಕಟರಾಯರು ಮುಂತಾದವರುಗಳು. ಇವರುಗಳೆಲ್ಲಾ 19ನೇ ಶತಮಾನದಲ್ಲಿ ಜನಿಸಿ ಹೊಸಗನ್ನಡ ಕಟ್ಟುವ ಕಾರ್ಯ ಮಾಡಿ ಮಡಿದಿರುವವರು. ಈಗ ಈ ಮಹನೀಯರುಗಳ ವಿಷಯವನ್ನು ಸ್ವಲ್ಪ ಅರಿಯೋಣ."

ಒಬ್ಬ ಹುಡುಗ ಬಂದು ಪುಸ್ತಕ ಹಿಡಿದು ಒಳ ಓಡಿಬಂದ. ದಿನೇಶ ಬಾಗಿಲ ತನಕ ಓಡಿಹೋಗಿ ಬಹಳ ಉತ್ಸಾಹದಿಂದ ಆ ಪುಸ್ತಕವನ್ನು ಇಸಿದುಕೊಂಡು ಅಲ್ಲೇ ಬಾಗಿಲಬಳಿಯ ಮೂಲೆ ಹಿಡಿದು ಪುಸ್ತಕ ಓದುತ್ತಾ ಕುಳಿತುಕೊಂಡ.

"ಅದ್ಯಾವ್ದೊ ಪುಸ್ತಕ ದಿನೇಶ......ಅಷ್ಟೊಂದು ಆಸಕ್ತಿಯಿಂದ ಓದ್ತಾ ಕೂತ್ಕೊಂಡೆ ?" ವ್ಯಾಸರಾಯರು ಪ್ರಶ್ನಿಸಿದರು.

"ದೇವಿ ಚೌಧುರಾಣಿ" ಪುಸ್ತಕದಿಂದ ಮುಖ ಎತ್ತದೆ ನುಡಿದ ದಿನೇಶ.

"ನಿಂಗೆ ಬಾಳ ಇಷ್ಟಾನ...ವೆಂಕಟಾಚಾರ್ಯರ ಪುಸ್ತಕ ಅಂದ್ರೆ ?"

"ಹೂಂ...ನಮ್ಮ ಕ್ಲಾಸ್ನಲ್ಲಿ ಇವರ ಪುಸ್ತಕಕ್ಕೆ ಎಂದೂ ಹೊಡೆದಾಟ ಇರುತ್ತೆ. ಕದ್ದು ಕದ್ದು ಕ್ಲಾಸ್ನಲ್ಲೆಲ್ಲಾ ಓದ್ತಾನೆ ಇರ್ತಾರೆ ಹುಡುಗ್ರು."

"ಅವ್ರು ಇನ್ಯಾವ್ಯಾವ ಪುಸ್ತಕ ಬರ್ದಿದ್ದಾರೆ ಗೊತ್ತಾ ?

"'ಆನಂದ ಮಠ' ಓದಿದ್ದೀನಿ" ನುಡಿದ ದಿನೇಶ.

"ನಂಗಂತೂ 'ದುರ್ಗೇಶ ನಂದಿನಿ', 'ನವಾಬ ನಂದಿನಿ' ಬಾಳ ಹಿಡಿಸ್ತು" ನುಡಿದ ದಿನಕರ.

"'ವಿಷವೃಕ್ಷ' ಅವರ್ದೆ ಅಲ್ವೆ?" ಪದ್ಮಮ್ಮ ಪ್ರಶ್ನಿಸಿದರು.

---

* ಪುಟ 41 ನೋಡಿ.

"ಹೌದು. ಇದೂ ಅವರ್ದೆ. ಇವೆಲ್ಲಾ ಬಂಕಿಮಚಂದ್ರ ಅನ್ನೋ ಹೆಸರಾಂತ ಬಂಗಾಳಿ ಕಾದಂಬರಿಕಾರನ ಪುಸ್ತಕದ ಅನುವಾದಗಳು. ಇವಲ್ದೆ ಬಂಗಾಳದ ಇನ್ನೊಬ್ಬ ಹೆಸರಾಂತ ಲೇಖಕ, ಸಮಾಜ ಸುಧಾರಕ, ಈಶ್ವರಚಂದ್ರ ವಿದ್ಯಾಸಾಗರರ 'ಭ್ರಾಂತಿ ವಿಲಾಸ', 'ಸೀತಾ ವನವಾಸ', 'ಶಾಕುಂತಲಾ' ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಬಂಗಾಳದ ಶ್ರೇಷ್ಠ ಕೃತಿಗಳ ಪರಿಚಯ ಕನ್ನಡಕ್ಕೆ ಮಾಡಿಸಲೆಂದೇ ಸಂಸ್ಕೃತ ವಿದ್ವಾಂಸರಾಗಿದ್ದ **ಬೆಂಡಿಗನವಲೆ ವೆಂಕಟಾಚಾರ್ಯ***ರು ಬಂಗಾಳಿಯನ್ನು ಕಲಿತರು. ಪ್ರತಿಭೆ ಸಂಪಾದಿಸಿದರು. ತಮ್ಮ ಭಾಷಾಕೌಶಲ, ಉತ್ತಮ ವರ್ಣನೆ, ನೇರ ನಿರೂಪಣೆ ಮುಂತಾದವುಗಳಿಂದ ಇವರು ಇತರ ಲೇಖಕರಿಗೆ ಸ್ಫೂರ್ತಿದಾಯಕರಾದರು.

"ಇವರು ಯಾವ್ದೊ ಒಂದು ಪೇಪರು ಬೇರೆ ನಡಿಸ್ತಾ ಇದ್ರು ಅಂತ ಕಾಣ್ಸುತ್ತೆ. ವಿನೋದ ತೋಷಿಣಿ ಅಂತ ಹೆಸ್ರು. ನಮ್ಮನೆ ಅಟ್ಟದ ಮೇಲೆ ಹಲವು ಬಿದ್ದಿವೆ. ನಮ್ಮಪ್ಪ ತರಿಸ್ತಾ ಇದ್ದ ಅಂತ ಕಾಣ್ಸುತ್ತೆ" ವಾಸುದೇವರಾಯರು ನುಡಿದರು.

"ಹೌದು ಅವರು 'ಅವಕಾಶ ತೋಷಿಣಿ' ಅಂತಾ ಒಂದು ಮಾಸಪತ್ರಿಕೆ ನಡಿಸ್ತಾ ಇದ್ರು. ಇವ್ರಲ್ಲಿ ಬಾಳ ಕಥೆ, ಲಘು ಲೇಖನ ಬರ್ದಿದ್ದಾರೆ." ಒಂದು ನಿಮಿಷ ಸುಮ್ಮನೆ ಕುಳಿತ ವ್ಯಾಸರಾಯರು ಮತ್ತೆ ಮಾತನ್ನು ಮುಂದುವರಿಸಿದರು–

"ಇದೇ ಕಾಲದಲ್ಲಿದ್ದ **ಸೋಸಲೆ ಅಯ್ಯಶಾಸ್ತ್ರಿ**[2] ಬಸವಪ್ಪಶಾಸ್ತ್ರಿ ಅಳಿಯ ಲಿಂಗರಾಜ, ಮುದ್ದಣರ ಸಮಕಾಲೀನ. ಕರ್ಣಾಟಕ ಶಬ್ದಾನುಶಾಸನಂ, ಕರ್ಣಾಟಕ ಕಾದಂಬರಿ, ಕರ್ಣಾಟಕ ವಚನಭಾರತ, ಕರ್ಣಾಟಕ ಭಗವದ್ಗೀತೆ ಸಂಪಾದಿಸಿರುವ ಕೃತಿಗಳು. ಶೇಷರಾಮಾಯಣ, ಮೈಸೂರು ಮಹಾರಾಜ ಚರಿತಂ, ದಮಯಂತಿ ಚರಿತ್ರೆ ಇವರು ರಚಿಸಿರುವ ಇತರ ಕೃತಿಗಳು.

**ಕೆರೂರು ವಾಸುದೇವಾಚಾರ್ಯ**[3]ರು ಇನ್ನೊಬ್ಬ ಹೆಸರಿಸಬೇಕಾದ ವ್ಯಕ್ತಿ, ಸುಸಂಸ್ಕೃತ ವೈದಿಕ ಮನೆತನದಲ್ಲಿ ಜನ್ಮತಾಳಿದ ಇವರು ಕಾದಂಬರಿ, ನಾಟಕ, ಪ್ರಬಂಧ, ಕವಿತೆ, ಕಥೆಗಳಿಂದ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ. ನಳದಮಯಂತಿ (ನಾಟಕ), ಇಂದಿರಾ (ಕಾದಂಬರಿ), ಸುರತ ನಗರದ ಶ್ರೇಷ್ಠಿ,

---

1 ಜೀವಿತ ಕಾಲ ಕ್ರಿ.ಶ. 1845–1914. ಹುಟ್ಟಿದ ಊರು ಕೊಳ್ಳೆಗಾಲ. ತಂದೆ ಗರುಡಾಚಾರ್ಯ. ವಿದ್ಯಾಭ್ಯಾಸ ಕೊಳ್ಳೆಗಾಲ ಹಾಗೂ ತುಮಕೂರು. ಗುಮಾಸ್ತೆಯಾಗಿ ಜೀವನ ಆರಂಭಿಸಿ ಮುನ್ಸೀಫರಾಗಿ ನಿವೃತ್ತರಾದರು.

2 ಜೀವಿತಕಾಲ ಕ್ರಿ.ಶ. 1854–1934. ಪುಟ 30 ನೋಡಿ.

3 ಜೀವಿತಕಾಲ ಕ್ರಿ.ಶ. 1866–1921. ಹುಟ್ಟಿದ ಸ್ಥಳ ಬಾಗಲಕೋಟೆ. ತಂದೆ ಶ್ರೀನಿವಾಸಾಚಾರ್ಯ.

ವಸಂತ ಯಾಮಿನಿ ಸ್ವಪ್ನ ಚಮತ್ಕಾರ (ಷೇಕ್ಸ್‌ಪಿಯರ್‌ನ ಅನುವಾದಗಳು), 'ಸತಿ ವಶೀಕರಣ' ಗೋಲ್ಡ್‌ಸ್ಮಿತನ ನಾಟಕದ ಅನುವಾದ, 'ರುಕ್ಮಿಣಿ ಹರಣ' ಸ್ವತಂತ್ರ ನಾಟಕ, 'ಯದು ಮಹಾರಾಜ', 'ಔರಂಗಜೇಬ' ಐತಿಹಾಸಿಕ ನಾಟಕಗಳು, 'ಸಚಿತ್ರ ಭಾರತ' ಹಾಗೂ 'ಶುಭೋದಯ' ಎಂಬೆರಡು ಪತ್ರಿಕೆಗಳನ್ನು ಸಹ ಇವರು ನಡೆಸಿದ್ದರು.

**ಎಚ್. ವಿ. ನಂಜುಂಡಯ್ಯ***ನವರು ಕನ್ನಡ ಸಾಹಿತ್ಯ ಪರಿಷತ್ತಿನ ಮೊದಲ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಥಮ ಅಧ್ಯಕ್ಷರಾಗಿದ್ದ ಗೌರವ ಇವರಿಗೆ ಸಲ್ಲುತ್ತದೆ (1916, ಬೆಂಗಳೂರು). ಮೈಸೂರು ವಿಶ್ವವಿದ್ಯಾನಿಲಯ 1916ರಲ್ಲಿ ಆರಂಭವಾದಾಗಿನಿಂದ ಅದರ ಉಪಕುಲಪತಿಯಾಗಿ ಕಾರ್ಯನಿರ್ವಹಿಸಿದ ಕೀರ್ತಿಗೂ ಇವರೇ ಪಾತ್ರರು. ಇವರ ಅಮೋಘ ಸೇವೆಯನ್ನು ಮೆಚ್ಚಿದ ಅಂದಿನ ಬ್ರಿಟಿಷ್ ಸರಕಾರ ಇವರಿಗೆ ಸಿ.ಡಿ.ಇ. (ಕಂಪಾನಿಯನ್ ಆಫ್ ದಿ ಇಂಡಿಯನ್ ಎಂಪೈರ್) ಬಿರುದಿತ್ತು ಸನ್ಮಾನಿಸಿತ್ತು. ಇವರು ರಚಿಸಿದ ಕೃತಿಗಳು ಕೆಲವೇ ಆದರೂ ಅವುಗಳ ಬೆಲೆ ಅಮೂಲ್ಯ. 'ಲೇಖ್ಯ ಬೋಧಿನಿ' ಪತ್ರಲೇಖನದ ಸಂಪ್ರದಾಯವನ್ನು ತಿಳಿಸುವ ಗ್ರಂಥ. 'ವ್ಯವಹಾರ ದೀಪಿಕೆ' ಕಾನೂನು ರಚನೆ, ಸರಕಾರದ ಆಡಳಿತ ವಿಧಾನ, ಕೋರ್ಟ್ ವ್ಯವಹಾರ ತಿಳಿಸುವ ಪುಸ್ತಕ. 'ಅರ್ಥಶಾಸ್ತ್ರ' ದೇಶಸಂಪತ್ತಿನ ಉತ್ಪತ್ತಿ, ಆಯವ್ಯಯ ವ್ಯವಹಾರವನ್ನು ತಿಳಿಸುವ ಉದ್ಗ್ರಂಥ.

ಬಹುಮುಖ ಪ್ರತಿಭೆಯ ಶ್ರೀ ನಂಜುಂಡಯ್ಯನವರು ಬಹುಭಾಷಾಪಂಡಿತರೂ ಆಗಿದ್ದರು. ತೆಲುಗು, ಕನ್ನಡ, ಇಂಗ್ಲೀಷು, ಸಂಸ್ಕೃತಗಳಲ್ಲದೆ ಫ್ರೆಂಚ್ ಭಾಷೆಯಲ್ಲೂ ಪಾಂಡಿತ್ಯ ಗಳಿಸಿದ್ದರು. ಬಡತನದ ಮನೆತನದಲ್ಲಿ ಜನಿಸಿ ಭಿಕ್ಷಾನ್ನ ಮಾಡಿ ಬೀದಿ ದೀಪದಲ್ಲಿ ಓದಿ ಬಿ.ಎ. ಎಂ.ಎ. ಮಾಡಿ ಗುಮಾಸ್ತೆ, ಸಬ್‌ರಿಜಿಸ್ಟ್ರಾರ್, ಮುನ್ಸೀಫ ರಾಗಿ ದುಡಿದು ಉನ್ನತ ಹುದ್ದೆಗಳ ಮಹಡಿ ಹತ್ತಲು ಪ್ರಾರಂಭಿಸಿದರು. ಸರಕಾರದ ನ್ಯಾಯಾಧೀಶ, ದಿವಾನರ ಮಂತ್ರಾಲೋಚನೆ ಮಂಡಲಿಯ ಸದಸ್ಯ, ಕೊನೆಗೆ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಯಾಗಿ ಕನ್ನಡ ನಾಡು-ನುಡಿಗೆ ಅಪಾರ ಸೇವೆ ಸಲ್ಲಿಸಿದ ಮಹಾನ್ ವ್ಯಕ್ತಿ. ಉಪಕುಲಪತಿಯಾಗಿದ್ದಾಗಲೇ ಮೈಸೂರಿನಲ್ಲಿ ನಿಧನರಾದಾಗ ಕನ್ನಡ ನಾಡು ಕಣ್ಣೀರಿಟ್ಟಿತು.

'ರಾಜಸಭಾಭೂಷ'ರು ಕರ್ಪೂರ ಶ್ರೀನಿವಾಸರಾವ್, 'ಕನ್ನಡ ಕುಲ ಪುರೋಹಿತ' ಆಲೂರು ವೆಂಕಟರಾಯರು. ಈ ಮಹಾಪಂಡಿತರಿಬ್ಬರೂ ಕವಿಗಳ ಶ್ರೇಣಿಗೆ ಸೇರದೆ ಹೋದರೂ ಮಹಾಸಾಹಿತಿಗಳಾಗಿ, ವಿಮರ್ಶಕರಾಗಿ ಸಂಶೋಧಕರಾಗಿ ಕನ್ನಡದ ಉದ್ಧಾರಕ್ಕಾಗಿ ಅವಿರತ ದುಡಿದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು

---

* ಜೀವಿತ ಕಾಲ ಕ್ರಿ.ಶ. 1860–1920.

ಇವರ ಪ್ರಮುದ ಕೊಡುಗೆ. ಬ್ರಿಟಿಷರ ಆಳ್ವಿಕೆಯಲ್ಲಿ ಹೋರಾಡಿ ಕನ್ನಡಕ್ಕೆ ಒಂದು ಸ್ಥಾನವನ್ನು ದೊರಕಿಸಿಕೊಟ್ಟವರಲ್ಲಿ ಈ ಸಾಹಸಿ ಸಾಹಿತಿಗಳು ಮುಖ್ಯರು.

**ಕರ್ಪೂರ ಶ್ರೀನಿವಾಸರಾಯರು*** : ಇವರ ಮನೆತನದವರು ಯಾರೋ ತಿರುಪತಿ ದೇವಸ್ಥಾನಕ್ಕೆ ಹೋಗುವಾಗ ದಾರಿಯುದ್ದಕ್ಕೂ ಬೆಟ್ಟದ ಮೇಲೆ ಕರ್ಪೂರದ ಉಂಡೆ ಉರಿಸಿದ್ದರಂತೆ. ಆದರಿಂದಾಗಿ ಅವರ ವಂಶಕ್ಕೆ ಈ ಹೆಸರು ಅಂಟಿಕೊಂಡಿತಂತೆ. ಬಡತನದಲ್ಲಿ ಬಾಲ್ಯ ಕಳೆದು ಕಷ್ಟದಿಂದ ವಿದ್ಯಾಭ್ಯಾಸ ಮುಂದುವರಿಸಿ ಪುಣೆಯಲ್ಲಿ ಪರಿಚಯುವಾದ ವಕೀಲರೊಬ್ಬರ ಸಹಾಯದಿಂದ ಬಿ.ಎಸ್.ಸಿ. ಮತ್ತು ಎಲ್.ಸಿ.ಇ. ಮುಗಿಸಿ ಮುಂಬಯಿಯ ಮರಾಮತ್ ಇಲಾಖೆಯಲ್ಲಿ ದುಡಿದರು. ಮೈಸೂರು ಅರಸರ ಆಶ್ರಯ ದೊರೆತು ಪ್ರಧಾನ ಇಂಜಿನಿಯರ್ ಆಗಿ ಮೈಸೂರಿನಲ್ಲಿ ನೇಮಕ ಗೊಂಡು ಮೈಸೂರು ಹಾಗೂ ಕನ್ನಡಕ್ಕಾಗಿ ದುಡಿದು 'ರಾಜಸಭಾಭೂಷಣ', ಬಿರುದು ಗಳಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ನಕ್ಷೆಯನ್ನು ತಯಾರಿಸುದು ದಲ್ಲದೆ ಅದರ ನಿರ್ಮಾಣ ಕಾರ್ಯದಲ್ಲಿ ದುಡಿದರು. 13 ವರ್ಷ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ತನು, ಮನ, ಧನ ಪೂರ್ವಕವಾಗಿ ಸೇವೆ ಸಲ್ಲಿಸಿದರು. 'ಸಾಹಿತ್ಯ ಶಾಸ್ತ್ರ' ಇವರು ರಚಿಸಿರುವ ಗ್ರಂಥ. 'ಸುಬೋಧ ಕುಸುಮಾಂಜಲಿ ಮಾಲಿಕೆ' ಪ್ರಾರಂಭಕ್ಕೆ ಕಾರಣಕರ್ತರು. ವೈದಿಕ ಮನೆತನದಲ್ಲಿ ಹುಟ್ಟಿ ಧಾರ್ಮಿಕ ಪ್ರಜ್ಞೆಯನ್ನು ಬೆಳೆಸಿ ಕೊಂಡಿದ್ದ ಇವರು ಗಾಂಧೀಜಿಯ ಪ್ರಭಾವಕ್ಕೆ ಬೇಗ ಒಳಗಾದರು. ಖಾದಿ ಭಕ್ತ ರಾದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯ ಪಾತ್ರವಹಿಸದೆ ಇದ್ದರೂ ಪರೋಕ್ಷ ವಾಗಿ ಬೆಂಬಲ ಕೊಟ್ಟರು. ಕನ್ನಡ ಜನತೆ 1919ರಲ್ಲಿ ಅವರನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಹಾಸನದಲ್ಲಿ ಗೌರವಿಸಿತ್ತು.

'ವಾಗ್ಭೂಷಣ' ಕ್ರಾಂತಿಕಾರಿ ಪತ್ರಿಕೆಯ ಸಂಪಾದಕರಾಗಿ ಕನ್ನಡ ಜನತೆಯಲ್ಲಿ ನವಚೈತನ್ಯ ಹುರುಪನ್ನು ಹುಟ್ಟಿಸಿ, ಕೆಚ್ಚನ್ನು ಕೆರಳಿಸಿದ 'ಕನ್ನಡ ಕುಲಪುರೋಹಿತ **ಆಲೂರು ವೆಂಕಟರಾಯರು**[2] ವಿದ್ಯಾಭ್ಯಾಸ ಮಾಡಿದ್ದು ಬಿಜಾಪುರ, ಪೂನಾ ಹಾಗೂ ಮುಂಬಯಿಯಲ್ಲಿ. ವಕೀಲ ವೃತ್ತಿ ಹಿಡಿದದ್ದು ಧಾರವಾಡದಲ್ಲಿ. ವಿದ್ಯಾರ್ಥಿ ದೆಸೆಯಲ್ಲಿ ತಿಲಕರ ಪ್ರಭಾವಕ್ಕೊಳಗಾಗಿದ್ದ ಆಲೂರರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹುಬೇಗ ಧುಮುಕಿದರು. ಹಾಗೇ ಕನ್ನಡದ ಅಭಿಮಾನವನ್ನು ಹತ್ತಿಕ್ಕಲಾರದೆ ಸಂಶೋಧನಾ ದೃಷ್ಟಿ ಇರಿಸಿಕೊಂಡು ದೇಶಾದ್ಯಂತ ಸಂಚರಿಸಿದರು. ಅಗಾಧ ವಿಷಯ ಸಂಗ್ರಹಣೆ ಮಾಡಿದರು. ವಿವಿಧ ಪ್ರಾಂತಗಳ ಕನ್ನಡ ಜನತೆಯ ಮನಸ್ಸನ್ನು ಅರಿತರು. ಕನ್ನಡ ದೇಶ. ಜನ ಹಾಗೂ ಕನ್ನಡ ಭಾಷೆಯ ಮೇಲ್ಮೆಗಾಗಿ ಸ್ಥಾಪಿತ

---

* ಜೀವಿತ ಕಾಲ ಕ್ರಿ.ಶ. 1863–1932. ತಂದೆ ಕರ್ಪೂರ ಸುಬ್ಬರಾಯರು.

* ಜನನ 1880ರ ಜುಲೈ. ತಂದೆ ಮಾಮಲೆ ಭೀಮರಾಯರು. ತಾಯಿ ಭಾಗೀರಥಿ ಬಾಯಿ. ಮರಣ ಫೆಬ್ರವರಿ 25, 1964.

ವಾಗಿದ್ದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಚಟುವಟಿಕೆಗಳನ್ನು ಚುರುಕುಗೊಳಿಸಿದರು. ಭಾಷಣ ಮಾಡಿ, ಲೇಖನ ಬರೆದು ಕನ್ನಡಾಭಿಮಾನ ಜಾಗೃತಗೊಳಿಸಿದರು. ಬೆಂಗಳೂರಿನಲ್ಲಿ 'ಕರ್ನಾಟಕ ಸಮ್ಮೇಳನ' ಕೂಡಿಸಿ ಕನ್ನಡ ಸಾಹಿತ್ಯ ಪರಿಷತ್ತಿನ ಅಸ್ತಿತ್ವಕ್ಕೆ ಕಾರಣರಾದರು. ಕನ್ನಡ ಸಂಸ್ಕೃತಿ, ನಾಡಿನ ಚರಿತ್ರೆಯ ಪೂರ್ಣ ಪರಿಚಯ ಮಾಡಿಕೊಡುವ ಸಲುವಾಗಿ 'ಪ್ರಾಚೀನ ಕರ್ನಾಟಕ' ಪತ್ರಿಕೆ ಪ್ರಾರಂಭಿಸಿದರು. 'ಕರ್ನಾಟಕ ಗತವೈಭವ' ಅವರ ಅಮೂಲ್ಯ ಗ್ರಂಥ. ಐತಿಹಾಸಿಕ, ಸಾಂಸ್ಕೃತಿಕ ರಾಜಕೀಯದಲ್ಲಿ ಆಸಕ್ತಿ ಇದ್ದಂತೆ ಆಧ್ಯಾತ್ಮಿಕ ವಿಚಾರದಲ್ಲಿ ಬಹಳ ಶ್ರದ್ಧೆ ಇದ್ದ ಆಲೂರರು ತಿಲಕರ ಅಪೇಕ್ಷೆಯಂತೆ ಅವರ 'ಗೀತಾ ರಹಸ್ಯ'ವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. 'ಜಯಕರ್ನಾಟಕ' ಪತ್ರಿಕೆಯ ಸ್ಥಾಪನೆ ಮತ್ತು ಪ್ರಕಟಣೆ ಆಲೂರರ ಮತ್ತೊಂದು ಸಾಧನೆ. 1930ರಲ್ಲಿ ಮೈಸೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಪ್ರಚಂಡ ಭಾಷಣ ಮಾಡಿ ಕನ್ನಡ ಜನತೆಯಲ್ಲಿ ನವ ಜಾಗೃತಿ ಉಂಟು ಮಾಡಿದ್ದರು.

**ಎಂ. ಎಸ್. ಪುಟ್ಟಣ್ಣಯ್ಯ**[1]: ಕನ್ನಡದಲ್ಲಿ ಪ್ರಥಮ ಸ್ವತಂತ್ರ ಕಾದಂಬರಿ ಬರೆದ ಶ್ರೇಯಸ್ಸು ಇವರದು. ಇದಕ್ಕೆ ಹಿಂದೆ ಗುಲವಾಡಿ ವೆಂಕಟರಾಯರ 'ಇಂದಿರಾ' ಬೋಳರ ಬಾಬುರಾಯರ 'ವಾಗ್ದೇವಿ' ಪ್ರಕಟವಾಗಿದ್ದವು. ಅವು ಕಾದಂಬರಿಯ ಎಲ್ಲಾ ಗುಣಗಳನ್ನು ಹೊಂದಿರಲಿಲ್ಲ. 'ಮಾಡಿದ್ದುಣ್ಣೋ ಮಹರಾಯ' ಕಾದಂಬರಿಯಲ್ಲಿನ ಪುಟ್ಟಣ್ಣನವರ ಭಾಷೆ, ಬಳಸಿರುವ ತಂತ್ರ, ಕಥಾನಿರೂಪಣೆ ಆಗಿನ ಕಾಲಕ್ಕೆ ಆಧುನಿಕವಾಗಿತ್ತು. ಈಗಲೂ ಈ ಕಥೆ ಓದಲು ಬೇಸರ ತರುವುದಿಲ್ಲ. ಇವರು ಬರೆದಿರುವ ಇನ್ನೊಂದು ಸಾಮಾಜಿಕ ಕಾದಂಬರಿ 'ಮುಸುಕು ತೆಗೆಯೇ ಮಾಯಾಂಗನೆ' ಜೀವನಚರಿತ್ರೆ ಬರೆಯುವುದರಲ್ಲಿ ಮೊದಲ ಹೆಜ್ಜೆ ಇರಿಸಿದ ಶ್ರೇಯಸ್ಸು ಇವರದು. 'ಕುಣಿಗಲು ರಾಮಾಶಾಸ್ತ್ರಿ' 'ಕನ್‌ಫ್ಯೂಷಿಯಸ್', 'ಸಾಲಾರ್‌ಜಂಗ್', 'ಮಹಮೂದ್ ಗವಾನ' ಮುಖ್ಯವಾದವುಗಳು. ಇವರು ಷೇಕ್ಸ್‌ಪಿಯರ್‌ನ 'ಸಿಂಬೆ ಲೈನ್' ಹಾಗೂ 'ಕಿಂಗ್ ಲಿಯರ್' ನಾಟಕಗಳನ್ನು 'ಜಯಸಿಂಹರಾಜ ಚರಿತ್ರೆ' ಮತ್ತು 'ಹೇಮಚಂದ್ರ ರಾಜವಿಲಾಸ' ಹೆಸರಿನಲ್ಲಿ ಕನ್ನಡಿಸಿದ್ದಾರೆ. ಅಮಲ್ದಾರರಾಗಿದ್ದುದರಿಂದ ಕೆಲಸದ ಪ್ರಯುಕ್ತ ಇವರು ಊರೂರು ಸುತ್ತುತ್ತಿದ್ದುದು ಹೆಚ್ಚು. ಸಂಶೋಧನ ಪ್ರವೃತ್ತಿ ಐತಿಹಾಸಿಕ ಸ್ಥಳ, ವಸ್ತುಗಳನ್ನು ಕಂಡಾಗ ಜಾಗೃತಗೊಂಡಿತು. ಸಾಕಷ್ಟು ಮಾಹಿತಿ ಸಂಗ್ರಹಿಸಿ ಚಿತ್ರದುರ್ಗ, ಹಾಗಲವಾಡಿ, ಕೆಳದಿಯ ಅರಸರು ಮುಂತಾದ ವಿಷಯಗಳನ್ನು ಕುರಿತು ಗ್ರಂಥಗಳನ್ನು ರಚಿಸಿದ್ದಾರೆ.

---

1 ಜೀವಿತ ಕಾಲ 1854–1930. ಇವರ ಪೂರ್ಣ ಹೆಸರು–ಮೈಸೂರು ಸೂರ್ಯ ನಾರಾಯಣಶಾಸ್ತ್ರಿ ಪುಟ್ಟಣ್ಣ.

ಬಿ.ಎ. ನಂತರ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿ ಅನಂತರ ಕೋರ್ಟಿನಲ್ಲಿ ಭಾಷಾಂತರಕಾರರಾಗಿ ದುಡಿದು ಅಮಲ್ದಾರರಾಗಿ ನಿವೃತ್ತಿಗೊಂಡಿದ್ದರು. ಇವರು ಬರೆದ 'ನೀತಿ ಚಿಂತಾಮಣಿ' (3 ಭಾಗಗಳು) ಅತ್ಯಂತ ಜನಪ್ರಿಯಗೊಂಡಿರುವ ಕೃತಿ.

**ಆರ್. ನರಸಿಂಹಾಚಾರ್ಯ**[1]: ಸಂಶೋಧನಾ ಕ್ಷೇತ್ರದಲ್ಲಿ ಹೆಸರಿಸಬೇಕಾದ ಪ್ರಥಮವ್ಯಕ್ತಿ 'ಕರ್ಣಾಟಕ ಕವಿ ಚರಿತ್ರೆ'ಯ ಕರ್ತೃ. ಮುಂದಕ್ಕೂ ಹೆಜ್ಜೆ ಶಾಸನಗಳನ್ನು ಸಂಗ್ರಹಿಸಿ 'ಶಾಸನ ಪದ್ಯ ಮಂಜರಿ' ಎಂಬ ಉದ್ಗ್ರಂಥ ರಚಿಸಿದ್ದಾರೆ. ಕೇಂದ್ರಸರ್ಕಾರ 1934ರಲ್ಲಿ ಇವರಿಗೆ 'ಮಹಾ ಮಹೋಪಾಧ್ಯಾಯ' ಪ್ರಶಸ್ತಿ ನೀಡಿ ಗೌರವಿಸಿತ್ತು. 1918ರ ಧಾರವಾಡ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ದು ಕನ್ನಡ ಜನತೆ ಇವರನ್ನು ಸನ್ಮಾನಿಸಿತ್ತು.

**ಸಿ. ಹಯವದನರಾವ್**[2] ಪ್ರಸಿದ್ಧ ವಿದ್ವಾಂಸರು. ಬಹುಭಾಷಾ ಪಂಡಿತರು. ಫ್ರೆಂಚ್, ಜರ್ಮನ್, ಸಂಸ್ಕೃತ, ತೆಲುಗು, ಮರಾಠಿ, ತಮಿಳು–ಭಾಷೆಗಳಲ್ಲಿ ಪ್ರೌಢಿಮೆ ಸಂಪಾದಿಸಿದ್ದರು. 'ಮೈಸೂರು ಗಜೆಟಿಯರ್'ನ 7 ಸಂಪುಟಗಳು 'ಹಿಸ್ಟರಿ ಆಫ್ ಮೈಸೂರು' 3 ಸಂಪುಟ ಇವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿದ್ದವು. ಕೆಲಕಾಲ ಮದರಾಸಿನ ವಸ್ತುಸಂಗ್ರಹಾಲಯದ ಕ್ಯೂರೇಟರ್, ಮದರಾಸಿನ 'ಟೈಮ್ಸ್'ನ ಸಂಪಾದಕ, ಹಾಗೂ ಅಲಹಾಬಾದಿನ 'ದಿ ಲೀಡರ್' ಪತ್ರಿಕೆಯ ಸಂಪಾದಕರಾಗಿದ್ದ ಶ್ರೀಯುತರನ್ನು ಅಂದಿನ ಮೈಸೂರಿನ ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಮೈಸೂರಿಗೆ ಕರೆಸಿ 'ಮೈಸೂರ್ ಎಕನಾಮಿಕ್ ಜರ್ನಲ್'ನ ಸಂಪಾದಕತ್ವ ವಹಿಸಿಕೊಟ್ಟರು. 1924ರಲ್ಲಿ 'ಮೈಸೂರಿನ ಗೆಜೆಟಿಯರ್' ನವೀಕರಿಸಲು ಸಂಪಾದಕರಾಗಿ ನೇಮಕಗೊಂಡರು. ಈ ಕಾರ್ಯವನ್ನು ಇವರು ಸಮರ್ಥ ರೀತಿಯಲ್ಲಿ ನೆರವೇರಿಸಿದ್ದಾರೆ. ಬ್ರಿಟಿಷ್ ಸರಕಾರ 'ರಾವ್ ಸಾಹೇಬ್', 'ರಾವ್ ಬಹದ್ದೂರ್' ಪ್ರಶಸ್ತಿ ನೀಡಿ ಗೌರವಿಸಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು 'ರಾಜ ಚರಿತವಿಶಾರದ' ಎಂಬ ಬಿರುದು ನೀಡಿ ಸನ್ಮಾನಿಸಿದ್ದರು.

**ಗಳಗನಾಥ**[3]: "ಇನ್ನೊಬ್ಬ ಪ್ರಸಿದ್ಧ ಕಾದಂಬರಿಕಾರರು ವೆಂಕಣ್ಣ ಮಾಸ್ತರರು." ಮಾತು ನಿಲ್ಲಿಸಿ ಮೇಸ್ಟರು ಸುತ್ತಲೂ ಒಮ್ಮೆ ದೃಷ್ಟಿಹರಿಸಿದರು.

"ಇದೇನು ಮೇಸ್ಟ್ರೆ ? ಯಾರೊ ಹೊಸಬ್ರು ಕಾದಂಬರಿಕಾರರ್ನ ತರ್ತಾ ಇದ್ದೀರಿ ? ಹಾಗಾದ್ರೆ ಬೆಳಕರಿಸ್ಬೇರಿ ಇವತ್ತು. ರಾಯರು ನಗುತ್ತ ನುಡಿದರು.

---

1 ಜೀವಿತ ಕಾಲ 1860–1936. ತಂದೆ : ತಿರುನಾರಾಯಣ ಪೆರುಮಾಳ್. ಹುಟ್ಟಿದ ಸ್ಥಳ: ಕೊಪ್ಪಲ್. ಪೂರ್ಣ ಹೆಸರು : ರಾಮಾನುಜಪುರಂ ನರಸಿಂಹಾಚಾರ್ಯರು. ಕೃತಿಗಳು : ನೀತಿಮಂಜರಿ, ನಗೆಗಡಲು ; ಪರಿಷ್ಕರಿಸಿದ ಕೃತಿಗಳು : ಪಂಚಭಾರತ, ಶಬ್ದಾನುಶಾಸನ.

2 ಜೀವಿತ ಕಾಲ 1865–1940.

3 ಜೀವಿತ ಕಾಲ 1868–1942.

ವ್ಯಾಸರಾಯರು ಉತ್ತರವಾಗಿ ಮುಗುಳ್ನಕ್ಕರು. "ವೆಂಕಣ್ಣ ಕಾದಂಬರಿ ಬರೆಯ್ಯೋದಕ್ಕೆ ಪ್ರಾರಂಭಿಸಿದೊಡ್ನೆ **ಗಳಗನಾಥ**ರಾದರು. ಗಳಗನಾಥ ಎಂಬುದು ನಿಜವಾಗಿ ಒಂದು ಊರಿನ ಹೆಸರು. ಇದು ಧಾರವಾಡ ಜಿಲ್ಲೆಯ ಹಾವೇರಿ ತಾಲೋಕಿನಲ್ಲಿದೆ. ವೆಂಕಣ್ಣನವರ ಪೂರ್ಣ ಹೆಸರು ವೆಂಕಟೇಶ ತಿರಕೊ (ತ್ರಿವಿಕ್ರಮ) ಕುಲಕರ್ಣಿ. ವಿದ್ಯಾಭ್ಯಾಸ ಹಾವನೂರು, ಗಳಗನಾಥ, ಹಾವೇರಿ, ಧಾರವಾಡಗಳಲ್ಲಿ. ಶಿಕ್ಷಕ ಟ್ರೈನಿಂಗ್ ಕಾಲೇಜಿನಲ್ಲಿ ಉತ್ತೀರ್ಣರಾಗಿ ಶಿಕ್ಷಕ ಹುದ್ದೆ ವಹಿಸಿಕೊಂಡರು. ಚೆನ್ನಾಗಿ ನಿರ್ವಹಿಸಿದರು. ಮರಾಠಿ ಪತ್ರಿಕೆಗಳಾದ 'ಕೇಸರಿ' ಮತ್ತು 'ಕರಮಣೂಕ' ಇವರ ಮೇಲೆ ಬಹಳ ಪ್ರಭಾವ ಬೀರಿ ಕಾದಂಬರಿಕಾರರಾಗಲು ಪ್ರೇರೇಪಿಸಿದುವು. 'ಪ್ರಬುದ್ಧ ಪದ್ಮನಯನೆ' ಇವರು ಬರೆದ ಮೊದಲ ಕಾದಂಬರಿ. ಇದಕ್ಕೆ ಕರ್ನಾಟಕ ವಿದ್ಯಾವರ್ಧಕ ಸಂಘ ಏರ್ಪಡಿಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ಮೊದಲ ಬಹುಮಾನ ತಂದಿತು. ಇದರಿಂದ ಉತ್ಸಾಹಗೊಂಡ ಗಳಗನಾಥರು ಚಾರಿತ್ರಿಕ ಕಾದಂಬರಿಗಳನ್ನೇ ಅನುವಾದಿಸಿದ್ದಾರೆ:

'ಕಮಲ ಕುಮಾರಿ', 'ಈಶ್ವರ ಸೂತ್ರ', 'ಶಿವಪ್ರಭುವಿನ ಪುಣ್ಯ', 'ಮರಾಠರ ಅಭ್ಯುದಯ', 'ಕುರುಕ್ಷೇತ್ರ', 'ಛತ್ರಪತಿ', 'ಗೃಹಕಲಹ', 'ಸ್ವರಾಜ್ಯ ಸುಗಂಧ', ಇವೆಲ್ಲ ಮರಾಠರಿಗೆ ಸಂಬಂಧಿಸಿದ್ದವುಗಳು. ರಜಪೂತ ವೀರರ ಬಗ್ಗೆ ಬರೆದ ಕಾದಂಬರಿಗಳು 'ಕ್ಷಾತ್ರತೇಜ', 'ಸತ್ವಸಾರ', 'ತಿಲೋತ್ತಮೆ', 'ಸಂಸಾರ ಸುಖ', 'ಧಾರ್ಮಿಕ ತೇಜ', 'ರಾಣಾರಾಜಸಿಂಹ'. ಕನ್ನಡ ವೀರರ ಬಗ್ಗೆಯೂ ಹಲವಾರು ಕಾದಂಬರಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳು ಅಂದರೆ 'ಕುಮುದಿನಿ', 'ಕನ್ನಡಿಗರ ಕರ್ಮಕಥೆ', 'ಮಾಧವ ಕರುಣಾವಿಲಾಸ', 'ದುರ್ಗದ ಬಿಚ್ಚುಗತ್ತಿ', ಇವಲ್ಲದೆ 'ವೈಭವ', 'ಧರ್ಮರಹಸ್ಯ', 'ರಾಣಿ ಮೃಣಾಲಿನಿ' ಮತ್ತು 'ಭಗವತಿ ಕಾತ್ಯಾಯಿನಿ' ಕಾದಂಬರಿಗಳನ್ನು ಸಹ ಬರೆದಿದ್ದಾರೆ. ಇವನ್ನು ಪೂರ್ಣವಾಗಿ ಸಾಮಾಜಿಕ ಅನ್ನಲಾಗದಿದ್ದರೂ ಪೌರಾಣಿಕ ಅಥವ ಚಾರಿತ್ರಕ ಘಟನೆಯನ್ನೇ ಹಿನ್ನೆಲೆಯಾಗಿ ಹೊಂದಿದ್ದರೂ ಹಿಂದಿನ ಕೃತಿಗಳಿಗಿಂತ ಒಂದು ವಿಧದಲ್ಲಿ ಭಿನ್ನವಾಗಿದ್ದು ಸಾಮಾಜಿಕ ಕಾದಂಬರಿಯ ಮೊದಲ ಹೆಜ್ಜೆಯಂತೆ ಸುಲಲಿತವಾಗಿ, ಕುತೂಹಲಕಾರಿಯಾಗಿ ಒಳ್ಳೆಯ ಪಾತ್ರ ಚಿತ್ರಣಗಳನ್ನು ಹೊಂದಿವೆ. ಕಾದಂಬರಿಗಳಲ್ಲದೆ ಇತರ ಗ್ರಂಥರಚನೆಯಲ್ಲೂ ಇವರು ಶ್ರಮಿಸಿದ್ದಾರೆ. 'ನಿರ್ವಾಣ ಮಹೋತ್ಸವ' 'ಕುಲಕರ್ತಾರ'ಗಳಂತ ಸತ್ಪುರುಷರ ಚರಿತ್ರೆಗಳನ್ನು 'ಗಿರಿಜಾಕಲ್ಯಾಣ', 'ಉತ್ತರರಾಮ ಚರಿತ್ರದ ಕಥೆ', 'ನಳಚರಿತ್ರೆ', 'ತುಲಸೀ ರಾಮಾಯಣ', 'ಭಗವತಾಮೃತ' ಮುಂತಾದ ಪೌರಾಣಿಕ ಗ್ರಂಥಗಳನ್ನೂ ರಚಿಸಿದ್ದಾರೆ. ಹೀಗೆ ಇವರ ಕನ್ನಡ ಸೇವೆ ಅದ್ಭುತ.

**ಬೆಳ್ಳಾವೆ ವೆಂಕಟನಾರಣಪ್ಪ**[1] : ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಇಂಗ್ಲೀಷ್–ಕನ್ನಡ ನಿಘಂಟು ಒಂದು ಅಮೋಘ ಕೃತಿ. ಸುಮಾರು ಹತ್ತು ವರ್ಷಗಳ ಅವಿಶ್ರಾಂತ ಶ್ರಮದಿಂದ ಹೊರತಂದ ಶ್ರೇಯಸ್ಸು ಇದರ ಮುಖ್ಯ ಸಂಪಾದಕರಾದ ಬೆಳ್ಳಾವೆ ವೆಂಕಟನಾರಣಪ್ಪನವರಿಗೆ ಸಲ್ಲಬೇಕು. ಇವರು ಹುಟ್ಟಿದ್ದು ತುಮಕೂರಿನ ಬಳಿಯಲ್ಲಿನ ಒಂದು ಗ್ರಾಮ. ವಿದ್ಯಾಭ್ಯಾಸ ತುಮಕೂರು ಬೆಂಗಳೂರಿನಲ್ಲಿ. ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದಮೇಲೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರದ ಬೋಧಕರಾದರು. ವಿಜ್ಞಾನವನ್ನು ಹೆಚ್ಚು ಜನಪ್ರಿಯ ಮಾಡಲು 'ವಿಜ್ಞಾನ' ಎಂಬ ಕನ್ನಡ ಮಾಸಪತ್ರಿಕೆಯನ್ನು ಕೆಲಕಾಲ ನಡೆಸಿದರು. ಮೊಟ್ಟಮೊದಲ ವಿಜ್ಞಾನ ಪತ್ರಿಕೆಯನ್ನು ನಡೆಸಿದ ಕೀರ್ತಿ ಇವರಿಗೇ ಸಲ್ಲುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ಬಹಳ ನಿಕಟ ಸಂಪರ್ಕ ಇರಿಸಿಕೊಂಡಿದ್ದ ಇವರು 'ಪರಿಷತ್ಪತ್ರಿಕೆ' ಉತ್ತಮ ರೀತಿಯಲ್ಲಿ ನಡೆಯಲು ಬಹಳ ಶ್ರಮಿಸಿದ್ದಾರೆ. ಪಂಪರಾಮಾಯಣ, ಪಂಪಭಾರತ, ಚಾವುಂಡರಾಯಪುರಾಣ, ಸೋಮೇಶ್ವರ ಶತಕ, ಕುಸುಮಾವಳಿ ಕಾವ್ಯ, ಶಬ್ದಮಣಿದರ್ಪಣ, ಮುಂತಾದ ಪ್ರಾಚೀನ ಗ್ರಂಥಗಳ ಸಂಪಾದನೆಯಲ್ಲಿ ಸಲ್ಲಿಸಿದ ಸೇವೆ ಚಿರಸ್ಮರಣೀಯ. ಇವರು ಕನ್ನಡ ನುಡಿಗಾಗಿ ಮಾಡಿದ ಸೇವೆಯನ್ನು ಸರಿಯಾಗಿ ಗುರುತಿಸಿದ ಜನತೆ ಇವರನ್ನು 1937ರ ಜಮಖಂಡಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಮೈಸೂರು ಮಹಾರಾಜರೂ ಇವರ ನಿಷ್ಕಾಮ ಸೇವೆಯನ್ನು ಮೆಚ್ಚಿ 'ರಾಜಸೇವಾಸಕ್ತ' ಎಂದು ಬಿರುದು ಕೊಟ್ಟು ಸನ್ಮಾನಿಸಿದ್ದರು.

ಕನ್ನಡದ ಇನ್ನೊಬ್ಬ ಕ್ರಾಂತಿಕಾರ ಸಾಹಿತಿಯ ವಿಷಯವನ್ನು ಇಲ್ಲೇ ಹೇಳಿಬಿಡ್ತೀನಿ. ಅವರ ಹೆಸರು **ಮುದವೀಡು ಕೃಷ್ಣರಾಯರು.**[2]

"'ಸಿಂಹಗರ್ಜನೆ ಕೃಷ್ಣರಾಯರು' ಇವರೆ ಅಲ್ವೆ ಮೇಸ್ಟ್ರೆ?" ದಿನಕರ ಪ್ರಶ್ನಿಸಿದ.

"ನೀವು ಇವರ್ನ ಧ್ವನಿವರ್ಧಕ ಅಂತ ಕರೀತಿದ್ರಂತೆ. ಇವ್ರು ಅನುವಾದಕ್ಕೆ ಇಲ್ದೆಹೋದ್ರೆ ನೀವು ಮಾತ್ನೇ ಆಡ್ತಾ ಇರ್ಲಿಲ್ವಂತೆ. ಹೌದೇ ಸಾರ್...?" ಚಂದ್ರು ಪ್ರಶ್ನಿಸಿದ.

"ಹೌದು ಇವರ ಕಂಚಿನ ಕಂಠ, ಎಲ್ಲವನ್ನೂ ಎದುರಿಸಲು ಶಕ್ತವಾದ ಉಕ್ಕಿನ ದೇಹ, ಇದರ ಒಳಗೆ ಕನ್ನಡ ಮೃದುಹೃದಯ, ತಲೆಯಲ್ಲಿ ವಿದ್ವತ್ ಪ್ರಭೆ ಬೀರುವ ಚೈತನ್ಯಪೂರ್ಣ ಕರ್ನಾಟಕ ಮೆದುಳು. ಇವರು ಹುಟ್ಟಿನಲ್ಲಿ ಕ್ರಾಂತಿಕಾರಿ. ಬಾಳಿನಲ್ಲಿ ಸಾಹಿತಿ. ವಿದ್ಯಾಭ್ಯಾಸ ಕಾರವಾರ, ಧಾರವಾಡಗಳಲ್ಲಿ. ವಿದ್ಯಾರ್ಥಿ

---

1 ಜೀವಿತ ಕಾಲ 1872–1943.

2 ಜನನ: ಫೆಬ್ರವರಿ 1874, ಬಿಜಾಪುರ ಜಿಲ್ಲೆಯ ಬಾಗಲಕೋಟೆ.
ನಿಧನ: ಸೆಪ್ಟೆಂಬರ್ 1947.

ದೆಸೆಯಲ್ಲಿ ತಿಲಕರಿಂದ ಪ್ರಭಾವಿತರಾಗಿ ರಾಜಕೀಯಕ್ಕಿಳಿದರೂ ಕನ್ನಡದ ಅಭಿಮಾನ ಬಿಡಲಿಲ್ಲ. 'ಕರ್ನಾಟಕ ವೃತ್ತ', 'ಧನಂಜಯ' ಪತ್ರಿಕೆಗಳ ಮೂಲಕ ಜನಜಾಗೃತಿಗೊಳಿಸಿದರು. ಭಾಷೆ ಹಾಗೂ ನಾಟಕ ಕಲೆಯ ಉದ್ಧಾರಕ್ಕಾಗಿ "ಭಾರತ ಕಲೋತ್ತೇಜನ ನಾಟಕ ಸಮಾಜ" ಸ್ಥಾಪಿಸಿ ಕರ್ನಾಟಕಾದ್ಯಂತ ಪ್ರದರ್ಶನಗಳನ್ನೂ ಏರ್ಪಡಿಸಿದರು. ಕನ್ನಡ ಚಲನಚಿತ್ರ 'ಚಿರಂಜೀವಿ'ಯಲ್ಲಿ ಅಭಿನಯಿಸಿದರು. 'ಚಿತ್ತೂರ ಮುತ್ತಿಗೆ', 'ವಿಕ್ರಮ ಶಶಿಕಲಾ', 'ಪ್ರೇಮಭಂಗ', 'ಕಲಾಪ್ರೇಮ', ಇವರ ಮುಖ್ಯ ಕೃತಿಗಳು. ಸಾಹಿತ್ಯಾಭಿಮಾನವನ್ನು ಮೆಚ್ಚಿದ ಕನ್ನಡಜನ ಇವರನ್ನು ಬೆಳಗಾವಿಯಲ್ಲಿ ನಡೆದ 24ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತ್ತು. ಇವರು ತಮ್ಮ 73ನೇ ವಯಸ್ಸಿನಲ್ಲಿ ನಿಧನರಾದರು.

**ಪಂಜೆ ಮಂಗೇಶರಾಯರು*** : ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯಪುರುಷರಲ್ಲಿ ಒಬ್ಬರು. ಇವರು ಕವಿ, ಕಥೆಗಾರ, ಹಾಸ್ಯಪಟು, ಶಿಕ್ಷಣ ತಜ್ಞ, ಶಿಶು ಸಾಹಿತ್ಯ ರಚನಕಾರರು. ತಮ್ಮ ಬಹುಮುಖ ಪ್ರತಿಭೆಯಿಂದ ಕನ್ನಡಿಗರ ಮೆಚ್ಚುಗೆಗೆ ಪಾತ್ರರಾಗಿದ್ದ ಉಪಾಧ್ಯಾಯರು, ಶಾಲಾ ಇನ್ಸ್‌ಪೆಕ್ಟರು. ಇವರು ಹುಟ್ಟಿದ್ದು ಬಂಟವಾಳ. ಆದರೂ ಅವರ ಪೂರ್ವಿಕರ ಊರಾದ 'ಪಂಜೆ' ಮನೆತನದ ಹೆಸರಾಗುಳಿದಿದೆ. ದಕ್ಷಿಣ ಕನ್ನಡದ ನೇತ್ರಾವತಿ ಸುತ್ತಲಿನ ಸುಂದರ ವಾತಾವರಣ ಇವರ ಮನಸ್ಸಿನ ಮೇಲೆ ಬಹಳ ಪ್ರಭಾವ ಬೀರಿ ಇವರನ್ನು ಕವಿಯನ್ನಾಗಿ ಪರಿವರ್ತಿಸಿತು. ಎಳೆಯ ವಯಸ್ಸಿನಲ್ಲೇ ಪ್ರಾಸ ಕೂಡಿಸಿ ಕನ್ನಡ ಅಥವಾ ಕೊಂಕಣಿಯಲ್ಲಿ ಹಾಡುತ್ತಿದ್ದರು. ಅವರ ತಂದೆ ತೀರಿಕೊಂಡಮೇಲೆ ಎಳೆಯ ವಯಸ್ಸಿನ ರಾಯರು ಕಷ್ಟಕಾರ್ಪಣ್ಯ ದಿನಗಳನ್ನು ತಳ್ಳುತ್ತ ಬಿ.ಎ. ಪದವಿ ಗಳಿಸಿ, ಮಂಗಳೂರಿನ ಕಾಲೇಜಿನಲ್ಲಿ ಮಾಸ್ತರರಾಗಿ ಸೇರಿದರು. ಅನಂತರ ಟ್ರೈನಿಂಗ್ ಕಾಲೇಜಿನಲ್ಲಿ ಓದಿ ಎಲ್.ಬಿ. ಗಳಿಸಿ ಶಾಲಾ ಇನ್ಸ್‌ಪೆಕ್ಟರಾದರು. ಊರೂರು ಸುತ್ತಿದರು. 'ಸುವಾಸಿನಿ', 'ಸತ್ಯದೀಪಿಕೆ' ಪತ್ರಿಕೆಗಳಲ್ಲಿ ಕವನಗಳನ್ನು ಬರೆದರು. ಚಂಪೂಕಾವ್ಯದ ಮೇಲೆ ಇವರು ಬರೆದ ವಿದ್ವತ್ಪೂರ್ಣ ಲೇಖನ ಬಹಳ ಜನರ ಮೆಚ್ಚುಗೆ ಗಳಿಸಿತ್ತು. 'ಭರತೇಶ ವೈಭವ' ಸಂಪಾದಿಸಿ ಅಚ್ಚುಹಾಕುವ ಕಾರ್ಯದಲ್ಲಿ ಬಹಳ ಶ್ರದ್ಧೆಯಿಂದ ಶ್ರಮಿಸಿದರು. ಇವರು ಮಕ್ಕಳಿಗೆ ಬರೆದ ಕೆಲವು ಪದ್ಯಗಳು ಬಹಳ ಜನಪ್ರಿಯವಾಗಿವೆ. 'ನಾಗರಹಾವೆ ಹಾವೊಳು ಹೂವೆ' ಎಲ್ಲ ಮಕ್ಕಳ ಬಾಯಲ್ಲೂ ನಲಿಯುತ್ತಿದೆ. 'ಹುತ್ತರಿ ಹಾಡು' ಕೊಡಗಿನ ನಾಡಗೀತೆ ಎನ್ನುವಷ್ಟು ಪ್ರಸಿದ್ಧವಾಗಿದೆ.

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ
ಎಲ್ಲಿ ಮೋಹನಗಿರಿಯ ಬೆರಗಿನ ರೂಪ ನಿಂದಲಿ ನಿಂದಳೋ

---

* ಜನನ: 22-2-1874. ತಂದೆ: ರಾಮಪ್ಪಯ್ಯ, ತಾಯಿ: ಸೀತಮ್ಮ. ಮರಣ: 25-10-1937.

ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ
ಎಲ್ಲಿ ನೆಲವನು ತಣಿಸಿ ಜನಮನ ಹೊಲವ ಕಳೆಕಳೆಕಳೆವಳೋ
ಅಲ್ಲಿ ಆ ಕಡೆ ನೋಡಲಾ!
ಅಲ್ಲಿ ಕೊಡವರ ನಾಡಲಾ!
ಅಲ್ಲಿ ಕೊಡವರ ಬೀಡಲಾ!

ಇವರು ಬರೆದ 'ಅಜ್ಜಿಯ ಕಥೆಗಳು' ಮಕ್ಕಳಲ್ಲಿ ಬಹಳ ಪ್ರಿಯವಾಗಿವೆ.

'ಕೋಟಿ ಚನ್ನಯ್ಯ' ತುಳುನಾಡಿನ ಸಂಸ್ಕೃತಿಯನ್ನು ಜನಜೀವನ ಸೌಂದರ್ಯವನ್ನು ಎತ್ತಿ ತೋರಿಸುವ ಉತ್ತಮ ಸಣ್ಣಕಥೆ. 'ಪಂಚಕಜ್ಜಾಯ'ದಲ್ಲಿ ಅಪಾರ ಪಾಂಡಿತ್ಯ ಕಾಣಿಸುತ್ತದೆ,

ಕನ್ನಡದ ಮೇಲೆ ಅವರ ಅಭಿಮಾನ ಅಪಾರ. 1934ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠದಿಂದ "ನನ್ನ ಕಡೆಯ ಗಳಿಗೆಯಲ್ಲಿ ನನ್ನ ನಾಲಿಗೆ 'ಕೃಷ್ಣ' ಎಂದು ನುಡಿಯುವಂತೆ 'ಕನ್ನಡ, ಕನ್ನಡ' ಎಂದು ನುಡಿಯುತ್ತಿರಲಿ" ಎಂದು ಭಾಷಣ ಮುಗಿಸಿದ್ದರು. ಕನ್ನಡ ಸಾಹಿತ್ಯ ಕ್ಷಿತಿಜದಲ್ಲಿ ಪ್ರಜ್ವಲಿಸುವ ತಾರೆಯೊಂದು ತನ್ನ 64 ವಯಸ್ಸಿನಲ್ಲಿ ಅಸ್ತವಾಯಿತು."

**ಬೆನಗಲ್ ರಾಮರಾಯರು*** ಅನ್ನೊ ಇನ್ನೊಂದು ಹೆಸರು ಕೇಳಿದ್ದೀನಿ. ಅವರೂ ಮುದವೀಡು ಕೃಷ್ಣರಾಯರು ಸಮಕಾಲೀನರಲ್ವೆ ?" ವಾಸುದೇವರಾಯರು ಪ್ರಶ್ನಿಸಿದಾಗ ವ್ಯಾಸರಾಯರು ತೃಪ್ತಿಯ ನಗು ಅರಳಿಸಿದರು.

"ನಿಮ್ಗಳಿಗಿರೋ ಉತ್ಸಾಹ ನೋಡಿದ್ರೆ ನಾನು ಯಾವ ಹಿರಿಯ ವ್ಯಕ್ತೀನೂ ಬಿಡೋಕೆ ಆಗೋಲ್ಲ. ಹೂ...ನಿಮ್ಗೆ ಅಷ್ಟೊಂದು ಆಸಕ್ತಿ, ಉತ್ಸಾಹ ಇರ್ಬೇಕಾದ್ರೆ ಹೇಳಲು ನಂಗೂ ಸಂತೋಷ.

ಬೆನಗಲ್ ರಾಮರಾಯರು ಜನ್ಮತಃ ಕವಿ. ವೃತ್ತಿಯಲ್ಲಿ ಉಪಾಧ್ಯಾಯ. ವ್ಯಾಸಂಗ ಮುಲ್ಕಿ, ಮಂಗಳೂರು ಮತ್ತು ಪುತ್ತೂರುಗಳಲ್ಲಿ. ಬಿ.ಎ.ಯಲ್ಲಿ ರ್‍ಯಾಂಕ್ ಗಳಿಸಿ, ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿ 'ಆಧುನಿಕ ಕನ್ನಡದಲ್ಲಿ ನವೋದಯ' ಮಹಾಪ್ರಬಂಧ ರಚಿಸಿ, ಎಂ.ಎ. ಪದವಿ ಪಡೆದಮೇಲೆ ಮೈಸೂರಿನ ಸರಕಾರಿ ಟ್ರೈನಿಂಗ್ ಕಾಲೇಜಿಗೆ ಪ್ರಾಧ್ಯಾಪಕರಾಗಿ ಬಂದರು. ಸಂಸ್ಕೃತ, ತೆಲುಗು, ಮರಾಠಿ, ಬಂಗಾಳಿಯಲ್ಲಿ ಚೆನ್ನಾದ ಪರಿಚಯವಿದ್ದ ಇವರು ಭಾಷಾ ಸಂಶೋಧನೆಯಲ್ಲಿ ಬಹಳ ಕಾಲ ಶ್ರಮಿಸಿದ್ದರು. ತಂಜಾವೂರು ಮನೆತನದ ಕೈಫಿಯತ್, ಹಳೇಬೀಡು ಕೈಫಿಯತ್‌ಗಳನ್ನು ಪ್ರಕಟಿಸಿ ಕೈಫಿಯತ್ ರಾಮರಾಯರೆಂದೇ ಹೆಸರು ಪಡೆದರು.

"ಕೈಫಿಯತ್ ಅಂದ್ರೇನು ಮೇಸ್ಟ್ರೇ ?" ದಿನೇಶ ಪ್ರಶ್ನಿಸಿದ.

---

* ಜನನ: ಏಪ್ರಿಲ್, 1876. ಮರಣ: ಮೇ, 1943.

"ಕೈಫಿಯತ್ ಅಂದ್ರೆ ಚಾರಿತ್ರಿಕ ಘಟನೆಗಳ ಬಗ್ಗೆ ಹೇಳಿಕೆ.

ರಾಮರಾಯರದು ಬಹುಮುಖ ಪ್ರತಿಭೆ. 'ಸುವಾಸಿನಿ', 'ವಾಗ್ಭೂಷಣ', 'ಸಾಹಿತ್ಯ ಪತ್ರಿಕೆ'ಗಳಿಗೆ ಸಂಪಾದಕರಾಗಿ ಶ್ರಮಿಸಿದ್ದರು, ಹಲವು ನಾಟಕ ಸಂಸ್ಥೆ ಹಾಗೂ ಕಲಾಶಾಲೆಗಳಿಗೆ ಕಾರ್ಯದರ್ಶಿಯಾಗಿ, ಸದಸ್ಯರಾಗಿ ಅಹರ್ನಿಶಿ ದುಡಿದಿದ್ದಾರೆ. ಕಾವ್ಯ, ಕಾದಂಬರಿ, ಶಿಶುಸಾಹಿತ್ಯ ಕ್ಷೇತ್ರಗಳಲ್ಲಿ ಇವರು ರಚಿಸಿರುವ ಕೃತಿಗಳ ಸಂಖ್ಯೆ 20ಕ್ಕೂ ಹೆಚ್ಚಿನವು. ಸಂಸ್ಕೃತದ 'ದೂತಾಂಗದ', 'ಶಾಪಸಂಭ್ರಮ' ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. 'ಪುರಾಣನಾಮಚೂಡಾಮಣಿ' ಸುಂವರಶಾಸ್ತ್ರಿಗಳೊಡಗೂಡಿ ರಚಿಸಿದ ಒಂದು ಅಮೂಲ್ಯ ಗ್ರಂಥ. ಇವರು 1925 ರಲ್ಲಿ ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಹೊಸಕೋಟೆ ಕೃಷ್ಣಶಾಸ್ತ್ರಿ**[1] : ಶಿಲಾಶಾಸನಗಳ ಪರಿಶೀಲನೆ, ಪ್ರಾಚೀನ ಗ್ರಂಥಗಳ ಬಗ್ಗೆ ಸಂಶೋಧನೆ ಇವುಗಳಿಗಾಗಿಯೇ ಶ್ರಮಿಸಿದ ವ್ಯಕ್ತಿ 'ಹೊಸಕೋಟೆ ಕೃಷ್ಣಶಾಸ್ತ್ರಿ' ವಿಜಯನಗರದ ಅರಸುಗಳ, ಹೊಯ್ಸಳ, ಅಲೂಪ, ಚೋಳ ವಂಶಗಳ ಬಗ್ಗೆ ಆಳವಾಗಿ ಅಧ್ಯಯನ ನಡೆಸಿ ವಿದ್ವತ್ಪೂರ್ಣ ಲೇಖನಗಳನ್ನು ಪ್ರಕಟಿಸಿದ್ದಾರೆ. 'ಎಪಿಗ್ರಾಫಿ ಕಾ ಇಂಡಿಯಾ'ದ ಪ್ರಧಾನ ಸಂಪಾದಕರಾಗಿ ಇವರು ಮಾಡಿರುವ ಸೇವೆ ಬಹಳ ಅಮೂಲ್ಯ. 'ದಕ್ಷಿಣ ಭಾರತದ ದೇವದೇವತಾಮೂರ್ತಿಗಳು' ಇವರ ಶಾಸ್ತ್ರಜ್ಞಾನ ವಿದ್ವತ್ತಿನ ದ್ಯೋತಕ. ಇವರಿಗೆ ಇಂಡಿಯಾ ಸರಕಾರ 'ರಾವ್ ಬಹದ್ದೂರ್' ಬಿರುದು ಕೊಟ್ಟು ಗೌರವಿಸಿತ್ತು. ಕನ್ನಡ ಜನತೆ ಇವರನ್ನು 1924ರ ಕೋಲಾರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಸನ್ಮಾನಿಸಿತ್ತು.

**ನವರತ್ನ ರಾಮರಾವ್**[2] ದಕ್ಷ ಸರಕಾರಿ ಅಧಿಕಾರಿಯಾಗಿದ್ದರು. ಈ ಅನುಭವ ಸಾರವನ್ನು 'ಕೆಲವು ನೆನಪುಗಳು' ಪುಸ್ತಕದಲ್ಲಿ ಛಟ್ಟಿ ಇಳಿಸಿದ್ದಾರೆ. ಕನ್ನಡ ಸಾರಸ್ವತ ಲೋಕಕ್ಕೆ ಇದೊಂದು ಅತ್ಯಮೂಲ್ಯ ಕೊಡುಗೆ. ಮಾಸ್ತಿಯವರ 'ಚೆನ್ನಬಸವನಾಯಕ' ಕಾದಂಬರಿಯನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ.

**ಗೋವಿಂದ ಪೈ**[3] : ಹೊಸ ಪಥದಲ್ಲಿ ನಡೆದ ಕವಿಗಳಲ್ಲಿ ನಾವು ಮೊದಲು ನೆನೆಯಬೇಕಾದ್ದು ಗೋವಿಂದ ಪೈಗಳನ್ನು. ಆದಿ ಪ್ರಾಸಬಿಟ್ಟು ಒರೆವ ಧೀರ ನಿರ್ಧಾರ ಕೈಗೊಂಡು ಬಂದ ವಿಮರ್ಶೆಯನ್ನು ಕೆಚ್ಚೆದೆಯಿಂದ ಎದುರಿಸಿ ಹೊಸ ಹಾದಿ ಹಿಡಿದರು. ಅನೇಕರಿಗೆ ಮಾರ್ಗದರ್ಶಕರಾದರು. ತಮ್ಮ ಬಹುಮುಖ ಪ್ರತಿಭೆಯಿಂದಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ದುಡಿದು ಅಪೂರ್ವ ಕೃತಿಗಳ

---

1 ಜೀವಿತ ಕಾಲ 1877–1928. ಹುಟ್ಟಿದ ಸ್ಥಳ: ಬೆಂಗಳೂರು ಜಿಲ್ಲೆಯ ಹೊಸಕೋಟೆ.

2 ಜೀವಿತ ಕಾಲ 1879–1960.

3 ಜೀವಿತ ಕಾಲ : ಮಾರ್ಚ್ 1883–ಸೆಪ್ಟೆಂಬರ್ 1963.

ಕಾಣಿಕೆಯನ್ನಿತ್ತು ಕನ್ನಡದ ಸಿರಿಯನ್ನು ಹೆಚ್ಚಿಸಿದರು. 'ಗಿಳಿವಿಂಡು', 'ನಂದಾದೀಪ' ಕವನ ಸಂಗ್ರಹಗಳು. ಇವುಗಳಲ್ಲಿ ಹಳೆಯ ಸಂಪ್ರದಾಯದ ಪ್ರಾಸಬದ್ಧ ಕವಿತೆ ಹಾಗೂ ಹೊಸಹಾದಿಯಲ್ಲಿ ಮೂಡಿಬಂದ ಪ್ರಾಸರಹಿತ ಕವನ ತುಂಬಿವೆ. 'ಗೊಲ್ಗೊಥಾ', 'ವೈಶಾಖಿ' ಖಂಡ ಕಾವ್ಯಗಳು. ಸರಳ ರಗಳೆ ನಿರರ್ಗಳವಾಗಿ ಹರಿದಿವೆ. ಉದಾಹರಣೆಗೆ ಒಂದೊಂದು ಪದ್ಯ ಮಾತ್ರ ಹೇಳ್ತೀನಿ.

ಅಂದಿದೊ ವಸಂತಪೂರ್ಣಿಮೆಯ ಭೃಗುವಾರದಾ
ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ
ನೋಡೊಂದೆ ಬರವೋಡ ಬಾನಗಲ ಚಾಚಿ ನೋ
ಹನ ಕಾಲದಾ ಪ್ರಲಯ ಮೇಘವೆನೆ ಮುಚ್ಚಿಹುದು
ಬೇಗೆಯಂ ತಡೆಯಲಾಗದು...

'ಗೊಲ್ಗೊಥಾ'ದಲ್ಲಿ ಏಸುಕ್ರಿಸ್ತನನ್ನು ಸಿಲುಬೆಗೇರಿಸಿದ ದೃಶ್ಯ ಹೃದಯಸ್ಪರ್ಶಿಯಾಗಿದೆ. 'ವೈಶಾಖಿ'ಯಲ್ಲಿ ರಾಜಕುವರ ಬುದ್ಧ ಸನ್ಯಾಸಿಯಾದ ಕಥೆ ಚಿತ್ರಿಸಲ್ಪಟ್ಟಿದೆ.

ವೀರರಿರ, ವೀರಸೂಗಳಿರ ಕೇಳಿರಿ ನಿಮಗೆ
ಧರ್ಮದ ಸಮಾನತೆ: ಪೇಳ್ವೆ, ನೂರಾಳ್ಗಳಂ
ರಣದಿ ಗೆದ್ದವಗಿಂತ ತನ್ನ ತಾಂ ಗದ್ದವನೆ
ಚೇತರೊಳಗುತ್ತಮಂ, ನಿರ್ವೈರದಿನೆ ವಿನಾ
ವೈರದಿಂದಾ ವೈರವಾರದ ಕ್ರೋಧದಿಂ
ಕ್ರೋಧವಂ, ಸಾದುತನದಿಂದಲೇ ಅಸಾಧುವಂ

ಕವನ, ಖಂಡಕಾವ್ಯಗಳನ್ನಲ್ಲದೆ 'ಹೆಬ್ಬೆರಳು', 'ಚಿತ್ರಭಾನು' ಮುಂತಾದ ನಾಟಕಗಳನ್ನು, ನೂರಾರು ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. 'ಗೊಮ್ಮಟ ಜಿನಸ್ತುತಿ' ಅವರ ಪತ್ನಿ ತೀರಿಕೊಂಡಾಗ ಆಕೆಯ ನೆನಪಿಗಾಗಿ ರಚಿಸಿದ ಪ್ರಗಾಥ. ಸಂಸ್ಕೃತ, ಪಾಳಿ, ಪ್ರಾಕೃತ, ಮರಾಠಿ, ಕೊಂಕಣಿ, ತಮಿಳು, ಬಂಗಾಳಿ, ಜರ್ಮನ್, ಗ್ರೀಕ್ ಮುಂತಾದ ಭಾಷೆಗಳ ಚೆನ್ನಾದ ಪರಿಚಯವಿದ್ದ ಇವರು ಅನುವಾದ ಕೆಲಸವನ್ನು ಬಹಳವಾಗಿ ಮಾಡಿದ್ದಾರೆ. ಇವರನ್ನು ನೆನೆಯುತ್ತ, ರಾಷ್ಟ್ರಕವಿ ಬೇಂದ್ರೆಯವರು ಹಾಡಿರುವ ಒಂದು ಪದ್ಯ ಕೇಳಿ.

ಕಲ್ಲು-ಕಾಗದ ಕಡತಗಳಲಿ ಕಾಲನ ಕಾಲು
ಸಿಕ್ಕು ತೊಳಲಾಡುತಲಿ ಕುಣಿಕೆ ಬಿಡಿಸಿದರಣ್ಣ
ಕರವ ನಾಡಿಸದಂತೆ ಅದನು ಕುಣಿಸಾಡಿದಿರಿ
ತಣಿದಿರಿ ನೀವು ತಣಿಸಿದಿರಿ ಹನಿಸಿದ ಕಣ್ಣ.

ಮದರಾಸು ಸರಕಾರ ಇವರಿಗೆ 1949ರಲ್ಲಿ 'ರಾಷ್ಟ್ರಕವಿ' ಪ್ರಶಸ್ತಿ ನೀಡಿ ಗೌರವಿಸಿತ್ತು. ಇವರ ನಂತರ ನಾವು ಸದಾ ನೆನಪಿಡಬೇಕಾದ ಇನ್ನೊಬ್ಬ ವ್ಯಕ್ತಿ

ಕನ್ನಡದ ಪಿತಾಮಹ **ಡಿ. ವಿ. ಗುಂಡಪ್ಪ*** ಕವಿ, ಲೇಖಕ, ಪತ್ರಕರ್ತ ಹಾಗೂ ಸಂಶೋಧಕ. ಅವರೊಂದು ಜ್ಞಾನನಿಧಿ. ವಿದ್ಯಾಭ್ಯಾಸ ಬೆಂಗಳೂರಿನಲ್ಲಿ. ಆದರೆ ಹೆಚ್ಚು ವಿದ್ಯಾಭ್ಯಾಸ ಮಾಡಲು ಅನುಕೂಲವಿಲ್ಲದ್ದರಿಂದ ಪತ್ರಿಕೋದ್ಯಮ ಅವಲಂಬಿಸಿದರು. ಸ್ವಪ್ರಯತ್ನದಿಂದ ಇಂಗ್ಲೀಷ್, ಸಂಸ್ಕೃತ, ಕನ್ನಡದಲ್ಲಿ ಅಸಾಧಾರಣ ಪಾಂಡಿತ್ಯ ಗಳಿಸಿದರು. ಇವರ ಪ್ರತಿಭೆ ಕಲ್ಪನಾಶಕ್ತಿಗೆ ನಿದರ್ಶನ ಅವರ 'ವಸಂತ ಕುಸುಮಾಂಜಲಿ', 'ನಿವೇದನೆ', 'ಅನ್ತಃಪುರ ಗೀತೆ', 'ಕೇತಕೀವನ' ಕವನ ಸಂಕಲನಗಳು. ಅಪೂರ್ವ ಅನುಭವ ತತ್ವಜ್ಞಾನದಲ್ಲಿ ಹೆಪ್ಪುಗಟ್ಟಿ ಮಕರಂದವಾಗಿ ಮಾರ್ಪಟ್ಟಿದೆ, ಅವರ 'ಮಂಕುತಿಮ್ಮನ ಕಗ್ಗ' ಕಾವ್ಯದಲ್ಲಿ.

ನಗುವೊಂದು ರಸಪಾಕವಳುವೊಂದು ರಸಪಾಕ
ನಗುವಾತ್ಮ ಪರಿಮಳವ ಪಸರಿಸುವ ಕುಸುಮ
ದುಗುಡವಾತ್ಮವ ಕಡೆದು ಸತ್ತ್ವವೆತ್ತುವಮಂತು
ಬಗೆದೆರಡನುಂ ಭುಜಿಸು-ಮಂಕುತಿಮ್ಮ.

'ಉಮರನ ಒಸಗೆ'. ಫಿಟ್ಸ್ ಜೆರಲ್ಡನ 'ಉಮರ್ ಖಯ್ಯಾಂ'ನ ಅನುವಾದ. ಜೀವನದ ನಶ್ವರತೆಯನ್ನು ನೆನಪಿನಲ್ಲಿಟ್ಟುಕೊಂಡು ಸುಖಪಡುವ ವೇಳೆಯನ್ನು ವ್ಯರ್ಥಗೊಳಿಸಬೇಡ. ಇದೇ ತತ್ವವನ್ನು ಸಾರುವ ಗ್ರಂಥ.

ಡಿ.ವಿ.ಜಿ. ಅವರ ಪ್ರೌಢ ಶೈಲಿಯಲ್ಲಿ ಅನುವಾದ ಬಹು ಸೊಗಸಾಗಿ ಮೂಡಿ ಬಂದಿವೆ.

'ಬಾ, ತುಂಬು ಬಟ್ಟಲನು : ಮಧುಮಾಸದಗ್ನಿಯಲಿ
ಚಿಂತೆ ಬೆಸನೆಂಬ ಚಳಿ ಬೊಂತೆಯನು ಬಿಸುಡು
ನಮ್ಮಾಯುಸಿನ ಪಕ್ಕಿ ಪಾರ್ವದೂರವೆ ಕಿರಿದು.
ಅದು ರಕ್ಕೆಯೆತ್ತಿಹುದು ನೋಡು, ಮನವಾದು.

ಸಂತೋಷಪಡು, ಚಿಂತೆ ಬೆಸನಗಳ್ಗಲ್ಲಿ ಕೊನೆ ?
ನಿನ್ನ ಮಣ್ ಅರಮನೆಯಲಿ ಗೋಡೆಯಹುದೋ ॥
ಜೀವನದಿ ನಿನಗೆ ದೊರೆವುದು ನೀನು ಕೊಳುವಷ್ಟೆ
ಮಡಿವ ಮುನ್ನ್ ಅದಷ್ಟು ಮಧುಮೀಂಟಿಸುಖಿಸು ॥

'ಶ್ರೀಮದ್ಭಗವದ್ಗೀತಾ ತಾತ್ಪರ್ಯ' ಅಮೋಘ ಕೃತಿ. ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪುರಸ್ಕೃತಗೊಂಡಿದೆ. ಶಾಶ್ವತ ಉಳಿಯುವ ಗ್ರಂಥ. 'ಜೀವನ

---

* ಜೀವಿತ ಕಾಲ: 1889-1975. ತಂದೆ: ದೇವರಹಳ್ಳಿ ವೆಂಕಟರಮಣಯ್ಯ. ಇವರ ಇತರ ಕೃತಿಗಳು:-ಇಂದ್ರವಜ್ರ, ಬೆಕ್ಕೋಜಿ, ಸಾಹಿತ್ಯಶಕ್ತಿ, ರಾಜ್ಯಶಾಸ್ತ್ರ, ಜ್ಞಾಪಕ ಚಿತ್ರಶಾಲೆ, ದಿ ವಸು, ಕನ್ನಡ ಮ್ಯಾಕ್‌ಬತ್, ಈಶೋಪನಿಷತ್ತು, ಸಾಹಿತ್ಯೋಪಾಸಕರು, ಶ್ರೀರಾಮಪರೀಕ್ಷಣಂ-ಮುಂತಾದವುಗಳು.

ಸೌಂದರ್ಯ ಮತ್ತು ಸಾಹಿತ್ಯ' ನವೋದಯ ಕಾಲದಲ್ಲಿ ಮೊದಲು ಬಂದ ಸಾಹಿತ್ಯ ವಿಮರ್ಶೆಯ ಗ್ರಂಥ. ಡಿ.ವಿ.ಜಿ. ಅವರ ಪ್ರತಿಭೆ ಹಲವು ಮುಖವಾಗಿ ಹರಿದಂತೆ ಅವರ ಕಾರ್ಯವ್ಯಾಪ್ತಿಯೂ ಹಲವು ಮಾರ್ಗಗಳಲ್ಲಿ ಹರಿದಿದೆ. ಪತ್ರಿಕಾಕರ್ತರಾಗಿ 'ಭಾರತಿ', 'ಕರ್ನಾಟಕ' ಪತ್ರಿಕೆಗಳನ್ನು ನಡೆಸಿ ಕೈಸುಟ್ಟುಕೊಂಡರು. ರಾಜಕೀಯ ವ್ಯಕ್ತಿಯಾಗಿ ಜನಸೇವೆ ಮಾಡಿದರು. ಗೋಖಲೆ ಸಂಸ್ಥೆಯನ್ನು ಕಟ್ಟಿ ಆಸಕ್ತಿ ಇಂದ ವೃದ್ಧಾಪ್ಯದಲ್ಲೂ ಹುರುಪಿನಿಂದಲೇ ದುಡಿದರು. ಇದು ಅವರ ಕೃತು ಶಕ್ತಿ ಹಾಗೂ ದೃಢ ನಿರ್ಧಾರದ ನಿದರ್ಶನ. ಲಲಿತ ಕಲೆಗಳಲ್ಲಿ ಡಿ.ವಿ.ಜಿ.ಯವರಿಗೆ ಅಪಾರ ಆಸಕ್ತಿ. ಸಂಗೀತ, ನಾಟ್ಯಾದಿಗಳಲ್ಲೂ ಅವರ ತಿಳುವಳಿಕೆ ಬಹಳ. ಇವರು ಉತ್ತಮ ವಾಗ್ಮಿ ಕೂಡ. ನಿಜವಾಗಿ ಇವರು ಕನ್ನಡ ಜನ ಹೆಮ್ಮೆಪಡಬೇಕಾದ ವ್ಯಕ್ತಿ. ಇವರನ್ನು ಕನ್ನಡದ ಜನತೆ ಮಡಿಕೇರಿಯಲ್ಲಿ ನಡೆದ 18ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಮಾಡಿ ಗೌರವಿಸಿತ್ತು. ಮೈಸೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿತ್ತು.

**ಶ್ರೀ ಬಿ.ಎಂ.ಶ್ರೀ.*** : 'ಕನ್ನಡ ನುಡಿ ನನ್ನ ಜೀವನದುಸಿರು' ಎನ್ನುತ್ತಿದ್ದ ಆಚಾರ್ಯರು ಕನ್ನಡದ ಸಹಸ್ರಾರು ಜ್ಯೋತಿಗಳನ್ನು ಹೊತ್ತಿಸಿದ ಮೂಲ ನಂದಾ ದೀಪ. ಕನ್ನಡ ನವೋದಯದ ಆಚಾರ್ಯ 'ಶ್ರೀ'. ಇಂಗ್ಲೀಷ್ ಪ್ರಾಧ್ಯಾಪಕ, ಇಂಗ್ಲೀಷ್ ಗ್ರೀಸ್ ಭಾಷೆಯ 'ಆಳ' ಅರಿತಿದ್ದ ವಿದ್ವಾಂಸ. ಇವರು ಕನ್ನಡಸಾಹಿತ್ಯಕ್ಕೆ ಇತ್ತಿರುವ ಗ್ರಂಥ ಅಥವಾ ಪುಟಸಂಖ್ಯೆ ಕೆಲವೇ ಆದರೂ ಅದು ವಜ್ರ. ಅವರ ಕೃತಿಗಳು 'ಇಂಗ್ಲೀಷ್ ಗೀತಗಳು', ಗ್ರೀಕ್ ರುದ್ರನಾಟಕ 'ಪಾರಸಿಕರು', ರುದ್ರ ನಾಟಕ 'ಅಶ್ವತ್ಥಾಮನ್', 'ಗದಾಯುದ್ಧ'. ಕನ್ನಡ ಛಂದಸ್ಸಿನ ಚರಿತ್ರೆ, ಕನ್ನಡದ ಬಾವುಟ, ಹೊಂಗನಸುಗಳು, ಕನ್ನಡ ಸಾಹಿತ್ಯದ ಚರಿತ್ರೆ, ಇಸ್ಲಾಂ ಸಂಸ್ಕೃತಿ, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ–ಮುಂತಾದವುಗಳು. ಶ್ರೀಯವರ ಜೀವನದಲ್ಲಿ 'ಜನವರಿ'ಗೆ ಒಂದು ಐತಿಹ್ಯವಿದೆ. ಹುಟ್ಟಿದ್ದು ಜನವರಿ. ಕೆಲಸಕ್ಕೆ ಸೇರಿದ್ದು, ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು, ನಿವೃತ್ತರಾಗಿದ್ದು, ತೀರಿಕೊಂಡದ್ದು ಜನವರಿ. ಸಾಯುವುದಕ್ಕೆ ಸ್ವಲ್ಪ ದಿನಗಳ ಮುಂಚೆ ಅವರು ಸಾಹಿತ್ಯ ಪರಿಷತ್ತಿಗೆ ಕಳುಹಿಸಿದ್ದ **'ಹಾರೈಕೆ'** ಕನ್ನಡ ಜನರ ಹಾರೈಕೆ.

ಕನ್ನಡ ನುಡಿ ಪಯಿರ್ ಮುನ್ನಡೆ ತೆನೆತುಂಬಿ
ಪೊನ್ನಡಕಿಲ್ಗಂ ಪೊನ್ನಕ್ಕೆ
ಬರೆವರ ಬಾಯೊಳೊಲವಿರ್ಕೆ ಚೆಲುವಿರ್ಕೆ
ಫಲವಿರ್ಕೆನಾಡಗೆಲವಿರ್ಕೆ

---

* ಜೀವಿತ ಕಾಲ: ಜನವರಿ 1884–ಜನವರಿ 1946. ಜನ್ಮಸ್ಥಳ: ಸಂಪಿಗೆ. ಇವರ ಪೂರ್ಣ ಹೆಸರು: ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯ.

ಧರ್ಮದ ತಿರುಳಿರ್ಪೈ, ಕರ್ಮದ ಕೆಚ್ಚಿರ್ಪೈ
ಪೆರ್ಮೆ-ಬಿಗಿ, ನಗೆ ಸೊಗಸು.

'ಶ್ರೀಯವರು ವಾಕ್‌ಶ್ರೀಯುತರು, ವಾಕ್ಕೋವಿದರು, ವಾಗ್ವೈಭವಶಾಲಿಗಳು' ಎಸ್. ವಿ. ರಂಗಣ್ಣನವರ ಈ ಮಾತು 'ಶ್ರೀ'ಯವರ ಕವಿಜೀವನಕ್ಕೆ ಕನ್ನಡಿ ಹಿಡಿಯುತ್ತದೆ. ಅವರ ಸುಂದರ ಶೈಲಿಗೆ ಉದಾಹರಣೆ-

ವಸಂತ ಬಂದ, ಋತುಗಳ ರಾಜ ತಾ ಬಂದ
ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ
ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚೆಂದ
ಕೂವೂ, ಜಗ್‌ಜಗ್, ಪುವ್ವೀ ಟೂವಿಟ್ಟವೂ

—('ವಸಂತ'-Spring ಕವಿತೆಯ ಅನುವಾದ)

**ಹುಯಿಲಗೋಳ ನಾರಾಯಣರಾಯರು***

'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು
ಬದುಕು ಬಲುಹಿನನಿಧಿಯೆ ಸದಭಿಮಾನದ ಗೂಡು'

ಈ ದೇಶಗೀತೆಯನ್ನು ರಚಿಸಿದ ಕವಿ ಹುಯಿಲಗೋಳ ನಾರಾಯಣರಾಯರು. ವಿದ್ಯಾಭ್ಯಾಸ ಧಾರವಾಡದಲ್ಲಿ. ಮುದವೀಡು ಕೃಷ್ಣರಾಯರಿಂದ ಪ್ರಭಾವಿತರಾಗಿ ಕಾನೂನು ಅಧ್ಯಯನ ಮಾಡಿ ಕೆಲಸಕ್ಕೆ ಸೇರದೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ರಾಯರು ಕಸುಬಿನಲ್ಲಿ ವಕೀಲರಾಗಿದ್ದರು. ಪ್ರಾಚೀನ ಕಾವ್ಯಗಳನ್ನು ಚೆನ್ನಾಗಿ ಅರಿತಿದ್ದರು. ಒಳ್ಳೆಯ ಕವಿಗಳೂ ಹೌದು. ರಾಷ್ಟ್ರೀಯ ಭಾವನೆಯನ್ನು ಬಡಿದೆಬ್ಬಿಸಿದ ಸ್ವಾತಂತ್ರ್ಯ ವೀರ. ನಾಟಕದಲ್ಲಿ ಅಪಾರ ಪ್ರೀತಿ ಇದ್ದ ಇವರು ರಚಿಸಿದ ನಾಟಕಗಳು ಹಲವಾರು. ಮುಖ್ಯವಾದವುಗಳು : ಪ್ರೇಮಾರ್ಜುನ, ವಜ್ರಮುಂಗುರ, ಕನಕ ವಿಲಾಸ, ಅಜ್ಞಾತವಾಸ, ಪ್ರೇಮ ವಿಜಯ, ಭಾರತ ಸಂಧಾನ, ಉತ್ತರ ಗೋಗ್ರಹಣ ಮುಂತಾದ 13 ನಾಟಕಗಳು. ಅವರ 'ಪತಿತೋದ್ಧಾರ' ನಾಟಕಕ್ಕೆ 1954ರಲ್ಲಿ ಮುಂಬಯಿ ಸರಕಾರದ ಬಹುಮಾನ ಬಂದಿತ್ತು".

ವ್ಯಾಸರಾಯರು ಮಾತು ನಿಲ್ಲಿಸಿ ಎದುರಿಗಿದ್ದ ತಂಬಿಗೆಯಿಂದ ಒಂದು ಲೋಟ ನೀರನ್ನು ಬಗ್ಗಿಸಿ ಕೊಂಡು ಕುಡಿದು.

ಇದೋ ಮುಗಿಸಿ ತಂದಿಹೆನ್ ಈ ಬೃಹತ್ ಗಾನಮಂ
ನಿಮ್ಮ ಸಿರಿಯಡಿಗೊಪ್ಪಿಸಲ್ಕೆ ಓ ಪ್ರಿಯ ಗುರುವೆ
ಕರುಣಿಸಂ ನಿಮ್ಮ ಹರಕೆಯ ಬಲದ ಶಿಷ್ಯನಂ,
ಕಾವ್ಯಮಂ ಕೇಳ್ದೊಂದು ಕೃಪೆಗೆ ಕೃತಕೃತ್ಯನಂ
ದನ್ಯನಂ ಮಾಡಿ......"

---

* ಜೀವಿತ ಕಾಲ: ಅಕ್ಟೋಬರ್ 1884-ಜುಲೈ 1971. ಹುಟ್ಟಿದೂರು ಗದಗ

ಇದು ಯಾರ ಕಾವ್ಯದ ಮಾತು ಯಾರಾದರೂ ಹೇಳ್ತೀರಾ? ಪ್ರಶ್ನಿಸಿದರು.

ರಾಷ್ಟ್ರಕವಿ ಕುವೆಂಪು ಅವರು 'ರಾಮಾಯಣ ದರ್ಶನಂ' ಕಾವ್ಯದ ಮೊದಲಲ್ಲಿ ತಮ್ಮ ಗುರು ಟಿ. ಎಸ್. ವೆಂಕಣ್ಣಯ್ಯನವರಿಗೆ ಈ ಕೃತಿ ಅರ್ಪಿಸುತ್ತ ನುಡಿದಿದ್ದಾರೆ. ದಿನಕರ ನುಡಿದೊಡನೆ ವಾಸುದೇವರಾಯರು 'ಭೇಷ್' ಎಂದರು.

ರಾಷ್ಟ್ರಕವಿಯ ಗುರು **'ಟಿ. ಎಸ್. ವೆಂಕಟಣ್ಣಯ್ಯ'*** ಇವರು ಬರೆದದ್ದು ಅಲ್ಪವಾದರೂ ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆ ಅಪಾರ. ತಳುಕು ಸುಬ್ಬಣ್ಣನ ಮಗ ವೆಂಕಣ್ಣಯ್ಯನವರ ವಿದ್ಯಾಭ್ಯಾಸ ಚಳ್ಳಕೆರೆ ಚಿತ್ರದುರ್ಗ ಬಳ್ಳಾರಿ ಮತ್ತು ಮೈಸೂರಿನಲ್ಲಿ, ಬಿ.ಎ. ಮುಗಿಸಿ ಎಲ್.ಎಲ್.ಬಿ.ಗೆ ಮುಂಬಯಿಗೆ ಪ್ರಯಾಣ ಮಾಡಿದರು. ಅಲ್ಲಿ ವ್ಯಾಸಂಗ ಮುಗಿಸದೆ ಅಂಚೆ ಕಛೇರಿಯ ಕಾರಕೂನನಾಗಿ ಸೇರಿದರು. ಅದರಲ್ಲಿ ಬೇಸರ ಬಂದು ಮತ್ತೆ ಮೈಸೂರು ಸೇರಿದರು. ಧಾರವಾಡ ಅನಂತರ ಬೆಂಗಳೂರಿನಲ್ಲಿ ಉಪಾಧ್ಯಾಯರಾಗಿ ದುಡಿದರು. ಶಿಷ್ಯ ವೃಂದದ ಅಪಾರ ಮೆಚ್ಚಿಗೆ ಸಂಪಾದಿಸಿದರು. ಇವರಿಗೆ ತೆಲುಗು, ತಮಿಳಿನಲ್ಲಿ ಪಾಂಡಿತ್ಯ ಇದ್ದುದಲ್ಲದೆ ಬಂಗಾಳಿಯ ಪರಿಚಯ ಕೂಡ ಚೆನ್ನಾಗಿತ್ತು. ರವೀಂದ್ರರ ಪ್ರಬಂಧಗಳು, (ಅನುವಾದಿತ ಸಂಕಲನ), 'ರಾಮಕೃಷ್ಣಪರಮಹಂಸ' (ಜೀವನ ಚರಿತ್ರೆ), ರಚನೆಗೆ ಬಂಗಾಳಿ ಭಾಷೆಯ ತಿಳಿವು ಬಹಳ ನೆರವು ನೀಡಿತು. 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ' ಕೂಡ ಬಂಗಾಳಿ ಭಾಷಾಂತರ. ಬಸವರಾಜದೇವರಗಳೆ 'ಸಿದ್ಧರಾಮ ಪುರಾಣ' ಪಂಪಭಾರತ ಸಂಪಾದನೆಗೆ ಇವರು ಅಪಾರ ನೆರವು ನೀಡಿದ್ದರು.

ಎಂ. ಆರ್. ಕೃಷ್ಣಶಾಸ್ತ್ರಿಗಳೊಡಗೂಡಿ 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಸಂಪಾದಿಸಿದರು. 'ಕನ್ನಡ ಕೈಪಿಡಿ' ವ್ಯಾಕರಣ, ಭಾಷಾ ಇತಿಹಾಸದ ಮೇಲೆ ಬರೆದ ಉದ್ಗ್ರಂಥ. ಇದರಲ್ಲಿ ಭಾಷಾ ಚರಿತ್ರೆಯ ಭಾಗವನ್ನು ಇವರು ಬರೆದಿದ್ದಾರೆ. 'ಪ್ರಾಚೀನ ಸಾಹಿತ್ಯ' ಇವರ ಇನ್ನೊಂದು ಅಮೋಘ ಕೃತಿ.

ಎಂತು ನಿರ್ಮಲ, ಸರಳ
ವ್ಯಕ್ತಿತ್ವ, ಅತಿ ವಿರಳ
ಪರಿಪೂರ್ಣ ಪಾಂಡಿತ್ಯ
ಸೌಜನ್ಯ ನಿಧಿ–ತೃಪ್ತ.

ಅರ್ಚಿಕ ವೆಂಕಟೇಶರ ಈ ಕವಿತೆ ವೆಂಕಣ್ಣಯ್ಯನವರ ಉದಾತ್ತ ವ್ಯಕ್ತಿತ್ವವನ್ನು ಚೆನ್ನಾಗಿ ತಿಳಿಸಿದೆ."

---

* ಜೀವಿತ ಕಾಲ: 1885–1939. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ. ತಂದೆ: ಸುಬ್ಬಣ್ಣ; ತಾಯಿ: ಲಕ್ಷ್ಮೀದೇವಮ್ಮ.

"ಎಂ. ಆರ್. ಶ್ರೀ.* ವೆಂಕಣ್ಣಯ್ಯನವರ ಸಮಕಾಲೀನರು ಅಲ್ವೇ ಸಾರ್?" ದಿನಕರ ಪ್ರಶ್ನಿಸಿದ.

"ಹಾಳು ಹಂಪೆಯ ಮೇಲೆ ಅವರು ಬರೆದಿರೊ 'ನಾಗರೀಕ' ನಾನು ಓದಿದ್ದೇನೆ ಮೇಷ್ಟ್ರೆ. ಬಾಳ ಪರಿಣಾಮಕಾರಿನಾಟಕ, ಹೃದಯ ಮಿಡಿಯುತ್ತೆ. ನಾಟಕದ ನಾಯಕ ಸಾವೇ ಅನ್ನಿ ಮನಸ್ಸು ತಳಮಳಗೊಳ್ಳುತ್ತೆ. ಕಣ್ಣು ಹನಿಯಾಡುತ್ತೆ ಇಂತಹಭಾವೋದ್ರೇಕ ಬಹುಶಃ ನನಗೆ ಇನ್ಯಾವ ನಾಟಕ, ಕಾವ್ಯ ಓದೇ ಆಗ್ಲಿ ಆಗಿಲ್ಲ..." ವಾಸುದೇವರಾಯರು ನುಡಿದಾಗ ವ್ಯಾಸರಾಯರು ಮುಗುಳ್ನಕ್ಕರು.

"'ಧರ್ಮ ದುರಂತ' ನಮ್ಮ ಸ್ಕೂಲಲ್ಲಿ ಹೋದ ವರ್ಷ ಆಡಿದ್ರು ಬಹಳ ಚೆನ್ನಾಗಿದೆ. ಜಾತಿ ಕೆಟ್ಟು ಪುನಃ ಜಾತೀಗೆ ಸೇರ್ಬೇಕು ಅನ್ನೊ ವ್ಯಕ್ತಿಯೊಬ್ಬನ ಒಳತೋಟಿ, ತುಮುಲ ಬಹಳ ಮಾರ್ಮಿಕವಾಗಿ ಚಿತ್ರಿತವಾಗಿವೆ." ದಿನಕರನ ಸ್ನೇಹಿತ ನುಡಿದ.

"'ಕಂಠೀರವ ವಿಜಯ' ನಮ್ಮ ತಂದೆ ಲೈಬ್ರರಿಯಿಂದ ತಂದಿದ್ದಾರೆ. ಮೈಸೂರಿನ ನರಸರಾಜ ಒಡೆಯರು ತಿರುಚನಾಪಳ್ಳಿಯ ಜಟ್ಟಿಯನ್ನು ಸೋಲಿಸಿದ್ದನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ." ದಿನಕರನ ಇನ್ನೊಬ್ಬ ಸ್ನೇಹಿತ ನುಡಿದ.

"'ವಚನ ಧರ್ಮಸಾರ' ಮತ್ತು 'ಭಕ್ತಿ ಭಂಡಾರಿ ಬಸವ' ಎಂ. ಆರ್. ಶ್ರೀ ಅವರ ಅತ್ಯುತ್ತಮ ಕೃತಿಗಳು' ವ್ಯಾಸರಾಯರು ನುಡಿದರು.

"'ರಂಗಣ್ಣನ ಕನಸಿನ ದಿನಗಳು' ಇವರ್ದೆ ಅಲ್ವೆ ವ್ಯಾಸಣ್ಣ" ಒಳಗಿನಿಂದ ಪದ್ಮಮ್ಮ ಪ್ರಶ್ನಿಸಿದರು, "ನಂಗಂತೂ ಬಾಳ ಹಿಡಿಸ್ತು. ನಕ್ಕು ನಕ್ಕು ಹೊಟ್ಟೆ ಹುಣ್ಣಾಯ್ತು. ಅವ್ರು ಮೇಸ್ಟ್ರೆ ಆಗಿರಬೇಕು. ಅದಕ್ಕೇ ಅಷ್ಟು ಚೆನ್ನಾಗಿ ಬರ್ದಿದ್ದಾರೆ. ಅನುಭವವು ತುಂಬಿ ತುಳುಕ್ತಾ ಇದೆ." ಪದ್ಮಮ್ಮನವರ ಮಾತು ಕೇಳಿ ತೃಪ್ತಿಯ ನಗೆ ಬೀರಿದ ವ್ಯಾಸರಾಯರು "ನಿಮ್ಮಾತು ನಿಜ ಪದ್ಮಮ್ಮ. ಅವರು ಉಪಾಧ್ಯಾಯರ ಉಪಾಧ್ಯಾಯರಾಗಿದ್ರು. ಇನ್ಸ್‌ಪೆಕ್ಟರ್ ಆಗಿ ಊರೂರು ಸುತ್ತಿ ಉಪಾಧ್ಯಾಯರ ಮನಸ್ಸು, ನಡುವಳಿಕೆ ಅರ್ಥ ಮಾಡ್ಕೊಂಡಿದ್ರು. ಈ ಅನುಭವದ ಅಮೃತವೇ ರಂಗಣ್ಣನ ಕನಸಿನ ದಿನಗಳು. ಅದಕ್ಕೇ ಅಷ್ಟು ರಸವತ್ತಾಗಿ ಬಂದಿದೆ. ಇವರು ನಾಟಕಗಳನಲ್ಲದೆ ಕವಿತೆ. ಕಥೆಯನ್ನು ಸಹ ಬರೆದಿದ್ದಾರೆ. 'ಕವಿಯ ಸೋಲು' ಕವನ ಸಂಗ್ರಹ, 'ಶ್ಯಾಮಲಾ' ಕಥೆ. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್-ಕನ್ನಡ ನಿಘಂಟಿನ ಸಹ ಸಂಪಾದಕರು. ಅನಂತರ ಪ್ರಧಾನ ಸಂಪಾದಕರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. 1950ರಲ್ಲಿ ಸೊಲ್ಲಾಪುರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡದ ಬೆಳವಣಿಗೆಗೆ, ಭಾಷೆಯ ಹಿತರಕ್ಷಣೆಗೆ ಅಮೂಲ್ಯ ಸಲಹೆಗಳನ್ನಿತ್ತುದಲ್ಲದೆ ಪರಿಷತ್ತಿನ ಕಾರ್ಯ ಚಟುವಟಿಕೆಗಳಲ್ಲಿ ಕೊನೆಯವರೆಗೂ ಆಸಕ್ತಿ ವಹಿಸಿದ್ದರು, ಚೆನ್ನಾಗಿ ದುಡಿದರು. 1953ರಲ್ಲಿ ಇವರು

* ಜೀವಿತ ಕಾಲ: 1892-1953.

ಕಾಲವಾದಾಗ ಕನ್ನಡ ಜನತೆ ಅಪಾರ ದುಃಖಿಸಿತು. ಕನ್ನಡದ ಇನ್ನೊಬ್ಬ ಕುಲ ದೀಪಕ ಇನ್ನಿಲ್ಲದಂತಾಯಿತು.

**ಮುಳಿಯ ತಿಮ್ಮಪ್ಪಯ್ಯ**[1] : ಇವರ ವಿಷಯವನ್ನು ರಾಮಾಯಣ ವಿಭಾಗ ದಲ್ಲಿ ಆಗಲೇ ಹೇಳಿದ್ದೇನೆ. ಕಾರವಾರದಲ್ಲಿ ನಡೆದ (1931) ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಪಂಜೆ ಮಂಗಳರಾಯರು, ಗೋವಿಂದ ಪೈ, ಎಮ್. ಎನ್. ಕಾಮತರು ಇವರ ಸಮಕಾಲೀನರು.

ಕನ್ನಡದ ಅಶ್ವಿನಿ ದೇವತೆಗಳು ಎಂದು ಕರೆಸಿಕೊಂಡ ಇಬ್ಬರಲ್ಲಿ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಒಬ್ಬರು, ಇನ್ನೊಬ್ಬರು ಟಿ. ಎಸ್. ವೆಂಕಣ್ಣಯ್ಯ. 'ಕನ್ನಡಿಗರೇ, ನಮ್ಮ ಕನ್ನಡವನ್ನು ಇಂಡಿಯಾ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಆಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ಅದನ್ನು ನೀವು ಅಲಕ್ಷ್ಯ ಮಾಡಿದರೆ ಮಿಕ್ಕ ಯಾವ ದೇಶದ ಜನರೂ ಎತ್ತಿ ಹಿಡಿಯಲಾರರು.' ಎಂದು ಘೋಷಿಸಿದ ಶಾಸ್ತ್ರಿಗಳು ಆಜೀವ ಪರ್ಯಂತ ಇದಕ್ಕಾಗಿ ಶ್ರಮಿಸಿದರು. ಅವರ ಈ ಮಾತುಗಳು ಘೋಷಣೆಯಾಗುಳಿಯದೆ ಪೂರ್ಣ ರೂಪದಲ್ಲಿ ಕಾರ್ಯಗತಗೊಳಿಸುವುದು ನಮ್ಮೆಲ್ಲರ ಕರ್ತವ್ಯ. ಅವರು ತುಳಿದ ಹಾದಿಯಲ್ಲಿ ನಾವು ನಡೆದು ಗುರಿ ಮುಟ್ಟಬೇಕಾದ್ದು ನಮ್ಮ ಧರ್ಮ, ನಮ್ಮ ಪವಿತ್ರ ಗುರಿ" ಮೇಸ್ಟರ ಮಾತು ಮುಗಿಯುವ ಮುನ್ನವೇ ಅಲ್ಲಿ ಸೇರಿದ್ದ ಬಾಲಕ ವೃಂದ ಒಕ್ಕೊರಳಿನಿಂದ ಕೂಗಿತು.

"ಕನ್ನಡಕ್ಕಾಗಿ ದುಡಿಯುತ್ತೇವೆ. ಕನ್ನಡಕ್ಕಾಗಿ ಮಡಿಯುತ್ತೇವೆ".

"ಕನ್ನಡ ಎನೆ ಕುಣಿದಾಡುವುದೆನ್ನೆದೆ, ಕನ್ನಡ ಎನೆ ಕಿವಿ ನಿಮಿರೇಳುವುದು..." ವಾಸುದೇವರಾಯರು ನುಡಿದರು.

ವ್ಯಾಸರಾಯರು ತೃಪ್ತಿಯ ನಗು ಬೀರಿದರು. "ನಾನು ಇಷ್ಟು ದಿನ ಕವಿ, ಕಾವ್ಯ ವಿಚಾರ ಹೇಳಿದ್ದು ಸಾರ್ಥಕವಾಯ್ತು. ನನ್ನ ಮಾತ್ನಿಂದ್ಲೆ ನಿಮ್ಮಲ್ಲಿ ಇಷ್ಟು ಜಾಗೃತಿ ಆಗಿರ್ಬೇಕಾದ್ರೆ ಶಾಸ್ತ್ರಿಗಳ ಕವಿವಾಣಿಯಿಂದ ಜನತೆ ಗುಯ್‌ಗುಟ್ಟುತ್ತಿದೆ. ನವಸ್ಫೂರ್ತಿ ಹೃದಯಕ್ಕೆ ಎಚ್ಚರಗೊಂಡಿದ್ದೇನು ಅತಿಶಯವಲ್ಲ. ಅವರು ಊದಿದ ಕಹಳೆಯ ದನಿ ಇನ್ನೂ ಜನಗಳ ಹೃದಯದಲ್ಲಿ ನಿರಂತರ ಸ್ಪಂದಿಸುವ ಅಪೂರ್ವ ಶಕ್ತಿ ನೀಡಿದೆ.

ಅಂಬಳೆ ರಾಮಕೃಷ್ಣಶಾಸ್ತ್ರಿ ಸಂಸ್ಕೃತದ ಮಹಾ ವಿದ್ವಾಂಸರು. **ಕೃಷ್ಣ ಶಾಸ್ತ್ರಿ**[2]ಗಳು ಇವರ ಪುತ್ರ, ಮೈಸೂರಿನಲ್ಲಿ ವಿದ್ಯಾಭ್ಯಾಸ. ಬಿ.ಎ. ಹಾಗೂ ಎಂ.ಎ.ಯನ್ನು ಮೊದಲ ದರ್ಜೆಯಲ್ಲಿ ಪಾಸು ಮಾಡಿ ಕಾಲೇಜು ಅಧ್ಯಾಪಕರಾದರು, ಟಿ. ಎಸ್. ವೆಂಕಣ್ಣಯ್ಯನವರ ನಂತರ ಪ್ರೊಫೆಸರ್ ಹುದ್ದೆಗೇರಿ 1946ರಲ್ಲಿ ನಿವೃತ್ತರಾದರು.

---

1 ಜೀವಿತ ಕಾಲ: ಕ್ರಿ.ಶ. 1888–1950. ಪುಟ 41 ನೋಡಿ.

2 ಜೀವಿತ ಕಾಲ: ಫೆಬ್ರವರಿ 1890–ಫೆಬ್ರವರಿ 1968.

ಇವರನು ಬಹುಮುಖ ಪ್ರತಿಭೆ, ಕನ್ನಡ ಸಂಸ್ಕೃತಗಳಲ್ಲದೆ ಬಂಗಾಳಿಯಲ್ಲೂ ಪಾಂಡಿತ್ಯ ಗಳಿಸಿದ್ದರು. ವಚನ ಭಾರತ 'ಕಥಾಮೃತ' ಗದ್ಯಸಾಹಿತ್ಯದಲ್ಲಿ, ಸಂಸ್ಕೃತ ನಾಟಕ 'ಭಾಸ' 'ಬಂಕಿಮ ಚಂದ್ರ' ವಿಮರ್ಶೆಯ ಕ್ಷೇತ್ರದಲ್ಲಿ ಅಪೂರ್ವ ಕೃತಿಗಳು, ಸೆಂಟ್ರಲ್ ಕಾಲೇಜಿನ ಕನ್ನಡ ಸಂಘ ಆರಂಭಿಸಿದ 'ಪ್ರಬುದ್ಧ ಕರ್ಣಾಟಕಕ್ಕೆ' ಸಂಪಾದಕರಾಗಿದ್ದು ಇವರು ಮಾಡಿರುವ ಕನ್ನಡ ಸೇವೆ ಅಭೂತಪೂರ್ವವಾದುದು. 'ಶ್ರೀಪತಿಯ ಕಥೆಗಳು' ಶಾಸ್ತ್ರಿಗಳ ಮಗಳು ಅಕಾಲ ಮರಣ ಹೊಂದಿದಾಗ ಕುದಿದೆದ್ದು ಹೊರ ಬಿದ್ದ ಕಥೆಗಳ ಸಂಕಲನ. 'ನಿಬಂಧ ಮಾಲಾ' ರವೀಂದ್ರಠಾಕೂರರ ಲೇಖನಗಳ ಭಾಷಾಂತರ. ಇದು ಶಾಸ್ತ್ರಿಗಳ ಕೊನೆಯ ಕಾಲದ ಅಪೂರ್ವ ಕಾಣಿಕೆ. 'ನಿರ್ಮಲ ಭಾರತಿ' ಮುಕ್ಕಳಿಗಾಗಿ ಬರೆದ ಕಥೆ, ಇವರು 1941ರಲ್ಲಿ ಹೈದರಾಬಾದಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರ ಹಿತನುಡಿ ಪಾಲಿಸಿ ಕನ್ನಡದ ಸೇವೆ ಮಾಡಿದರೆ ಅವರಿಗೆ ಶ್ರದ್ಧಾಂಜಲಿ ನೀಡಿದಂತೆ ಆಗುತ್ತದೆ". ವ್ಯಾಸರಾಯರು ನೀರು ಕುಡಿದು ಮತ್ತೆ ಮಾತು ಮುಂದುವರಿಸಿದರು.

'ಜ್ಞಾನಪೀಠ ಪ್ರಶಸ್ತಿವಿಜೇತ ಮಾಸ್ತಿ ಕನ್ನಡದ ಆಸ್ತಿ' ಇದು ಸತ್ಯವಾತು, ಅವರು ಸಾಹಿತ್ಯ ಭಂಡಾರಕ್ಕಿತ್ತಿರುವ ಕೊಡುಗೆ ಅಪಾರ. 93–94 ಹರಯದ ಮಾಸ್ತಿ ಹುಮ್ಮಸ್ಸಿನಿಂದ ಸಾಹಿತ್ಯದ ಬಹಳಷ್ಟು ಕಾರ್ಯಕ್ರಮಗಳಲ್ಲಿ ಸಕ್ರಿಯಪಾತ್ರ ವಹಿಸುತ್ತಿದ್ದುದನ್ನು ನೋಡಿದ ಯುವಕರಿಗೆ ಹೊಸ ಸ್ಫೂರ್ತಿ ದೊರಕುತ್ತಿತ್ತು. ವೃದ್ಧರಿಗೆ ಹುಮ್ಮಸ್ಸು ಮೂಡುತ್ತಿತ್ತು."

"ಇವರು '**ಶ್ರೀನಿವಾಸ**' ಅಂತ ಏಕೆ ಕಾವ್ಯನಾಮ ಇಟ್ಕೊಂಡ್ರು ಸಾರ್ ?" ದಿನಕರ ಪ್ರಶ್ನಿಸಿದ.

"**ಶ್ರೀನಿವಾಸ*** ಇದು ಅವರ ಕಾವ್ಯ ನಾಮ. ಮದರಾಸಿನಲ್ಲಿ ಎಂ.ಎ. ಮಾಡಿ ಪ್ರೊಬೇಷನರಿ ಅಸಿಸ್ಟೆಂಟ್ ಕಮೀಷನರ್ ಹುದ್ದೆಗೆ ಸೇರಿದ್ದು 1914ರ ಸುಮಾರಿನಲ್ಲಿ. ಆಗ ಇಂಗ್ಲೀಷಿಗೆ ಹೆಚ್ಚು ಪ್ರಾಧಾನ್ಯತೆ. ಸರ್ಕಾರದ ಉಚ್ಚ ಅಧಿಕಾರಿ ಕನ್ನಡದಲ್ಲಿ ಮಾತಾಡಿದರೆ, ವ್ಯವಹರಿಸಿದರೆ ತಮ್ಮ ಘನತೆಗೆ ಕುಂದು ಎಂದು ಎಣಿಸಿದ್ದ ಕಾಲ. ಆದರೆ ಮನಸ್ಸಿನಲ್ಲಿ ತುಂಬಿ ಬಂದ ವಿಷಯವನ್ನು ಕನ್ನಡದಲ್ಲೇ ಹೊರಗೆಡಹಲು ಅಂದಿನ ಅಸಿಸ್ಟೆಂಟ್ ಕಮೀಷನರ್ ಮಾಸ್ತಿ ವೆಂಕಟೇಶ ಐಯ್ಯಂಗಾರ್ 'ಶ್ರೀನಿವಾಸ' ರಾಗಿ ಸಾಹಿತ್ಯ ಪ್ರಪಂಚ ಪ್ರವೇಶಿಸಿದರು. ಇವರು ಭಾವನೆಗಳನ್ನು ಅಭಿವ್ಯಕ್ತ

---

* ಜೀವಿತ ಕಾಲ : ಜೂನ್ 6, 1891–ಜೂನ್ 6, 1986. 'ಮಾಸ್ತಿ' ಹುಟ್ಟಿದ ಊರು. ತಂದೆ : ರಾಮಸ್ವಾಮಿ ಅಯ್ಯಂಗಾರ್. ತಾಯಿ : ತಿಮ್ಮಮ್ಮ. ಅವರ ಇತ್ತೀಚಿನ ಕೃತಿಗಳು : ಅಂತರಗಂಗೆ, ಧರ್ಮಸಂರಕ್ಷಣೆ, ಥಿಂಕಿಂಗ್ ಆಫ್ ದ ಲೈಫ್, ಥಾಟ್ಸ್ ಆನ್ ರಿಲಿಜನ್.

ಪಡಿಸಲು ಮೊದಲು ಆರಿಸಿಕೊಂಡ ಮಾಧ್ಯಮ 'ಸಣ್ಣಕಥೆ'. ಅನಂತರ ಇವರು 'ಸಣ್ಣ ಕಥೆ'ಗಳ ಪಿತಾಮಹರೆನ್ನಿಸಿಕೊಂಡರು. ಇವರು ಬರೆದಿರುವಷ್ಟು ಸಣ್ಣಕಥೆಗಳನ್ನು ವೈವಿಧ್ಯಪೂರ್ಣವಾಗಿ ಮತ್ತ್ಯಾರೂ ಬರೆದಿಲ್ಲವೆಂದು ಧೈರ್ಯವಾಗಿ ಹೇಳಬಹುದು. 'ಸುಬ್ಬಣ್ಣ' ಸಣ್ಣ ಕಾದಂಬರಿ ಅಥವಾ ನೀಳ್ಗತೆ. ವಸ್ತು ರಚನೆ, ಶೈಲಿಯ ಮಾಧ್ಯಮ ದಲ್ಲಿ ಇದನ್ನು ಮೀರಿಸುವ ಇನ್ನೊಂದು ಗ್ರಂಥ ಇನ್ನೂ ಹೊರಬಂದಿಲ್ಲ. ಇದೊಂದು ಅಪೂರ್ವ ಕೊಡುಗೆ, ಇವರ ಸಾಹಿತ್ಯಸೃಷ್ಟಿ ಕಥೆಗಳಿಗೇ ಸೀಮಿತವಾಗಿಲ್ಲ. ಕಾದಂಬರಿ, ನಾಟಕ ಕವನಗಳಿಗೂ ಪಸರಿಸಿದೆ. ಕುಶಲತೆ, ರಸಜ್ಞತೆ ಪ್ರತಿಭೆ, ಸಾಹಿತ್ಯ ವಿಮರ್ಶೆಯಲ್ಲಿ ಮತ್ತಷ್ಟು ವಿಕಸಿಸಿವೆ, 'ಚೆನ್ನ ಬಸವನಾಯಕ', 'ಚಿಕ ವೀರರಾಜೇಂದ್ರ'*. ಬೃಹತ್ ಕಾದಂಬರಿಗಳು, ಒಂದರಲ್ಲಿ ಬಿದನೂರಿನ ಕಥೆ ಇದ್ದರೆ ಇನ್ನೊಂದರಲ್ಲಿ ಕೊಡಗಿನ ಕಡೆಯ ರಾಜನ ವಿಷಯವಿದೆ. ಕಥೆಗಾರ ಮಾಸ್ತಿ ಪದ್ಯದ ಮೂಲಕವೂ ಸೊಗಸಾದ ಸಾಹಿತ್ಯ ನೀಡಿದ್ದಾರೆ. 'ನವರಾತ್ರಿ'ಯಲ್ಲಿ ಇದು ಚೆನ್ನಾಗಿ ಮೂಡಿದೆ. ಕಲ್ಪನೆ, ಭಾವ ಸಂಪತ್ತು ಮನೋಜ್ಞವಾಗಿ ಇಲ್ಲಿ ಹರಿದಿದೆ. ಪದ ಕಥೆಯ ಧಾಟಿ ನೋಡಿ ಹೇಗಿದೆ.

ಪೂರ್ವದಲಿ ವಾರಣಾಸಿಯ ದೇಶವನ್ನು ಆಳ್ದ
ರಾಮನೃಪ ಎಂಬ ಹೆಸರಿನ ಒಬ್ಬ ದೊರೆಯುಂಟು
ಅರಮನೆಯ ಸುಖದ ಸಂಪದದ ಗರ್ಭದೊಳುದಿಸಿ
ಕೈಗೆ ಕಾಲಿಗೆ ತೊಡರುವಂತೆ ಸುತ್ತಲು ನೆರೆದ
ಸಂಚಾರಿ ಜನದ ಮಧ್ಯದೆ ಬೆಳೆದ ಭೂಪಾಲ.
ಒಡಲು ಹರೆಯದ ಹೋಗುವ ದಿನಕೆ ನಂಟಿನ ಒಂದು
ಆಮಪೆ, ಹರೆಯದ ಹೆಣ್ಣ ಮದುವೆಯಾದನು......

'ವೀರ ಲಕ್ಷ್ಮಮ್ಮ'ನ ಕಥೆಯ ಅಂತ್ಯ ನೋಡಿ ಹೇಗಿದೆ–

ಎಂಥ ದಿಟ್ಟತನದೆಮ್ಮ ಲಕ್ಷ್ಮಮ್ಮ। ನಮ್ಮೂರಿನಲಿ
ಹಿಂದೆ ಬಹುದಿಟ್ಟ ಹೆಂಗಸು ವೀರ ತಿಮ್ಮಮ್ಮ
ಎಂಬಾಕೆ ಯುದ್ಧದಲ್ಲಿ ಹಗೆಯ ಸೋಲಿಸಿ ನಮ್ಮ
ಊರ ರಕ್ಷಿಸಿದಳೆಂಬರು. ನಮ್ಮ ಲಕ್ಷ್ಮಮ್ಮ
ಅಂಥದೇ ಹೆಣ್ಣು. ಬರಿ ಲಕ್ಷ್ಮಮ್ಮನಲ್ಲ : ಇದು
ವೀರ ಲಕ್ಷ್ಮಮ್ಮ" ಎಂದರು

ಸಾಹಿತ್ಯ ವಿಮರ್ಶೆಯಲ್ಲಿಯೂ ಮಾಸ್ತಿಯವರದು ಪಳಗಿದಕೈ. ಅವರ ವಿಮರ್ಶೆಗಳ ಕೆಲವು ಸಂಕಲನಗಳು ಪ್ರಕಟವಾಗಿವೆ. ಸುಂದರಶೈಲಿ. ಗಾಂಭೀರ್ಯ ಪೂರ್ಣ ನವಜೈತನ್ಯ ಇವುಗಳ ವೈಶಿಷ್ಟ್ಯ. 'ಭಾರತ ತೀರ್ಥ'. 'ಆದಿಕವಿ ವಾಲ್ಮೀಕಿ'

* ಜ್ಞಾನಪೀಠ ಪ್ರಶಸ್ತಿ (1984) ಲಭಿಸಿದೆ.

ಇವು ಅವರ ವಿದ್ವತ್ತು ಮತ್ತು ವಿಚಾರ ಶೀಲತೆಗೆ ನಿದರ್ಶನ. ರಾಮಕೃಷ್ಣ ಪರಮಹಂಸರ, ಹಾಗೂ ಠಾಕೂರರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. 'ಭಾವ' ಇವರ ನೆನಪುಗಳ ಆತ್ಮವೃತ್ತ. ಮೂರು ಸಂಪುಟಗಳ ಬೃಹತ್‌ಗ್ರಂಥ. 'ಯಶೋಧರ' 'ಕಾಕನಕೋಟೆ'.'ಶಿವಾಜಿ' 'ತಿರುಪಾಣಿ' 'ತಾಳಿಕೋಟೆ' ಜನಪ್ರಿಯ ರಂಗ ನಾಟಕಗಳು. 'ಪುರಂದರದಾಸ' 'ಭಟ್ಟರ ಮಗಳು' ಇತ್ತೀಚಿನ ಯಶಸ್ವಿ ನಾಟಕಗಳು. ಇವುಗಳಲ್ಲದೆ ಶೇಕ್ಸ್‌ಪಿಯರ್, ಮತ್ತು ಠಾಕೂರರ ಹಲವು ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

**ಸಾಲಿ ರಾಮಚಂದ್ರರಾವ್**[1] : ಕನ್ನಡದ ಹಿರಿಯ ಸಾಹಿತಿ, ಪತ್ರಕರ್ತ ಹಾಗೂ ಸ್ವಾತಂತ್ರ್ಯ ಯೋಧ. ಇವರ ಸಾಹಿತ್ಯದ ಕೊಡುಗೆ ಅಪಾರ. 23 ಕೃತಿಗಳನ್ನು ರಚಿಸಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೈಯಾಡಿಸಿ ಯಶಸ್ಸು ಗಳಿಸಿದ್ದ ವ್ಯಕ್ತಿ. 'ತಿಲಾಂಜಲಿ' ಶೋಕ ಗೀತೆಗಳ ಸಂಕಲನ, ಇದೇ ಈ ದಿಸೆಯಲ್ಲಿನ ಪ್ರಥಮ ಕೃತಿ. 'ಚಿಗುರೆಲೆ', 'ಕುಸುಮಾಂಜಲಿ', 'ಚಿತ್ರಸೃಷ್ಟಿ' ಇವರ ಕವನ ಸಂಕಲನಗಳು. 'ಅಭಿಸಾರ'–ಕಥನಕಾವ್ಯ. 'ಜಯಗುರುದೇವ', 'ಯದುಪತಿ'–ಕಾದಂಬರಿಗಳು. 'ಸುಕನ್ಯ'–ಏಕಾಂಕ ನಾಟಕ. 'ಬುದ್ಧನ ಜಾತಕ'ಗಳನ್ನು ಕನ್ನಡಕ್ಕೆ ತಂದಿದ್ದಾರೆ. ಆಲೂರ ವೆಂಕಟರಾಯರ 'ಜಯಕರ್ನಾಟಕ'ದಲ್ಲಿ ಕೆಲಕಾಲ ಸಂಪಾದಕ ವಿಭಾಗದಲ್ಲಿ ದುಡಿದಿದ್ದರು.

**ವೀರಕೇಸರಿ ಸೀತಾರಾಮಶಾಸ್ತ್ರಿ**[2] : ಇವರು ಬಾಲ್ಯದಲ್ಲೇ 'ಕೇಸರಿ'ಯಿಂದ ಪ್ರಭಾವಿತರಾಗಿ ರಾಷ್ಟ್ರೀಯ ಭಾವನೆಯನ್ನು ಮೈಗೂಡಿಸಿಕೊಂಡು 1928ರಲ್ಲಿ 'ವೀರಕೇಸರಿ' ಪತ್ರಿಕೆ ಪ್ರಾರಂಭಿಸಿದರು. ಅಂದಿನಿಂದಲೇ ಸೀತಾರಾಮಶಾಸ್ತ್ರಿ 'ವೀರಕೇಸರಿ ಸೀತಾರಾಮಶಾಸ್ತ್ರಿ' ಆದದ್ದು. ತಂದೆ ಸಂಸ್ಕೃತದ ಮಹಾಪಂಡಿತರಾಗಿದ್ದುದರಿಂದ ಇವರು ಶಾಲೆಗೆ ಹೋಗಿ ವಿದ್ಯೆ ಕಲಿಯದಿದ್ದರೂ ತಂದೆಯಿಂದ ವಿದ್ಯಾಭ್ಯಾಸ ಕಲಿತು ಮಹಾ ಪಂಡಿತರಾದರು. 'ಸಾಧ್ವಿ' ಹಾಗೂ 'ಸಂಪದಭ್ಯುದಯ' ದಲ್ಲಿನ ದುಡಿತ ಇವರಿಗೆ ಪತ್ರಿಕಾ ಕ್ಷೇತ್ರಕ್ಕೆ ದುಡಿಯುವ ಹುಮ್ಮಸ್ಸು ತಂದುಕೊಟ್ಟಿದ್ದಲ್ಲದೆ ಯಶಸ್ಸುಗಳಿಸಲು ಸ್ಥೈರ್ಯವನ್ನು ನೀಡಿತು. 'ಗ್ರಾಮ ಜೀವನ' ಸರಕಾರಿ ಪತ್ರಿಕೆಯಲ್ಲೂ ಕೆಲಕಾಲ ದುಡಿದು ಅನಂತರ ಸ್ವಂತ ಪತ್ರಿಕೆ 'ವೀರಕೇಸರಿ'ಯಲ್ಲಿ ರಾಷ್ಟ್ರೀಯತೆಯ ಕಹಳೆ ಊದತೊಡಗಿದರು, ರಾಜದ್ರೋಹಿಯೆಂದು ಜೈಲು ಸೇರಿದಾಗಲೇ ಸಿದ್ಧವಾದುದು ಇತರ 'ದೌಲತ್' ಕಾದಂಬರಿ. ಇದು ಈಗ ಸುಮಾರು 10 ಮುದ್ರಣ ಕಂಡಿದೆ. ವಿಜಯನಗರದ ಮೇಲೆ 1000 ಪುಟಗಳವರೆಗೆ ಸಾಹಿತ್ಯ

---

1 ಜೀವಿತ ಕಾಲ : ಅಕ್ಟೋಬರ್ 1888 ರಿಂದ ಅಕ್ಟೋಬರ್ 1978. ಪುಟ 41 ನೋಡಿ.

2 ಜೀವಿತ ಕಾಲ : ಕ್ರಿ.ಶ. 1893–1971. ತಂದೆ : ಮದ್ದೂರು ನಾಗೇಶ ಶಾಸ್ತ್ರಿ. ತಾಯಿ : ಪಾರ್ವತಮ್ಮ. ಹುಟ್ಟಿದ ಊರು : ನಂಜನಗೂಡು.

ರಚಿಸಿದ್ದಾರೆ. 'ಸ್ವರ್ಣವೃಷ್ಟಿ', 'ಸಾಮ್ರಾಜ್ಯ ವೈಭವ', 'ಧರ್ಮಗ್ಲಾನಿ', 'ಅಭ್ಯುದಯ', 'ಅಸ್ತಮಾನ' ಮುಂತಾದವು ಕಾದಂಬರಿಗಳು. ಪಂಚವಟಿ, ಬೃಂದಾವನ, ಲಕ್ಷ್ಮೀಸಂಸಾರ, ಚಿತ್ರಪಾಲ, ಸಾಮಾಜಿಕ ಕಾದಂಬರಿಗಳು. ಬೈರಾಂಖಾನ್, ಮಹಾರಾಷ್ಟ್ರ ವಿಪ್ಲವ, ಫಕೀರನ ವಿದ್ರೋಹ, ಅಪರಾಧಿ ಸಾಮ್ರಾಟ್ ಛತ್ರಪತಿ ಶಿವಾಜಿ–ಚಾರಿತ್ರಿಕ ಕಾದಂಬರಿಗಳು. ಬಾಲ್ಯದಲ್ಲೇ ಒಂದು ಕಣ್ಣನ್ನು ಕಳೆದುಕೊಂಡಿದ್ದ ಇವರು 1947ರಲ್ಲಿ ಇನ್ನೊಂದನ್ನು ಕಳೆದುಕೊಂಡರು. ಮಕ್ಕಳ ಸಹಾಯದಿಂದ ಮುಂದೆಯೂ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು.

> ಬಡಗನ್ನಡದ ನುಡಿವೆಣ್ಣ
> ಬಡತನದಿಂ ಬಿಡಿಸಿ ನಾಡ ಸಿರಿವೆಣ್ಣಂ ಮಾ
> ಳ್ಪೊಡೆ ಮನೆ ಮನೆಗಂ ನಾಡಿಗ
> ರಿಡ ಲಕ್ಕಂ ಮಾಸ ಮಾಸಕೆ ನಸುಂ ಪಣಮಂ.

ಎಂದು ಕಳಕಳಿಯ ಸೂಚನೆ ಇತ್ತ 'ವಿದ್ಯಾನಿಧಿ' **ಸಿದ್ಧಾಂತಿ ಶಿವಶಂಕರಶಾಸ್ತ್ರಿ**[1] ಒಳ್ಳೆಯ ವಿದ್ವಾಂಸರ ಮನೆತನದಲ್ಲಿ ಹುಟ್ಟಿದ್ದುದರಿಂದ ಕನ್ನಡ, ಸಂಸ್ಕೃತ, ತೆಲುಗಿನಲ್ಲಿ ಪಾಂಡಿತ್ಯ ಗಳಿಸಿದ್ದರು. ಇವರ ಕೃತಿಗಳು 'ಕರ್ನಾಟಕ ನಳೋಪಾಖ್ಯಾನ' 'ಅಭಿನವ ಕಾದಂಬರಿ', 'ಕರ್ನಾಟಕ ನರಕಾಸುರ ವಿಜಯವ್ಯಾಯೋಗಂ', 'ಶ್ರೀ ಶಂಕರ ಕಥಾಮೃತ' ಮುಂತಾದುವುಗಳು. ಕನ್ನಡದ ಉನ್ನತಿಗಾಗಿ ಅಹರ್ನಿಶಿ ಶ್ರಮಿಸಿದ್ದ ಶ್ರದ್ಧಾವಂತ ಸಾಹಸಿ ಸಾಹಿತಿಗಳಾದ ಇವರು ಬಿಜಾಪುರದಲ್ಲಿ 1923ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

'ರಾಜ ಸೇವಾಸಕ್ತ' ಪದ್ಮಶ್ರೀ ಬಿರುದಾಂಕಿತ **ಸಿ. ಕೆ. ವೆಂಕಟರಾಮಯ್ಯ**[2]ನವರು ಕನ್ನಡ ಹೆಮ್ಮೆ ಪಡುವಂತ ಮೇಧಾವಿ ಪಂಡಿತರು, ಖ್ಯಾತ ಲೇಖಕರು, ಶ್ರೇಷ್ಠವಾಗ್ಮಿ, ಉತ್ತಮ ಅನುವಾದಕರು. ಎಂ.ಎ. ಮತ್ತು ಎಲ್.ಎಲ್.ಬಿ. ಮುಗಿಸಿ ವಕೀಲ ವೃತ್ತಿ ಕೈಗೊಂಡರು, 1924ರಲ್ಲಿ ಕನ್ನಡ ಭಾಷಾಂತರಕಾರರಾಗಿ ಸರಕಾರಿ ಉದ್ಯಮ ಹಿಡಿದರು. ಇವರ ಬರಹಗಳು 'ನೀನೇ ನನ್ನ ಮುದ್ದುಕೃಷ್ಣ' ಉತ್ತಮ ಕಥೆ; 'ಮಂಡೋದರಿ' ಪಂಡಿತ ಮಾನ್ಯ ನಾಟಕ; 'ಭಾಸ ಮಹಾಕವಿ' ಶ್ರೇಷ್ಠ ವಿಮರ್ಶಕ ಗ್ರಂಥ; 'ನಚಿಕೇತ' 'ಅಬ್ರಾಹಂಲಿಂಕನ್' 'ತುರಾಯಿ' 'ಹಳ್ಳಿಯ ಕಥೆಗಳು' 'ನಮ್ಮ ಸಮಾಜ' ಇತರ ಕೃತಿಗಳು. ಸಾವಿರದೊಂದು ರಾತ್ರಿ 'ಅರೇಬಿಯನ್ ನೈಟ್ಸ್'ನ ಕನ್ನಡ ಅನುವಾದ. ಇವರ ಸಾಹಿತ್ಯಸೇವೆಯನ್ನು ಮೆಚ್ಚಿದ ಕನ್ನಡದ ಜನತೆ ಇವರನ್ನು 1947ರಲ್ಲಿ ಹರಪನಹಳ್ಳಿ ಸಾಹಿತ್ಯ ಸಮ್ಮೇಳನದ

---

1 ಜೀವಿತ ಕಾಲ: ಕ್ರಿ. ಶ. 1894–1942.

2 ಜೀವಿತ ಕಾಲ: ಕ್ರಿ. ಶ. 1896–1973. ಹುಟ್ಟಿದ ಊರು: ಚನ್ನಪಟ್ಟಣ ತಾಲ್ಲೂಕಿನ ಕೊಟ್ಟು. ತಂದೆ: ಕೃಷ್ಣಪ್ಪ. ತಾಯಿ: ನಂಜಮ್ಮ.

ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತ್ತು. ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ ಇವರಿಗೆ 1971ರಲ್ಲಿ ಪ್ರಶಸ್ತಿ ಇತ್ತು ಗೌರವಿಸಿದೆ.

**ಡಾ॥ ಅಂಬಿಕಾತನಯದತ್ತಾತ್ರೇಯ ರಾಮಚಂದ್ರಬೇಂದ್ರೆ*** ಕವಿ 'ಅಂಬಿಕಾತನಯದತ್ತ'ನಾದದ್ದು 1918ರಲ್ಲಿ. ಅವರ ಪ್ರಥಮ ಕವಿತೆ 'ಪ್ರಭಾತ' ಪತ್ರಿಕೆಯಲ್ಲಿ ಮೊದಲು ಪ್ರಕಟಗೊಂಡಾಗ, ಆಗ ಅವರಿಗ ಸುಮಾರು 22 ವರ್ಷ ವಯಸ್ಸು. ಭಾವದ ಬೆನ್ನೇರಿ, ಕಲ್ಪನಾವಿಲಾಸದಿಂದ ಮೇರೆದು, ಕವನದ ಶೃಂಗಾರ ದಂಡೆಯನ್ನು ಹೆಣೆಯುತೊಡಗಿದ ಈ ಕವಿಗೆ 'ಡಾಕ್ಟರ್' ಗೌರವಪ್ರಶಸ್ತಿ ದೊರಕಿದ್ದು ಕಿಂಚಿತ್ತು ವೇಳೆಯೇ ಆದರೂ ತಮ್ಮ ನಾಮದ ಹಿಂದೆ ಡಿ. ಆರ್. ಹುಟ್ಟುವಾಗಲೇ ಪಡದು ಬಂದಿದ್ದುದು ಔಚಿತ್ಯವೇ ಆಗಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಪುರಸ್ಕಾರ, 'ಪದ್ಮಶ್ರೀ' ಪ್ರಶಸ್ತಿ, ರಾಷ್ಟ್ರ ಅಕಾಡೆಮಿ ಪುರಸ್ಕಾರ, ಅನಂತರ ಎಂತಹವರೂ ಹೆಮ್ಮೆ ಪಡುವಂತಹ 'ಜ್ಞಾನಪೀಠ' ಪ್ರಶಸ್ತಿ ಒಂದರ ಮುಂದೊಂದು ಇವರನ್ನು ಅರಸಿ ಬಂದು ಹರಸಿದುದು ಈ ಕವಿಯ ಕಾವ್ಯಕೃಷಿಗೆ ಇತ್ತ ನೈಜವಾದ ಬೆಲೆ. ಇಂತಹ ಉದಾತ್ತ ವ್ಯಕ್ತಿಯನ್ನು ಹೊಂದಿದ ನಾಡು ನಿಜವಾಗಿ ಹೆಮ್ಮೆ ಪಡಬೇಕಾದ್ದೆ. ಭಾಷೆಯ ಸಿರಿಸೌಂದರ್ಯ ಪ್ರದರ್ಶಿಸಿ ಮತ್ತುಬರಿಸುವ ಕಾವ್ಯ ಪರಿಮಳ ರಾಷ್ಟ್ರವ್ಯಾಪಿಹರಿಸಿ, ಕನ್ನಡದ ನುಡಿ ಮಾಧುರ್ಯದಿಂದ ಎಲ್ಲ ತಲೆದೂಗುವಂತೆ ಮಾಡಿದ ಕೀರ್ತಿ ಸಾಧನ ಕೇರಿಯ ಕವಿವರ್ಯ 'ನಾಕು ತಂತಿಯ ವೈಣಿಕ'·ಗಂಗಾವತರಣದ ಭಗೀರಥ, 'ನಾದಲೀಲೆ'ಯ ನಾದಲೋಲ ಬೇಂದ್ರೆ ಅವರಿಗೆ ಸೇರಿದ್ದು. ಕಲ್ಪನೆ 'ಗರಿ'ಬಿಚ್ಚಿ ಮಯೂರ ನೃತ್ಯ ಪ್ರಾರಂಭಿಸಿದಾಗ 'ಉಯ್ಯಾಲೆ' ಯಲ್ಲಿ ತೂಗಾಡುತ್ತಿದ್ದು ಕವಿ ಹೃದಯದಿಂದ ಹೊರಬಂದದ್ದು' ಸಖೀಗೀತ', 'ಹಾಡು ಪಾಡು', 'ಸೂರ್ಯಪಾನ' 'ಕಾಮ ಕಸ್ತೂರಿ' ಮುಂತಾದವುಗಳು ಇತರ ಕವನ ಸಂಗ್ರಹಗಳು. 'ಅರಳು ಮರಳು' 1958ರ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಪಾರಿತೋಷಕಗಳಿಸಿದ ಕಾವಗುಚ್ಚ. 'ನಾಕು ತಂತಿ' ಜ್ಞಾನಪೀಠ ಪ್ರಶಸ್ತಿ ದೊರಕಿಸಿ ಕೊಟ್ಟ ಕೃತಿ. ಬೇಂದ್ರೆ ಅವರ ಲೇಖನ ಶಕ್ತಿ ಕನ್ನಡಕ್ಕೆ ಸೀಮಿತವಾಗಿಲ್ಲ. ಮನೆಯ ಮಾತಾದ ಮರಾಠಿಯಲ್ಲಿ ಬರೆದ ಸಂವಾದಕ್ಕೆ ಕೇಳ್ಕರ್ ಬಹುಮಾನ ದೊರೆತಿದೆ. ಇಂಗ್ಲೀಷಿನಿಂದ ಭಾಷಾಂತರಿಸಿರುವ ಅರವಿಂದರ 'ಭಾರತೀಯ ಪುನರ್ಜನ್ಮ', 'ರಾನಡೆ'ಯವರ 'ಉಪನಿಷದ್ರಹಸ್ಯ' ಅಮೂಲ್ಯ ಗ್ರಂಥಗಳು.

ಈ ವರಕವಿಯ ಕಾವ್ಯದ ಬಗ್ಗೆ ಹಿರಿಯ ಇನ್ನೊಬ್ಬ ಕವಿ 'ತೀ.ನಂ.ಶ್ರೀ' ಯವರು 'ಬೇಂದ್ರೆಯವರ ಕವಿತೆ ಒಂದು ಚಿಲುಮೆ, ನೋಡಲು ಚಿಕ್ಕದು. ತೋಡಿದಷ್ಟೂ ಅರ್ಥ ಉಕ್ಕುತ್ತಲೇ ಇರುತ್ತದೆ'. ಎಂದು ಹೇಳಿರುವ ಮಾತು ಬಹಳ

---

* ಜೀವಿತ ಕಾಲ: 31-1-1896 ರಿಂದ 26-10-1981. ಹುಟ್ಟಿದ ಊರು: ಧಾರವಾಡ. ತಂದೆ: ರಾಮಚಂದ್ರ ಭಟ್ಟ. ತಾಯಿ: ಅಂಬಿಕೆ.

ಔಚಿತ್ಯ ಪೂರ್ಣವಾಗಿದೆ. ಇದರ ಕಾವ್ಯ ವೀಣೆಯನ್ನು ಮಿಡಿದರೆ ಸಾಕು ನಾದ ಲಹರಿ ವಿವಿಧ ತಾಳಲಯದಲ್ಲಿ ಹರಿದು ಸಂಗೀತ ಸುಧೆಯಲ್ಲಿ ಮಿಂಯುವಂತೆ ಮಾಡುತ್ತದೆ. ಕಲ್ಪನೆ ಸುತ್ತಲೂ ಸುಂದರವಾದ ಲೋಕವನ್ನೇ ನಿರ್ಮಿಸಿರುತ್ತದೆ. ಭಾವದ ಅಮಲಿನಲ್ಲಿ ನಮ್ಮನ್ನು ನಾವೇ ಮರೆತಿರುತ್ತೇವೆ.

'ಅರಳು ಮರಳು'ವಿನ ಪುಟ ಪುಟದಲ್ಲಿ ಬೇಂದ್ರೆ ಅವರ ಪ್ರತಿಭೆ ಅರಳಿ ಸ್ಫುಟಗೊಂಡಿರುವುದನ್ನು ಕಾಣುತ್ತೇವೆ. ಇಲ್ಲಿ ಏಕನಾದದ ಶೃತಿ, ವೀಣೆಯ ಮಿಡಿತ, ತಬಲದ ತುಡಿತ, ಸಂಗೀತ ಸುಧೆ ಎಲ್ಲವೂ ಲಭ್ಯವಿದೆ.

'ಮರುಳಲ್ಲ ನಾನು, ಮರುಳಾದೆನಯ್ಯಾ'
ನನ್ನೆದೆಯು ಮರುಳ ಸಿದ್ಧ
ನಿಮ್ಮರುಳಿನಿಂದ ಮರಮರಳಿ ಅರಳಿ
ಸ್ಫುಟವಾಗಿ ಭಾವ ಶುದ್ಧ.

'ಓ ತಾಯಿ ಬಂದೆ, ಮಾ ಮಾಯಿ ಅಂದೆ, ಈ ಬಾಯಿ ತುಂಬು ಒಂದೇ
ಮಕರಂದ ಪಾನದ ಝರೀ
ತೆಂತೆರಿ ನಿನ್ನ ತಾವರೀ
ಬಂದ್ವದ ತುಂಬಿಯಾ ಮರೀ'

o o o o

'ತಿರುಳು ತಿಳಿಯಬೇಕು ಜೇನ್ನೊಣ ಹೂವಿನರಸ ಮುಕ್ತಿಧಾಂಗ
ಗಾಳಿ ಸುಳಿಯಲೇ ಹೂವಿನ ಕಂಪು ಹಗುರ ಎತ್ತಿಧಾಂಗ
ನಸುಕಿನ ಗಾಳಿ ಸಕ್ಕರಿ ಜಂಪಿನ ಮೈಗೆ ಹತ್ತಿಧಾಂಗ'.

ಕವಿ ಹೃದಯ ಸಿಡಿದೆದ್ದಾಗ ಬಂದ ಮಾರ್ಮಿಕ ಮಾತು

'ಹಿಂಸೆ ಕೊನೆಗೆ ಹಿಂಸೆಯನ್ನು ಗುಂಡು ಹಾಕಿಕೊಂಡಿತೋ ತನ್ನ ಕೊಲೆಯು ಕೊನೆಗಾಣಿಸೆ ಇವಗೇ ಶರಣು ಬಂದಿತೋ'

ಜ್ಞಾನಪೀಠ ಪ್ರಶಸ್ತಿ ಪಡೆದ 'ನಾಕು ತಂತಿ' ತುಡಿತ ಕೇಳಿ.

"ತಾನೊ ? ನಾನೊ ?
ನೀನೊ ?
ಏನೇನೋ !
ಆತನೊ ? ಆತ್ಮನೊ ?
ಅವನೊ ?
'ನಾಕು ತಂತಿ'ಯಲ್ಲಿ
'ನಾನು' 'ನೀನು'
'ಆನು' 'ತಾನು'
ನಾ ನಾಕು ತಂತಿ"

ಇಲ್ಲಿ ಭಾವ ಭಾರವಾಗಿದೆ. ಕಾವ್ಯ ಕುಸುಮ ಕಲ್ಪನೆಯ ಉತ್ತುಂಗ ಶಿಖರದ ಮೇಲೆ ಅರಳಿ ನಿಂತಿದೆ. ಸುಗಂಧ ಹರಿಸಿದೆ. ಅದನ್ನು ಸವಿಯಲು ನಾವೂ ಎತ್ತರ ಏರಬೇಕು.

'ಎಲ್ಲ ಎಲಾ ಎಂಥದೀ ಕನ್ನಡಿಯು'
ನನ ಮುಖ ವೆತ್ತ? ಈ ಪ್ರತಿಬಿಂಬ ವೆತ್ತ?
ಇದಿರಿಗಿದು ಮುಖವೊ...
ಚಹರೆ ಪಟ್ಟಿಯ ಚೇಷ್ಟೆ
ಉರುಟು ಗೂದಲು ಒರಟೊರಟು ಬಿರಟು ತಲೆ
ಪಣೆ ತುಂಬ ತುಂಡು ಗೆರೆ...

ಪದದ ಸಂಪತ್ತಿಗೆ ನಾದ ಮಾಧುರ್ಯ ತುಂಬುವುದರಲ್ಲಿ ಬೇಂದ್ರೆ ಎತ್ತಿದ ಕೈ.

'ಜುಮ್ ಜಮುರುಮುಜುಮು ಗುಂಗುಣು ದುಮುದುಮು'
ಈ ಇದೂ ತುಂಬಿ ಆ ಅದೂ ತುಂಬಿ
ಯಾವುದೂ ತುಂಬಿ ಇರದೇ
ತುಂಬಿ ಕಳೆದರೂ ತುಂಬಿ ಉಳಿದರೂ ತುಂಬಿ ತುಂಬಿ ಬರದೇ...

ಈ ವರ ಕವಿಯ ವೈಶಿಷ್ಟ್ಯ ಎಷ್ಟು ವರ್ಣಿಸಿದರೂ ಅಲ್ಪವೆ.

**ಚಿ ಪುಟ್ಟಸ್ವಾಮಯ್ಯ**[1] : ನಾಟಕಕಾರರಾಗಿ. ಕಾದಂಬರಿಕಾರರಾಗಿ ಅಪಾರ ಹೆಸರು ಗಳಿಸಿದ್ದಲ್ಲದೆ ಪತ್ರಿಕೋದ್ಯಮಿಯಾಗಿಯೂ ದುಡಿದು ಯಶಸ್ಸು ಸಾಧಿಸಿದ್ದು ಇವರ ಜೀವನದ ಅಗ್ಗಳಿಕೆ. 'ಒಕ್ಕಲಿಗರ ಪತ್ರಿಕೆ', 'ನ್ಯೂ ಮೈಸೂರ್', 'ಜನವಾಣಿ' ಹಾಗೂ 'ಪ್ರಜಾವಾಣಿ' ಇವರು ದುಡಿದ ಪತ್ರಿಕೆಗಳು. 'ಪ್ರಜಾವಾಣಿ'ಯ ಪ್ರಥಮ ಸಂಪಾದಕರಾಗಿದ್ದ ಯಶಸ್ಸು ಇವರದು. ಗುಬ್ಬಿ ಕಂಪನಿಗಾಗಿ ಹಲವು ನಾಟಕಗಳನ್ನು ರಚಿಸಿ ಕೊಟ್ಟಿದ್ದರು. 'ಷಾಜಹಾನ್', ಇವರ ಪ್ರಥಮ ನಾಟಕ. 'ದಶಾವತಾರ' ರಂಗ ನಾಟಕ ಬಹಳ ಯಶಸ್ಸುಗಳಿಸಿತ್ತು. ಇವರು ಬರೆದ ಒಟ್ಟು ನಾಟಕಗಳ ಸಂಖ್ಯೆ ಸುಮಾರು ಹದಿನೆಂಟು. 'ಕ್ರಾಂತಿ ಕಲ್ಯಾಣ'– ಕಾದಂಬರಿ. ಇದು ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಗಳಿಸಿತ್ತು. 'ಹೂವು-ಕಾವು' ಅವರ ಇತ್ತೀಚಿನ ಕಾದಂಬರಿ.

**ತಿರುಮಲೆ ತಾತಾಶರ್ಮ**[2] : ಸ್ವಾತಂತ್ರ್ಯ ಹೋರಾಟಗಾರ, ಸಂಶೋಧಕ, ಕ್ರಾಂತಿಕಾರ ಸಾಹಿತಿ ಹಾಗೂ ಸಾಹಸಿ ಪತಿಕೋದ್ಯಮಿ. ಶಾಸನ ಇಲಾಖೆಯಲ್ಲಿ

---

1 ಜೀವಿತ ಕಾಲ : 1897–1984. ತಂದೆ: ಬಸಪ್ಪ. ತಾಯಿ : ಮಲ್ಲಮ್ಮ. ಹುಟ್ಟಿದ ಸ್ಥಳ : ಬೆಂಗಳೂರು.

2 ಜೀವಿತ ಕಾಲ : ಕ್ರಿ. ಶ. 1897–1973. ಜನ್ಮಸ್ಥಳ : ಚಿಕ್ಕಬಳ್ಳಾಪುರ. ತಂದೆ : ಶ್ರೀನಿವಾಸ ತಾತಾಶರ್ಮ. ತಾಯಿ : ಜಾನಕಿ.

ಜೀವನ ಆರಂಭಿಸಿದರೂ, ಹೆಸರುಗಳಿಸಿದ್ದು ಸಂಶೋಧಕರಾಗಿ. ಬ್ರಾಹ್ಮಿ, ಖರೋಷ್ಠಿ ದೇವನಾಗರಿ ಲಿಪಿಗಳು ಸಹಸ್ರಾರು ಶಾಸನಗಳು ಇವರಿಗೆ ಕಂಠಸ್ಥವಾಗಿದ್ದವು. ಇವರು ಪತ್ರಿಕೋದ್ಯಮ ಆರಂಭಿಸಿದ್ದು ತುಮಕೂರಿನಿಂದ ಹೊರಡುತ್ತಿದ್ದ 'ಮೈಸೂರು ಕ್ರಾನಿಕಲ್ ಪತ್ರಿಕೆ'ಯಿಂದ. ಬೆಂಗಳೂರಿನಿಂದ ಹೊರಡುತ್ತಿದ್ದ 'ವಿಶ್ವ ಕರ್ನಾಟಕ'ದ ಸಂಪಾದಕರಾಗಿ ಹಲವು ವರ್ಷ ಸೇವೆ ಸಲ್ಲಿಸಿದ್ದರು. ಪತ್ರಿಕೋದ್ಯೋಗಿಗಳ ಸಂಘಕ್ಕೆ ಅಧ್ಯಕ್ಷರಾಗಿದ್ದರು. ಕಾಸರಗೋಡಿನಲ್ಲಿ ನಡೆದ 31ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಗೌರವ ಇವರದು. ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ಇವರ ಬಾಂಧವ್ಯ ಬಹಳ ಹೆಚ್ಚಿನದು. ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಕೃತಿಗಳು : ಶಾಸನಗಳಲ್ಲಿ ಕೆಲವು ಕನ್ನಡ ಕವಿಗಳು, ವಿಕ್ರಾಂತ ಭಾರತ, ಮಾಸ್ತಿಯವರ ಮನೋಧರ್ಮ, ಮೋಕ್ಷ ಗುಂಡಂ, ವಿಚಾರ ಕರ್ನಾಟಕ ಮುಂತಾದವುಗಳು. ಮೈಸೂರಿನ ಸ್ವಾತಂತ್ರ್ಯ ಚಳವಳಿಯ ಇತಿಹಾಸ ರಚನಾ ಸಮಿತಿ, ಕನ್ನಡ ಟೈಪ್‌ರೈಟರ್ ಸಮಿತಿ ಹಾಗೂ ಮಿಥಿಕ್ ಸೊಸೈಟಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

**ವೆಂಕಟರಾಮಯ್ಯ ಸೀತಾರಾಮಯ್ಯ*** ವೀ. ಸಿ, ಎಂದೇ ಎಲ್ಲರಿಗೂ ಪರಿಚಿತರಾಗಿದ್ದಾರೆ. We See, ವಿ. ಸೀ. ಎಂಬುದೇ ಎಲ್ಲ ವಿದ್ಯಾರ್ಥಿಗಳ ಹುರುಪಿನ ಆಶಯ. ಅವರ ಕ್ಲಾಸಿಗೆ ಎಲ್ಲಿಲ್ಲದ ನೂಕು ನುಗ್ಗಲು. ಅಷ್ಟೊಂದು ಆಸಕ್ತಿ ಹುಡುಗರಿಗೆ ಅವರ ಪಾಠ ಕೇಳಲು. ತಮ್ಮ ತಿಳಿನಗೆ, ಆಕರ್ಷಕ ಮುಖದೀವ ಹತ್ತಿರ ಸೆಳೆದು ಸವಿ ಮಾತಿನಿಂದ ಸೆರೆಹಿಡಿದು ವಿದ್ವತ್ ಪ್ರತಿಭೆಯಿಂದ ವಿದ್ಯಾರ್ಥಿಗಳನ್ನು ಮರುಳು ಗೊಳಿಸುತ್ತಿದ್ದರು. ಅವರು ಎಂ.ಎ. ಮುಗಿಸಿದ್ದು ಮೈಸೂರಿನಲ್ಲಿ. ಮುಂಬಯಿಯಲ್ಲಿ ಕೆಲಕಾಲ ಕೆಲಸದಲ್ಲಿದ್ದು ಬೇಸರ ಬಂದು ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಉಪಾಧ್ಯಾಯ ವೃತ್ತಿ ಕೈಗೊಂಡರು. ಅನಂತರ ಬೆಂಗಳೂರಿಗೆ ಬಂದು ಕಾಲೇಜಿನ ಅಧ್ಯಾಪಕರಾದರು. ಒಳ್ಳೆಯ ಪ್ರಾಧ್ಯಾಪಕರೆಂದು ಹೆಸರು ಗಳಿಸಿದರು. 'ಗೀತೆಗಳು' ಅವರ ಪ್ರಥಮ ಕೃತಿ, 'ದೀಪಗಳು' ಅನಂತರ ಬಂದ ಕವನ ಸಂಗ್ರಹ. 'ನೆರಳು ಬೆಳಕು', 'ದ್ರಾಕ್ಷಿ–ದಾಳಿಂಬೆ', 'ಹೆಜ್ಜೆ ಪಾಡು', ಕದಂಬ, ಅರಲು–ಬರಲು ಬಹಳ ಜನಪ್ರಿಯವಾಗಿರುವ ಕವನ ಸಂಗ್ರಹಗಳು.

'ಅರಲು–ಬರಲು' ಕೃತಿಗೆ ಕೇಂದ್ರದ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ (1978).

'ಬೆಳದಿಂಗಳು' 'ಸೀಕರಣೆ' ಪ್ರಬಂಧ ಸಂಕಲನಗಳು 'ಪಂಪಾ ಯಾತ್ರೆ' ಪ್ರವಾಸಕಥನ, 'ಮಹನೀಯರು' ರಾಜ್ಯದ ಅಕಾಡೆಮಿ ಪ್ರಶಸ್ತಿ ಪಡೆದ ಕೃತಿ.

* ಜೀವಿತ ಕಾಲ: ಅಕ್ಟೋಬರ್ 2, 1899 ರಿಂದ ಸೆಪ್ಟೆಂಬರ್ 4, 1983.

ಇವರಲ್ಲಿ ಕನ್ನಡ ಸಾಹಿತಿಗಳು ಹಾಗೂ ಕಲಾವಿದರ ವಿಸ್ತೃತ ಪರಿಚಯವಿದೆ. ಬಿ. ಎಂ. ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಗೋವಿಂದಪೈ, ಡಿ. ವಿ. ಜಿ., ಕೆ. ಎಸ್. ಕಾರಂತರು, ವೀಣೆಶೇಷಣ್ಣ, ಕಲಾವಿದ ಕೆ. ವೆಂಕಟಪ್ಪ, ಎ. ವಿ. ವರದಾಚಾರ್ ಮುಂತಾದವರುಗಳ ಆತ್ಮೀಯ ಪರಿಚಯವಿತ್ತಿದ್ದಾರೆ. 'ಸೊಹ್ರಾಬ್-ರುಸ್ತುಂ' ಮತ್ತು 'ಆಗ್ರಹ' ಎರಡು ನಾಟಕಗಳು. ಸಾಹಿತ್ಯದ ಈ ಕೃತಿಗಳಲ್ಲದೆ ಅರ್ಥಶಾಸ್ತ್ರದ ಮೇಲೆ 'ಹಣ ಪ್ರಪಂಚ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಇದರಲ್ಲಿ ಅರ್ಥಶಾಸ್ತ್ರದ ಪಾಂಡಿತ್ಯದೊಡನೆ ಸಾಹಿತ್ಯ ಪ್ರತಿಭೆ ಬಹು ಮಧುರವಾಗಿ ಮಿಲನಗೊಂಡು ಒಂದು ಉತ್ಕೃಷ್ಟ ಗ್ರಂಥದ ರೂಪ ತಾಳಿದೆ. 1954ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡ ಜನತೆಗೆ ನೀಡಿರುವ ಹಿತೋಪದೇಶ, ಸಾಹಿತ್ಯ ಪ್ರಗತಿಗೆ ಸೂಚಿಸಿದ ಸೂಚನೆಗಳು ಎಂದೆಂದೂ ನಾವು ನೆನೆಯಬೇಕಾದವುಗಳು, ಅನುಸರಿಸಬೇಕಾದವುಗಳು. ಆಕಾಶವಾಣಿಯ ನಿರ್ದೇಶಕರಾಗಿಯೂ ಎರಡೂವರೆ ವರ್ಷ ಕನ್ನಡದ ಸೇವೆ ಮಾಡಿದ್ದರು. 'ಕವಿಕಾವ್ಯ ಪರಂಪರೆ'ಸಾಹಿತ್ಯ ಚರಿತ್ರೆಯ 17 ಸಂಪುಟಗಳನ್ನು ಸಂಪಾದಿಸಿದ ಕೀರ್ತಿ ಇವರದು. ವಿ, ಸೀ.ಯ ಬಗ್ಗೆ ಮೆಚ್ಚಿಗೆಯನ್ನು ಮಾಸ್ತಿಯವರ ನುಡಿಯಲ್ಲಿ ಕೇಳಿ.

'ಬುದ್ಧಿ ಅನುಭವ ಯೋಚನೆಗಳ ವಿಸ್ತಾರದಲಿ
ಸೀತಣ್ಣ ನಮ್ಮ ನಾಡಿನ ಇಂದಿನತ್ಯಂತ
ಮೇಲ್ಮನದ ಸಾಧಕರ ಪಂಕ್ತಿಯಲಿ ನಿಂತಿಹರು'

ಕರ್ನಾಟಕ ಸಾಹಿತ್ಯ ಅಕಾಡೆಮಿಯು 1978ರಲ್ಲಿ ಪ್ರಶಸ್ತಿ ಇತ್ತು ಗೌರವಿಸಿದೆ.

"ಹತ್ತೊಂಬತ್ತನೇ ಶತಮಾನದಲ್ಲಿ ಜನಿಸಿದ್ದ ಇತರ ಪ್ರಸಿದ್ಧ ಸಾಹಿತಿಗಳು ಇವರು". ಎಂದು ನುಡಿದ ವ್ಯಾಸರಾಯರು ತಮ್ಮ ಕಿರು ಹೊತ್ತಿಗೆಯನ್ನು ತೆರೆದು ಓದಲು ಪ್ರಾರಂಭಿಸಿದರು.

ಅನುಭಾವಿ ಕವಿ **'ಶಿಶುನಾಳ ಶರೀಫ್'**ರ ಜೀವಿತ ಕಾಲ ಕ್ರಿಶ. 1819 ರಿಂದ 1889. ದೇವ ಶಿಖಾಮಣಿ ಅಳಸಿಂಗಾಚಾರ್ಯರ* ಜೀವಿತ ಕಾಲ ಕ್ರಿ.ಶ. 1877–1940, ಇವರು ಕನ್ನಡ, ಸಂಸ್ಕೃತ ವಿದ್ವಾಂಸರು. ಶ್ರೀಮದ್ರಾಮಾಯಣ, ಶ್ರೀ ಮನ್ಮಹಾಭಾರತ, ಶ್ರೀ ಮದ್ಭಾಗವತವನ್ನೂ ಕನ್ನಡದಲ್ಲಿ ಗದ್ಯರೂಪದಲ್ಲಿ ಭಾಷಾಂತರಿಸಿದ್ದಾರೆ.

**ಅಳಿಯ ಲಿಂಗರಾಜ :** ಜೀವಿತ ಕಾಲ ಕ್ರಿ.ಶ. 1823-1874, ಚಂಪು, ಷಟ್ಪದಿ, ಸಾಂಗತ್ಯದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರೋಷಣೆಯಲ್ಲಿದ್ದ ಕವಿ. ಮುಖ್ಯ ಕೃತಿಗಳು: ಲಿಂಗದ ಸಂಧಾನ, ಕೃಷ್ಣಬಾಲಲೀಲೆ, ಕೃಷ್ಣಾರ್ಜುನರ ಕಾಳಗ, ಗಿರಿಜಾ ಕಲ್ಯಾಣ, ಚಂದ್ರಾವಳಿ ಕಥೆ, ಜೋಗಹಾಡು, ಪ್ರಭಾವತಿ ಪರಿಣಯ, ಮಹಾಲಿಂಗ ಶತಕ, ವೀರಭದ್ರ ಶತಕ ಮುಂತಾದವುಗಳು.

---

* ಪುಟ 31 ಮತ್ತು ಪುಟ 53 ನೋಡಿ.

ಮಹಾದೇವಿಯಕ್ಕ. ಲೀಲಾವತಿಪ್ರಬಂಧ, ಪೂರ್ವಪುರಾಣ, ಆದಿಪುರಾಣ, ಕುಮುದೇಂದು ರಾಮಾಯಣ ಮುಂತಾದ ಕೃತಿಗಳನ್ನು ಸಂಪಾದಿಸಿದ್ದ **ಕೆ. ಜಿ. ಕುಂದಣಗಾರ**[1] ರ ಜೀವಿತ ಕಾಲ ಕ್ರಿ.ಶ. 1895–1965. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಸಂಪಾದನೆಯಲ್ಲಿ ಶ್ರಮಿಸಿದ್ದರು. ಇವರು 'ಸರಸ್ವತಿ' ಎಂಬ ಕಾದಂಬರಿಯನ್ನೂ ರಚಿಸಿದ್ದಾರೆ,

ಕನ್ನಡಕೊಬ್ಬನೇ ಕೈಲಾಸಂ ಎಂದು ಹೆಸರುಗಳಿಸಿದ್ದ **ಟಿ. ಪಿ. ಕೈಲಾಸಂ** ರವರ ಜೀವಿತ ಕಾಲ ಕ್ರಿ.ಶ. 1884–1948. ಇವರು ನಾಟಕ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಉಂಟುಮಾಡಿದ ಪ್ರತಿಭಾನ್ವಿತ ಸಾಹಿತಿ. ಶಿಕ್ಷಣ ತಜ್ಞ ಹಾಗೂ ಸಾಹಿತಿ **ಡೆಪ್ಯುಟಿ ಚೆನ್ನಬಸಪ್ಪ** (ಕ್ರಿ.ಶ. 1834–1881), ಸಂಗೀತ ವಿದ್ವಾಂಸ ಹಾಗೂ ಬಹುಭಾಷಾ ಪಂಡಿತ **ಅನಂತ ರಾಮಕೃಷ್ಣ ಶರ್ಮ ರಾಳ್ಳಪಲ್ಲಿ** (ಜೀವಿತ ಕಾಲ : ಕ್ರಿ.ಶ. 1893–1979). ವಿದ್ವಾಂಸರುಗಳಾದ **ನಂಜನಗೂಡು ಶ್ರೀಕಂಠಶಾಸ್ತ್ರಿ** (ಕ್ರಿ.ಶ. 1884–1958); **ನಂಜನಗೂಡು ಸುಬ್ಬಾಶಾಸ್ತ್ರಿ** (ಕ್ರಿ.ಶ. 1834–1906), ಪ್ರಸಿದ್ಧ ನಾಟಕಕಾರರಾದ **ಬೆಳ್ಳಾವೆ ನರಸಿಂಹಶಾಸ್ತ್ರಿ**[2] (ಕ್ರಿ.ಶ. 1882–1961), ಸಂಶೋಧಕ **ಆರ್. ಶಾಮಾಶಾಸ್ತ್ರಿ** (ಕ್ರಿ.ಶ. 1868–1944); ಪತ್ರಿಕೋದ್ಯಮಿ, ಸಾಹಿತಿ **ಹುರುಳಿ ಭೀಮರಾಯರು** (ಕ್ರಿ.ಶ 1889–1970) ಮುಂತಾದವುಗಳು ಹೆಸರಿಸಬೇಕಾದ ವ್ಯಕ್ತಿಗಳು.

---

1 ಪುಟ 69 ನೋಡಿ.
2 ಪುಟ 55 ನೋಡಿ.

## (ಅ) .ಕವಿಗಳು

ವ್ಯಾಸರಾಯರು ಉಪಹಾರ ಸೇವಿಸಿ ಚಾಪೆಯ ಮೇಲೆ ಕುಳಿತರು. ಎದುರಿಗಾಗಲೇ ಜಮಖಾನೆಯ ಮೇಲೆ ದಿನಕರ, ದಿನೇಶ, ಚಂದ್ರು, ರಘುನಾಥ, ಮುಕುಂದ ಕುಳಿತಿದ್ದರು, ಅಂದು ಭಾನುವಾರವಾಗಿದ್ದುದರಿಂದ ವಾಸುದೇವರಾಯರೂ ಬಂದು ಗೋಡೆಯ ಬದಿಯಲ್ಲಿದ್ದ ಕುರ್ಚಿಯ ಮೇಲೆ ಆಸೀನರಾದರು.

ವ್ಯಾಸರಾಯರು ಮಾತಿಗೆ ಪ್ರಾರಂಭಿಸಿದರು. "ಇದುವರೆಗೆ ನೀವುಗಳು ಹಳೆಯ ತಲೆಮಾರಿನ ಕೆಲ ದಿಗ್ಗಜರುಗಳ ವಿಷಯ ತಿಳಿದುಕೊಂಡಿದ್ದೀರಿ. ಈಗ ನಾವು ಹೊಸಗನ್ನಡ ಕಟ್ಟಲು ಶ್ರಮಿಸಿದ ಬಹುಮುಖ ಪ್ರತಿಭಾವಂತರ ಪರಿಚಯ ಮಾಡಿಕೊಳ್ಳೋಣ. ಈ ಸಂಖ್ಯೆ ಬಹಳ ದೊಡ್ಡದು, ಆದರಿಂದ ನಿಮಗೆ ತಿಳ್ಯೋದಕ್ಕೆ ಅನುಕೂಲವಾಗ್ಲಿ ಅಂತಾ ಸ್ಥೂಲವಾಗಿ ಇವರನ್ನು ಹೀಗೆ ವಿಂಗಡಿಸ್ಕೊಳ್ತೀನಿ. 1. ಕವಿಗಳು, 2. ಕಾದಂಬರಿಕಾರರು / ಕತೆಗಾರರು, 3. ನಾಟಕಕಾರರು, 4. ವಿಮರ್ಶೆ/ಸಂಪಾದನೆ/ಸಂಶೋಧನೆ ನಿಪುಣರು, 5. ಪತ್ರಿಕೋದ್ಯಮಿಗಳು, 6. ಶಿಶುಸಾಹಿತ್ಯ ಲೇಖಕರು, 7. ಪ್ರಬಂಧಕಾರರು, 8. ಪ್ರವಾಸ ಕಥನಗಾರರು 9. ಹರಟೆ ಮತ್ತು ಹಾಸ್ಯಲೇಖಕರು, 10. ಸಂಕೀರ್ಣ ಸಾಹಿತ್ಯ ಸಂಪನ್ನಗೊಳಿಸಿರುವವರು, (ಭಾಷಾಂತರಕಾರರು, ಜೀವನ ಚರಿತ್ರೆ, ಇತಿಹಾಸ. ಜಾನಪದ, ವಿಜ್ಞಾನ ಸಾಹಿತ್ಯ ರಚನಕಾರರು ಮುಂತಾದವರುಗಳು).

ಮೇಲ್ಕಂಡ ವಿಭಾಗ ಅಷ್ಟು ಕರಾರುವಾಕ್ಕಾಗಿರೋದು ಸಾಧ್ಯವಿಲ್ಲ. ಏಕೆಂದರೆ ಕವಿಗಳು, ಕಾದಂಬರಿಕಾರರೂ ಆಗಿರುತ್ತಾರೆ. ಕಾದಂಬರಿಕಾರರು ವಿಮರ್ಶಕರು, ಸಂಶೋಧಕರೂ ಆಗಿರುವ ಸಂಭವವುಂಟು. ಕೆಲವರಂತೂ ಈ ಎಲ್ಲಾ ವಿಭಾಗಗಳಲ್ಲೂ ದುಡಿದವರಿರಬಹುದು. ಅಷ್ಟೇ ಅಲ್ದೆ ನಾನು ಕಾದಂಬರಿಕಾರರಾಗಿ ಗುರ್ತಿಸಿರೋದು ನಿಮಗೆ ಒಳ್ಳೇ ನಾಟಕಕಾರರಾಗಿ ತೋರಿರಬಹ್ದು, ಕವಿಗಳಾಗಿ ಕಾಣ್ಸಿರಬಹ್ದು. ಆದ್ದರಿಂದ ಇವರುಗಳ ವಿಭಾಗದ ಬಗ್ಗೆ ವೃಥಾ ಚರ್ಚೆ ಮಾಡೋದು ಬೇಡ. ನಮಗೆ ಮುಖ್ಯವಾಗಿ ಬೇಕಾಗಿರೋದು ಸಾಹಿತಿಗಳ ವಿಷಯ ತಾನೇ? ಅದಕ್ಕೇ ನಾವು ಗಮನ ಹರಿಸೋಣ ಏನಂತೀರಿ ಮಕ್ಕಳೇ ?" ವ್ಯಾಸರಾಯರು ಪ್ರಶ್ನಿಸಿದಾಗ ಎಲ್ಲರೂ ಒಕ್ಕೊರಲಿನಿಂದ "ಹೌದು...ಹೌದು ನಮಗೆ ಬೇಕಾಗಿರೋದು ಸಾಹಿತಿ ದರ್ಶನ ಅಷ್ಟೇ..." ನುಡಿದರು.

"ಸರಿ ಹಾಗಾದ್ರೆ ಈಗ ಕವಿಗಳನ್ನು ಸ್ವಲ್ಪ ಪರಿಚಯಿಸಿಕೊಳ್ಳೋಣ. ಇವರಗಳೆಲ್ಲಾ ಇಪ್ಪತ್ತನೇ ಶತಮಾನದಲ್ಲಿ ಹುಟ್ಟಿ ಬೆಳೆದವರು. ಕೆಲವರು ದಿವಂಗತರೂ ಉಂಟು.

ಈಗಾಗಲೇ 19ನೇ ಶತಮಾನದಲ್ಲಿ ಹುಟ್ಟಿ 20ನೇ ಶತಮಾನದಲ್ಲಿ ಅಳಿದು ಹೋಗಿರುವ ಹೆಸರಾಂತ ಕವಿಗಳಾದ ಗೋವಿಂದಪೈ, ಮುಯಿಂಲಗೋಳ ನಾರಾಯಣ ರಾಯರು, ಬಿಂ.ಎಂ.ಶ್ರೀ., ಎಂ.ಆರ್.ಶ್ರೀ., ಡಿ.ವಿ.ಜಿ., ವಿ.ಸೀ. ಮುಂತಾ ದವರ ವಿಷಯ ಸ್ವಲ್ಪ ಅರಿತಿದ್ದೀರಿ.

ಈಗ 20ನೇ ಶತಮಾನದಲ್ಲಿನ ಕವಿಗಳಲ್ಲಿ ಮುಖ್ಯರು 'ಮಧುರ ಚೆನ್ನ' ಎಂದು ಹೆಸರುವಾಸಿಯಾಗಿದ್ದ 'ಹಲಸಂಗಿ ಚೆನ್ನಮಲ್ಲಪ್ಪ'. ಇವರು ಮಧುರ ಚೆನ್ನ[1] ರಾದದ್ದು 'ಮಧುರಗೀತ' ಖಂಡ ಕಾವ್ಯದಲ್ಲಿ. ಇವರ ಸಾಹಿತ್ಯದ ಬಗ್ಗೆ ಶ್ರೀಮರ್ತಾ ಚೆನ್ನವೀರಕಣವಿಯವರು 'ಸಾಹಿತ್ಯ ಚಿಂತನ'ದಲ್ಲಿ' ಹೇಳಿರುವ ಮಾತುಗಳು ಕವಿಯ ಸಂಪೂರ್ಣ ದರ್ಶನ ಮಾಡಿಸುತ್ತದೆ.

"'ಮಧುರ ಚೆನ್ನ'ರ ಸಾಹಿತ್ಯ ಸೃಷ್ಟಿಯ ಮೂಲಾಧಾರ ಆತ್ಮಚಿಂತನ ಮತ್ತು ಸಂಶೋಧನ–'ಪೂರ್ವರಂಗ', 'ಕಾಳ ರಾತ್ರಿ','ಬೆಳಗು' ಮತ್ತು 'ಆತ್ಮಸಂಶೋಧನೆ' ಈ ಗ್ರಂಥಗಳಂತೂ ಹೇಳಿ ಕೇಳಿ ಆವರ ಆತ್ಮ ಕಥೆಗಳೂ ಅಗಿವೆ. 'ನನ್ನನಲ್ಲ'ದ ಎಲ್ಲ ಕವನಗಳೂ ಒಂದಲ್ಲ ಒಂದು ರೀತಿಯಿಂದ ಅವರ ಆಧ್ಯಾತ್ಮಿಕ ಚಿಂತನೆಯ ಫಲಗಳೇ ಆಗಿವೆ. ಇವುಗಳಲ್ಲಿ 'ದೇವತಾ ಪೃಥವಿ', 'ನನ್ನ ನಲ್ಲ' ಮತ್ತು 'ಮಧುರ ಗೀತ' ಈ ಅನುಭಾವ ಗೀತಗಳು ಹೊಸಗನ್ನಡ ಕಾವ್ಯದಲ್ಲಿ ಮಧುರಚೆನ್ನರ ಹೆಸರನ್ನು ಅಚ್ಚಳಿಯದಂತೆ ಉಳಿಸಿವೆ".

ಮಧುರಚೆನ್ನರು ಕೆಲವೇ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದರೂ ಅವುಗಳ ಸೊಗಸು ಸವಿಗಂಪು ಹಲವು ಶತಮಾನಗಳು ಮಾಸದಂತಹದು. ಕನ್ನಡ ಜಾನಪದ ಸಾಹಿತ್ಯ ಸಂಸ್ಕೃತಿಗಳ ರಂಗದಲ್ಲಿ ಇವರು ಬಹಳ ಸಂಶೋಧನೆ ಮಾಡಿದ್ದಾರೆ. ಕವಿತಾ ಶೈಲಿಗೆ ಉದಾಹರಣೆ—

> "ಹೂವಿನ ಮಕರಂದ, ಹಣ್ಣಿನ ಮಾಧುರಿಯ
> ಹಾಲ್ಹಿಂಗ, ಇನ್ನ ಮನೆಹ್ಯಾಂಗ। ಏಳಿಮ್ಮ
> ಮಲಗಿರುವ ತಾಯಿ ಪೃಥವೀ"

**ಕಡೆಂಗೋಡ್ಲು ಶಂಕರಭಟ್ಟರು**[2] : ಹಳೆಯ ಪೀಳಿಗೆ ಕವಿಗಳಲ್ಲಿ ಹೆಸರಾದವರು ಕಡೆಂಗೋಡ್ಲು ಶಂಕರಭಟ್ಟರು. ಬಹುಮುಖ ಪ್ರತಿಭೆಯ ಈ ಶ್ರೀಯುತರು ಕಾವ್ಯ ಕವನ, ನಾಟಕ, ಕಾದಂಬರಿ, ಕಥೆ, ಪ್ರಬಂಧಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ.

'ಹೊನ್ನಿಯ ಮದುವೆ' ಶರ ಷಟ್ಪದಿಯಲ್ಲಿ ರಚಿಸಿರುವ ಖಂಡಕಾವ್ಯ. ಕರುಣಾ ಜನಕ ಕಥೆ ಇದೆ. 'ಮಾದ್ರಿಯ ಚಿತೆ' ಮಹಾಭಾರತದ ಕಥಾವಸ್ತು. 'ಮುರಲೀ.

---

1 ಜೀವಿತ ಕಾಲ: 1903–1953.

2 ಜೀವಿತ ಕಾಲ: (ಕ್ರಿ.ಶ. 1904–1968). ಹುಟ್ಟಿದ ಊರು: ಕಡೆಂಗೋಡ್ಲು

ನಾದ', ಗ್ರೇ ಕವಿಯ 'ಎಲಿಜಿ'ಯ ಭಾವಾನುವಾದ. ಇದೂ ಖಂಡಕಾವ್ಯ. ಈ ಮೂರು ಅವರ 'ನಲ್ಮೆ' ಸಂಕಲನದಲ್ಲಿವೆ. ಇದು ಕನ್ನಡ ಸಾಹಿತ್ಯಕ್ಕೆ ಅವರು ಅರ್ಪಿಸಿರುವ ಶ್ರೇಷ್ಠ ಕೃತಿ. 'ಯಜ್ಞಕುಂಡ', 'ಗುರುದಕ್ಷಿಣೆ', 'ಮಹಾಯಾಗ', 'ಉಷಾ', ಅವರ ಹೆಸರಾಂತ ನಾಟಕಗಳು. 'ದೇವತಾ ಮನುಷ್ಯ', 'ಧೂಮಕೇತು' ಸಾಮಾಜಿಕ ಕಾದಂಬರಿಗಳು. 'ಗಾಜಿನ ಬಳೆ', 'ದುಡಿಯುವ ಮಕ್ಕಳು', 'ನಮ್ಮ ಕಥೆಗಳು'–ಕಥಾಸಂಕಲನಗಳು. 'ವಾಙ್ಮಯ ಸಂಪತ್ತು'-ಪ್ರಬಂಧಗಳ ಸಂಕಲನ.

ಮಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ವಿದ್ಯಾಭ್ಯಾಸ ನಿಂತಿತು, ಆದರೂ ಕೆಲ ವರ್ಷಗಳ ನಂತರ ಮದರಾಸು ವಿಶ್ವವಿದ್ಯಾಲಯದ 'ವಿದ್ವಾನ್' ಪದವಿ ಪಡೆದು ಕಾಲೇಜಿನ ಅಧ್ಯಾಪಕರಾದರು.

'ನವಯುಗ', 'ರಾಷ್ಟ್ರಬಂಧು', 'ರಾಷ್ಟ್ರಮತ', ಪತ್ರಿಕೆಗಳ ಸಂಪಾದಕರಾಗಿಯೂ ಕನ್ನಡಕ್ಕೆ ಅಮೋಘ ಸೇವೆ ಸಲ್ಲಿಸಿದ್ದಾರೆ.

ಇವರ ಕವಿತೆಯ ಒಂದು ಸಣ್ಣ ಉದಾಹರಣೆ :

'ಮಕುಟ ದಾರುಣವೊಂದೆ ಬಾಳುವೆಯ ತೋರಣವೆ
ರಾಜದಂಡವ ನಲಿವುದೊಂದೆ ಬಲವೆ ?
ಸೀಗುರಿಯ ತಂಗಾಳಿಯೊಂದೆ ಜೀವನದ ದುಃಸ್ಥಿತಿ
ಬೆಳ್ಗೊಡೆಯ ನೆಳಲೊಂದೆ ಸೊಗದ ತಂಪೆ ?'

o o o

'ಶ್ರೀನಾಮರ್ ಶ್ರೀಕಂಠರ್
ನಾನಾ ಕವಿತಾ ವಿಚಾರ ಪಾಕಾದಿಗಳಿಂ
ದಾ ನಂದಕರರ್ ಗುರುಗಳ್
ಪೆರರೆಲ್ಲರ್ ಪರಿಪರಿಯಿಂ
ದುರೆ ಬಯಸುವ ಪಿರಿಯ ಪದವಿ ಕೈಸಾರ್ದಿರೆಯುಂ
ತೊರೆದುಲ್ಲಸದಿಂ ಕನ್ನಡ
ಸರಸತಿಯಡಿವಿಡಿದು ದುಡಿವನಾಡೋಜರೆನರ್'

'ನವಸಾಹಿತ್ಯಸುಧಾಂಶುಲೇಖನಕಲಾ ಪೂರ್ಣರ್‌ಪ್ರಕಾಶೋಜ್ಜ್ವಲರ್
ಕವಿತಾಲೋಕ ವಿವೇಕ ವರ್ಧಿತರಸರ್ ವಾಕ್ಚಂದ್ರಿಕಾ ಭೂಷಣರ್
ತವೆಭಾಷಾತ್ಮಕಶಾಸ್ತ್ರ ಸಿಂಧು ತರಣ ಪ್ರೋತ್ಸಾರಣೋದ್ಯದ್ಯಶರ್'
ಬುದಿಯೊಳ್ ಶಿಷ್ಯಚಕೋರ ಹರ್ಷದುದಯರ್ ವಿದ್ವದ್ವರರ್ ಶ್ರೀಕರರ್

ಕನ್ನಡ ಪ್ರತಿಮಾ ನಾಟಕವನ್ನು ಗುರುವರ್ಯರಿಗೆ ಅರ್ಪಿಸುತ್ತ ನುಡಿದಿರುವ **ಡಾ॥ ಕೆ. ಕೃಷ್ಣಮೂರ್ತಿಯವರ ಮೇಲಿನ ಮಾತುಗಳು ತೀ. ನಂ. ಶ್ರೀ. ಅವರ ಸಮಗ್ರ ಜೀವನ, ಧ್ಯೇಯ, ಧೋರಣೆ. ವಿದ್ವತ್ತು ಸಮಸ್ತವನ್ನು ತಿಳಿಸುತ್ತದೆ.**

"ಇನ್ನಾರು ಬೆಳದಾರು ನಿಮ್ಮ ಎತ್ತರಕೆ ?
ಕನ್ನಡದ ಕೊರಳಲ್ಲಿ ಶ್ರೀಕಂಠಿಕೆ"

ಡಾ॥ ಜಿ. ಎಸ್. ಶಿವರುದ್ರಪ್ಪನವರ ಮಾತು ತೀ. ನಂ. ಶ್ರೀಯವರ ಉದಾತ್ತ ವ್ಯಕ್ತಿತ್ವ ಎಷ್ಟು ಮೇಲೇರಿತ್ತು ಎಂದು ಅರಹುತ್ತದೆ.

ತೀರ್ಥಪುರ ನಂಜುಂಡಯ್ಯನವರ ಮಗ **ಶ್ರೀಕಂಠಯ್ಯ**[1] ಇವರು ತೀರ್ಥಪುರ ದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ತುಮಕೂರು ಮೈಸೂರಿನಲ್ಲಿ ಮುಂದುವರಿಸಿ ಬಿ.ಎ. ಪರೀಕ್ಷೆ ಪ್ರಥಮ ದರ್ಜೆಯಲ್ಲಿಗಳಿಸಿದರು. ಆರು ಪದಕಗಳೂ ಅವರಿಗೆ ಲಭಿಸಿತ್ತು. ಸಿವಿಲ್ ಸರ್ವಿಸ್ ಪರೀಕ್ಷೆ ಪಾಸುಮಾಡಿ 1½ ತಿಂಗಳು ಮಾತ್ರ ಅಮಲ್ದಾರರಾಗಿದ್ದ ಇವರು ಅದನ್ನು ಬಿಟ್ಟು ಕಾಲೇಜಿನಲ್ಲಿ ಅಧ್ಯಾಪಕರಾದರು. ಇಂಗ್ಲೀಷ್ ಎಂ.ಎ.ಯಲ್ಲಿ ಸುವರ್ಣಪದಕಗಳಿಸಿದರು, 'ಒಲುಮೆ' ಅವರ ಪ್ರಥಮ ಪ್ರೇಮ ಗೀತೆಗಳ ಸಂಕಲನ. 'ಪಂಪ', 'ನಂಬಿಯಣ್ಣನರಗಳೆ', 'ರನ್ನದ ಗದಾಯುದ್ಧ ಸಂಗ್ರಹ' ಸಂಪಾದಿಸಿದ ಪುಸ್ತಕಗಳು. 'ಭಾರತೀಯ ಕಾವ್ಯ ಮೀಮಾಂಸೆ', 'ಕನ್ನಡ ಮಾಧ್ಯಮ ವ್ಯಾಕರಣ', 'ರಾಕ್ಷಸನ ಮುದ್ರಿಕೆ' ಅವರ ಅಮೂಲ್ಯ ಕೃತಿಗಳು. 'ನಂಟರು' ಪ್ರಬಂಧಗಳ ಸಂಕಲನ 'ಕಾವ್ಯ ಸಮೀಕ್ಷೆ' ಐದು ಪ್ರಬುದ್ಧ ಲೇಖನಗಳ ಸಂಕಲನ. ಹೆಣ್ಣು ಮಕ್ಕಳ ಪದಗಳ 'ಬಿಡಿಮುತ್ತು' ಮುಕ್ತಕಗಳ ಸಂಕಲನ. ಬಹಳ ಪ್ರಭಾವಿ ಪ್ರಾಧ್ಯಾಪಕಾಗಿದ್ದ ಇವರು ಅಪಾರ ಶಿಷ್ಯವೃಂದವನ್ನುಗಳಿಸಿದ್ದಾರೆ. ಇವರು 1966ರಲ್ಲಿ ನಿಧನರಾಗುವ ಕೆಲದಿನ ಮುಂಚೆ ರಚಿಸಿದ್ದ ಪದ್ಯ 'ಪದ್ಯ ಹೋಯ್ತು ಗದ್ಯ ಬಂತು ಢುಂ ಢುಂ, ಗದ್ಯ ಹೋಯ್ತು ಮಾತು ಬಂತು ಢುಂ ಢುಂ' ಬಹುಶಃ ಶ್ರೀಯವರಿಗೆ ತಮ್ಮ ಅಂತ್ಯ ತಿಳಿದಿತ್ತೇನೊ ಎಂದೆನಿಸುತ್ತದೆ. ಇನ್ನೂ ಕೆಲಕಾಲ ಬದುಕಿದ್ದರೆ ಕನ್ನಡ ಸಾಹಿತ್ಯ ಹೆಚ್ಚು ಸಂವೃದ್ಧವಾಗುತಿತ್ತು.

**ದಿನಕರದೇಸಾಯಿ**[2] : 'ಚುಟುಕ ಬ್ರಹ್ಮ'ರೆಂದು ಪ್ರಖ್ಯಾತರು. ಇವರ ಜೀವಿತ ಕಾಲದಲ್ಲಂತೂ ಇವರ 'ಚುಟುಕ'ವಿಲ್ಲದೆ ಕನ್ನಡದ ಯಾವ ಪತ್ರಿಕೆಯೂ ಪ್ರಕಟಗೊಳ್ಳುತ್ತಿರಲಿಲ್ಲ. ವ್ಯಂಗ್ಯಚಿತ್ರಕಾರನಿಗಿರಬೇಕಾದ ತೀಕ್ಷ್ಣದೃಷ್ಟಿ, ಕವಿಗಿರ ಬೇಕಾದ ಸಂವೇದನ, ಕಲ್ಪನಾದೃಷ್ಟಿ, ಮಾತಿನ ಮೆರುಗು, ಇವರಿಗೆ ದೇವರಿತ್ತ ವರ, 'ಕನ್ನಡಕ್ಕೆ ಇಂದು ಒಬ್ಬನೇ ದಿನಕರ' ಗೋಕಾಕರು ಹೇಳಿದ್ದ ಮಾತು ಇಂದಿಗೂ ಸತ್ಯ. ಇವರು ಸಮಾಜ ಸೇವಕರಲ್ಲದೆ ಕಾರ್ಮಿಕ ನಾಯಕರೂ ಆಗಿದ್ದರು. ಚಾಲುಕ್ಯ

---

1 ಜೀವಿತಕಾಲ : (1906–1966)

2 ಜೀವಿತಕಾಲ : ಕ್ರಿ.ಶ. 1909–1982. ಜನ್ಮಸ್ಥಳ : ಅಂಕೋಲ. ತಂದೆ : ದತ್ತಾತ್ರೇಯ, ತಾಯಿ : ಅಂಜಿಕಾ. ಇಂಗ್ಲೀಷ್‌ನಲ್ಲಿ ಬರೆದಿರುವ ಕೃತಿಗಳು : Primary Education in India, Maritime Labour in India, Mahamandaleshwaras under the Chalukyas.

ಮಂಡಲೇಶ್ವರರ ಬಗ್ಗೆ ಸಂಶೋಧನೆ ನಡೆಸಿ ಗ್ರಂಥ ರಚಿಸಿದ್ದಾರೆ. 1962ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪುರಸ್ಕಾರವಿತ್ತು ಗೌರವಿಸಿತ್ತು. ಇವರು ಕೆಲಕಾಲ 'ಜನ ಸೇವಕ' ಎಂಬ ಪತ್ರಿಕೆ ಸಹ ನಡೆಸಿದ್ದರು. ಮಕ್ಕಳಿಗೆಂದೇ ಬಹಳ ಕೃತಿಗಳನ್ನು ರಚಿಸಿದ್ದಾರೆ.

ಕೃತಿಗಳು : 'ಮಕ್ಕಳ ಗೀತೆಗಳು' (ಮುಂಬಯಿ ಸರಕಾರದಿಂದ ಬಹುಮಾನ ದೊರೆತಿದೆ). 'ಮಕ್ಕಳ ಪದ್ಯಗಳು'. 'ಹೂಗೊಂಚಲು', 'ಮಕ್ಕಳ ಪದ್ಯ', 'ದಿನಕರನ ಚೌಪದಿ' (ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ). 'ನಾ ಕಂಡ ಪಡುವಣ' (ಪ್ರವಾಸದ ಹಿನ್ನಲೆಯ ಕೃತಿ).

ಅವರ ಸಾಹಿತಿ ಶೈಲಿಗೆ ಒಂದೆರಡು ಉದಾಹರಣೆಗಳು :

'ನಾ ಬರೆದ ಚುಟುಕಗಳ ಸಂಖ್ಯೆ ವಿಪರೀತ
ಶೇಕಡಾ ತೊಂಬತ್ತು ಹೊಡೆಯುವುವು ಗೋತಾ
ಹೇಳಿದ ಹತ್ತರ ಪೈಕಿ ಎಳೆಂಟು ಸತ್ತು
ಒಂದೆರಡು ಬದುಕಿದರೆ ಅವು ಮಾತ್ರ ಮುತ್ತು!'

೦ ೦ ೦

'ಬೆಕ್ಕೇ ಬೆಕ್ಕೇ ಮುದ್ದಿನ ಸೊಕ್ಕೇ
ಎಲ್ಲಿಗೆ ಹೋಗಿದ್ದೆ ?
ಕರೆದರು ಇಲ್ಲಾ, ಹಾಲೂ ಬೆಲ್ಲಾ
ಕಾಯಿಸಿ ಇಟ್ಟಿದ್ದೆ'

**'ರಂಗಬಿನ್ನಪ'** ಇದ್ರ ಹೆಸ್ರು ಯಾರಾದ್ರೂ ಕೇಳಿದ್ದೀರಾ ? ವ್ಯಾಸರಾಯರು ಪ್ರಶ್ನಿಸಿದೊಡನೆ ದಿನಕರ ನುಡಿದ "ನಮ್ಮ ಕಾಲ್ದ ಈ ಶ್ರೇಷ್ಠ ಕೃತೀನೂ ಜ್ಞಾಪ್ಕ ಇಟ್ಕೊಳ್ದೆ ಹೋದ್ರೆ ನಾವು ಕರ್ನಾಟಕದಲ್ಲಿ ಹುಟ್ಟಿ ಏನು ಸಾರ್ಥಕ ? ಇದು **ಡಾ॥ ಎಸ್. ವಿ. ರಂಗಣ್ಣ***ನವರು ಕೇಂದ್ರ ಸಾಹಿತ್ಯ ಅಕಾಡೆಮಿ ಇಂದ ಪುರಸ್ಕಾರ ಪಡೆದ ಗ್ರಂಥ (1965). ಇದ್ರಲ್ಲಿ ವಚನಗಳಿವೆ. ನಮ್ಮ ಸ್ಕೂಲಲ್ಲಿ ಮೇಸ್ಟ್ರು ಇದ್ರಿಂದ ಒಂದೊಂದೆ ಸಾಲು ಹೇಳ್ತಾನೆ ಇರ್ತಾರೆ." "ರಂಗಣ್ಣನವರು ವಚನ ಸಾಹಿತ್ಯದಿಂದ ತುಂಬಾ ಪ್ರಭಾವಿತರಾಗಿದ್ದಾರೆ. ವಚನದ ಶೈಲಿಯನ್ನು 'ರಂಗಬಿನ್ನಪ'ದಲ್ಲಿ ಅಳವಡಿಸಿದ್ದಾರೆ" ಚಂದ್ರು ನುಡಿದ.

"ಹೂಂ....ನಿಮ್ಮಲ್ಲಿ ಯಾರಿಗಾದ್ರೂ ಈ ಕಾವ್ಯದ ಸಾಲು ಜ್ಞಾಪ್ಕ ಇದ್ಯೆ?" ಪ್ರಶ್ನಿಸಿದರು ವ್ಯಾಸರಾಯರು.

---

* ಜನನ : 24-12-1898. ಹುಟ್ಟಿದ ಊರು : ಹಾಸನದ ಸಮೀಪದ ಸಾಲಗಾಮೆ. ತಂದೆ : ವೆಂಕಟಸುಬ್ಬಯ್ಯ, ತಾಯಿ : ವೆಂಕಟಲಕ್ಷ್ಮಮ್ಮ. ಮರಣ : 17-2-1987.

"ಸತ್ತ ನಿನ್ನೆಯು ಕತ್ತಲು, ಬರುವ ನಾಳೆಯು ಬತ್ತಲು ಯಾವ ಗುರಿ? ಏನು ಗೊತ್ತು? ಈ ಹೊತ್ತು ನಮ್ಮ ಸೊತ್ತು ಇದೇ ರಂಗ ವಚನ, ರಂಗನ ಚಿತ್ತ..."

"ಭೇಷ್. ದಿನಕರ ಒಳ್ಳೇ ಸ್ನೇಹಿತರನ್ನೇ ಸಂಪಾದಿಸ್ಕೊಂಡಿದ್ದಾನೆ. ಸಂಗ ಅಂದ್ರೆ ಹೀಗೆ ಇರ್ಬೇಕು," ಎದ್ದು ಬಂದ ವ್ಯಾಸರಾಯರು ಚಂದ್ರುವಿನ ಬೆನ್ನು ತಟ್ಟಿ "ನಾನು ಒಂದೆರಡು ವಚನಗಳನ್ನು ಹೇಳ್ತೀನಿ ಕೇಳಿ. ಬಹಳ ಸ್ವಾರಸ್ಯವಾಗಿವೆ. ಇವುಗಳಲ್ಲಿ ವೈವಿಧ್ಯತೆ ಇದೆ. ಹೊಸ ವಿಚಾರ ಲಹರಿ ಇದೆ.

'ಕನ್ನಡ ನಾಡು, ಮೈಸೂರು, ಮಾವಿನಕೆರೆ, ಇವು ಮೂರೆ ನನ್ನ ರತ್ನತ್ರಯ, ರಂಗರಾಜ; ಬಿದ್ದರಪಮಾನವಿಲ್ಲ. ಮುದ್ದುರಂಗ; ಮತ್ತೆದ್ದು ನಿಲ್ಲದಿರೆ ಅವಮಾನ; ಚಿಟಿಕಿ ಹಾಕುವಷ್ಟರಲ್ಲಿ ಹುಟ್ಟುವುದು ಅನುರಾಗ, ಅದು ಮೈಬಿಟ್ಟು ಹೋಗಲು ಬೇಕು ವರ್ಷದ ಮೇಲೆ ವರ್ಷ ರಂಗೇಶ....' ಎಷ್ಟು ಚೆನ್ನಾಗಿದೆ ಅಲ್ವೆ ನುಡಿ ಮುತ್ತುಗಳು? ಇಂತಹವು ಸಹಸ್ರಾರು ಇವೆ, ಅವರೇ ಬರೆದಿರೋ 1212 'ರಂಗಬಿನ್ನಪ'ದ ವಚನ ಗಳಲ್ಲಿ.

ರಂಗಣ್ಣನವರ ಪೂರ್ಣ ಹೆಸರು ಸಾಲಗಾಮೆ ವೆಂಕಟಸುಬ್ಬಯ್ಯ ರಂಗಣ್ಣ. ತಮ್ಮ ಆಯುಸ್ಸಿನ ಬಹಳಷ್ಟು ದಿನಗಳನ್ನು ಉಪಾಧ್ಯಾಯರಾಗಿಯೇ ಸವೆಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಇವರಿಗೆ 1970ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ಕವನ, ವಿಡಂಬನೆ, ಹಾಸ್ಯ, ವಿಮರ್ಶೆ-ಹೀಗೆ ಸಾಹಿತ್ಯದ ಸರ್ವ ಪ್ರಕಾರಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಇವರ ಕೃತಿಗಳು 'ಕುಮಾರವ್ಯಾಸ', 'ಹೊನ್ನ ಶೂಲ', 'ಕಾಳಿದಾಸನ ನಾಟಕ ವಿಮರ್ಶೆ' 'ಶಾಕುಂತಲ ನಾಟಕ ವಿಮರ್ಶೆ', 'ಶೈಲಿ', ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಕವಿಕಥಾಮೃತ, ಉತ್ತರಕುಮಾರ—ಮುಂತಾದವುಗಳು. ಇವರು 49ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ (1976) ರಾಗಿದ್ದರು.

**ಕುವೆಂಪು*** ; ಕುವೆಂಪು ವಿಷಯ ಹಿಂದೆಯೇ ಬಹಳ ಹೇಳಿದ್ದೇನೆ. ಈಗ ಸಿ. ಪಿ. ಕೆ.ಯವರ ಕಲವು ಮಾತುಗಳನ್ನು ಕೇಳಿ.

'ರಾಷ್ಟ್ರಕವಿ ಕುವೆಂಪು ಹೊಸಗನ್ನಡ ಹಿರಿಯ ಕವಿಗಳಲ್ಲೊಬ್ಬರು. ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯದ ವೇದಿಕೆಗೇರಿಸಿದ ಮಹಾನಾಯಕರಲ್ಲೊಬ್ಬರು. ಆಧುನಿಕ ಕನ್ನಡ ಕಾವ್ಯದ ಕಿರುವಾಹಿನಿ ಅವರ ಮೂಲಕ ಅದ್ಭುತ ಪ್ರವಾಹವಾಗಿ ಪರಿಣಮಿಸಿದೆ, ಒಂದು ಪ್ರಾದೇಶಿಕ ಸಾಹಿತ್ಯ ತನ್ನ ಸ್ಥಳೀಯತೆಯನ್ನು ಕೊಡವಿ ಕೊಂಡು ನಿಜವಾದ ವಿಶ್ವಸಾರ್ವತ್ರಿಕ ಚೊಕ್ಕ ಮುದ್ರೆಯನ್ನು ಸಂಪಾದಿಸಿಕೊಂಡಿದೆ. ಸಾಹಿತ್ಯದ ಸರ್ವ ಪ್ರಕಾರಗಳಲ್ಲೂ ಕುವೆಂಪು ಅವರಂತೆ ಏಕ ಪ್ರಕಾರವಾದ ಸಿದ್ಧಿ ಪಡೆದ

* ಜನನ: ಡಿಸೆಂಬರ್ 29, 1904. ಸ್ಥಳ: ಕುಪ್ಪಳ್ಳಿಗ್ರಾಮ. ತಂದೆ: ವೆಂಕಟಪ್ಪ ಗೌಡರು. ತಾಯಿ: ಸೀತಮ್ಮ. 'ಕುವೆಂಪು'ವಿನ ವಿಸ್ತೃತ ರೂಪ: ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ (ಪುಟ 37 ರಿಂದ 40 ನೋಡಿ).

ಲೇಖಕರು ಬಹುಮುಂದಿಯಿಲ್ಲ, ಕಾವ್ಯಕ್ಷೇತ್ರದಲ್ಲಿ ಅವರು ಮಹಾಕಾವ್ಯ, ಖಂಡ ಕಾವ್ಯ. ಕಥನಕಾವ್ಯ. ಭಾವಗೀತೆ ಎಲ್ಲವನ್ನು ಬರೆದಿದ್ದಾರೆ. 'ಶ್ರೀರಾಮಾಯಣ ದರ್ಶನಂ' ಅವರ ಮಹಾಕಾವ್ಯ: ಆಧುನಿಕ ಯುಗಧರ್ಮವನ್ನು ಸಮಷ್ಟಿ ಪ್ರಜ್ಞೆಯನ್ನು ಪ್ರತಿ ಬಿಂಬಿಸುವ ಕೃತಿವಿಭೂತಿ. ಅವರ ಕಥನ ಗೀತೆಗಳು 'ಕಥನ ಕವನಗಳು' ಎಂಬ ಕೃತಿ ಯಲ್ಲಿ ಸಂಕಲಿತವಾಗಿದೆ, 'ಚಿತ್ರಾಂಗದಾ' ಮತ್ತು 'ಸಮುದ್ರಲಂಘನ' ಅವರ ಖಂಡ ಕಾವ್ಯಗಳು. ಸುಮಾರು ಒಂದು ಸಹಸ್ರ ಸಂಖ್ಯೆಯಲ್ಲಿರುವ ಅವರ ಭಾವಗೀತೆಗಳು ಇಪ್ಪತ್ತೆರಡು ಸಂಕಲನಗಳಲ್ಲಿ ಶ್ರೇಣಿಗೊಂಡಿವೆ. ಅವರ ಕವನಗಳ ಕೆಲ ಉದಾಹರಣೆ:

ಆನಂದಮಯ ಈ ಜಗಹೃದಯ
ಏತಕೆ ಭಯ ? ಮಾಣೊ
ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೊ. (ಪಕ್ಷಿ ಕಾಶಿ)

o o o

ಜೀವನ ವನದಲಿ ಕವನ ಮಯೂರಂ
ನಿಖಿಲ ಭುವನ ಮನನಯನ ವಿಹಾರಂ
ಕಲ್ಪನೆ ಕಣ್ಗಳ ಸಾಸಿರ ಸೂರಂ
ತೆರೆದು ಕುಣಿವುದಾವೇಶದಲಿ
ದಿನದಿನ ನಿಶಿನಿಶಿ ಮಾಯಾ ರೂಪಸಿ
ಮೆರೆಯಲು ನವನವ ವೇಷದಲಿ (ನವಿಲು)

o o o

ಎಲ್ಲಾದರು ಇರು ; ಎಂತಾದರೂ ಇರು :
ಎಂದೆಂದಿಗೂ ನೀ, ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನ ವೊಂದಿದ್ದರೆ ನೀನಮ್ಮಗೆ ಕಲ್ಪತರು –(ಮೆಟ್ಟುವ ನೆಲ ಕರ್ನಾಟಕ)

o o o o o

ಓ ನನ್ನ ಚೇತನ
ಆಗು ನೀ ಅನಿಕೇತನ !
ರೂಪ ರೂಪಗಳನು ದಾಟಿ
ನಾಮ ಕೋಟಿಗಳನು ಮೀಟಿ
ಎದೆಯ ಬಿರಿಯೆ ಭಾವದೀಟಿ
ಓ ನನ್ನ ಚೇತನ
ಆಗು ನೀ ಅನಿಕೇತನ! –(ವಿಶ್ವ ಮಾನವ ಗೀತೆ-'ಅನಿಕೇತನ')

**ಪು. ತಿ. ನರಸಿಂಹಚಾರ್*** : ಬಹುಮುಖ ಪ್ರತಿಭೆಯ ಸಮಕಾಲೀನ ಸಾಹಿತಿಗಳಲ್ಲಿ ಪ್ರಮುಖರು. ಇವರು ಕವಿಗಳು, ವಿಮರ್ಶಕರು, ನಾಟಕಕಾರರು,' ಸಂಶೋಧಕರು ಹಾಗೂ ಪ್ರಬಂಧ ಲೇಖಕರು. ಸಾಹಿತ್ಯದ ಎಲ್ಲ ಕ್ಷೇತ್ರಗಳಲ್ಲೂ ತಮ್ಮ ಕಲ್ಪನಾ ಸೌಂದರ್ಯ, ನಿರೂಪಣೆಯ ಕೌಶಲ್ಯವನ್ನು ಗಂಭೀರ ರೀತಿಯಲ್ಲಿ ಪ್ರದರ್ಶಿಸಿ ಸತ್ವಪೂರ್ಣ ಸಾಹಿತ್ಯ ರಸನೌತಣವನ್ನು ಉಣಬಡಿಸಿದ್ದಾರೆ. ಮಾಸ್ತಿಯವರ ಮಾತಿನಲ್ಲೇ ಹೇಳುವುದಾದರೆ 'ಇವರ ಕಾವ್ಯ ಮೊನಚಾದುದು ಹಾಗೆಯೇ ನೆಲೆಯರಿತುದು· ಜೀವನಾನುಕೂಲವಾದುದು, ಹಾಗೆಯೇ ತೀವ್ರವಾದುದು. ಮಾತು ಮುದ್ದಾದುದು ಆದರೂ ಬಲಉಳ್ಳದ್ದು. ಇಲ್ಲಿ ನಮ್ಮ ನಾಡು ನುಡಿಯುತ್ತದೆ. ನಮ್ಮ ಸಂಸ್ಕೃತಿ ರೂಪ ಪಡೆಯುತ್ತದೆ.' 'ಹಣತೆ', 'ಮಾಂದಳಿರು', 'ಶಾರದಯಾಮಿನಿ', 'ಹೃದಯ ವಿಹಾರಿ', 'ಗಣೇಶ ದರ್ಶನ', 'ರಸ ಸರಸ್ವತಿ', 'ಮಲೆ ದೇಗುಲ', ಮುಖ್ಯವಾದ ಕವನ ಸಂಗ್ರಹಗಳು. ಇವುಗಳಲ್ಲಿ ಸಮೃದ್ಧ ಭಾವ ಸೌಂದರ್ಯ, ನಿಸರ್ಗ ಪ್ರೀತಿ, ಅರ್ಥ ಸಂಪತ್ತು, ಕಲ್ಪನಾ ವೈಭವ, ಛಂದಸ್ಸಿನ ವೈವಿಧ್ಯ, ಕಾಣಬಹುದು.

ಉದಾಹರಣೆಗೆ ಕೆಲ ಕವನಗಳನ್ನು ಕೇಳಿ.

'ರಸ ಸರಸ್ವತಿ, ದೇವಿ, ಕವಿಯಿಷ್ಟ ಸ್ವಪ್ನವೇ

..........................................................

ಒಳ ಹೊರಗೆ ಬೆರೆಸಿ ದಿಗ್ ಭ್ರಮೆ ಗೊಳಿಸುವಪ್ಸರೇ
ಇಂದ್ರಿಯ ಮನೋ ಬುದ್ಧಿ ಧೃತ ಸತ್ಯಮತ್ಸರೇ.
ಈರೇಳು ಲೋಕಗಳ ಈ ಲೋಕದಿಂದೆತ್ತಿ ಪದಗೊಂಡ ವಿಕ್ರಮೇ
ತುಳಿಯುವೆಡೆ ಚೆಲುಚೆಲುವ ಕೊಸರಿಸುವ ಜಗದೊಲವ ಕೊಳುವ ಹೃದಯಂಗಮೇ....'

o o o o o

'ಇಂದು ಏನಾಗಿಹುದೆ, ಗೆಳತಿ
ಏಕೆ ಸಡಗರ ಗೊಳ್ವೆನೇ ?
ಕಡಲಿನಗಲದ ಕೇರಿಹರಹನು
ಹಾರಿ ಬರುವೆಲರಾರ ದೂತನೆ
ಸುದ್ದಿ ಯಾವುದ ಪೇಳ್ವನೆ ?'

ಇದು 'ಗಣೇಶ ದರ್ಶನ' ಕವನ ಸಂಗ್ರಹದ 'ಪ್ರತೀಕ್ಷೆ' ಕವನದ್ದು,

'ಮೂಡಣ ಕಣಿವೆಯ ಹಿಮದವ ಕುಂತನ
ರವಿಕರ ಸ್ಪರ್ಶಕೆ ಜಾರುತಿದೆ

---

* ಜನನ: ಮಾರ್ಚ್ 1905, ಮಂಡ್ಯ ಜಿಲ್ಲೆ ಮೇಲುಕೋಟೆಯಲ್ಲಿ. ತಂದೆ: ತಿರುನಾರಾಯಣೈಯ್ಯಂಗಾರ್, ತಾಯಿ: ಶ್ರೀರಂಗಮ್ಮ

'ನಾಡದೊ ಒಗ್ಗಿತ ನಾಚುತ ಮೆಲ್ಲನೆ
ಮೈಸಿರಿಯನು ತಾ ತೋರುತಿದೆ....'

ಇದು 'ಹಣತೆ' ಕವನ ಸಂಗ್ರಹದ 'ಯದುಗಿರಿಯ ಮೌನ ವಿಕಾಸ'ದಿಂದ ಆಯ್ದುದು.

ಸಂಗೀತ ನಾಟಕ ಹಾಗೂ ಗೀತನಾಟಕಗಳ ರಚನೆಯಲ್ಲಿ ಪು. ತಿ. ನ.ರವರ ಕೊಡುಗೆ ವಿಶಿಷ್ಟವಾದುದು. 'ವಸಂತ ಚಂದನ', 'ಸೀತಾ ಕಲ್ಯಾಣ', ಹೆಸರಾಂತ ಸಂಗೀತ ನಾಟಕಗಳು. 'ಅಹಲ್ಯೆ', 'ಗೋಕುಲ ನಿರ್ಗಮನ', 'ಶಬರಿ', 'ದೋಣಿಯ ಬಿನದ', 'ವಿಕಟ ಕವಿ', ಭಾವಪೂರ್ಣವಾದ ಸುಂದರ ಗೀತನಾಟಕಗಳು. 'ಈಚಲ ಮರದ ಕೆಳಗೆ', 'ಧೇನುಕ ಪುರಾಣ', ಪ್ರಬಂಧ ಸಂಗ್ರಹಗಳು. 'ರಾಮಾಚಾರಿಯ ನೆನಪು', 'ರಥ ಸಪ್ತಮಿ ಮತ್ತು ಇತರ ಕಥೆಗಳು' ಸಂಕಲನಗಳು. ಇವರ 'ಹಂಸ ದಮಯಂತಿ'ಗೆ ಭಾರತ ಅಕಾಡೆಮಿಯ ಪಾರಿತೋಷಕ ದೊರೆತಿದೆ. 'ಧ್ವಜ ರಕ್ಷಣೆ' ಉತ್ತಮ ಕಥೆಗಳ ಸಂಗ್ರಹ.

ಪು. ತಿ. ನ. ಮೈಸೂರು ಸರ್ಕಾರದ ಲೆಜಿಸ್ಲೇಚರ್ ಇಲಾಖೆಯಲ್ಲಿದ್ದು ನಿವೃತ್ತ ರಾದ ನಂತರ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್-ಕನ್ನಡ ನಿಘಂಟಿನ ಪರಿಷ್ಕರಣ ಕಾರ್ಯದಲ್ಲಿ ಸೇವೆ ಸಲ್ಲಿಸಿದ್ದಾರೆ. 1981ರ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿವೆ.

**ಈಶ್ವರ ಸಣಕಲ್ಲ**[1] : ಹಳೆಯ ಪೀಳಿಗೆಯ ಹೆಸರಾಂತ ಕವಿ. ಇವರ 'ಬಟ್ಟೆ' ಕವನ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. ಇವರು ಸುಮಾರು 20 ಕೃತಿಗಳನ್ನು ರಚಿಸಿದ್ದಾರೆ. ಹಲವು ಜೀವನ ಚರಿತ್ರೆಗಳನ್ನು ರಚಿಸಿರು ವುದಲ್ಲದೆ ಗ್ರಾಮೋದ್ಧಾರ ಮುಂತಾದ ವಿಷಯಗಳ ಮೇಲೂ ಪುಸ್ತಕಗಳನ್ನು ರಚಿಸಿ ದ್ದಾರೆ. ಮುಂಬಯಿಯಿಂದ ಹೊರಡುತ್ತಿದ್ದ 'ಸಹಕಾರ' ಪತ್ರಿಕೆಯ ಸಂಪಾದಕ ರಾಗಿಯೂ ಇವರು ಹಲವು ವರ್ಷ ದುಡಿದಿದ್ದರು.

**ಡಿ. ಎಸ್. ಕರ್ಕಿ**[2] : ಇವರ ಪೂರ್ಣ ಹೆಸರು ದುಂಡಪ್ಪ ಸಿದ್ದಪ್ಪಕರ್ಕಿ. ಬಹಳ ಪ್ರತಿಭಾಶಾಲಿ, ಫ್ರಾನ್ಸ್-ರಷ್ಯಾ ಮುಂತಾದ ದೇಶಗಳಿಗೆ ಭೇಟಿ ನೀಡಿ

---

1 ಜೀವಿತಕಾಲ : (20-12-1906 — 3-12-1984). ಹುಟ್ಟಿದ ಊರು : ಗೋಕಾಕ ತಾಲ್ಲೋಕಿನ ಯಾದವಾಡ. ತಂದೆ : ಮಹಾರುದ್ರಪ್ಪ. ತಾಯಿ : ನೀಲಾಂಬಿಕೆ. ಈ ಕವಿಯ ಪೂರ್ಣ ಹೆಸರು ಈಶ್ವರ ಮಹಾರುದ್ರಪ್ಪ ಸಣಕಲ್ಲ. ಕೃತಿಗಳು : 'ಕೋರಿಕೆ' ಕವನ ಸಂಗ್ರಹ. 'ಸಂಸಾರ ಸಮರ' ಕಾದಂಬರಿ.

2 ಜೀವಿತಕಾಲ : 15-11-1907 — 16-1-1984. ಹುಟ್ಟಿದ ಊರು : ಬೆಳಗಾವಿ ಜಿಲ್ಲೆಯ ಹಿರೇಕೊಪ್ಪ. ತಂದೆ : ಸಿದ್ದಪ್ಪ. ತಾಯಿ : ದುಂಡವ್ವ. ಕೃತಿಗಳು : ನಕ್ಷತ್ರಗಾನ, ಭಾರತೀಯ ಸಾಹಿತ್ಯ ಸಂಸ್ಕೃತಿ-ಕೃತಿ, ಕನ್ನಡ ಛಂದೋವಿಕಾಸ ಮುಂತಾದವುಗಳು.

ಸಾಹಿತ್ಯಕ ಭಾಷಣಗಳನ್ನು ಮಾಡಿದ್ದಾರೆ, ಇವರು ಹೆಸರಾಂತ ಕವಿ, ಪ್ರಸಿದ್ಧ ವಿಮರ್ಶಕರು ಹಾಗೂ ಸಂಶೋಧಕರು. ಸುಮಾರು 15 ಕೃತಿಗಳನ್ನು ರಚಿಸಿದ್ದಾರೆ. ಇವರ 'ಗೀತ ಗೌರವ' ಕೃತಿಗೆ ಕಾವ್ಯ ವಿಭಾಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

'ಪದ್ಮಶ್ರೀ **ವಿನಾಯಕ ಕೃಷ್ಣ ಗೋಕಾಕ***' ಕನ್ನಡದ ಇನ್ನೊಬ್ಬ ಪ್ರತಿಭಾನ್ವಿತ ವ್ಯಕ್ತಿ, 'ಭಾರತ ಸಿಂಧುರಶ್ಮಿ'ಯೆಂಬ ಮಹಾಕಾವ್ಯದ ಕರ್ತೃ. ಇವರು ಕವಿಗಳು, ಕಾದಂಬರಿಕಾರರು, ವಿಮರ್ಶಕರು, ಪ್ರಬಂಧ ಲೇಖಕರು, ನಾಟಕಕಾರರು, ಪ್ರಸ್ತುತ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು ಹಾಗೂ ಜ್ಞಾನಪೀಠ ಪ್ರಶಸ್ತಿ ಸಮಿತಿ ಅಧ್ಯಕ್ಷರು ; ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿ ವಿಜೇತರು. ರಾಜ್ಯ ಸರ್ಕಾರದಿಂದ ಸನ್ಮಾನಿತರು. ಇದೇ ತಾನೆ ನಿವೃತ್ತಿಗೊಂಡಿರುವ ಸತ್ಯಸಾಯಿ ವಿಶ್ವವಿದ್ಯಾಲಯದ ಉಪ ಕುಲಪತಿಗಳು. ಇವರ ಕಾವ್ಯದಲ್ಲಿ ಹೊಸತು ಹಳೆಯದರ ಬಹು ಮಧುರ ಸಮ್ಮಿಳನವನ್ನು ಕಾಣಬಹುದು. ಪ್ರಪಂಚದ ಬಹುಭಾಗ ಸುತ್ತಿ ಪ್ರವಾಸ ವಸ್ತುವನ್ನೇ ತಮ್ಮ ಬೃಹತ್ ಕಾದಂಬರಿಗೆ ಅಳವಡಿಸಿಕೊಂಡು ಇದನ್ನು ಗದ್ಯ ಕಾವ್ಯವಾಗಿ ಸೃಷ್ಟಿಸಿದ್ದಾರೆ. ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಇಂಗ್ಲೆಂಡಿಗೆ ಹೋದ ಗೋಕಾಕರು 'ಸಮುದ್ರದಾಚೆಯಿಂದ' ಪ್ರಕಟಿಸಿದರು. ಅಂತರರಾಷ್ಟ್ರೀಯ ಸಮ್ಮೇಳನ ವೊಂದರಲ್ಲಿ ಭಾಗವಹಿಸಲು ಟೋಕಿಯೋಗೆ ಹೋಗಿದ್ದಾಗ 'ಸಮುದ್ರದೀಚೆಯಿಂದ' ಬರೆದರು. 'ದ್ಯಾವಾ ಪೃಥವಿ' ಖಂಡಕಾವ್ಯ. ಇದರಲ್ಲಿ ನೀರದ ಹಾಗೂ ಇಳಾ ಗೀತಗಳೆಂಬ ಎರಡು ಭಾಗಗಳಿವೆ. ಇದಕ್ಕೆ 1960ರಲ್ಲಿ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ. 'ಭಾರತ ಸಿಂಧುರಶ್ಮಿ' ಮಹಾಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ 'ರಾಜಾಜಿ ಸಾಹಿತ್ಯ ಪ್ರಶಸ್ತಿ' ದೊರೆತಿವೆ. 'ಸಮುದ್ರ ಗೀತೆಗಳು', 'ನವ್ಯ ಕವಿತೆಗಳು', ಹೊಸ ಮಾರ್ಗದಲ್ಲಿ ಹರಿದ ನವ್ಯ ಕವನಸಂಗ್ರಹಗಳು. 'ತ್ರಿವಿಕ್ರಮನ ಆಕಾಶಗಂಗೆ' ಸ್ನೇಹ ಸೌಂದರ್ಯ ಕಡೆದು ಮಕರಂದ ತೆಗೆದ ಕಾವ್ಯ. 'ಇಂದಲ್ಲ ನಾಳೆ' ಪ್ರವಾಸ ಕಾಲದಲ್ಲಿ ತಾವು ಕಂಡ ಸಂಸ್ಕೃತಿ, ಜನಜೀವನವನ್ನು ವಿಶ್ಲೇಷಿಸಿ ಬರೆದಿರುವ ವಿಮರ್ಶಾತ್ಮಕ ಕೃತಿ.

'ಕಾವ್ಯಮೀಮಾಂಸೆ' ಪ್ರೌಢ ಪ್ರಬಂಧಗಳ ಸಂಗ್ರಹ. ಜನನಾಯಕ, ಯುಗಾಂತರ, 'ವಿಮರ್ಶಕ ವೈದ್ಯ' ಇವರ ನಾಟಕಗಳು. ಚೆಲುವಿನ ನಿಲುವು,

---

* ಜನನ : ಆಗಸ್ಟ್ 1909. ಜನ್ಮಸ್ಥಳ : ಧಾರಾವಾಡ ಜಿಲ್ಲೆಯ 'ಸವಣೂರು' ಇವರು ಕನ್ನಡದಲ್ಲಿ 6 ಕಾವ್ಯ ಸಂಕಲನಗಳನ್ನು, ಮೂರು ನಾಟಕಗಳನ್ನು, 4 ವಿಮರ್ಶಕ ಗ್ರಂಥಗಳನ್ನು, 2 ಪ್ರಬಂಧ ಸಂಕಲನಗಳನ್ನು, 2 ಪ್ರವಾಸ ಸಾಹಿತ್ಯ ಕೃತಿಗಳನ್ನು, ಒಂದು ಬೃಹತ್ ಕಾದಂಬರಿ ಯನ್ನು ಬರೆದಿದ್ದಾರೆ. 'ಇಜ್ಜೋಡು' ಇವರ ಪ್ರಥಮ ಕಾದಂಬರಿ, ಮುಂದೆ ಇದು ವಿಸ್ತೃತ ಗೊಂಡಾಗ 'ಸಮರಸವೇ ಜೀವನ' ಎಂಬ ಬೃಹತ್ ಕಾದಂಬರಿಯಾಯಿತು.

ಚಿಂತನ, ಇಂದಿಲ್ಲ ನಾಳೆ, ಸಾಹಿತ್ಯದಲ್ಲಿ ಪ್ರಗತಿ; ಮುನಿದ ಮಾರಿ, ಭಾವರಾಗ, ಹಿಗ್ಗು, ಪುಣ್ಯಭೂಮಿ ಮುಂತಾದ ಕೃತಿಗಳು ಸಾಹಿತ್ಯ ಭಂಡಾರವನ್ನು ಸಂಪನ್ನಗೊಳಿಸಿವೆ. ಇವರು ಕನ್ನಡದಲ್ಲದೆ ಇಂಗ್ಲೀಷಿನಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ. 'ದಿ ಸಾಂಗ್ ಆಫ್ ಲೈಫ್' ಮತ್ತು 'ಇನ್ ಲೈಫ್ಸ್ ಟೆಂಪಲ್' ಕವನ ಸಂಗ್ರಹಗಳು, ಇವರಿಗೆ ಬಿ.ಎ. ಆದೊಡನೆ ಮದುವೆಯಾದರೂ ಎಂ.ಎ. ಮುಗಿಸಿ ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ ನಡೆಸಿದರು, 1958ರಲ್ಲಿ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಗಾದಿ ಅಲಂಕರಿಸಿದ್ದರು. 1966ರಲ್ಲಿ ಬೆಂಗಳೂರಿನ ವಿಶ್ವ ವಿದ್ಯಾನಿಲಯದ ಉಪಕುಲಪತಿಗಳಾಗಿ ಅಧಿಕಾರ ಸ್ವೀಕರಿಸಿ ಕಾಲೇಜಿನ ವ್ಯಾಸಂಗದಲ್ಲಿ ಅನೇಕ ಬದಲಾವಣೆಗಳನ್ನು ತಂದು 'ಯಶಸ್ವಿ' ಕುಲಪತಿ ಎಂದು ಹೆಸರುಗಳಿಸಿದ್ದರು.

ಇವರ ಕವನಗಳಲ್ಲಿನ ವೈವಿಧ್ಯಮಯ ಸೌಂದರ್ಯ, ಶೈಲಿ, ಸೊಬಗು, ನವ್ಯ ಕಲ್ಪನೆಯ ಉದಾಹರಣೆಗಾಗಿ ಈ ಕೆಲ ಪದ್ಯಗಳು.

ಚಂದ್ರನ ಶೀತಲ ಸ್ಪರ್ಶದಲಿ
ಸೂರ್ಯನ ರಜಸೋತ್ಸವ ಹರ್ಷದಲಿ
ಗಗನ ವಿಹಾರಿ, ತ್ರಿಭುವನ ಸಂಚಾರಿ
ನೀಲಾಂತರ್ಯಾಮಿ, ವಿಶ್ವಪ್ರೇಮಿ
ಏಕಾಕಿ-ಆದರೂ ವಿವೇಕಿ !
ಅದುವೇ ನೀರದ, ಅದುವೇ ನಾರದ.

o o o

ಭಾರತದಲಿ ಜನ ಸಂಖ್ಯೆ ಬೆಳೆವುದೆಂದು
ಚಿಂತಿಸುವೆವು ನಾವು
ಅಮೆರಿಕೆಯಲಿ ಯಂತ್ರ ಸಂಖ್ಯೆ ಮಿಕ್ಕಿ
ಹೊಸ ಮಾದರಿ ನೋವು

o o o

ಜೀವಜಾತದಿ ಆತ್ಮ ಮುರಲಿಯು
ನುಡಿಯಿಸುವ ಕೊರಲೊಂದಿದೆ
ಸಕಲ ಸೃಷ್ಟಿಯು ಮೂಕ ಕರೆ ಆ
ಕೊರಲ ನಾದವ ಹೊಂದಿದೆ

o o o

ವ್ಯಾಸರಾಯರು ಪ್ರಶ್ನಿಸಿದರು. 'ಬಿ. ಎಂ. ಶ್ರೀ. ಸ್ವರ್ಣ ಪದಕ ಹಾಗೂ 'ದೇವರಾಜ ಬಹದ್ದೂರ್' ಪ್ರಶಸ್ತಿ ಎರಡನ್ನೂ ಗಳಿಸಿರುವ ಹಿರಿಯ ಕವಿಗಳು ಯಾರು ? ಹೇಳ್ತೀರಾ ?

ಎಂದು ತಕ್ಷಣ ನುಡಿದ ಎಂ. ವಿ. **ಸೀತಾರಾಮಯ್ಯ*** ಎಂ.ಎ: ನಿವೃತ್ತ ಕನ್ನಡ ಪ್ರೊಫೆಸರ್.

ಜಂದ್ರುವಿನ ಜ್ಞಾಪಕಶಕ್ತಿಗೆ ತಲೆದೂಗಿದ ವ್ಯಾಸರಾಯರು ತಮ್ಮ ಮಾತು ಮುಂದುವರಿಸಿದರು. 'ಎಂ. ವಿ. ಸೀತಾರಾಮಯ್ಯನವರ ಕಾವ್ಯನಾಮ 'ರಾಘವ' ಇವರು ಪ್ರಸಿದ್ಧ ಕವಿ. ಒಳ್ಳೆಯ ಕಥೆಗಾರರು. ಕಾದಂಬರಿಕಾರರು, ವಿಮರ್ಶಕರು, ಸಂಶೋಧಕರು ಹಾಗೂ ಗ್ರಂಥ ಸಂಪಾದಕರು.' ಮಕ್ಕಳಿಗಾಗಿಯೂ ಕಥೆ-ಕವನ ಗಳನ್ನು ರಚಿಸಿದ್ದಾರೆ. 'ಹೂವನು ಮಾರುತ ಹೂವಾಡಗಿತ್ತಿ' ಹಾಡು ಮಕ್ಕಳ ಮನಸ್ಸನ್ನು ಸೂರೆಗೊಂಡಿದೆ.

ಇವರ ಕೃತಿಗಳು ಹಕ್ಕಿಹಾಡು, ರಾಗ, ಅಶೋಕ ಚಕ್ರ (ಕವನ ಸಂಗ್ರಹಗಳು) ರತಿದೇವಿ ಮತ್ತು ಇತರ ಕಥೆಗಳು, ಬಿಸಿಲು ಬೆಳದಿಂಗಳು, ನಿಲ್ದಾಣಗಳ ನಡುವೆ (ಕಥಾ ಸಂಕಲನಗಳು): ಭಾಗ್ಯಲಕ್ಷ್ಮಿ, ಸಂಜೆಯ ಸವಿ, ಜೀವನದ ಜೊತೆಗಾರ (ಕಾದಂ ಬರಿಗಳು), ತೆರೆಮರೆಯ ಚಿತ್ರಗಳು, ತೊಟ್ಟಿಲು ತೂಗದಕೈ. ಸ್ವಯಂವರ (ನಾಟಕ ಗಳು): ಧೂಮಲೀಲೆ, ಮತ್ತು ಮುಗಿಲುಗಳು, ಹಿಡಿಹೂವು, (ಪ್ರಬಂಧಗಳು), ಕವಿರಾಜ ಮಾರ್ಗ, ಉದಯಾದಿತ್ಯಾಲಂಕಾರ, ಚಿನ್ನದ ಬೆಳಸು (ಸಂಪಾದಿತ ಕೃತಿಗಳು) ಇವುಗಳಲ್ಲದೆ ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು. ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ, ಕಾವ್ಯ ಮೀಮಾಂಸೆ (ವಿಮರ್ಶೆ ಗಳು), ಹಾವಾಡಿಗ, ಹೂವಾಡಿಗಿತ್ತಿ (ಬಾಲ ಸಾಹಿತ್ಯ),

ಎಂ. ವಿ, ಸೀ.ರವರಿಗೆ ಪುರಸ್ಕಾರ, ಬಹುಮಾನಗಳ ಸರಮಾಲೆಯೇ ಬಂದಿದೆ. 'ಆ ಚಿತ್ರಗಳು' ನೀಳ್ಗವನಕ್ಕೆ ಬಿ.ಎಂ.ಶ್ರೀ. ಸ್ವರ್ಣಪದಕ, 'ಹಕ್ಕಿ ಹಾಡು' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ, 'ಮಾವನ ಮಗಳು' ಕಾದಂಬರಿಗೆ ದೇವರಾಜ ಬಹದ್ದೂರ್ ಬಹುಮಾನ, ತೊಟ್ಟಿಲು ತೂಗದ ಕೈ, ಮತ್ತು 'ಜೀವನ ನಾಟಕ' ಕೃತಿ ಗಳಿಗೆ ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯ ಬಹುಮಾನ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಜ.ಚ.ನಿ. ಅವರಿಂದ 'ವಿಚಾರ ರತ್ನಾಕರ' ಬಿರುದು ದೊರೆತಿದೆ.

ಶ್ರೀಯುತರು ಪ್ರಸಿದ್ಧ ಸಾಹಿತಿಗಳಲ್ಲದೆ ಒಳ್ಳೆಯ ಚಿತ್ರಕಾರರೂ ಆಗಿದ್ದಾರೆ. ಕೆಲಕಾಲ ಇವರು ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯೂ ಆಗಿದ್ದರು. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ. ಕನ್ನಡ ಸಾಹಿತ್ಯ ಪರಿಷತ್ತು, ದ್ರಾವಿಡ ಭಾಷಾ ವಿಜ್ಞಾನ ಪರಿಷತ್ತು ಮುಂತಾದ ಸಂಸ್ಥೆಗಳೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದಾರೆ.

---

* ಜನನ: 9-9-1910. ತಂದೆ: ವೆಂಕಟದಾಸಪ್ಪ. ತಾಯಿ: ಸಾವಿತ್ರಮ್ಮ. ಹುಟ್ಟಿದ ಊರು: ಮೈಸೂರು. ಇವರ ಪೂರ್ಣ ಹೆಸರು: ಮೈಸೂರು ವೆಂಕಟದಾಸಪ್ಪ ಸೀತಾರಾಮಯ್ಯ.

**ಪ್ರೊ॥ ಎಸ್. ವಿ. ಪರಮೇಶ್ವರಭಟ್ಟ*** ಕನ್ನಡ ಕಾಳಿದಾಸ ಮಹಾ ಸಂಪುಟ ದಂತಹ ವಿಶಿಷ್ಟ ಕೃತಿಯನ್ನು ರಚಿಸಿ ಮೂಲ ಸಂಸ್ಕೃತದೊಡನೆ ಕನ್ನಡದ ಪ್ರತಿರೂಪ ದರ್ಶನ ಮಾಡಿಸಿರುವ ಶ್ರೀ ಪರಮೇಶ್ವರಭಟ್ಟರು ಈ ಯುಗದ ಪ್ರತಿಭಾನ್ವಿತ ಕವಿಗಳಲ್ಲಿ ಮುಖ್ಯರು. ಮಲೆನಾಡಿನ ಭವ್ಯ ನಿಸರ್ಗದ ಉಡಿಯಲ್ಲಿ ಜನಿಸಿ ಬೆಳೆದ ಭಟ್ಟರ ಮೈಯುಂಡು ಬೆಳೆದ ಕಲ್ಪನೆ ವೈಭವಯುತವಾಗಿದೆ.

ವೈದಿಕ ಮನೆತನದಲ್ಲಿ ಹುಟ್ಟಿ ಒಂದು ವರ್ಷಕ್ಕೇ ತಾಯಿಯನ್ನು ಕಳೆದುಕೊಂಡ ಭಟ್ಟರು ತಂದೆಯ ಅಕ್ಕರೆಯಲ್ಲಿ ಬೆಳೆದು ದೊಡ್ಡವರಾದರು. ತೀರ್ಥಹಳ್ಳಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಬೆಂಗಳೂರಿನಲ್ಲಿ ಪ್ರೌಢಶಾಲೆಯಲ್ಲಿದ್ದಂತೆಯೇ ಪಿತೃವಿಯೋಗ. ಉಳಿಯ ಪೆಟ್ಟು ಬಿದ್ದಷ್ಟು ಶಿಲ್ಪ ಸುಂದರವಾಗುವಂತೆ ಕಷ್ಟದ ಪರಿಸರದಲ್ಲೆ ಬವಣೆಗಳ ಪೆಟ್ಟು ತಿಂದು ಭವ್ಯವಾಯಿತು ವ್ಯಕ್ತಿತ್ವ. ಹಲವರ ನೆರವಿನಿಂದಲೇ ಎಂ. ಎ. ಪಾಸು ಮಾಡಿದರು. ನೀಳ್ಗವನ ಒಂದಕ್ಕೆ ಚಿನ್ನದ ಪದಕ ಲಭಿಸಿತು. ಪ್ರತಿಭೆ ದಾಂಗುಡಿ ಇಡಲು ಮೊದಲಿಟ್ಟಿತು, ಕೃತಿಮಾಲೆ ಸಿದ್ಧವಾಯಿತು. ಮಲ್ಲಿಗೆ, ಜಾಜಿ, ಗುಲಾಬಿ, ಶೇವಂತಿಗೆ, ಪಚ್ಚೆ ಮರುಗದೊಡನೆ ಮೆರೆದವು. 'ಇಂದ್ರಚಾಪ', 'ಇಂದ್ರಗೋಪ', 'ಉಪ್ಪುಕಡಲು', 'ಗಗನ ಚುಕ್ಕಿ', 'ರಾಗಿಣಿ', 'ಕೃಷ್ಣಮೇಘ', 'ಗಾಥಾಸಪ್ತಶತಿ, ಅಮರುಶತಕ, ಭರ್ತೃಹರಿಯ ಶತಕತ್ರಯ, ಸುರಗಿ, ಸುರಹೊನ್ನೆ, ತುಂಬೆಹೂವು' ಮಂಥಾನ, ಮುದ್ದಣ ಕವಿಯ ಅದ್ಭುತ ರಾಮಾಯಣ 'ಅಕ್ಕಮಹಾದೇವಿ' 'ಭಾವಗೀತೆ' ಕೆಲವು ಇಂಗ್ಲೀಷ್ ಪ್ರಬಂಧಗಳು, ಸೀಳುನೋಟ, ಜಹನಾರ, ಮಾಚಯ್ಯ, ಅದ್ಭುತ ರಾಮಾಯಣದ ಕಥೆ, ಕಣ್ಣುಮುಚ್ಚಾಲೆ, ಗೀತಗೋವಿಂದ ಮುಂತಾದವುಗಳು. 'ಕನ್ನಡಕಾಳಿದಾಸ ಮಹಾ ಸಂಪುಟ' ಶ್ರೀಭಟ್ಟರು ಕನ್ನಡಾಂಬೆಗೆ ಅರ್ಪಿಸಿರುವ ಅಪೂರ್ವ ಕಾವ್ಯಮಾಲೆ. ಇವರ ಅಪಾರ ಸಾಹಿತ್ಯ ಸೇವೆಯನ್ನು ಗುರುತಿಸಿ ರಾಜ್ಯಸರ್ಕಾರ 1970ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. 'ಚಂದ್ರ ವೀಥಿ', 'ಪಾಮರ' ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಗಳಿಸಿರುವ ಕೃತಿಗಳು.

'ನಾನು ಅರವತ್ತಕ್ಕೆ ಅಡಿ ಇಡುತ್ತಿದ್ದೇನೆ. ಈ ಅವಧಿಯಲ್ಲಿ ಕೆರೆ ಕಟ್ಟಲಿಲ್ಲ, ಬಾವಿ ತೋಡಲಿಲ್ಲ, ತೋಪು ನಡಲಿಲ್ಲ, ಸತ್ರ ಇಡಲಿಲ್ಲ, ಒಂದು ಗುಡಿ ನಿರ್ಮಿಸಲಿಲ್ಲ. ಜನರಿಗೆ ಉಪಯೋಗ ಬೀಳುವ ಯಾವ ಕಾರ್ಯವನ್ನೂ ಮಾಡಲಿಲ್ಲ. ಅರವತ್ತಾದವರು ಇಂತಹ ಯಾವುದನ್ನಾದರೂ ಮಾಡಬೇಕಂತೆ' ಎಂದು ಕಳಕಳಿಯಿಂದ ಬಿನ್ನವಿಸಿಕೊಂಡು ಕನ್ನಡ ಕಾಳಿದಾಸ ಸಂಪುಟವನ್ನು ಕನ್ನಡ ಜನತೆಗೆ ಅರ್ಪಿಸಿದ್ದಾರೆ, ಇದು ಅವರ ಸಹೃದಯತೆ, ವಿಶಾಲ ಮನೋಭಾವದ, ದ್ಯೋತಕ. ಒಗಟು, ಗಾದೆ,

* ಜನನ: ಫೆಬ್ರುವರಿ 8, 1914. ಹುಟ್ಟಿದ ಊರು: ವಿದ್ಯಾರಣ್ಯಪುರ. ತಂದೆ: ಸದಾಶಿವರಾಯರು. ತಾಯಿ: ಲಕ್ಷ್ಮಮ್ಮ. ಇವರು ರಚಿಸಿರುವ ಕೃತಿಗಳ ಸಂಖ್ಯೆ ಸುಮಾರು ಅರವತ್ತು.

ಸಾಂಗತ್ಯ, ತ್ರಿಪದಿ, ಏಳೆ, ವಚನ, ಕವಿತೆ ಭಟ್ಟರು ಎಲ್ಲಾ ಪ್ರಕಾರಗಳಲ್ಲೂ ವಿಹರಿಸಿದ್ದಾರೆ. ಅವರು ನೀಡಿರುವ ಒಗಟು ಬಿಡಿಸಿ: 'ಮಲಗಿದಾಗ ಬಟ್ಟಲೊಳಗಿರುತ್ತೆ, ಎದ್ದಮೇಲೆ ಬಾಯೊಳಗಿರುತ್ತೆ' ಏನು ಗೊತ್ತೆ? ಹೋಗಲಿ, ಇದನ್ನು ಬಿಡಿಸಿ: 'ಹಾಸಿದ ಮಲ್ಲಿಗೆ ಹೂವಿನ ಹಾಸಿಗೆ ಹಾಗೇ ಇದೆ. ಮಿಂದು ಬಸ್ತೀನಿ ಎಂದು ಹೋದ ಗಂಡ ಬರಲೇ ಇಲ್ಲ.' ಒಗಟು ಬಿಡಿಸಿದಾಗ ಭಟ್ಟರಿಗೆ ಬರೆದು ತಿಳಿಸಿ. ಅವರ ಕವನದ ಒಂದೆರಡು ಸಾಲು ಕೇಳಿ ಆನಂದಿಸಿ.

'ನೂರು ವರುಷಗಳಲ್ಲಿ ಒಮ್ಮೆ ಸುಳಿದೊಂದಿರುಳ ಹೊಂಗನಸೆ ಸಾಕು; ನೂರಾರು ಭೃಂಗಗಳಲೊಮ್ಮೆ ಸುಳಿದೊಂದಿಳಿಯು ಸುಖಿಸಂಗ ಸಾಕು. ನೂರು ತಾರಗೆಗಳಲಿ ನನ್ನ ದಾರಿಯು ಬೆಳಗಲೊಂದರಿಲೆ ಸಾಕು. ಸಾಕೊಂದೆ ಕುಡಿಮಿಂಚು. ಸಾಕೊಂದೆ ಕುಡಿನೋಟ, ಸಾಕೊಂದೆ ಮಾತು. ನೂರು ಜನುಮಗಳಲ್ಲಿ ನಿನ್ನ ದರುಶನವೊಂದು ಕ್ಷಣವೆನಗೆ ಸಾಕು'.

ಮೇಘದೂತದ ಒಂದು ಪದ್ಯ.

ತಾರೆಗಳ ಪಡಸೆಳಲ ಕುಸುಮ ರಚಿತಗಳೆನಿಸಿ  
ಮೆರೆವ ಸಿತಮಣಿಮಯದ ಹರ್ಮ್ಯಗಳಲಿ  
ಉತ್ತಮ ಸ್ತ್ರೀಜನರ ಸಹವಾಸ ಸೌಖ್ಯದಲಿ  
ಯಕ್ಷರಾನಂದದಲಿ ಮೋದವಡೆದು  
ಗಂಭೀರ ಘೋಷದಲಿ ನಿನ್ನವೊಲು ದನಿಗೂಡುತೆ  
ಮೃದುವಾಗಿ ನುಡಿವ ಪುಷ್ಕರಗಳಿಂದೆ  
ಕಲ್ಪವೃಕ್ಷಗಳಿಂದಲೊಗೆದ ರತಿಫಲವೆನುತ  
ಮಧುವನಾಸ್ವಾಧಿಸುವರಂದದಿಂದೆ.

ಅಭಿಜ್ಞಾನ ಶಕುಂತಳದ ಈ ದೃಶ್ಯ ನೋಡಿ ಎಷ್ಟು ಸೊಗಸಾಗಿದೆ. ದುಷ್ಯಂತ ಋಷ್ಯಾಶ್ರಮದಲ್ಲಿ ಶಕುಂತಲೆಯನ್ನು ಕಂಡು ಮೋಹಿತನಾಗಿದ್ದಾನೆ. ಗಿಡಗಳಿಗೆ ನೀರೆರೆಯುತ್ತಿರುವ ಶಕುಂತಳೆಯ ಮುಖವನ್ನೇ ಕಮಲವೆಂದು ಭ್ರಮಿಸಿ ದುಂಬಿಯೊಂದು ಮುತ್ತುತ್ತಿದೆ.

**ಶಕುಂತಳೆ:** ಈ ದುಷ್ಟ ದುಂಬಿ ಸುಮ್ಮನಿರದು. ಬೇರೆಕಡೆ ಹೋಗುತ್ತೇನೆ. ಇದೇನು ಇಲ್ಲಿಗೂ ಬಂತು ಸಖಿಯರೆ! ಈ ದುಷ್ಟ ಮಧುಕರನಿಂದ ಪರಾಭವ ಪಡುವ ನನ್ನನ್ನು ರಕ್ಷಿಸಿ.

**ಸಖಿಯರು:** ರಕ್ಷಿಸುವುದಕ್ಕೆ ನಾವು ಯಾರು! ದುಷ್ಯಂತನಿಗೆ ಮೊರೆಯಿಡು ರಾಜರಕ್ಷಿತವಲ್ಲವೆ ತಪೋವನ?

ದುಷ್ಯಂತ ಎದುರು ಬಂದು 'ಪೌರವನು ವಸುಮತಿಯ ಪೊರೆಯುತಿರೆ ದಂಡಿಸುತೆ ದುರ್ವಿನೀತರನು. ಮುಗ್ಧಮುನಿ ಪುತ್ರಿಯರೊಳಾವನಿಂದ ವಿನಯುವನಾ

ಚರಿಸಲಿಹನು (ಎಲ್ಲರೂ ರಾಜನನ್ನು ನೋಡಿ ಸ್ವಲ್ಪ ಭಯಭ್ರಾಂತರಾದವರಂತೆ ನಟಿಸುವರು).

ಅನುವಾದಿತ ಶಕುಂತಳೆಯ ವರ್ಣನೆ ಕೇಳಿ ಎಷ್ಟು ಸೊಗಸಾಗಿದೆ.

'ತಳಿರು ಗಂಪನು ಹೋಲುವುದು ತುಟಿ ತೋಳು ತೆಳ್ಳನೆ
ಹರೆಯ ತಾನನುಕರಿಪುದು
ಮೆರೆವ ಮೈಯೊಳು ಹೂವಿನಂದದ ಹರೆಯವೇ ದಿಟ
ಲೋಭ ನೀಯುವಿದೆನಿಪುದು'

ಒಂದು ನಿಮಿಷ ಮಾತು ನಿಲ್ಲಿಸಿದ ವ್ಯಾಸರಾಯರು ಪುನಃ ಮುಂದುವರಿಸಿದರು.

"ರಾಯರು ಬಂದರು ಮಾವನ ಮನೆಗೆ ರಾತ್ರಿಯಾಗಿತ್ತು.
ತುಂಬಿದ ಚಂದಿರ ಬಂದಿತ್ತು..."

ಈ ಕವನ ಬರ್ದೋರು ಯಾರು? ಯಾರಾದ್ರೂ ಹೇಳ್ತೀರಾ...? ಪ್ರಶ್ನಿಸಿದರು ಮೇಸ್ಟರು.

"**ಕೆ. ಎಸ್. ನರಸಿಂಹಸ್ವಾಮಿ***" ಎಲ್ಲರೂ ಒಕ್ಕೊರಲಿನಿಂದ ನುಡಿದರು.

'ಮೈಸೂರು ಮಲ್ಲಿಗೆಯ' ಸವಿಕಂಪನ್ನು ಕರ್ನಾಟಕದಲ್ಲಿ ಹರಿಸಿದ ಪ್ರಸಿದ್ಧ ಕವಿ. ಪ್ರೇಮ ಗೀತೆಗಳನ್ನು ರಚಿಸಿ ಯುವತಿಯರಲ್ಲಿ ಸ್ಫೂರ್ತಿ ಕೆರಳಿಸಿ, ಹುರುಪು ಅರಳಿಸಿದ ಜನಪ್ರಿಯ ಕವಿ. ಸಂಕಲನದ ಮಾರಾಟದಲ್ಲಿ ಹೊಸ ದಾಖಲಾತಿ ಸ್ಥಾಪಿಸಿದ ಪುಸ್ತಕ 'ಮೈಸೂರು ಮಲ್ಲಿಗೆ'. ಎಲ್ಲ ವಿದ್ಯಾರ್ಥಿಗಳ, ಯುವಕ ಯುವತಿಯರ ಬಾಯಲ್ಲಿ ಸದಾ ಗುನುಗುಟ್ಟುತ್ತಿರುವ ಕವನದ ಸಾಲುಗಳೆಂದರೆ 'ಮೈಸೂರು ಮಲ್ಲಿಗೆ' ಸಾಲುಗಳೇ. ಈ ಕವಿಯ ಇತರ ಕೃತಿಗಳು. 'ಐರಾವತ', 'ಇರುವಂತಿಕೆ', 'ಉಂಗುರ', 'ಶಿಲಾಲತೆ', 'ಮನೆಯಿಂದ ಮನೆಗೆ', 'ದಮಯಂತಿ', 'ಮೋಹದ ಮಾಲೆ', 'ತೆರೆದ ಬಾಗಿಲು', 'ಉಂಗರ', ಉಪವನ.

ಕಿಕ್ಕೇರಿ ಸುಬ್ಬರಾವ್ ನರಸಿಂಹಸ್ವಾಮಿಯವರು ಇಂಟರ್ ನಂತರ ಇಂಜಿನಿಯರ್ ಆಗುವ ಬಯಕೆ ಹೊಂದಿದ್ದರು. ಕವಿತೆಯ ಮೇಲಿನ ಪ್ರೇಮ ಅದನ್ನು ಮುಗಿಸಲು ಅಡ್ಡ ಬಂತು. ಹೌಸಿಂಗ್ ಬೋರ್ಡಿನಲ್ಲಿ ಹುದ್ದೆ. ಅಲ್ಲೇ ಸೂಪರಿಂಟೆಂಟ್ ಆಗಿ ನಿವೃತ್ತಿಹೊಂದಿದರು. ಇತ್ತೀಚಿನ ಕವನಗಳು ನವ್ಯದಜಾಡು ಹಿಡಿದಿವೆ. 'ಅಕ್ಷರ ಹೊಸ ಕಾವ್ಯ'ದ ಮುನ್ನುಡಿಯಲ್ಲಿ ಈ ಕವಿಯ ಬಗ್ಗೆ ಹೊಸ ಪೀಳಿಗೆಯ ನವ್ಯಕವಿ ಲಂಕೇಶ್ ಏನು ಹೇಳುತ್ತಾರೆ ಕೇಳಿ. ಜೇಬಿನಿಂದ ಒಂದು ಪುಸ್ತಕ ತೆಗೆದು

---

* ಜನನ : ಜನವರಿ 26, 1915. ಮಂಡ್ಯ ಜಿಲ್ಲೆಯ 'ಕಿಕ್ಕೇರಿ'. ತಂದೆ : ಸುಬ್ಬರಾವ್ ತಾಯಿ : ನಾಗಮ್ಮ. ಸಹೃದಯ ಮಿತ್ರರು ಇವರಿಗೆ 1972ರಲ್ಲಿ 'ಚಂದನ' ಎಂಬ ಅಭಿನಂದನ ಗ್ರಂಥ ಅರ್ಪಿಸಿದ್ದಾರೆ. ಇವರ 'ತೆರೆದ ಬಾಗಿಲು' ಗ್ರಂಥಕ್ಕೆ ರಾಜ್ಯ ಸರ್ಕಾರದ (1976) ವಿಶೇಷ ಬಹುಮಾನ ಸಂದಿದೆ.

ಓದತೊಡಗಿದರು. 'ಕೆ. ಎಸ್. ನರಸಿಂಹಸ್ವಾಮಿ ಮತ್ತು ಎಂ. ಕೆ. ರಾಮಾನುಜನ್ ಈ ಇಬ್ಬರೂ ನವ್ಯಪ್ರಜ್ಞೆಯ ಕವಿಗಳು. ಕೆ. ಎಸ್. ನರಸಿಂಹಸ್ವಾಮಿ ರೊಮ್ಯಾಂಟಿಕ್ ಸಂದರ್ಭದಲ್ಲಿ ಸೀಮಿತ ಸ್ವಾರಸ್ಯದ ಪ್ರಖ್ಯಾತ ಕವಿ. ಆದರೆ ಇವರ ಧ್ವನಿ ಗಂಭೀರವಾಗತೊಡಗಿ ವ್ಯಕ್ತಿಯ ಆಳದ ಅನ್ನಿಸಿಕೆಗಳನ್ನು ಹೇಳತೊಡಗಿದಾಗ ಪದ್ಯದ ಗತಿ ಬದಲಾಗತೊಡಗಿತು. ತಾತ್ವಿಕವಾಗಿ ಸುವರ್ಣಮಧ್ಯಮ ಅನುಸರಿಸಿದರೂ ವೈಯಕ್ತಿಕ ಜರೂರಿನಿಂದ ಆವೃತವಾಗಿ ಹಳೆಯ ಆಸಕ್ತಿಗಳು ವ್ಯಕ್ತವಾಗತೊಡಗಿ ಹೊಸ ಅರ್ಥವಂತಿಕೆ ಗಳಿಸಿಕೊಳ್ಳತೊಡಗಿವವು....'.

ಈಗ ಅವರ ಕವಿತೆಗಳ ಪರಿಚಯ ಮಾಡಿಕೊಡ್ತೀನಿ ಕೇಳಿ :—

ಶಿಕ್ಷಣ ಮಾಧ್ಯಮವಾದರೆ ಸಾಲದು  
ಕನ್ನಡ ಮಕ್ಕಳಿಗೆ  
ಕನ್ನಡ ಮಾಧ್ಯಮವಾಗಲಿ ಬೇಕು  
ಮೊದಲೇ ಕವಿಗಳಿಗೆ  
ಕನ್ನಡ ಕವಿಗಳಿಗೆ

o o o

'ಮರುಭೂಮಿಯಲಿ ನನಗೆ ಮುಗಿಲ ತೊಟ್ಟಿಲ ಕಟ್ಟಿ  
ಹಿಮ ಬೆಂಕಿ ಬಿರುಗಾಳಿ ಬೀಸಿ  
ಯಾವ ಪರುಷವೊ ತಾಯ್ಗೆ ನನ್ನಂಥ ಮಗ ಹುಟ್ಟಿ  
ಪೊರೆದವಳಂತಮೃತವನೆ ಸೂಸಿ'

('ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ' ಕವಿತೆಯಿಂದ)

'ವರುಷ ತುಂಬಿದರೆ ಹೊರ ಮನೆಯಿಂದ ಹೊರ ಮನೆಗೆ  
ವರ್ಗ ವರ್ಗವೆಂದರೆ ಮತ್ತೆ  
ಗಂಟುಮೂಟೆಯ ಬಿಗಿತ ಇನ್ನಷ್ಟು ಆಯಾಸ  
ತಿರುಪಿರದ ಲಾಂದ್ರಗಳು, ತಳವಿರದ ಗೂಡೆಗಳು  
ಜರಡಿ, ತೊಟ್ಟಿಲು, ಒನಕೆ, ಇವುಗಳದೆ ಮೆರವಣಿಗೆ....'

('ಮನೆಯಿಂದ ಮನೆಗೆ' ಕವಿತೆಯಿಂದ)

ತನ್ನ ಚಿನ್ನದ ಹಬ್ಬದಂದು ಕನ್ನಡ ಸಾಹಿತ್ಯ ಪರಿಷತ್ತು, ಹದಿನಾರನೆಯ ಕನ್ನಡ ರಾಜ್ಯೋತ್ಸವದಂದು ಕರ್ನಾಟಕ ಸರ್ಕಾರ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿವೆ. ಇವರಿಗೆ ದೇವರಾಜ ಬಹದ್ದೂರ್ ಪ್ರಶಸ್ತಿ, ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿವೆ.

**ಕಯ್ಯಾರ ಕಿಞ್ಞಣ್ಣರೈ**[1] : 'ಶ್ರೀಮುಖ' ತಮ್ಮ ಚೊಚ್ಚಲ ಕವನ ಸಂಗ್ರಹ ದಿಂದಲೇ ಪ್ರಸಿದ್ಧಿಗೆ ಬಂದ ಕವಿ. ಇವರು ಕಾಸರಗೂಡಿನ ಪೆರಡಾಲದವರು. ವಿದ್ವಾನ್ ಮತ್ತು ಎಂ.ಎ. ಪದವಿಧರರು. ಪೆರಡಾಲದ ನವಜೀವನ ಹೈಸ್ಕೂಲಿನಲ್ಲಿ ಅಧ್ಯಾಪಕ ರಾಗಿದ್ದರು. 'ದುರ್ಗಾದಾಸ' ಕಾವ್ಯನಾಮ. ಆದರ್ಶ ಉಪಾಧ್ಯಾಯ ವೃತ್ತಿಗೆ ರಾಷ್ಟ್ರ ಪ್ರಶಸ್ತಿ ಬಂದಿದೆ. 'ಪ್ರಭಾತ', 'ಸ್ವದೇಶಾಭಿಮಾನ' ಪತ್ರಿಕಾಲಯಗಳಲ್ಲೂ ದುಡಿದ ಪರಿಶ್ರಮವಿದೆ, ಇವರು ಬಹು ಜನಪ್ರಿಯ ಕವಿ. ಕೃತಿಗಳು : ಶ್ರೀಮುಖ, ಪುನರ್ನವ, ಐಕ್ಯಗಾನ, ಚೇತನ–ಕವನ ಸಂಕಲನಗಳು. ಅನ್ನದೇವರು ಮತ್ತು ಇತರ ಕಥೆಗಳು, ಲಕ್ಷ್ಮೀಶನ ಕಥೆಗಳು, 'ವಿರಾಗಿಣಿ', ರಾಷ್ಟ್ರಕವಿ ಗೋವಿಂದಪೈ – ಇವರ ಇತರ ಗ್ರಂಥಗಳು. 'ರತ್ನರಾಶಿ'ಗೆ ಮದ್ರಾಸ್ ಸರ್ಕಾರವೂ 'ಪುನರ್ನವ' ಕವನ ಸಂಗ್ರಹಕ್ಕೆ ಮೈಸೂರು ಸರ್ಕಾರದ ಬಹುಮಾನ ದೊರೆತಿದೆ. ಸಾಹಿತ್ಯ ಅಕಾಡೆಮಿ 1970ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

ನವ್ಯ ಕಾವ್ಯಗಳ ಅಧ್ವರ್ಯು **'ಶ್ರೀ ಗೋಪಾಲಕೃಷ್ಣ ಅಡಿಗ'**[2]. ನವ್ಯ ಸಂಪ್ರ ದಾಯದ ಅಡಿಗರ 'ನಡೆದು ಬರಿದ ದಾರಿ', 'ಚಂಡಮದ್ದಲೆ' ಪ್ರಮುಖ ಕವನ ಸಂಕಲನ ಗಳು. ಭೂಮಿಗೀತ, ಭೂತ, ಪ್ರಾರ್ಥನೆ ಶ್ರೀ ರಾಮನವಮಿಯ ದಿನ, ಕೂಪ ಮಂಡೂಕ, ವರ್ಧಮಾನ, ಮೊದಲಾದವುಗಳು ನವ್ಯ ಕಾವ್ಯದ ಅತ್ಯುತ್ತಮ ಕವನ ಗಳ ಗುಂಪಿಗೆ ಸೇರುತ್ತವೆ.

'ವ್ಯಕ್ತಿ–ಸಮಾಜ, ಭಾವ–ಬುದ್ಧಿ, ಮಾಂಸ–ಮನಸ್ಸು—ಇವುಗಳ ಸಮನ್ವಯ ಕಾರ್ಯವೇ ನನ್ನ ಕಾವ್ಯ. ಎಲ್ಲಿಯವರೆಗೆ ಸಮನ್ವಯ ಸಾಧ್ಯವಾಗಿಲ್ಲವೋ ಅಲ್ಲಿಯ ವರೆಗೂ ಅದೇ ಕಾವ್ಯ ವಸ್ತು. ಪ್ರಕೃತಿ, ಕವಿ, ಸುತ್ತಣ ಸಮಾಜ ಇವುಗಳು ತಾನೇ ಎಲ್ಲ ಕಾವ್ಯಗಳ ವಸ್ತು ಎನ್ನುತ್ತಾರೆ ಅಡಿಗರು. ಅಡಿಗರ ಇತರ ಕೃತಿಗಳು, 'ಮುಕ್ತಾ ಫಲ', 'ಭೂಗರ್ಭ ಯಾತ್ರೆ', 'ಸುವರ್ಣ ಲೇಖ', 'ಮಣ್ಣಿನ ವಾಸನೆ', 'ಕಟ್ಟುವೆವು ನಾವು', 'ಅನಾಥೆ' ಇವುಗಳಲ್ಲಿ ಅನುವಾದ, ಪ್ರಬಂಧ, ಕವನಸಂಕಲನ ಹಾಗೂ ಕಾದಂಬರಿ ಸಹ ಸೇರಿವೆ. 'ಅನಾಥೆ' ಚಿತ್ರೀಕರಣಕ್ಕೆ ಅಂಗೀಕಾರವಾಗಿರುವ ಕಾದಂಬರಿ. ಹೀಗೆ ಅಡಿಗರ ವ್ಯಕ್ತಿತ್ವ, ನವ್ಯದಾರಿ ಹಿಡಿದು ಬಹುಮುಖವಾಗಿ ಪರಿ ದಿದೆ. ಅವರ ಭಾವನೆಗಳ ಉತ್ಕಟತೆ, ಪ್ರತಿಮೆಗಳ ಸೌಂದರ್ಯದೊಂದಿಗೆ ವೈಚಾರಿಕ ಬುದ್ಧಿಯ ಮಿಂಚನ್ನು ಈ ಕೆಲ ಪದ್ಯಗಳು ಹೇಗೆ ಪ್ರತಿಧ್ವನಿಸುತ್ತವೆ ನೋಡಿ.

'ಈಡಿಪಸ್ಸಿನ ಗೂಢ ಪಾಪ ಲೇಪಿತ ನಾನು
ಟ್ರ್ಯಾಕ್ಟರನ್ನೇರಿದೆನು ಉತ್ತೆ, ಸಿಗಿದೆ

---

1 ಜನನ : ಜೂನ್ 8, 1918. ಪೆರಡಾಲ ಗ್ರಾಮ.

2 ಜನನ : ಫೆಬ್ರವರಿ 1918, ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು ಮೂವತ್ತು.

ಬಿತ್ತಿದೆನು ಬೆಳೆದೆ ಆಟಂಬಾಬ ಕಾಳುಗಳ,
ವಾರಕಕ್ರಿಮಿ ಪೈರ ಗೋರಿಸಲಿದೆ....'

ಇದು 'ಭೂಮಿಗೀತ'ದ್ದು.

'ಭೂತ'ದ ಒಂದು ಕವನ :

'ಕಾಡುತಿವೆ ಭೂತಕಾಲದ ಭ್ರೂಣ ಗೂಢಗಳು
ಮುಗಿದಮಳೆ ಬಾವಿಯೊಳ ಕತ್ತಲ ಹಳಸು ಗಾಳಿ
ಅಂಬೆಗಾಲಿಟ್ಟು ತಲೆಕೆಳಗು ತೆವಳುತ್ತೇರಿ
ಆಳ್ಳ್ಯಾಯಿ ಜಪಿಸುವ ಬಿಸಿಲು ಗೋಲಿಗೆಗರಿ ತೆಕ್ಕ್ಯಮುಕ್ಕಿ
ಹಾಯುತ್ತಿದೆ ತುಳಸಿ ವೃಂದಾವನದ ಪೊದರಿಗೂ...'

ಸಾಹಿತ್ಯ ಅಕಾಡೆಮಿ ಪುರಸ್ಕೃತ 'ವರ್ಧಮಾನ'ದ ಒಂದು ಪದ್ಯ :

'ಗಹ್ವರದ ಮುಖ ಅಲ್ಲ, ಆಚೆ ಬಯಲ ಬರಾವು?
ಹಣ್ಣು ಹಂಪಲು ಬಳ್ಳಿ, ಬಳ್ಳಿ
ಜೀವನ ನಿಧಾನ ಶ್ರುತಿಶುದ್ಧಿ ಮೊರೆವಕರಾವು
ಹಸುಮುದ್ವಿಕಾಸಕ್ಕೆ ಇಲ್ಲ ಎಲ್ಲಿ'

'ಚಂಡೆಮದ್ದಲೆ'ಯಲ್ಲಿನ 'ಏನಾದರೂ ಮಾಡುತಿರು ತಮ್ಮ' ಕವನದಿಂದ :

ಏನಾದರೂ ಮಾಡುತಿರು ತಮ್ಮ
ನೀ ಸುಮ್ಮನಿರಬ್ಯಾಡ
ಆ ಸಸಿಯು ಕೀಳು, ಚಿವುಟೀ ಚಿಗುರ
ಹೂವ ಕಂಡರೆ ಹಿಸುಕಿ ಬಿಸುಡು ಮಲ್ಲೆಲ್ಲೆಲ್ಲಿ
ಅಲ್ಲಲ್ಲಿ ಕೊಳ್ಳಿ ಹಿಡಿದಾಡು ಲಂಕಾದಹನ
ಮರಿ ಚಿಟ್ಟೆ ಗಿಳಿ ಗುಬ್ಬಿ ಎಲ್ಲಿ ಕಂಡರೆ ಅಲ್ಲಿ
ಅಟ್ಟು, ಹಿಡಿ, ಕುಟ್ಟು ಕಿತ್ತೆಸೆ ಪುಕ್ಕೆಪುಕ್ಕಗಳ

ಮೈಸೂರಿನಲ್ಲಿ ವಿದ್ಯಾಭ್ಯಾಸ, ಎಂ.ಎ. ಪದವಿಗಳಿಸಿದ ಮೇಲೆ ಶಾರದಾ ವಿಲಾಸ ಕಾಲೇಜು, ಕುಮಟಾ ಕಾಲೇಜು, ಸೆಂಟ್ ಫಿಲೋಮಿನಾ ಕಾಲೇಜುಗಳಲ್ಲಿ ಅಧ್ಯಾಪಕ ವೃತ್ತಿ, ಅನಂತರ ಸಾಗರದ ಲಾಲ್‌ಬಹದ್ದೂರ್ ಕಾಲೇಜು, ಪೂರ್ಣಪ್ರಜ್ಞಾ ಕಾಲೇಜುಗಳಲ್ಲಿ ಪ್ರಿನ್ಸಿಪಾಲ್ ಹುದ್ದೆ ನಿರ್ವಹಿಸಿದ್ದರು. ಈಗ ಉತ್ಕೃಷ್ಟ ಸಾಹಿತ್ಯ ರಚನೆಯಲ್ಲಿ ತೊಡಗಿದ್ದಾರೆ.

ಇವರಿಗೆ ಜ್ಞಾನಪೀಠ ಪ್ರಶಸ್ತಿಗೆ ಸಮಾನ ಎನ್ನಬಹುದಾದ ಕಬೀರ್ ಪ್ರಶಸ್ತಿ 1986ರಲ್ಲಿ ದೊರೆತಿದೆ. 1979ರ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ರಾಜ್ಯ ಸರಕಾರದ ಪ್ರಶಸ್ತಿ, ವರ್ಧಮಾನ ಪ್ರಶಸ್ತಿಗಳು ಲಭಿಸಿವೆ.

**ಡಾ|| ಸಿದ್ಧಯ್ಯ ಪುರಾಣಿಕ*** ಐವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡಿರುವ ಡಾ|| ಸಿದ್ಧಯ್ಯ ಪುರಾಣಿಕರು ಮೂಲತಃ ಪ್ರಸಿದ್ಧ ಕವಿ. ವಸ್ತುತಃ ಶ್ರೇಷ್ಠ ವಿಚಾರವಾದಿ, ಕಾರ್ಯತಃ ಸಮರ್ಥ ಆಡಳಿತಾಧಿಕಾರಿ. ಈಗ ಇವರು ಸರಕಾರಿ ಕೆಲಸದಿಂದ ನಿವೃತ್ತಿ ಹೊಂದಿದ್ದು ಸಾಹಿತ್ಯಾಭಿವೃದ್ಧಿಗೆ ಅಹರ್ನಿಶಿ ಶ್ರಮಿಸುತ್ತಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ, ಮಾಳವಾಡ ಪ್ರಶಸ್ತಿಗಳಲ್ಲದೆ ಭಾರತೀಯ ಭಾಷಾ ಪರಿಷತ್ತಿನಿಂದ ಪ್ರಪ್ರಥಮ ವಾಗಿ 'ಭಿಲ್ವಾರ ಪ್ರಶಸ್ತಿ' ಸಹ ಗಳಿಸಿರುವ ಅಗ್ಗಳಿಕೆ ಇವರದು. ಈ ಮೇಧಾವಂತ ವ್ಯಕ್ತಿಯ ಕಾವ್ಯನಾಮ 'ಕಾವ್ಯಾನಂದ'. 'ಮಾನಸ ಸರೋವರ', 'ಕರುಣಾ ಶ್ರಾವಣ' 'ಮೊದಲು ಮಾನವನಾಗು', 'ಜಲಪಾತ' ಇಂತಹ ಉತ್ತಮ ಕವನ ಸಂಗ್ರಹಗಳ ಲ್ಲದೆ 'ವಚನೋದ್ಯಾನ'ದಂಥ ಉದ್ದಾಮ ಗ್ರಂಥ ರಚನೆ ಮಾಡಿರುವ ಕಾವ್ಯಾನಂದರು ಮಕ್ಕಳಿಗಾಗಿಯೂ ಸಾಕಷ್ಟು ಸಾಹಿತ್ಯ ಕೃತಿ ನೀಡಿದ್ದಾರೆ. ಇವರಿಗೆ ಸಂಸ್ಕೃತ, ಉರ್ದು, ಮರಾಠಿ, ಪರ್ಷಿಯನ್ ಭಾಷೆಗಳ ಪರಿಚಯ ಉಂಟು. ಕಾವ್ಯಾನಂದರ ಇತರ ಕೃತಿಗಳು. ರಜತ ರೇಖೆ (ಪ್ರಸಾರ ನಾಟಕಗಳು) 'ಶರಣ ಚರಿತಾಮೃತ' (ಜೀವನ ಚರಿತ್ರೆ) 'ಭಾರತ ವೀರ' (ಮೂರು ಅಂಕಗಳ ನಾಟಕ) 'ತ್ರಿಭುವನಮಲ್ಲ' (ಐತಿಹಾಸಿಕ ಕಾದಂಬರಿ). ಸಿದ್ಧರಾಮ, ಹರ್ಡೇಕರ್ ಮಂಜಪ್ಪ, ಮಿರ್ಜಾಗಾಲಿಬ್ (ಜೀವನ ಚರಿತ್ರೆಗಳು) 'ಸುಬೋಧಸಾರ' (ಸಂಪಾದಿತ ಕೃತಿ) 'ಆತ್ಮಾರ್ಪಣ' (ರಂಗ ನಾಟಕ) 'ತುಪ್ಪಾ ರೊಟ್ಟಿಗೇ ಗೇ ಗೇ', ಗಿಲ್‌ಗಿಲ್ ಗಿಲಗಚ್ಚಿ, ತಿರುಗಲೆ ತಿರುಗಲೆ ತಿರುಗುಂಯ್ಯಾಲೆ (ಶಿಶು ಸಾಹಿತ್ಯ).

ಕಾವ್ಯಾನಂದರ ಮೇರು ಕೃತಿ 'ವಚನೋದ್ಯಾನ'ದಿಂದ ಒಂದು ಉದಾಹರಣೆ. ನೋಡಿ ಎಷ್ಟು ಚೆನ್ನಾಗಿ ನವ ವಚನಗಳ ತಳಿಯನ್ನು ಸೃಷ್ಟಿಸಿದ್ದಾರೆ.

'ಲಂಚದ ಹಣದಿಂದ ಪಂಚಾಮೃತವ ತರುವರಾರೋ<br>
ಕಾಳಸಂತೆಯ ಹಣದಿಂದ ಪಲ್ಲಕ್ಕಿ ಕೊಡಿಸುವರಾರೋ'<br>
'ಹಕ್ಕಿಯ ಗೂಡೊಂದು ಕಲಾಕೃತಿ, ಹಾವಿನ ಬೀಡೊಂದು ಕಲಾಕೃತಿ<br>
ಜೇಡನ ಬಲೆಯೊಂದು ಕಲಾಕೃತಿ, ಜೇನಿನ ಹೊಟ್ಟೊಂದು ಕಲಾಕೃತಿ<br>
ನಿನ್ನ ಪ್ರತಿಯೊಂದು ಕೃತಿಯೂ ಕಲಾಕೃತಿಯಯ್ಯಾ'<br>
'ಎದೆಯ ಮೆಚ್ಚು ಮಾಯುವಾಗಿ ಹೊಟ್ಟೆಯ ಕಿಚ್ಚು ಕಿಡಿಗೆದರಿದರೆ<br>
ಹುಚ್ಚರ ಆಸ್ಪತ್ರೆಯಾಗದೇನಯ್ಯಾ ಜಗವೆಲ್ಲಾ'

---

* ಜನನ : ಜೂನ್ 18, 1918, ರಾಯಚೂರು ಜಿಲ್ಲೆಯ ಯಲಬುರಗಿ ತಾಲ್ಲೂಕಿನ 'ದ್ಯಾಂಪುರ'

'ಕರುಣಾ ಶ್ರಾವಣ'ದಲ್ಲಿನ ಒಂದು ಪದ್ಯ :

ಸೋತು ಬಂದೆಯಾ ಮಂದಾನಿಲ?
ಹೌದಣ್ಣ, ಹೂವುಗಳು ಬಾಯ್ದೆರೆಸಿ ಬಂದೆ
ಸೆರೆಸಿಕ್ಕ ಪರಿಮಳದ ಸೆರೆ ಬಿಡಿಸಿ ಬಂದೆ
ಬಳ್ಳಿಗಳ ಮಕ್ಕಳಿಗೆ ಆನಿ ಮಾಡಿಸಿ ಬಂದೆ
ತರುಮರದ ಎಲೆಯೆಲೆಯ ಹುಡಿಯ ಜಾಡಿಸಿ ಬಂದೆ....'

**ಸು. ರಂ. ಎಕ್ಕುಂಡಿ**[1] : ಇವರ ಪೂರ್ಣ ಹೆಸರು ಸುಬ್ಬಣ್ಣ ರಂಗನಾಥ ಎಕ್ಕುಂಡಿ. ವಿದ್ಯಾಭ್ಯಾಸ ಹುಬ್ಬಳ್ಳಿ ಹಾಗೂ ಸಾಂಗಲಿಯಲ್ಲಿ. ಉಪಾಧ್ಯಾಯ ವೃತ್ತಿ ಸ್ವೀಕರಿಸಿ ಬಹು ಶ್ರದ್ಧೆಯಿಂದ ನಿರ್ವಹಿಸಿ ಮುಖ್ಯೋಪಾಧ್ಯಾಯರಾಗಿ ನಿವೃತ್ತರಾಗಿದ್ದಾರೆ. ಉತ್ತಮ ಶಿಕ್ಷಕರಾಗಿದ್ದುದರಿಂದ ರಾಜ್ಯ 'ಶಿಕ್ಷಕ ಪ್ರಶಸ್ತಿ' ಲಭಿಸಿದೆ. ಇವರು ಯಶಸ್ವಿ ಲೇಖಕರು. ಕಥೆ, ಕಾದಂಬರಿ, ಕವನ, ಕಾವ್ಯ, ವಿಮರ್ಶೆ ಮುಂತಾಗಿ ಸಾಹಿತ್ಯದ ಬಹುಪ್ರಕಾರಗಳಲ್ಲಿ ಉತ್ತಮ ಕೊಡುಗೆಗಳನ್ನು ನೀಡಿದ್ದಾರೆ. 1970 ರಲ್ಲಿ ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ ಲಭಿಸಿದೆ. ಮುಖ್ಯ ಕೃತಿಗಳು : ಕಾವ್ಯ ವಿಮರ್ಶೆ, ನವ್ಯ ಕವಿತೆ, ವರುಣ ಕುಂಜ, ತಾಳ ತಂಬೂರಿ, ಪು.ತಿ.ನ., ಮಧ್ವಮುನಿ, ನೆರಳು, ಪ್ರತಿಬಿಂಬಗಳು, ಸಂತಾನ, ಹೂವಾಡಿಗರಹುಡುಗ ಮುಂತಾದವುಗಳು.

ಇವರ 'ಮತ್ಸ್ಯಗಂಧಿ' ಕಾವ್ಯಕ್ಕೆ 1975ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ.

**ಕ. ವೆಂ. ರಾಜಗೋಪಾಲ**[2] : ಹೆಸರಾಂತ ಕವಿಗಳು, ಕಥಾ ಲೇಖಕರು, ವಿಮರ್ಶಕರು ಹಾಗೂ ನಾಟಕಕಾರರು. ಕಾಲೇಜಿನ ಪ್ರಾಧ್ಯಾಪಕರಾಗಿದ್ದು ಅನಂತರ ಎಂ.ಇ.ಎಸ್. ಕಾಲೇಜಿನ ಪ್ರಾಂಶುಪಾಲರಾಗಿ ಕೆಲವೇ ವರ್ಷಗಳ ಹಿಂದೆ ನಿವೃತ್ತರಾಗಿದ್ದಾರೆ. ಈಗ ಸಾಹಿತ್ಯೋಪಾಸನೆಯಲ್ಲಿ ಪೂರ್ಣ ರೂಪದಿಂದ ತೊಡಗಿದ್ದಾರೆ.

ಮುಖ್ಯ ಕೃತಿಗಳು : ಎಣಿಸಿದ ಹಣ, ರಾಗ–ಜಯಂತಿ, ಅರ್ಧ ತೆರೆದ ಬಾಗಿಲು, ಅಂಜೂರ, ಮುಂತಾದವುಗಳು. ಹಲವಾರು ರೇಡಿಯೋ ನಾಟಕಗಳನ್ನೂ ರಚಿಸಿದ್ದಾರೆ.

---

1 ಜನನ : ಜನವರಿ 20, 1923. ಹುಟ್ಟಿದ ಊರು–ಧಾರವಾಡ ಜಿಲ್ಲೆಯ ರಾಣೆಬೆನ್ನೂರು. ತಂದೆ–ರಂಗನಾಥ, ತಾಯಿ–ರಾಜಕ್ಕ. ಒಟ್ಟು ಕೃತಿಗಳು ಸುಮಾರು 16.

2 ಜನನ : 1924. 'ಕಟ್ಟೀಪುರ'ದಲ್ಲಿ. ಕೆಲಕಾಲ ಇವರು ಬೆಂಗಳೂರು ವಿಶ್ವವಿದ್ಯಾನಿಲಯದ ನೃತ್ಯ, ನಾಟಕ, ಸಂಗೀತ ವಿಭಾಗದ ನಿರ್ದೇಶಕರಾಗಿದ್ದರು.

**ಡಾ|| ಎಂ. ಅಕಬರ ಅಲಿ**[1] ಬೆಳಗಾವಿ, ಪೂನಾ, ಸಾಂಗ್ಲಿಯಲ್ಲಿ ವಿದ್ಯಾಭ್ಯಾಸ, ಮೈಸೂರಿನ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ನಿವೃತ್ತಿ ಹೊಂದಿ ಈಗ ಕರ್ನಾಟಕದ ವಿಧಾನ ಪರಿಷತ್ತಿನ ಸದಸ್ಯರಾಗಿದ್ದಾರೆ,

ಇವರ ಕೃತಿ 'ಸುಮನ ಸೌರಭ' ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. 1984ರಲ್ಲಿ ರಾಜ್ಯ ಸರ್ಕಾರ ಇವರಿಗೆ ವಿಶೇಷ ಪ್ರಶಸ್ತಿ ನೀಡಿ ಗೌರವಿಸಿದೆ.

ಕೃತಿಗಳು : ಅನ್ನ, ತಮಸಾನದಿ ಎಡಬಲದಿ, ನವಚೇತನ (ಕವನಸಂಗ್ರಹ ಗಳು), ನಿರೀಕ್ಷೆಯಲ್ಲಿ (ಕಾದಂಬರಿ), ಸಾಹಿತ್ಯ ವಿವೇಚನೆ (ವಿಮರ್ಶೆ), ಇತರ ಕೃತಿ ಗಳು : ವಿಷ ಸಿಂಧು, ಗಂಧಕೇಶರ, ಸರ್ವಜ್ಞನ ಸಮಾಜದರ್ಶನ ಮತ್ತು ಸತ್ವ. ಮುಂತಾದವುಗಳು.

**ಬಿ. ಸಿ. ರಾಮಚಂದ್ರಶರ್ಮ**[2] ಇವರ ಪೂರ್ಣ ಹೆಸರು ಬೋಗಾದಿ ಚಂದ್ರ ಶೇಖರಶರ್ಮ ರಾಮಚಂದ್ರಶರ್ಮ. ಬೆಂಗಳೂರು, ಮೈಸೂರಿನಲ್ಲಿ ವಿದ್ಯಾಭ್ಯಾಸ. ಲಂಡನ್‌ನಲ್ಲಿ ಪಿ.ಎಚ್.ಡಿ. ಬೆಂಗಳೂರು, ಇಥಿಯೋಪಿಯಾ, ಇಂಗ್ಲೆಂಡ್‌ಗಳಲ್ಲಿ ಅಧ್ಯಾಪಕ ವೃತ್ತಿ. ಜಾಂಬಿಯಾ ಹಾಗೂ ಯುನೆಸ್ಕೊದಲ್ಲಿ ಮನಃಶಾಸ್ತ್ರಜ್ಞರಾಗಿದ್ದು ಈಗ ನಿವೃತ್ತಿ ಹೊಂದಿ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಇವರು ನವಪ್ರಜ್ಞೆಯ ಕವಿ, ಹೆಸರಾಂತ ಕಥೆಗಾರ, ಯಶಸ್ವೀ ನಾಟಕಕಾರ. 'ಸೆರಗಿನ ಕೆಂಡ' ರೇಡಿಯೋ ನಾಟಕಕ್ಕೆ ಅಖಿಲ ಭಾರತದ ಬಹುಮಾನ ಬಂದಿದೆ. 'ನೆರಳು' ನಾಟಕಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ.

ಇವರ ಕೃತಿಗಳು : ಏಳು ಸುತ್ತಿನ ಕೋಟೆ, ಹೃದಯ ಗೀತ, ಮಾತು ಮಾಟ, ಹೇಸರಗತ್ತೆ (ಕವನ ಸಂಗ್ರಹಗಳು). ಮಂದಾರ ಕುಸುಮ, ಏಳನೆಯ ಜೀವ, ಕತೆಗಾರನ ಕತೆ (ಕಥಾ ಸಂಕಲನಗಳು). ಬಾಳಸಂಜೆ, ವೈತರಣಿ (ನಾಟಕಗಳು). 'ಈ ಶತಮಾನದ ನೂರು ಇಂಗ್ಲೀಷ್ ಕವನಗಳು' ಗಣನೀಯ ಅನುವಾದ ಕೃತಿ, ಮಕ್ಕಳ ಬುದ್ಧಿಶಕ್ತಿ ಮತ್ತು ಪರಿಸರ (ಮನಶಾಸ್ತ್ರೀಯ ಗ್ರಂಥ).

'ಹೇಸರಗತ್ತೆ' ಕವನದಿಂದ ಒಂದು ಉದಾಹರಣೆ :

> 'ಹಾವಿನಾಲಿಂಗನದ ಕಾವಿನೊತ್ತಾಯಕ್ಕೆ
> ಹೆಗ್ಗಲ್ಲು ಕರಗ
> ಬಿದೆಗೆ ಬಂದಿದ್ದ ಒದ್ದೆ ಕತ್ತಲ ಮೇಲೆ
> ದಾರಿ ತಪ್ಪಿದ ಧಾತು ಬಿದ್ದಾಗ
> ಹುಟ್ಟಿ

---

1 ಜನನ : ಮಾರ್ಚ್ 3, 1925. ಹುಕ್ಕೇರಿ ತಾಲ್ಲೂಕಿನ ಉಳ್ಳಾಗಡ್ಡಿ ಖಾನಾಪುರ. ಇವರ ಕೃತಿಗಳು : 5 ಕವನಸಂಗ್ರಹ, 2 ವಿಮರ್ಶಾ ಗ್ರಂಥಗಳು, ಒಂದು ಕಾದಂಬರಿ, 4 ಇತರ ಕೃತಿಗಳು. ಇವರು ಹಲವು ವರ್ಷ ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯರಾಗಿದ್ದರು.

2 ಜನನ : ನವೆಂಬರ್ 28, 1925, ಬೆಂಗಳೂರು. ತಂದೆ–ಚಂದ್ರಶೇಖರಶರ್ಮ.

ತೆವಳದ್ದು ಸರಸರನೆ ಹರಿವ ಹೊಳೆಯ ಮರಳಲ್ಲಿ
ಹುಡುಗಾಟ ತೋಟದೊಳಗೆ
ಕಲಿಯಬೇಕಾದ್ದೆಲ್ಲ ಕಲಿತಿದ್ದು ಸೇಬಿನ ಗಿಡದ
ಬುಡದ ಹುಲ್ಲ ಮೇಲೆ...'

**ಡಾ॥ ಜಿ. ಎಸ್. ಶಿವರುದ್ರಪ್ಪ*** 'ಕಾವ್ಯಾರ್ಥಚಿಂತನ'ದಂತಹ ಮೇರು ಕೃತಿಯ ಕರ್ತೃ ಡಾ॥ ಗುಗ್ಗರಿ ಶಾಂತವೀರಪ್ಪ ಶಿವರುದ್ರಪ್ಪ. ಶ್ರೀಯುತರು ಮೈಸೂರು, ಉಸ್ಮಾನಿಯ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕ, ಪ್ರಾಧ್ಯಾಪಕ ಹಾಗೂ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ದುಡಿದಿದ್ದಾರೆ. ನವಪ್ರಜ್ಞೆಯ ಕವಿ, ಹೆಸರಾಂತ ವಿಮರ್ಶಕ, ಪ್ರಜ್ಞಾವಂತ ಗ್ರಂಥಸಂಪಾದಕ. ಇವರ ಪ್ರವಾಸ ಗ್ರಂಥ 'ಮಾಸ್ಕೋದಲ್ಲಿ 22 ದಿನ' ಕೃತಿಗೆ ಸೋವಿಯತ್ ಲ್ಯಾಂಡ್ ಪ್ರಶಸ್ತಿ ಲಭಿಸಿದೆ. 1984ರಲ್ಲಿ ಇವರ ಸಾಹಿತ್ಯ ವಿಮರ್ಶಾ ಕೃತಿ 'ಕಾವ್ಯಾರ್ಥ ಚಿಂತನ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ.

ಮುಖ್ಯವಾದ ಕೃತಿಗಳು : ಸಾಮಗಾನ, ಚೆಲುವು ಒಲವು, ಗೋಡೆ (ಕವನ ಸಂಗ್ರಹಗಳು), ಸೌಂದರ್ಯ ಸಮೀಕ್ಷೆ, ವಿಮರ್ಶೆಯ ಪೂರ್ವ ಪಶ್ಚಿಮ, ಗತಿಬಿಂಬ (ವಿಮರ್ಶಾ ಗ್ರಂಥಗಳು), ಕರ್ಮಯೋಗಿ (ಕಾದಂಬರಿ), ಸಾಹಿತ್ಯ ವಾರ್ಷಿಕ, ವಾಕ್ಯ ಮಾಣಿಕ್ಯ ಕೋಶ, ಟಾಲ್‌ಸ್ಟಾಯ್ ವಿಚಾರಧಾರೆ (ಸಂಪಾದಿತ ಕೃತಿಗಳು).

'ಅವರ ಕಾವ್ಯಶೈಲಿಗೆ ಒಂದು ಉದಾಹರಣೆ;

ಒಂದೊಂದುಸಲ ನನಗೂ ನಿನಗೂ ನಡುವೆ
ಇದ್ದಕ್ಕಿದ್ದಂತೆ ಗೋಡೆ ಏಳುತ್ತದೆ.
ಎಲ್ಲಿಂದಲೋ ಏನೋ ಇಟ್ಟಿಗೆಯ ಮೇಲೆ ಇಟ್ಟಿಗೆ ಬಂದು
ಕೂತು ಕೂತಲ್ಲಿಯೇ ನಮ್ಮನ್ನು ಹೂತು
ಸುತ್ತಲೂ ಗೋಡೆ ಕಟ್ಟುತ್ತಲಿ
ಎದ್ದ ಗೋಡೆಯ ತುಂಬ ಕೆಂಗಣ್ಣ ಕೆಮ್ಮೀಸೆ
ಮೀಸೆಯ ಕೆಳಗೆ ಸೊಟ್ಟ ಮೂತಿಯ ಕೆಟ್ಟ ಬಾಯಿ
ಉಗಿಯುತ್ತದೆ ಬೆಂಕಿ......'

"ನಾನು ಗದ್ಯ ಬರೆದದ್ದೇ ಕಡಿಮೆ. ಲೇಖಕ ನೆನಿಸಿಕೊಳ್ಳುವ ಹೊಸ ಹುರುಪಿನಲ್ಲಿ ಗದ್ಯಪದ್ಯ ಎರಡನ್ನು ಬರೆದದ್ದುಂಟು. ಅದೇ ಕಾಲಕ್ಕೆ ಒಂದೆರಡು ಸಣ್ಣ ಕತೆಗಳನ್ನೂ ಬರೆದ ನೆನಪು. ಹತ್ತಾರು ಲಲಿತ ಪ್ರಬಂಧಗಳೂ ಆಗ ಮೂಡಿದ್ದುವು.

---

* ಜನನ : ಫೆಬ್ರವರಿ 7, 1926, ಶಿವಮೊಗ್ಗ ಜಿಲ್ಲೆ ಶಿಕಾರಿಪುರ. ತಂದೆ–ಶಾಂತವೀರಪ್ಪ ತಾಯಿ–ವೀರಮ್ಮ. ಇವರ ಕೃತಿಗಳ ಸಂಖ್ಯೆ ಸುಮಾರು ಮೂವತ್ತು.

ಅದೇಕೋ, ಕತೆ ಬರೆಯುವುದರ ಕಡೆಗೆ ನನ್ನ ಮನಸ್ಸು ಅಷ್ಟಾಗಿ ಹೊರಳಲಿಲ್ಲ. ಆಮೇಲೆ ಪ್ರಬಂಧ ಬರೆಯಲು ಮನಸ್ಸು ಮಾಡಿರದಿದ್ದರೂ ಅದರ ಮೇಲಿನ ಒಲವು ಕಡಿಮೆ ಆಗಿಲ್ಲ...ಪ್ರಬಂಧ ನೀಡುವ ಈ ಗೆಲುವಿಗಿಂತ ಕವಿತೆ ನಡೆಸುವ ಪವಾಡವೇ ನನ್ನನ್ನು ಸಂಪೂರ್ಣವಾಗಿ ತನ್ನ ಕೈವಶ ಮಾಡಿಕೊಂಡಿತು". ಎಂದು ಸಾಹಿತ್ಯ ಚಿಂತನ ಪುಸ್ತಕದಲ್ಲಿ ಹೇಳಿರುವ **ಚೆನ್ನವೀರಕಣವಿ*** ಕನ್ನಡದ ಪ್ರತಿಭಾನ್ವಿತ ಕವಿಗಳಲ್ಲಿ ಒಬ್ಬರು. ಇವರ ವ್ಯಕ್ತಿತ್ವವನ್ನು ಶ್ರೀ ಸ. ಸ. ಮಾಳವಾಡರು ಒಂದೆಡೆ ಬಹಳ ಚೆನ್ನಾಗಿ ನಿರೂಪಿಸಿದ್ದಾರೆ.

'ರೊಮ್ಯಾಂಟಿಕ್ ಮತ್ತು ನವ್ಯ ಸಂಪ್ರದಾಯಗಳ ಮಧ್ಯೆ ಒಂದು ಸೇತುವೆಯಾಗಿದ್ದಾರೆ ಕವಿ ಕಣವಿ. ಅಂತೆಯೇ ಇವರು ಕೃತಿಯಲ್ಲಿ ಎರಡೂ ಸಂಪ್ರದಾಯಗಳ ಒಳ್ಳೆಯನ್ನು ಸಾರ್ಥಕತೆಯನ್ನು ಲೋಪಗಳನ್ನು ಸ್ಫುಟವಾಗಿ ನಿರೂಪಿಸಿದ್ದಾರೆ. ರೊಮ್ಯಾಂಟಿಕ್ ಸಂಪ್ರದಾಯದ ಕವಿಗಳಿಗೆ ಜೀವನಾನುಭವದ, ವ್ಯಾಸಂಗದ ಬಲವಿತ್ತು. ನವ್ಯಸಂಪ್ರದಾಯದ ಅನೇಕರಿಗೆ ಪ್ರಯೋಗಪ್ರಿಯತೆಯ ಉತ್ಸಾಹ ಮಾತ್ರ ಇದೆ. ಅವೆರಡರ ಸಮನ್ವಯದಿಂದ ನಮ್ಮ ಕಾವ್ಯವಾಹಿನಿ ಮುಂದೆ ಸಾಗಬೇಕಾಗಿದೆ. ಈ ಮಾತನ್ನು ಕಣವಿಯವರು ಅರಿತುಕೊಂಡಿದ್ದಾರೆ'. ಕಣವಿಯವರ ಕೃತಿಗಳು : ಕಾವ್ಯಾಕ್ಷಿ, ಭಾವ ಜೀವಿ, ಆಕಾಶ ಬುಟ್ಟಿ, ದೀಪ ದಾರಿ, ಮಣ್ಣಿನ ಮೆರವಣಿಗೆ, ನೆಲ ಮುಗಿಲು, ಎರಡು ದಡ, ಮಧು ಚಂದ್ರ: ಸಂಪಾದಿಸಿರುವ ಕೃತಿಗಳು. 'ಜೀವನಸಿದ್ಧಿ', ನವ್ಯಧ್ವನಿ, ನಮ್ಮೆಲ್ಲರ ನೆಹರು, ನೈವೇದ್ಯ ಮುಂತಾದವುಗಳು.

ಕರ್ನಾಟಕ ಕಾಲೇಜಿನಲ್ಲಿ ವಿದ್ಯಾಭ್ಯಾಸ. ಅನಂತರದ ಹುದ್ದೆ, ಕರ್ನಾಟಕದ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಮುಖ್ಯಾಧಿಕಾರಿ. ಅಭಿಮಾನಿಗಳು ಅರ್ಪಿಸಿರುವ ಸಂಭಾವನಾ ಗ್ರಂಥ 'ಚೆಂಬೆಳಕು', ಇವರ ಕೃತಿ 'ಆಕಾಶ ಬುಟ್ಟಿ'ಗೆ ಮುಂಬಯಿ ಪ್ರಶಸ್ತಿ, ದೀಪ ದಾರಿ, ನೆಲ ಮುಗಿಲು ಕೃತಿಗಳಿಗೆ ರಾಜ್ಯ ಸರಕಾರದ ಬಹುಮಾನಗಳು ಲಭಿಸಿವೆ. 'ಜೀವ ಧ್ವನಿ'ಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ. ಇವರ ಸಾಹಿತ್ಯದ ಹಿಣಕು ನೋಟ.

> ಸಂಜೆ ಉದುರಿದ ಮಳೆಗೆ
> ಮಣ್ಣ ವಾಸನೆ ಬೇರೆ
> ಮಲ್ಲಿಗೆಯ ಕಂಟಿ ಮೈಗಂಟಿರುವ ಮೊಗ್ಗೆ
> ಪರಿಮಳದ ಗೆಜ್ಜೆ
> ಬೇಲಿ ಮಗ್ಗುಲಿಗೆ ಛತ್ತರಿ ಹಿಡಿದ ಪಪ್ಪಾಯಿ
> ಬಣ್ಣದುಂಬಿದ ಹಣ್ಣು...
> ಹಸುರಿನಲಿ ಕೆಂಪು ಮಿಣುಕುವ ಕೊಂಬು —'ಮಣ್ಣಿನ ವಾಸನೆ' ಕವಿತೆ

---

* ಜನನ: 26 ಜೂನ್ 1928, ಗದಗ್ ತಾಲ್ಲೋಕಿನ 'ಹೊಂಬಳ'. ತಂದೆ–ಸಕ್ರಪ್ಪ ತಾಯಿ–ಪಾರ್ವತಮ್ಮ.

'ದೇವಲೋಕದ ಸರಕು ಹೊತ್ತು ತಂದಿಹ ಹಡಗು
ಈ ದಡವ ತುಂಬಿರುವದಿದಿರ ಬೆಡಗು,
ಕ್ಷಿತಿಜದಂಚಿನವರೆಗೆ ತೆರೆ-ನೊರೆಯು ಕೌತುಕವು
ತೆರೆಯುವುದು ದಿನಕ್ಕೊಂದ ಮೌಲ್ಯ ವಸ್ತು'

—('ರಂಜನಾ' ಕವನದಿಂದ)

ಅಂತೂ ಕೊನೆಗೆ ಬಂತು ಮಳೆ
ತಂತಿ ವಾದ್ಯವ ನುಡಿಸು, ಮದ್ದಳೆಯು ಬಡಿ ಹೊಡಿಕೇಕೆ
ಓಡಿ ಹೋಗುವ ಮೋಡಗಳ ಹಿಡಿದು ಹಿಂಡು
ಬಳುಕಿ ಬಾಗುವ ಮಳೆಯು ಸೆಳಕುಗಳ
ಸೇವಿಗೆಯು ಸಿವುಡು ಕಟ್ಟಿಡು.

('ಅಂತೂ ಕೊನೆಗೆ ಬಂತು ಮಳೆ' ಕವನದಿಂದ)

**ರಾಮಚಂದ್ರ ಕೊಟ್ಟಲಗಿ*** : ಅಧ್ಯಾಪಕರು, ಒಳ್ಳೆಯ ಭಾವುಕ ಕವಿ. ಹೆಸರಾಂತ ಕಾದಂಬರಿಕಾರರು.

ಕೃತಿಗಳು : ಪಿಪಾಸೆ, (ಕವನ ಸಂಗ್ರಹ) ದೀಪ ನಿರ್ವಾಣ ಮತ್ತು ದೀಪ ಹತ್ತಿತು (ಕಾದಂಬರಿಗಳು).

ಕಾವ್ಯಶೈಲಿಗೆ ಉದಾಹರಣೆ—

'ಒಮ್ಮೆ ಸುಖದ ಗಳಿಗೆ ಬಂದು
ಪ್ರೀತಿಯಿಂದ ಬಳಿಗೆ ನಿಂದು
ಅಂಗಲಾಚಿ ಬೇಡಿತೆನ್ನ
ಮಡದಿಯಾಗಿ ವರಿಸು ಎಂದು

ಸುಖದ ಓಂ ಭವತಿ ಕೇಳಿ
ದುಃಖ ಕ್ರುದ್ಧ ಮುದ್ರೆತಾಳಿ
ಕೂಗಿ ತೊದರಿ ಎಲಾ ಚೌಡಿ
ಇವರು ಕಟ್ಟಬೇಕೆ ತಾಳಿ
...........................'

---

* ಜೀವಿತಕಾಲ : 16-5-1918 ರಿಂದ 20-9-1975. ಬಿಜಾಪುರ ಜಿಲ್ಲೆಯ 'ಮನಗೋಳಿ'.

**ಪ್ರಾ॥ ಜಿ. ವರದರಾಜರಾವ್**[1] : ಒಳ್ಳೆಯ ಕವಿ, ವಿಮರ್ಶಕ ಹಾಗೂ ಗ್ರಂಥ ಸಂಪಾದಕ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದು ಈಗ ನಿವೃತ್ತಿಗೊಂಡಿದ್ದು ಸಾಹಿತ್ಯ ಸೇವೆಯಲ್ಲಿ ತೊಡಗಿದ್ದಾರೆ. ಇವರು ದೇವರಾಜ ಬಹದ್ದೂರ್ ಬಹುಮಾನ, ಹರಿದಾಸ ಸಾಹಿತ್ಯ ಸೇವಾ ಪ್ರಶಸ್ತಿ, ರಜತೋತ್ಸವ ಸ್ವರ್ಣ ಪದಕ ಮುಂತಾಗಿ ಇನ್ನು ಹಲವು ಬಹುಮಾನಗಳನ್ನು ಗಳಿಸಿದ್ದಾರೆ.

ಕೃತಿಗಳು : ತೋರಣ, ಸೆರೆಯಾಳು, ತೊಟ್ಟಿಲು, ವಿಜಯದಶಮಿ, (ಕವನ ಸಂಗ್ರಹಗಳು); ಪಡಿನುಡಿ, ಸಾಹಿತ್ಯ ಸಾನಿಧ್ಯ, ಶ್ರೀ ಪುರಂದರದಾಸರು ಮತ್ತು ಅವರ ಕೀರ್ತನೆಗಳು. ಅಪ್ರತಿಮ ವೀರ ಚರಿತಂ, ಮಹಾಸತಿ ಕಸ್ತೂರಿ ಬಾ, ಕುಮಾರ ರಾಮನ ಸಾಂಗತ್ಯ ಓಬವ್ವ, ಜಗನ್ನಾಥದಾಸರು ಮುಂತಾದ 25 ಕೃತಿಗಳು.

ಶೈಲಿಗೆ ಉದಾಹರಣೆ—

ಸೀರೆಗೆ ಬೇಕೇ ಸೆರಗು ?
ಯಾತಕೆ ಈ ಸೋಗು ?
ಇದ್ದರು ಇದ್ದಂತಿಲ್ಲ
ಹೊದೆಯುವ ಹಂಬಲವೇ ಇಲ್ಲ !
ಹಿಂದಿನ ಕಾಲಕೆ ಬೇಕಿತ್ತು
ಮಾನದ ಕೇತನವೆನಿಸಿತ್ತು !
ಅಂದೋ ? ಗಂಭೀರದ ಸಂಕೇತ !
ಇಂದೋ ? ಅದಕೆಲ್ಲಕು ಖೋತ !

**ಗಂಗಾಧರ ಚಿತ್ತಾಲ**[2] : ಹೆಸರಾಂತ ಕವಿ. ಸರ್ಕಾರಿ ಕೆಲಸದಲ್ಲಿದ್ದು ಲಂಡನ್, ಅಮೇರಿಕಾ ಮುಂತಾದ ದೇಶಗಳ ಪ್ರವಾಸ ಮಾಡಿದ್ದ ಆಳವಾದ ಅನುಭವ ಇವರೆಲ್ಲ ಕೃತಿಗಳಲ್ಲಿ ಮಿಡಿಯುತ್ತಿರುವುದನ್ನು ಕಾಣುತ್ತೇವೆ. ಇವರದು ಮಾನವತಾ ವಾದಿಯ ಕಾವ್ಯಸೃಷ್ಟಿ.

ಕೃತಿಗಳು : ಕಾಲದ ಕರೆ, ಮನುಕುಲದ ಹಾಡು, ಸಂಪರ್ಕ, ಹರಿವನೀರಿದು ಮುಂತಾದವುಗಳು.

ಶೈಲಿಗೆ ಉದಾಹರಣೆ—

'ನಾ ಹುಟ್ಟಿ ಬರುವಾಗಲೇ ಹಿಂಡದು ಬಂತು
ಏನೋ ದುರ್ದೈವ ದೆಳೆ
ಶುಭ್ರ ಲೋಲಕದಲ್ಲಿ ಬಿರುಕಿನ
ಸೂಕ್ಷ್ಮ ಗೆರೆ
ಅದು ಬೆಳೆಯುತ ಬಂತು ಬಾಳಿನುದ್ದಕು
ರಕ್ತ ಮಾಂಸಗತವಾಗಿ..............
....................................'

---

1 ಜನನ : ಜನವರಿ 3, 1918, ಬೆಂಗಳೂರು. ತಂದೆ-ವೆಂಕಟರಾವ್, ತಾಯಿ-ಜಾನಮ್ಮ.

2 ಜೀವಿತಕಾಲ : (1923-1987) ಗೋಕರ್ಣದ ಸನಿಹದ ಹನೇಹಳ್ಳಿ. ತಂದೆ-ವಿಠೋಬಾ ಪುಂಡರೀಕ, ತಾಯಿ-ರುಕ್ಮಿಣಿದೇವಿ.

**ಎ. ಜಿ. ಭಟ್ಟ***: ಇವರ ಪೂರ್ಣ ಹೆಸರು ವಿಷ್ಣು ಗೋವಿಂದ ಭಟ್ಟ. ಬೊಂಬಾಯಿ ವಿಶ್ವವಿದ್ಯಾನಿಲಯದ ಎಂ.ಎ. ಪದವಿ ಪಡೆದು ಕೆಲಕಾಲ ಹೈಸ್ಕೂಲು ಉಪಾಧ್ಯಾಯರಾಗಿದ್ದ ಭಟ್ಟರು ಅನಂತರ ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆ ಯಲ್ಲಿ ನಿರ್ದೇಶಕರಾಗಿ ದುಡಿದು ಈಗ ನಿವೃತ್ತರಾಗಿದ್ದಾರೆ.

ಕೃತಿಗಳು : ಅರಣ್ಯರೋಧನ, ಕಾವ್ಯವೇದನೆ, ತುಂಟನ ಪದಗಳು, ಕಿಷ್ಕಿಂದೆ ಮತ್ತು ಆತ್ಮಗೀತೆ (ಕವನ ಸಂಕಲನಗಳು); ಪೆದ್ದಂ ಕತೆಗಳು ಮತ್ತು ದಿವ್ಯಕತೆಗಳು (ಕಥಾಸಂಕಲನಗಳು).

'ಆತ್ಮಗೀತೆ' ಕವನ ಸಂಗ್ರಹಕ್ಕೆ ಇವರಿಗೆ 1983ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಕವನ ಶೈಲಿಗೆ ಉದಾರಣೆ—

ತವರು ಮನೆಯಿಂದ ನಾನಿನ್ನ ಕರೆಸಿದೆನೇಕೆ
ಇಷ್ಟು ಅವಸರ ಮಾಡಿ ತಂತಿ ಬಿಟ್ಟು
ನನಗಾಗಿ ಅಲ್ಲವೇ ಅಲ್ಲ ಓ ಮಾರಾಯ್ತಿ
ನನ್ನ ಮೇಲೀ ಪರಿಯದೇಕೆ ಸಿಟ್ಟು !

**ಹಿ. ಮ. ನಾಗಯ್ಯ***: ಪತ್ರಿಕೋದ್ಯಮಿಯಂದೇ ಚಿರಪರಿಚಿತರಾಗಿದ್ದರೂ ಇವರು ಪ್ರಸಿದ್ಧ ಕವಿಯೂ ಹೌದು.

ಕವನ ಸಂಗ್ರಹಗಳು : ಬಳ್ಳಾರಿಯ ಬೆಳಗು, ಕಾಣಿಕೆ, ಅಮೃತಧಾರೆ, ಚಂಪಕ, ನೀವೆಲ್ಲ ನಮ್ಮವರು, ತುಂಬು ಅರಳಿದ ಬೇವು ಮುಂತಾದವುಗಳು.

ಒಲಿದು ಬಂದ ಸರಸ್ವತಿ (ಕಥಾಸಂಕಲನ) ವಿದ್ಯಾರ್ಥಿ ರತ್ನಗಳು (ಜೀವನ ಚಿತ್ರ ಗಳು).

ವಿಶ್ವಕರ್ನಾಟಕದ ಉಪಸಂಪಾದಕರಾಗಿದ್ದು ಅನಂತರ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'ಯ ಸಂಪಾದಕರಾಗಿದ್ದರು. ಪ್ರಸ್ತುತ ಶ್ರೀಯುತರು ಬೆಂಗಳೂರು ನಗರ ಸಭೆಯ ಸದಸ್ಯರಾಗಿದ್ದಾರೆ.

ಕವನದ ಕೆಲ ತುಣುಕುಗಳು—

ಹತ್ತಿರ ಹತ್ತಿರ ಬಂದಂತೆಲ್ಲ
ಒತ್ತುತ ಒತ್ತುತ ಬಂದಿತ್ತು
ಮೆಲ್ಲಗೆ ಮೆಲ್ಲಗೆ ನುಡಿದಂತೆಲ್ಲ
ಗಲ್ಲವ ಗಲ್ಲಕೆ ತಂದಿತ್ತು
ದೂರಕೆ ದೂರಕೆ ಸರಿದಂತೆಲ್ಲ
ಹಾರುತ ಹಾರುತ ಬಂದಿತ್ತು
ಮೆತ್ತಗೆ ಮೆತ್ತಗೆ ಸರಿದಂತೆಲ್ಲ
ಸುತ್ತುತ ಸುತ್ತುತ ಸುಳಿದಿತ್ತು

---

* ಜನನ : ಡಿಸೆಂಬರ್ 3, 1923. ಹೊನ್ನಾವರ ತಾಲ್ಲೋಕಿನ ಕಡತೋಕಾ ಗ್ರಾಮದಲ್ಲಿ.
* ಜನನ : 1924, ಹಿರೇ ಕುಂಬಳ ಗುಂಟೆ.

**ಪದ್ಮಶ್ರೀ ಎ. ಕೆ. ರಾಮಾನುಜನ್**[1] : ಇವರ ಪೂರ್ಣ ಹೆಸರು ಅತ್ತಿಪ್ಪಟ್ ಕೃಷ್ಣಸ್ವಾಮಿ ರಾಮಾನುಜನ್. . ಅಮೇರಿಕಾದ ಷಿಕಾಗೋ ವಿಶ್ವವಿದ್ಯಾಲಯದಲ್ಲಿ ಭಾಷಾ ವಿಜ್ಞಾನದ ಪ್ರಾಧ್ಯಾಪಕ, ಪ್ರತಿಭಾವಂತ ಕವಿ, ನಿಷ್ಣಾತ ಅನುವಾದಕ. ಶಿವಶರಣರ ವಚನಗಳನ್ನು 'ಸ್ಪೀಕಿಂಗ್ ಆಫ್ ಶಿವ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. 'ಇಂಟೀರಿಯರ್ ಲ್ಯಾಂಡ್ ಸ್ಕೇಪ್' ತಮಿಳು ಪ್ರೇಮಗೀತೆಗಳ ಇಂಗ್ಲೀಷ್ ಅನುವಾದ. ಶ್ರೀ ಯು. ಆರ್. ಅನಂತಮೂರ್ತಿಗಳ 'ಸಂಸ್ಕಾರ' ಕಾದಂಬರಿಯನ್ನು ಇಂಗ್ಲೀಷಿಗೆ ಅನುವಾದಿಸಿದ್ದಾರೆ. ಇವರೂ ಇಂಗ್ಲೀಷಿನಲ್ಲೂ ಸಹ ಸ್ವತಂತ್ರ ಕವನಗಳನ್ನು ರಚಿಸಿ ಸಂಕಲನಗಳನ್ನು ಹೊರತಂದಿದ್ದಾರೆ. ಸ್ಟ್ರೈಡರ್ಸ್, ರಿಲೇಷನ್ಸ್, ಸೆಲೆಕ್ಟೆಡ್‌ಪೊಯೆಮ್ಸ್ ಮುಖ್ಯವಾದವುಗಳು. ಶ್ರೀಯುತರು ತಮಿಳಿನಲ್ಲೂ ಸಹ ಅಪೂರ್ವ ಮಾಹಿತಿಗಳಿಸಿದ್ದಾರೆ.

'ಹೊಕ್ಕಳಲ್ಲಿ ಹೂವಿಲ್ಲ' ಒಳ್ಳೆಯ ಕನ್ನಡ ಕವನ ಸಂಕಲನ. ಪ್ರಯೋಗಶೀಲ ಪ್ರತಿಭೆ ಇಲ್ಲಿ ಚೆನ್ನಾಗಿ ಪ್ರಕಾಶಿಸಿದೆ. 'ಮತ್ತೊಬ್ಬನ ಆತ್ಮಚರಿತ್ರೆ'-ಕಿರುಕಾದಂಬರಿ.

ಬಹುಮುಖ ಪ್ರತಿಭೆಯ ಶ್ರೀಯುತರನ್ನು ಅಮೇರಿಕಾದ ಮೆಕಾರ್ಥರ್ ಪ್ರತಿಷ್ಠಾನ 'ಜೀನಿಯಸ್ ಅವಾರ್ಡ್' ನೀಡಿ ಸನ್ಮಾನಿಸಿದೆ.

ಕಾವ್ಯ ಶೈಲಿಯ ಉದಾಹರಣೆಗಾಗಿ ಒಂದು ಕವನದ ತುಣುಕು.

'ಕೆಂಡ
ಸಂಪಿಗೆ
ಮುಗಿಲ ಕೆಂಪಿಗೆ ಮೋಡವೇ ಗೋಡೆಯಾದರೆ
ಆ ಮೋಡಕೆ
ಊರ ಬೀದಿಯ ಗೂಳಿ
ಬಿರುಕು ಬಾಡಿಯ ಕಾರು ಕಡಗೆನಲ್ಲಿ
ಕೆಳಗಿನ ತಟ್ಟೆ ತಳಿಗೆಯ ಕೈತೊಳೆದ ಕೊಳೆನೀರು.

**ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ**[2] : ನವಪ್ರಜ್ಞೆಯ ಹೆಸರಾಂತ ಕವಿ, ವಿಮರ್ಶಕ ಹಾಗೂ ಗ್ರಂಥ ಸಂಪಾದಕ. ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಹಲವು ಕಾಲೇಜುಗಳಲ್ಲಿ ದುಡಿದಿದ್ದಾರೆ. ಬೆಂಗಳೂರಿನ ಮಹಾರಾಣಿ ಕಾಲೇಜು, ಆರ್ಟ್ಸ್ ಕಾಲೇಜುಗಳಲ್ಲಿ ಪ್ರಿನ್ಸಿಪಾಲರಾಗಿದ್ದು ಈಗ ರಾಮ್ ನಾರಾಯಣ್ ಚೆಲ್ಲಾರಾಮ್ ವಾಣಿಜ್ಯ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾರೆ.

---

1 ಜನನ – ಮಾರ್ಚ್ 16, 1929, ಮೈಸೂರಿನಲ್ಲಿ. ತಂದೆ–ಕೃಷ್ಣಸ್ವಾಮಿ, ತಾಯಿ–ಶೇಷಮ್ಮ.

2 ಜನನ – 1931. ಹುಟ್ಟಿದ ಊರು–ತುಮಕೂರು ಜಿಲ್ಲೆಯ ಚೇಳೂರು.

ಇವರ ಕೃತಿಗಳು : ರಸಗಂಗೆ, ಉತ್ತರ, ಚಿತ್ರವಿಚಿತ್ರ, ಐವತ್ತರ ನೆರಳು, ಮಹಾನುಭಾವ ಬುದ್ಧ, ಶ್ರೀ ಕವಿ ಲಕ್ಷ್ಮೀಶ, ಋಷ್ಯ ಶೃಂಗ. ಅಚ್ಚಿನಲ್ಲಿರುವ ಕೃತಿಗಳು: ಹೊಸಗನ್ನಡ ಕಾವ್ಯ, ರತ್ನಾಕರ ವರ್ಣಿ, ವಚನ ಸಾಹಿತ್ಯ-ಒಂದು ಇಣುಕು ನೋಟ, ಕಾವ್ಯ ಸಂಚಯ, ವಿಮರ್ಶೆಯ ದಾರಿ, ಪುರಂದರ ಕೀರ್ತನೆಗಳು, ಪರಂಪರೆಯ ನಿರ್ಮಾಪಕರು.

ಉತ್ತಮ ಕವಿತೆಗೆ ಒಂದು ಉದಾಹರಣೆ—

ಇದ್ದಾಗ ತೂಬಸು ಮುಚ್ಚಿ ಏರಿ ಮೇಲೆಲ್ಲ ಹಸುರಿಕ್ಕಿ
ಸುಣ್ಣಬಣ್ಣ ವಿಲೇಪ ಕರ್ಮ-ಶೃಂಗಾರ
ಅರಿಯದೆ ಮೇಲು ತಲೆಯುಲಿದು ನಲಿದ
ದೋಣಿ ವಿಹಾರ
ಮಲೆಯ ಹೊಳೆ ತೋಳಿಕ್ಕಿ ಬಾಚಿ ತಬ್ಬಲು
ನಸೆಯ ಬೆವರು ಕ್ಕಿಕ್ಕಿ
ದುಂದುಂ ಎಂದಂತೆ
ಮೈ ತುಂಬಿದಂತೆ
ತೂಬಿಕ್ಕಿ ಕೂತು ದೋಣಿ ಪ್ರಣಾಯಕ್ಕೆ ಸೋತ ನಿರ್ಲಿಪ್ತ
—('ಉತ್ತರ' ಕವನ ಸಂಗ್ರಹದಿಂದ)

**ಡಾ|| ಸಾ. ಶಿ. ಮರುಳಯ್ಯ*** : ಒಳ್ಳೆಯ ಕವಿ, ಹೆಸರಾಂತ ವಿಮರ್ಶಕ. ಸಂಶೋಧಕ ಹಾಗೂ ನುರಿತ ಗ್ರಂಥ ಸಂಪಾದಕ. ಇವರ 'ಕೆಂಗನ ಕಲ್ಲು' ಕವನ ಸಂಗ್ರಹಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. 'ಭಾಸನ ಮಕ್ಕಳು' ವಿಮರ್ಶಾ ಕೃತಿಗೆ ದೇವರಾಜ ಬಹದ್ದೂರ್ ಬಹುಮಾನ ಬಂದಿದೆ. 'ಜ್ಞಾನ ಗಂಗೋತ್ರಿ' 8ನೇ ಸಂಪುಟದ ಸಂಪಾದಕರು.

ಇತರ **ಕೃತಿಗಳು** : ಶಿವತಾಂಡವ, ವಿಪರ್ಯಾಸ, ಘೋಷವತಿ, ರೂಪಸಿ, ಚೈತ್ರ-ಜ್ಯೋತಿ, ಬೃಂದಾವನ ಲೀಲೆ, ಮುಂತಾದ 9 ಕವನ ಸಂಗ್ರಹಗಳು. ಹೇಮ ಕೂಟ, ಪುರುಷ ಸಿಂಹ – ಕಾದಂಬರಿಗಳು; 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ'-ಮಹಾಪ್ರಬಂಧ: ಹರಿಹರನ ಹತ್ತು ರಗಳೆಗಳು; ಮರುಳ ಸಿದ್ದೇಶ್ವರ ಮಹಾ ಪುರಾಣ, ಅಗ್ರ ತಾಂಬೂಲ-ಸಂಪಾದಿತ ಕೃತಿಗಳು; ಇವುಗಳಲ್ಲದೆ ಸಣ್ಣ ಕತೆ, ನಾಟಕ, ಜೀವನ ಚರಿತ್ರೆಗಳನ್ನೂ ಸಹ ಬರೆದಿದ್ದಾರೆ. ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 25,

---

* ಜನನ : ಜನವರಿ 28, 1931. ತುಮಕೂರು ಜಿಲ್ಲೆ ಸಾಸಲು. ತಂದೆ-ಶಿವರುದ್ರಯ್ಯ, ತಾಯಿ-ಸಿದ್ದಮ್ಮ.

ಇವರ ಕಾವ್ಯ ಶೈಲಿಗೆ ಒಂದು ಉದಾಹರಣೆ—

ಸತ್ತ ದಿನಗಳ ಜಪಿಸಿ ಜಡವಾಗದಿರು ಮನವೆ
ಮತ್ತೆ ಹೊಸ ಚೇತನವ ತುಂಬಿಕೋ ಘನವೆ ॥
ನಿಂತ ನೀರದು ಕೊಚ್ಚೆ ಹರಿವ ನದಿಯೇ ತೀರ್ಥ
ಉಳಿದೆಲ್ಲ ಮಾತುಗಳು ಅರ್ಥ ವ್ಯರ್ಥ ।
ಅದ ತಿಳಿದು ಮೇಲೇಳು ಮೈ ಕೊಡವಿ ಸಿಡಿದೇಳು
ಹುಟ್ಟಳಿಸು ಹಳೆಯ ಕೊಳೆ. ಇರಲಿ ಸ್ವಾರ್ಥ

('ಬೃಂದಾವನ ಲೀಲೆ'ಯಲ್ಲಿನ 'ಸಮಾಧಾನ' ಕವನದಿಂದ)

**ಡಾ॥ ಸರೋಜಿನಿ ಮಹಿಷಿ*** : ಈಕೆ ಬಹುಭಾಷಾ ವಿಶಾರದೆ. ಕನ್ನಡ ಇಂಗ್ಲೀಷಿನಲ್ಲಲ್ಲದೆ ಸಂಸ್ಕೃತ, ಹಿಂದಿ ಮರಾಠಿಯಲ್ಲೂ ಪ್ರಗಲ್ಭ ವಿದ್ವತ್ ಗಳಿಸಿದ್ದಾರೆ. 'ವೇದಗಳ ಕಾಲದಿಂದ 20ನೇ ಶತಮಾನದ ತನಕ ಕನ್ನಡ ಮತ್ತು ಸಂಸ್ಕೃತದಲ್ಲಿ ಇದ್ದ ಕವಿಗಳು' ಎಂಬ ಬಗ್ಗೆ ವಿದ್ವತ್ ಪೂರ್ಣ ಗ್ರಂಥ ಬರೆದು ಪಿ.ಹೆಚ್.ಡಿ. ಗಳಿಸಿದ್ದಾರೆ. ಮಧ್ಯಪ್ರದೇಶದ ವಿಕ್ರಮ ವಿಶ್ವವಿದ್ಯಾಲಯ ಇವರಿಗೆ ಡಿಲಿಟ್ ಪ್ರಶಸ್ತಿ ನೀಡಿ ಗೌರವಿಸಿದೆ. ಸಂಸ್ಕೃತದಲ್ಲಿ ಪಾಂಡಿತ್ಯ ಇರುವ ಇವರನ್ನು ಮಂತ್ರಾಲಯ ಸಂಸ್ಕೃತ ಸಭೆ, 'ವಿದ್ವತ್ ರತ್ನ' ಎಂದು ಹೆಸರಿಸಿ ಸನ್ಮಾನಿಸಿದೆ.

ಕೃತಿಗಳು : ಮುಳ್ಳು ಗುಲಾಬಿ (ಮಕ್ಕಳ ಕವನಗಳು), ಸ್ವಾತಂತ್ರ್ಯ ಕಹಳೆ, ಹಿಮಾಚಲದಿಂ ರಾಮೇಶ್ವರ, ಕೋಗಿಲೆ (ಕವನ ಸಂಗ್ರಹಗಳು); ರೂಪಾ (ಕಥಾ ಸಂಕಲನ); ಕನ್ನಡ ಬಾಣ ಕಾದಂಬರಿ (ಸಂಪಾದಿಸಿರುವ ಕೃತಿ). ಸುಲಭ ಗೃಹ ವಿಜ್ಞಾನ, ಕಸೂತಿ ಕಲೆ, ಕಮರ್ಶಿಯಲ್ ಸಿಸ್ಟಂ ಆಫ್ ಕಟಿಂಗ್ ಮುಂತಾದ ಗೃಹಿಣಿಯರಿಗೆ ಉಪಯುಕ್ತ ಕೃತಿಗಳನ್ನೂ ರಚಿಸಿದ್ದಾರೆ. ಕುವೆಂಪುರವರ 'ರಾಮಾಯಣ ದರ್ಶನಂ' ಮತ್ತು ಡಾ॥ ಡಿ. ವಿ. ಜಿ.ಯವರ 'ಮಂಕುತಿಮ್ಮನ ಕಗ್ಗ'ವನ್ನು ಹಿಂದಿಗೆ ಅನುವಾದಿಸಿದ್ದಾರೆ. 'ಅಪೂರ್ವ ಪಶ್ಚಿಮ' (ಹಿಂದಿಯಲ್ಲಿ ರಚಿತವಾಗಿರುವ ಪ್ರವಾಸ ಸಾಹಿತ್ಯ). 'ಅತಿಥಿ ಸತ್ಕಾರ ಮತ್ತು ಇತರ ಹರಟೆಗಳು' (ಹರಟೆಗಳ ಸಂಕಲನ).

'ಸ್ವಾತಂತ್ರ್ಯ ಕಹಳೆ' ಕವನ ಸಂಗ್ರಹದಿಂದ ಒಂದೆರಡು ಉದಾಹರಣೆ—

ಎಲ್ಲಿಂದ ಬಂದಿಹೆನು ಎಲ್ಲಿಗೊ ಹೊರಟಿಹೆನು
ಬಲ್ಲಿದರ ಸಂಗವದು ನಡುವಣ ದಾರಿದೀಪ
ಏಳುತ್ತ ಬೀಳುತ್ತ ಮುಗ್ಗರಿಸಿ ನಡೆವುತ್ತ
ಗುರಿಯತ್ತ ಸಾಗಿಹೆನು ಎಂದೆನಲು ಗುರಿಯೇನು ?

೦ ೦ ೦

* ಜನನ–ಮಾರ್ಚ್ 3, 1933. ತೀರ್ಥಹಳ್ಳಿ ತಾಲ್ಲೂಕಿನ 'ಮಹಿಷಿ' ಗ್ರಾಮ. ತಂದೆ–ಬಿಂದೂರಾವ್. ತಾಯಿ–ಕಮಲಾಬಾಯಿ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 30.

ಇದ್ದ ಗಡಿಗಳ ಅಳಿಸಿ
ಗಡಿಯು ಗೆರೆಗಳ ಕೊರೆದು
ಒಳಗೊಳಗೆ ಕಾದಾಡಿ
ಹೋರಾಡುತ್ತಿದ್ದೆವು,
ಒಂದೆ ತಾಯಿಯ ಕರುಳು
ಮಕ್ಕಳೆಲ್ಲರು ಕೂಡಿ
ಮನೆ ಬೇರೆ ಮಾಡಿರಲು
ಮನ ಬೇರೆ ಇರಬೇಕೆ ?

**ಬಿ. ಎ. ಸನದಿ**[1] **:** ಭಾರತ ಸರ್ಕಾರದ ನೌಕರಿಯಲ್ಲಿರುವ ಶ್ರೀಯುತರು ಒಳ್ಳೆಯ ಕವಿಗಳು, ಸಂಶೋಧಕರು, ಗ್ರಂಥ ಸಂಪಾದಕರು, ಕಿಶೋರ ಸಾಹಿತ್ಯ ರಚನಕಾರರು.

ಕೃತಿಗಳು : ತಾಜಮಹಲು, ನೆಲ ಸಂಪಿಗೆ, ಬಹುಮಾನ, ಗೃಹ ಪಂಚಮಿ, ಗುಲಾಬಿ ಗೊಂಚಲು, ಜಿಲೇಬಿ ಝುಣ್ ಝುಣ್ ಇತ್ಯಾದಿ ಸುಮಾರು 20 ಕೃತಿಗಳು.

ಇವರ ಕವನಕ್ಕೆ ಒಂದು ಉದಾಹರಣೆ—

ಹೊತ್ತು ಏರುವ ಮೊದಲೆ
ಹಸಿರು ಹುಲ್ಲಿನ ಮೇಲೆ
ಕಂಡಿರುವಿರಾ ನೀವು ನನ್ನ ಲೀಲೆ
ಎಸಳು ಎಸಳಿನ ಬೆರಳು
ಹರಳಿನುಂಗುರ ವಿಟ್ಟು
ಮೆರೆವಂತೆ ಕಾಣುವುದು ನನ್ನಿಂದಲೆ !

ಇವರ ಕೃತಿ 'ಪ್ರತಿಬಿಂಬ'ಕ್ಕೆ 1987ರಲ್ಲಿ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ.

**ಡಾ॥ ಸುಮತೀಂದ್ರ ನಾಡಿಗ**[2] **:** ಹೊಸ ಪೀಳಿಗೆಗೆ ಸೇರಿದ ನವ್ಯಕವಿ ಹಾಗೂ ನುರಿತ ವಿಮರ್ಶಕ. ಗೋವಾದಲ್ಲಿ ಕೆಲಕಾಲ ಅಧ್ಯಾಪಕರಾಗಿದ್ದು, ಕೆಲಕಾಲ ಬಾಪ್ಕೊ ಪ್ರಕಾಶನದ ಪ್ರಕಾಶನ ವಿಭಾಗದ ಸಂಪಾದಕರಾಗಿದ್ದು ಈಗ ಬೆಂಗಳೂರಿನ ವಿಶ್ವ ವಿದ್ಯಾನಿಲಯದ ಇಂಗ್ಲಿಷ್ ವಿಭಾಗದಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಡಾ॥ ಬೇಂದ್ರೆ ಯವರ ಕವನಗಳನ್ನು ಕುರಿತು ಸಂಶೋಧನೆ ಮಾಡಿ ಡಾಕ್ಟರೇಟ್ ಗಳಿಸಿದ್ದಾರೆ.

ಕೃತಿಗಳು : ನಿಮ್ಮ ಪ್ರೇಮ ಕುಮಾರಿಯ ಜಾತಕ, ಕಪ್ಪು ದೇವತೆ (ಕವನ ಸಂಗ್ರಹಗಳು): ಎಂ. ಗೋಪಾಲಕೃಷ್ಣ ಅಡಿಗ : ಒಂದು ಕಾವ್ಯಾಭ್ಯಾಸ (ವಿಮರ್ಶೆ) ಬೊಕ್ಕ ತಲೆಯ ನರ್ತಕಿ (ನಾಟಕ). ಇವರ 'ಸಾಹಸ' ಮಕ್ಕಳ ಕಾದಂಬರಿ 'ಸುಧಾ'ದ ಬಹುಮಾನ ಗಳಿಸಿದೆ. ಕಾರ್ಕೋಟಕ, (ಕಾದಂಬರಿ).

---

1 ಜನನ : ಆಗಸ್ಟ್ 18, 1933. ಬೆಳಗಾವಿ ಜಿಲ್ಲೆಯ ಸಿಂದೊಳ್ಳಿಯಲ್ಲಿ.

2 ಜನನ–ಮೇ 4, 1935. ಚಿಕ್ಕಮಗಳೂರು ಜಿಲ್ಲೆ ಕಳಸ. ತಂದೆ–ರಾಘವೇಂದ್ರರಾವ್ ತಾಯಿ–ಸುಬ್ಬಮ್ಮ.

ಇವರ ಕಾವ್ಯಶೈಲಿಗೆ ಒಂದು ಉದಾಹರಣೆ—

ರಾಯರೆ, ಲಗ್ನ ಕುಂಡಲಿ ಮತ್ತು ಅಂಶ ಕುಂಡಲಿ ಹಾಕಿ
ಹಿಂದು ಮುಂದಿನದೆಲ್ಲ ವಿಷದವಾಗಿ
ಬರೆದಿಟ್ಟಿರುವೆ ಕೇಳಿ ದೃಗ್ ಸಿದ್ಧಾಂತ ಮುಂತಾದ
ಮಹಮಹಾ ಗ್ರಂಥಗಳ ಆಧಾರದಿಂದ
ಇದು ನಿಮ್ಮ ಪ್ರೇಮ ಕುಮಾರಿಯು ಜಾತಕ
ಎಷ್ಟೋ ಮಕ್ಕಳ ಹಾಗೆ ಇವಳಲ್ಲ ಋಣ ಪಾತಕಿ.

**ಪ್ರೊ॥ ನಿಸಾರ್ ಅಹಮದ್*** : ಬಹುಮುಖ ಪ್ರತಿಭೆಯ ಶ್ರೀಯುತರು ಭೂವಿಜ್ಞಾನ ವಿಭಾಗದಲ್ಲಿ ಸ್ನಾತಕೋತ್ತರ ಪದವಿ ಗಳಿಸಿ ಸುಮಾರು 26-27 ವರ್ಷ ಗಳಿಂದ ಅಧ್ಯಾಪಕ ವೃತ್ತಿಯಲ್ಲಿದ್ದಾರೆ. ಪ್ರಸ್ತುತ ಸರ್ಕಾರಿ ಸೈನ್ಸ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದಾರೆ. ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದು ಇದೀಗ ತಾನೇ ನಿವೃತ್ತರಾಗಿದ್ದಾರೆ.

ಅನಾಮಿಕ ಆಂಗ್ಲರು (ಕವನ ಸಂಗ್ರಹ) ಮತ್ತು ಇದು ಬರಿ ಬೆಡಗಲ್ಲೋ ಅಣ್ಣ (ವಿಮರ್ಶಾ ಕೃತಿ)ಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿವೆ. ರಷ್ಯನ್ ಕಥೆಗಳ ಅನುವಾದ 'ಹೆಜ್ಜೆ ಗುರುತು' ಪುಸ್ತಕಕ್ಕೆ ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ ಲಭಿಸಿದೆ. 'ಹಕ್ಕಿಗಳು' ಕೃತಿಗೆ ಭಾರತ ಸರ್ಕಾರದ ಎನ್.ಸಿ. ಇ.ಆರ್.ಟಿ.ಯಿಂದ 4000 ರೂಪಾಯಿಗಳು ಪುರಸ್ಕಾರ ಲಭಿಸಿದೆ. ಇದೇ ಪುಸ್ತಕಕ್ಕೇ ರಾಜ್ಯ ಸರ್ಕಾರ ಸಹ ಪುರಸ್ಕಾರ ನೀಡಿದೆ. ಒಟ್ಟಾರೆ ಇವರ ಸೇವೆ ಯನ್ನು ಗುರುತಿಸಿ ರಾಜ್ಯ ಸರ್ಕಾರವು 1981ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

ಇವರ ಇತರ ಕೃತಿಗಳು : ಮನಸು ಗಾಂಧಿಬಜಾರು, ನೆನೆದವರ ಮನದಲ್ಲಿ, ಸುಮುಹೂರ್ತ, ಸಂಜೆ ಐದರ ಮಳೆ, ನಾನೆಂಬ ಪರಕೀಯ, ನಿತ್ಯೋತ್ಸವ, ಸ್ವಯಂ ಸೇವೆಯ ಗಿಳಿಗಳು, ಅನಾಮಿಕ ಆಂಗ್ಲರು (ಕವನ ಸಂಗ್ರಹಗಳು); ಎ ಮಿಡ್ ಸಮ್ಮರ್ ನೈಟ್ ಡ್ರೀಮ್, ಒಥೆಲೊ, ಹೆಜ್ಜೆಗುರುತು, ಬರೀ ಮರ್ಯಾದಸ್ಥರೆ (ಅನುವಾದಗಳು) 1982ರ ಕವಿತೆಗಳು, ದಶವಾರ್ಷಿಕ ಕವಿತೆಗಳು (1973–84) (ಸಂಪಾದನೆ) ಚಿಕ್ಕ ವೀರರಾಜೇಂದ್ರ (ಒಂದು ಚಿಂತನ); ಹಕ್ಕಿಗಳು, ಶಿಲೆಗಳು, ಖನಿಜಗಳು (ಮಕ್ಕಳ ಸಾಹಿತ್ಯ).

ಪ್ರೊ॥ ನಿಸಾರ್ ಅಹಮದ್ ಅಂತಃಸತ್ವ ಉಳ್ಳ ಮೇಧಾವಿ ಕವಿ.

---

* ಜನನ–ಫೆಬ್ರವರಿ 5, 1936. ಬೆಂಗಳೂರು ಜಿಲ್ಲೆಯ ದೇವನಹಳ್ಳಿ. ತಂದೆ–ಕೆ. ಎಸ್. ಹೈದರ್. ತಾಯಿ–ಹಾಸಿಮಾಜ್ ಬೇಗಂ.

ಕವಿತೆಯ ಕೆಲ ಉದಾಹರಣೆಗಳು—

ಕುರಿಗಳು, ಸಾರ್–ಕುರಿಗಳು
ಸಾಗಿದ್ದೇ
ಗುರಿಗಳು
ಮಂದೆಯಲ್ಲಿ ಒಂದಾಗಿ. ಸ್ವಂತತೆಯೇ ಬಂದಾಗಿ
ಇದರ ಬಾಲ ಅದು ಮತ್ತೆ ಅದರ ಬಾಲ ಇದು ಮೂಸಿ,
ದನಿ ಕುಗ್ಗಿಸಿ, ತಲೆ ತಗ್ಗಿಸಿ
ಹುಡುಕಿ ಹುಲ್ಲುಕಡ್ಡಿ ಮೇವು, ಅಂಡಲೆಯುವ ನಾವು, ನೀವು
ಕುರಿಗಳು, ಸಾರ್, ಕುರಿಗಳು
ನಮಗೊನೂರು ಗುರಿಗಳು.

o o o

ಒಮ್ಮೊಮ್ಮೆ ಏನೂ ಹೊಳೆಯುವುದಿಲ್ಲ
ಸಂಕಲ್ಪವೊಂದೇ ಮೋಡ! ಶಾಖ ಮರೆ
ಬರೆದರೇ ಬರೀ ಅಕ್ಷರಗಳ ಹೊರೆ
ಕಾಡು ಹೂವೊಂದರ ಮೈಲಿಗಳ ಯಾಂತ್ರಿಕ ತಸ
ಕೂತರೆ ಅಡ್ಡಾಡಿಸಿ ಅಡ್ಡಾಡಿದರೆ ಒರಗಿಸಿ
ಒರಗಿದರೆ ಬರೆಯಿಸುವ ಆ ದೃಢತೆ,
ಹೊರಗಾಗುವುದು ಕವಿತೆ

**ಪ್ರೊ॥ ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ*** : ಇವರ ಪೂರ್ಣ ಹೆಸರು ಸೈಲಾಡಿ ಶಿವರಾಮ ಲಕ್ಷ್ಮೀನಾರಾಯಣ ಭಟ್ಟ, ಕನ್ನಡದ ಪ್ರಸಿದ್ಧ ಕವಿ, ಒಳ್ಳೆಯ ವಿಮರ್ಶಕರು, ಹೆಸರಾಂತ ಕನ್ನಡ ಪ್ರಾಧ್ಯಾಪಕರು. ಈಗ ಶ್ರೀಯುತರು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾರೆ, ಇವರ ಬಹಳಷ್ಟು ಕವನಗಳು ಕ್ಯಾಸೆಟ್‌ಗಳಲ್ಲಿ ಕೂಡಿಸಲ್ಪಟ್ಟು ಜನಪ್ರಿಯಗೊಂಡಿವೆ.

ಕೃತಿಗಳು : ವೃತ್ತ, ಸುಳಿ, ನಿನ್ನೆಗೆ ನನ್ನ ಮಾತು, ದೀಪಿಕಾ ಮತ್ತು ಬಾರೋ ವಸಂತ (ಕವನ ಸಂಗ್ರಹಗಳು). ಹೊರಳು ದಾರಿಯಲ್ಲಿ ಕಾವ್ಯ (ವಿಮರ್ಶೆ), ಜಗನ್ನಾಥ ವಿಜಯ, ಮುದ್ರಾ ಮಂಜೂಷ, ಕರ್ಣ, ಕುಂತಿ, ಕನ್ನಡ ಮಾತು (ಬಾಲ ಸಾಹಿತ್ಯ), ಠಾಕೂರರ ಎರಡು ನಾಟಕಗಳು ಮುಂತಾದವುಗಳು.

ಶ್ರೀಯುತರು ಇಂಗ್ಲೀಷಿನಲ್ಲೂ ಹಲವು ಕೃತಿಗಳನ್ನು ರಚಿಸಿದ್ದಾರೆ, ಕವಿತೆಗೆ

---

* ಜನನ–ಅಕ್ಟೋಬರ್ 29, 1936, ಶಿವಮೊಗ್ಗ. ತಂದೆ–ಶಿವರಾಮ ಭಟ್ಟ. ತಾಯಿ–ಮೂಕಾಂಬಿಕೆ.

ಒಳ್ಳೆಯ ಉದಾಹರಣೆ—

ಸತ್ತ ಕನಸನ್ನೆತ್ತಿ ಮತ್ತೆ ನೀರೆರೆದು
ಚಿಗುರಿಸಿದ ನೀರೆ ನೀನು ಯಾರೆ ?
ಮುಗಿಲಲ್ಲಿ ಅಲೆಸಿರುವ ಕೀಲು ಕುದುರೆ, ನನ್ನ
ಅಮಲಿನಾಳದಲದ್ದಿದಂಥ ಮದಿರೆ

o o o

ಉರಿವ ಬಿಸಿಲಿಗೆ ತಂಪುಗಾಳಿ ಸುಳಿಸಿ
ಮಣ್ಣಲ್ಲಿ ಮೋಡಗಳ ಬಣ್ಣ ಕಲೆಸಿ
ಮಾತ ಮರ್ಜಿಗೆ ಸಿಗದ ಉರಿಯ ಚಿಗುರುಗಳನ್ನ
ಕಣ್ಣಲ್ಲಿ ನಿಲಿಸಿ
ಬದೆಗಸೆ ಮುಖದಲಿ ಮಾನಸ ಮೊಗೆದು ಸುರಿವ
ನೀನು ಯಾರೆ ಚೆಲುವೆ

'ಹೊರಳು ದಾರಿಯಲ್ಲಿ ಕಾವ್ಯ' ವಿಮರ್ಶಾ ಗ್ರಂಥಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ (1974) ಪ್ರಶಸ್ತಿ ಲಭಿಸಿದೆ.

**ಗುಂಡ್ಮಿ ಚಂದ್ರಶೇಖರ ಐತಾಳ*** : ಎಂ.ಎ. ನಂತರ ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ಅಧ್ಯಾಪಕ ವೃತ್ತಿ ಕೈಗೊಂಡರು. 1962ರಲ್ಲಿ 'ಪಟಾಚಾರಾ' ಗ್ರಂಥಕ್ಕೆ ಬಿ. ಎಂ. ಶ್ರೀ ಸ್ವರ್ಣ ಪದಕ, 'ಸೌಂದರ್ಯ ಸಾನಿಧ್ಯದಲ್ಲಿ', ಗ್ರಂಥಕ್ಕೆ ದೇವರಾಜ ಬಹದ್ದೂರು ಸಾಹಿತ್ಯ ಪ್ರಶಸ್ತಿ, 'ಕೈಲಿ ಕರೆದ ನೊರೆಹಾಲು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ಮದ್ದುಂಟೆ ಜನನ ಮರಣಕ್ಕೆ' ಕೃತಿಗೆ ಮೈ. ವಿ. ವಿದ್ಯಾಲಯದ ಬಹುಮಾನ ಸಂದಿವೆ.

ಕೃತಿಗಳು : ಕೈಲಿ ಕರೆದ ನೊರೆಹಾಲು, ಗುಂಡು ಸೂಜಿ, ಬೆಳಗಾಯಿತು (ಕವನ ಸಂಗ್ರಹಗಳು), ಪೂರ್ಣ ಕುಂಭ (ಸಂಪಾದನೆ), ಮಂಗಳ ಸಂಜೆ (ಸಂಪಾದನೆ) ಬೆಳಗಿನ ಬೀಜ, ಸಮಾರಾಧನೆ, ಸಾಂತ್ಯಾರು ವೆಂಕಟರಾಜ, ಶಂಕರದಾಸರು, ಶ್ರೀ ವ್ಯಾಸರಾಯರು. ರುದ್ರಭಟ್ಟ-(ವಿಮರ್ಶಾ ಗ್ರಂಥ), 'ಸೌಂದರ್ಯದ ಸಾನ್ನಿಧ್ಯದಲ್ಲಿ' ಮತ್ತು ಚೆಲುವು-ಚೆಲ್ಲಿದಲ್ಲಿ (ಪ್ರವಾಸ ಸಾಹಿತ್ಯ) ಕವಿತೆಯ ಶೈಲಿಗೆ ಉದಾಹರಣೆ.

'ಏಳು ಮಗುವೆ' ಎಂಬ ಉದಯರಾಗವ ನಜ್ಜ
ಹಾಡಿ ಆಕಳಿಪಾಗ ಬೆಳಗಾಯಿತು
ಮನೆಯ ಹೆಂಗಸರೆಲ್ಲ ನಡುಬಾಗಿ ನೀರಿಟ್ಟು
ಹೊಸ್ತಿಲಿಗೆ ಹೂವಿಟ್ಟು ಬೆಳಗಾಯಿತು

* ಜನನ–ಜನವರಿ 20, 1936, ಉಡುಪಿ ತಾಲ್ಲೋಕಿನ ಗುಂಡ್ಮಿ. ತಂದೆ–ರಾಮಚಂದ್ರ. ತಾಯಿ–ಸತ್ಯಮ್ಮ.

ಮನೆಯಾಕೆ ದರಬರನೆ ಮೊಸರನ್ನು ಕಡೆವಾಗ
ಕಂಕಣದ ಕಿಂಕಣಿಗೆ ಬೆಳಗಾಯಿತು
ಹೂ ತುಂಬ ಮಧು ತುಂಬಿ ತುಂಬಿ ಗರ್ಜಿಸಲೆಂದು
ಹೂವು 'ಹ್ಞೂ' ಎಂದಾಗ ಬೆಳಗಾಯಿತು

**ವೇಣುಗೋಪಾಲ ಸೊರಬ**[1] : ಹೆಸರಾಂತ ಕವಿ ಹಾಗೂ ಕಥಾ ಲೇಖಕ. ಕನಕಪುರ ರೂರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. .

**ಕೃತಿಗಳು :** ಮುಸುಕು-ಸಸುಕು, ಜೀವ-ಜೀವಂತ, ಗರಿ ಮುರಿದ ಹಕ್ಕಿಗಳು (ಕವನ ಸಂಕಲನಗಳು). 'ಗರಿ ಮುರಿದ ಹಕ್ಕಿಗಳು' ಕೃತಿಗೆ (1974) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

ಇವರ ಕಾವ್ಯ ಶೈಲಿಗೆ ಒಂದು ಸಣ್ಣ ಉದಾಹರಣೆ—

'ಮುಸ್ಸಂಜೆಯಲ್ಲಿ ಬಿರುಗಾಳಿ ಬೀಸಿ
ಆಕಾಶದೆತ್ತರಕ್ಕೂ ಸಣ್ಣ ಧೂಳೆದ್ದು
ಕಣ್ಣು ಬಿಚ್ಚದಿರೋ ಧೂಳು ಗೊಂಟೆಯೊಂದೇ
ಶಪಿಸಬೇಕೆ ಇದನ ಎನ್ನುವ ಸಮಯ
ಒಮ್ಮೆಗಿಲೇ ಮೋಡಗಳೊಡ್ಡು ಪೇರಿಸಿ
ಪೇರಿಸಿಟ್ಟಂತೆ ನುಗ್ಗಿದವು ಕಾಳಕಪ್ಪ
....................................
ಕಾರ್ಮೋಡವೆಂಬ ಹೆಸರಿನ ಜೇಡ

**ಚಂದ್ರಶೇಖರ ಪಾಟೀಲ**[2] : ಇವರು ನವ್ಯ ಗುಂಪಿಗೆ ಸೇರಿದ ಕವಿ. ಕರ್ನಾಟಕ ವಿಶ್ವವಿದ್ಯಾಲಯದ ಇಂಗ್ಲೀಷ್ ಅಧ್ಯಾಪಕರಾಗಿರುವ ಇವರಿಗೆ ಕನ್ನಡದ ಮೇಲೆ ಅಪಾರ ಪ್ರೀತಿ. 'ಗಾಂಧಿ ಸ್ಮರಣೆ' ಕೃತಿಗೆ ಕಾವ್ಯ ವಿಭಾಗದಲ್ಲಿ 1976ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. 'ಬಾನುಲಿ' ಕವಿತಾ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, 'ಗುರ್ತಿನವರು' ನಾಟಕಕ್ಕೆ ಪ್ರಜಾವಾಣಿ ದೀಪಾವಳಿ ವಿಶೇಷಾಂಕದ ಬಹುಮಾನ ಲಭಿಸಿವೆ. 'ಸಂಕ್ರಮಣ' ಸಾಹಿತ್ಯಾಂಕದ ಸಂಪಾದಕರು.

ಕೃತಿಗಳು : ಬಾನುಲಿ, ಮಧ್ಯಬಿಂದು, ಕೊಡೆಗಳು, ಅಪ್ಪ ಮುಂತಾದ ಸುಮಾರು 15 ಕೃತಿಗಳು.

---

1 ಜನನ : 10, 1937. ಬೆಂಗಳೂರು ಜಿಲ್ಲೆ ದೇವನಹಳ್ಳಿ ಇವರ ಪೂರ್ಣ ಹೆಸರು ಸೊರಬ ರಾಮರಾವ್ ವೇಣುಗೋಪಾಲರಾವ್. ತಂದೆ-ರಾಮರಾವ್, ತಾಯಿ-ಸೀತಮ್ಮ.

2 ಜನನ : ಜೂನ್ 18, 1939, ಧಾರವಾಡ ಜಿಲ್ಲೆಯ 'ಹತ್ತಿಮತ್ತೂರು'

ಅವರ ಕಾವ್ಯ ಶೈಲಿಗೆ ಉದಾಹರಣೆ—

ಇಲ್ಲಿ ಮಲಗಿದ್ದಾಳೆ
ಬುಗುರಿ ಗಿರಿಗಿರಿ ತಿರುಗಿ ತೆಪೆಗೊಂಡು ಬಿದ್ದಂತೆ
ನನ್ನವಳು ಬೆಂಕಿಯು ಎದುರು
ನನ್ನ ಕೈಹಿಡಿದವಳು
ನಾನು ಬೂದಿಯು ಗುಂಪಿ, ಕಣ್ಣೆಣ್ಣೆಯೂ ಇಳಿದು
ಮೈತುಂಬ ಬಸಿದು ಬರಿ ಜೆವರಾಗಿದೆ
ಒಂದು ಮಿನಿಟಿನ ಹಿಂದೆ ಸರನಾಡಿ ಗಿಂಪ್ ಗುಟ್ಟಿ
ಇಂಚು ಇಂಚಿಗೆ ಚಿಗಿತ ಎಲುಬೀಗ
ಲಿಕಿಲಿಕಿ

**ಸಿದ್ಧಲಿಂಗ ಪಟ್ಟಣ ಶೆಟ್ಟಿ**[1] : ಕರ್ನಾಟಕ ಕಾಲೇಜು ಧಾರವಾಡದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಹೆಸರಾಂತ ಕವಿಗಳು, ಒಳ್ಳೆಯ ವಿಮರ್ಶಕರು, ಕತೆ-ಕಾದಂಬರಿಕಾರರು.

ಕೃತಿಗಳು : ನೀನಾ, ಭಾರತಿ, ಔರಂಗಜೇಬ, ಆಧುನಿಕ ಕನ್ನಡ ಹಿಂದಿ ಕಾವ್ಯ, ಸಂಕ್ರಮಣ ಕಾವ್ಯ, ಆಷಾಢದ ಒಂದು ದಿನ ಮುಂತಾದವು.

ನವ್ಯ ಧಾಟಿಯ ಕವಿತೆಗೆ ಒಂದು ಉದಾಹರಣೆ :

'ಬುಟ್ಟಿ ತುಂಬಿರುವ' ಕವಳೆಹಣ್ಣುಗಳನ್ನು ಸುರುವಿದಂತೆ
ಕೆಳಗೆ ಇಳಿವ ಮಳೆ
ನಕ್ಷೆಯಲಿ ಭಾರತದ ರಾಜ್ಯಗಳ ಬರೆದಂತೆ
ಚಲ್ಲುವರೆದಿಹ ಮೋಡ
ಆಚೆಮನೆ ಚಿಕ್ಕಮಗು
ಆ ಕಾರಣವೇ ಸಂತತವು ನಕ್ಕಂತೆ
ಇಳಿಜಾರಿನಲಿ ಆಟವಾಡುವ ಬಿಸಿಲು
ಅನ್ನದಲಿ ಮಜ್ಜಿಗೆಯು ಸಿಹಿ ಸಾರನುಂಡಂತೆ
ತೊಯ್ದ ನೆಲ !

**ಕೆ. ವಿ. ತಿರುಮಲೇಶ್**[2] : ಹೈದರಾಬಾದಿನ ಸಿ.ಐ.ಇ.ಎಫ್.ಎಲ್. ಕಾಲೇಜಿನಲ್ಲಿ ರೀಡರ್ ಆಗಿರುತ್ತಾರೆ. ನವ್ಯಕವಿ ಹಾಗೂ ಒಳ್ಳೆಯ ಕಥೆಗಾರರು, ವಿಮರ್ಶಕರು.

---

1 ಜನನ : ಮೇ, 26, 1939. ಯಾದವಾಡ (ಧಾರವಾಡ ಜಿಲ್ಲೆ)

2 ಜನನ : 1940, ಕಾರಡ್ಕ ಎಂಬ ಹಳ್ಳಿ.

'ಮುಖವಾಡಗಳು', 'ವಠಾರ' ಜನಪ್ರಿಯ ಕೃತಿಗಳು.

ಸವ್ಯಪ್ರಜ್ಞೆಯ ಕವನಕ್ಕೆ ಒಂದು ಉದಾಹರಣೆ—

'ತದೇಕಚಿತ್ತದಿಂದ ಎಲಾ ಯುವಕ ನೀನು
ಅದೇನ ನೋಡುತ್ತಿರುವೆ ಗಾಢ ಮಾತಿನ
ಮೀನ ಹೆಜ್ಜೆಗಳನ್ನೋ ಅಥವಾ
ನೀನು ಪ್ರೀತಿಸುವ ಹೆಣ್ಣಿನ ನಿಗೂಢ
ಒಳ ದಾರಿಗಳನ್ನೊ?
ತಳಮಳಿಸುವ ಸರೋವರದ
ತೆರೆಗಳ ಮೇಲೆ ತೇಲಿ
ಬರುತಿರುವ ಛಿದ್ರ ಚಿತ್ರ
ತಳೆಯುವುದಾವ ರೂಪ
ತಿಳಿಯಲು ನಾನು ನಿನ್ನಂತೆ
ಕಾದಿರುವೆ ಕಾತರದಿಂದ

**ಎಚ್. ಎಸ್. ವೆಂಕಟೇಶಮೂರ್ತಿ**[1] : ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು. ಒಳ್ಳೆಯ ಕವಿಗಳು, ಕಥೆಗಾರರು, ಕಾದಂಬರಿಕಾರರು, ಮಕ್ಕಳ ಸಾಹಿತ್ಯ ಕೂಡ ರಚಿಸಿದ್ದಾರೆ. ಇವರ ಕವನ ಸಂಕಲನ 'ಸಿಂದಾಬಾದನ ಆತ್ಮಕಥೆ'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ (1977) ಲಭಿಸಿದೆ.

ಕೃತಿಗಳು : ತಾಪಿ (ಕಾದಂಬರಿ), ಅಮಾಸುಮರು (ಮಕ್ಕಳ ಕಾದಂಬರಿ), ಪರಿವೃತ್ತ, ಮೊಖ್ತಾ, ಬಾಗಿಲು ಬಡಿವ ಜನ, ಕ್ರಿಯಾಪರ್ವ, ಒಣಮರದ ಗಿಳಿಗಳು, ಸೌಗಂಧಿಕಾ (ಕವಿತೆಗಳು). ಸಿ. ವಿ. ರಾಮನ್, ಹೆಜ್ಜೆ, ಬಾಣಸವಾಡಿಯ ಬೆಂಕಿ, ಆಲ್ಬರ್ಟ್ ಕಾಮೂ, ನೂರು ಮರ, ನೂರು ಸ್ವರ (ಇತರ ಕೃತಿಗಳು).

ಇಂದು ಮುಂಜಾನೆ ಮತ್ತೆ ಎಚ್ಚರಾಯಿತು.
ಹಸುರೆಲೆಯ ಹಕ್ಕಿಗಳು ಹಾರಾಡುತ್ತಿದ್ದವು
ಒಂದು ಕಾಗೆ ತಂಗಳು ಕುಕ್ಕುತ್ತ ನನ್ನತ್ತ ನೋಡುತ್ತಿತ್ತು
ಈ ನೆಲದಲ್ಲಿ ನನ್ನ ಜನ ಯಾರಾದರೂ ಇರಬಹುದೊ....
ಇರಬಹುದೋ
ಕಾಲೆಳೆಯ ತೊಡಗಿದೆ
ಬೀಸುತ್ತಿದ್ದ ಗಾಳಿ...ನಿಂತಿದ್ದ ಮರಗಿಡ, ಒತ್ತಾಡುವ ನಾನು

---

1 ಜನನ : ಜೂನ್ 23, 1944. ಶಿವಮೊಗ್ಗ ಜಿಲ್ಲೆಯ ಹೋದಿಗ್ಗೆರೆಯಲ್ಲಿ. ತಂದೆ–ನಾರಾಯಣಭಟ್ಟ, ತಾಯಿ–ನಾಗರತ್ನಮ್ಮ.

ಅಲಿದೆ
ನನ್ನ ನೆರಳು ಕುಗ್ಗುತ್ತಾ ಹಿಗ್ಗುತ್ತಾ ಕರಗಿ ಹೋಯಿತು

**ದೊಡ್ಡರಂಗೇಗೌಡ**[1] : ಇವರ ಕಾವ್ಯನಾಮ 'ಮನುಜ', ಬೆಂಗಳೂರಿನ ಎಸ್.ಎಲ್.ಎನ್. ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಬಹು ಜನಪ್ರಿಯ ಕವಿ. ಹೆಸರಾಂತ ಚಲನಚಿತ್ರ ಸಾಹಿತಿ. 'ಕಣ್ಣು ನಾಲಿಗೆ ಕಡಲು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ (1972).

ಇತರ ಕೃತಿಗಳು : ಜಗುಲಿ ಹತ್ತಿ ಇಳಿದು, ನಾಡಾಡಿ, ಮುಂತಾದವುಗಳು.

ಬವಣೆ ಬೆಟ್ಟ ಮೇಲೆ ಬಿದ್ದಾಂಗ
ಮನಸ್ಸಿನೊಳಗೆ ದುಃಖ ಹೊಳೆ ಹರಿಯುತ್ತೆ ಸರಾಗ
ಕಂಕಲು ಭಾರ ಕರುಣೆ ಪೂರದತ್ತ
ದೃಷ್ಟಿ ಹೊರಳಿಸುತ್ತೆ
ಬದುಕಿಗೆ ಅಚ್ಚು ಕನಸು ಒಡ್ಡಿಕೊಳ್ಳುವುದೇ ಹೀಗೆ
ಕ್ಷಣಕ್ಷಣವೂ ಮುಳ್ಳಿನ ಮೊನೆ
ಮಾತು ಹಿಂಸೆ ಮೌನ ತಣ್ಣನೆ ಇರಿತ
ನಡೆದರೆ ಸಲೀಸು ಹಾದಿ ಕೂಡ ಕಂದರವಾಗಿ
ಬೆಳಕು ಕತ್ತಲೆಯೊಳಗೆ ಜೀರ್ಣವಾಗಿ
ನಾಲಿಗೆ ಒಣಗಿ ದಣಿವು–ಕಂಠ ಸೆಟೆದು ಕೊಳ್ಳುತ್ತೆ
('ಆರ್ತಗೀತ' ಕವನದಿಂದ)

**ಬಿ. ಆರ್. ಲಕ್ಷ್ಮಣರಾವ್**[2] : ಒಳ್ಳೆಯ ಕವಿಗಳು, ಕತೆಗಾರರು ಹಾಗೂ ವಿಮರ್ಶಕರು.

ಇದರ 'ಲಿಲ್ಲಿ ಪುಟ್ಟಿಯ ಹಂಬಲ' ಕವನ ಸಂಗ್ರಹಕ್ಕೆ 1981ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಇವರ ನವ್ಯ ಪ್ರಜ್ಞೆಯ ಕಾವ್ಯಕ್ಕೆ ಒಂದು ಉದಾಹರಣೆ—

ನನ್ನ ಮನೆಯಲ್ಲಿ
ಕಾಮಧೇನುವಿಲ್ಲ. ಕಲ್ಪವೃಕ್ಷವಿಲ್ಲ
ರಂಭೆ ಊರ್ವಶಿಯರಿಲ್ಲ

1 ಜನನ : ಫೆಬ್ರವರಿ 7, 1946, ತುಮಕೂರು ಜಿಲ್ಲೆ 'ಕುರುಬರ ಹಳ್ಳಿ'. ತಂದೆ–ರಂಗೇಗೌಡ. ತಾಯಿ–ಅಕ್ಕಮ್ಮ.

2 ಜನನ : ಸೆಪ್ಟಂಬರ್ 9, 1947. ಶಿಡ್ಲಘಟ್ಟ ತಾಲ್ಲೂಕಿನ 'ಚೀಮಂಗಲ'ದಲ್ಲಿ.

ಕೆಣಕಿ ಕಾಡುವ ಶತ್ರುವಿಲ್ಲ
ಅಂತರಂಗದ ಮಿತ್ರನಿಲ್ಲ
ದೆವ್ವವಿಲ್ಲ ದೇವಿಯಿಲ್ಲ
ಕ್ರೀಡೆಯಿಲ್ಲ ಪೀಡೆಯಿಲ್ಲ
ಎಂದೆಲ್ಲ
ನನಗನ್ನಿಸಿಯೇ ಇಲ್ಲ
ನನಗೆ
ಹೆಂಡತಿಯಿದ್ದಾಳೆ

ಇವರ ಇತರ ಕೃತಿಗಳು : ಗೋಪಿ ಮತ್ತು ಗಾಂಡಲೀನ, ಗೆಸ್ಟರ್, ಟುವಟಾರ ಮುಂತಾದವುಗಳು.

ಕನ್ನಡ ಕವನಗಳ ರಚನಾ ಕ್ಷೇತ್ರದಲ್ಲಿ ಹೆಸರಿಸಬೇಕಾದ ಕವಿಗಳು. ಅರವಿಂದ ನಾಡಕರ್ಣಿ[1] ಜಯಂತಕಾಯ್ಕಿಣಿ[2] ಸಿಂಪಿ ಲಿಂಗಣ್ಣ[3] ಸೋಮಶೇಖರ ಇಮ್ರಾಪೂರ[4] ಜಯ ಸುದರ್ಶನ[5] ಸೇಡಿಯಾಪು ಕೃಷ್ಣಭಟ್ಟ[6] ಚೆನ್ನಣ್ಣ ವಾಲೀಕಾರ[7] ಕೃಷ್ಣ ಆಲನಹಳ್ಳಿ[8]

---

1 ಜನನ : ಜನವರಿ 1, 1931, ಉತ್ತರ ಕನ್ನಡ ಜಿಲ್ಲೆಯ ಕುಮಟಾ. 'ಆತ್ಮ ಭಾರತ' ಕೃತಿಗೆ (1980) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಸಂದಿದೆ. ಇತರ ಕೃತಿಗಳು : ಕಾವ್ಯಾರ್ಪಣ, ಜರಾಸಂಧ ನಗರಾಯಣ ಮುಂತಾದವುಗಳು.

2 ಜನನ : ಫೆಬ್ರವರಿ 24, 1955. 'ರಂಗದಿಂದೊಂದಿಷ್ಟು ದೂರ' 1974ರ ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

3 ಇವರ 'ಶ್ರುತಾಶ್ರುತ' ಕವನ ಸಂಗ್ರಹಕ್ಕೆ (1968) ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ.

4 ಇವರ ಕಾವ್ಯ ಸಂಗ್ರಹ 'ಗಂಡ ಹೆಂಡತಿ ಜಗಳ ಗಂಧ ತೀಡಿದ್ಹಾಂಗ' ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ (1971).

5 ಇವರ ಕೃತಿ : 'ಇಲ್ಲದ್ದು' ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. ಈ ಕವಿಯ ನಿಜ ಹೆಸರು, ಜಿ. ಎಸ್. ಶಿವಪ್ರಕಾಶ್.

6 'ಚಂದ್ರ ಖಂಡ ಮತ್ತು ಕೆಲವು ಸಣ್ಣ ಕಾವ್ಯಗಳು' ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದಿದೆ (1968).

7 ಇವರ ಕೃತಿ : 'ಕರಿತೆಲಿ ಮಾನವನ ಜೀಪದ' 1973ರ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದಿದೆ.

8 'ಮಣ್ಣಿನ ಹಾಡು' ಕವನ ಸಂಗ್ರಹ ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ (1966).

ಎಚ್. ಎಸ್. ಶಿವಪ್ರಕಾಶ್[9], ಆರ್. ಸಿ. ಭೂಸನೂರಮಠ[10], ರಾಮದಾಸ್, ವಸಂತಕುಮಾರ ಪೆರ್ಲ, ಸುಂದರ ನಾಡಕರ್ಣಿ, ಎಂ. ಎನ್. ವ್ಯಾಸರಾವ್, ವಿನಾಯಕ, ಕೇಶವಭಟ್ಟ, ಬಿ. ಎನ್. ಮಲ್ಲೇಶ್. ನಾಗತಿಹಳ್ಳಿ ಚಂದ್ರಶೇಖರ್, ಎಂ. ವ್ಯಾಸ, ಶೂದ್ರ ಶ್ರೀನಿವಾಸ್, ಅಬ್ದುಲ್ ಮಜೀದ್ ಖಾನ್, ರಾಘವೇಂದ್ರ ಇಟಗಿ, ಚಿಕ್ಕವೀರಯ್ಯ, ಸಣ್ಣಗುಡ್ಡಯ್ಯ, ಬುದ್ಧಣ್ಣ ಹಿಂಗಮಿರೆ, ಸುಬ್ರಾಯ ಚೊಕ್ಕಾಡಿ. ರಾಮಚಂದ್ರ ಪೈ, ವೈದೇಹಿ, ಗಾಯತ್ರಿ, ಮಾಲತಿ ಪಟ್ಟಣ ಶೆಟ್ಟಿ, ಎಂ. ಎನ್. ಸುಮಿತ್ರಾ, ಭಾಗೀರಥಿ ಹೆಗಡೆ, ರೇಖಾ ಕಾಖಂಡಕಿ, ಗೀತಾ ದೇಸಾಯಿ, ಶಶಿಕಲಾ ವಸ್ತ್ರದ, ಕುಲಶೇಖರಿ (ಉಷಾದೇವಿ), ವಸಂತಿಚಂದ್ರ, ಎಲ್. ಜಿ. ಸುಮಿತ್ರ ಮುಂತಾದವರು ಹಲವು ಮಂದಿ ಇದ್ದಾರೆ. ಇವರೆಲ್ಲರ ವಿಷಯವನ್ನು ಮತ್ತೊಮ್ಮೆ ಹೇಳುತ್ತೇನೆ. ಇತ್ತೀಚೆಗೆ ಸುಧಾ, ತರಂಗ ಮುಂತಾದ ಪತ್ರಿಕೆಗಳಲ್ಲಿ ಅಚ್ಚಾದ ಕೆಲ ಕವಿಗಳ ಕಾವ್ಯದ ತುಣುಕುಗಳನ್ನು ನಾವು ಮೆಲುಕುಹಾಕೋಣ." ರಾಯರು ಡೈರಿತೆಗೆದು ಓದಲು ಪ್ರಾರಂಭಿಸಿದರು.

**'ಸುಬ್ರಾಯ ಚೊಕ್ಕಾಡಿ'**ಯವರ 'ಮಗು ಮಲಗಿದೆ' ಕವನದಿಂದ—

ಮಗು ಮಲಗಿದೆ ಬೀದಿಯ ಬದಿಯಲಿ
ಕನವರಿಸುತ್ತಾ
ಆಕಾಶರಾಯನು ಸುರಿಸಿದ್ದಾನೆ
ಬಿಸಿಲಿನ ಮೊತ್ತ
ಬಿಸಿಯೇರಿದ ಭೂಮಿಗೊ_ಈ ಮಗುವನು ಮೇಲಕೆ
ಎಸೆದರೆ ಪುಳಕ
ಗಗನಕೊ–ಕಿರಿಜಾಮದ ಕೆಳಕ್ಕೆ
ತಳ್ಳಲು ತವಕ

**ಸುಂದರ ನಾಡಕರ್ಣಿ**ಯವರ 'ದಿವಸ' ಕವನದಿಂದ—

ನಮ್ಮೂರ ಬೆಳಗು
ನಿದ್ದೆ ತಳೆದೆದ್ದ ಕೂಸಿನ ಆಕಳಿಕೆ
ಇನ್ನೂ ತೊಟ್ಟಿಲಲ್ಲಿಯ ಕಾಲು ಬಡಿತಕ್ಕೆ

---

9 'ಮಳೆ ಬಿದ್ದ ನೆಲದಲ್ಲಿ' ಕವನ ಸಂಗ್ರಹ 1982ರ ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದಿದೆ.

10 ಇವರ ಕೃತಿ: 'ಜೇಂಗೊಡ' ಕಾವ್ಯ ಕ್ಷೇತ್ರದಲ್ಲಿ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ (1966)

ನೆಲಕೆಲ್ಲ ಶೂ–ಶೂ ಸಗಣಿ ಲೇಪನ ಬಳಿದು
ಮಿಂದು ಎದ್ದಂತಹ ಒನಪು
ಹೂವು ದೇವರ ಮುಡಿಗೆ
ನೈವೇದ್ಯ ಮನೆಗೆ
……………………………

ವೈದೇಹಿಯವರ 'ಹಾಡುವುದೆಂದರೆ' ಕವನದಿಂದ—

ಹಾಡು ಹೇಳಲು ಏಕೆ ಶಬ್ದದಲಂಕಾರ
ಹಾಡುವುದೇ ಹಕ್ಕಿರಾಗ ಪ್ರಸ್ತಾರದನುಸಾರ?
ಭಾವಕೋಶವ ಒಡೆದು ಸ್ವರ ಹೊಮ್ಮಿದಾಗ
ಅದುವೆ ಹಾಡಾಗುವುದು ಹೂವಿನಂತೆ

'ಅಬ್ದುಲ್ ಮಜೀದ್ ಖಾನ್' ರವರ 'ವಾಸ್ತವ' ಕವನದಿಂದ—

ನಮ್ಮ ಭಾವಿಯಿಂದ ಈ ಬರಗಾಲದಲ್ಲಿ
ಅಪರಿಚಿತರೂ ಸಹ ಸಾವಿರಾರು ಬಿಂದಿಗೆ
ಬಕೆಟ್ಟು ಡ್ರಮ್ಮು ತುಂಬಿ
ನೀರು ಖಾಲಿ ಮಾಡಿದ್ದಾರೆ ಆದರೆಂದೂ
ಜಾತಿ ಮತ ಕುಲ ಗೊತ್ರಗಳ
ಪ್ರಸ್ತಾಪವಿಲ್ಲ ಮಡಿವಂತಿಕೆಯ ಮಾತಿಲ್ಲ
ಪಾತ್ರೆಗಳ ಗಾತ್ರ ಗ್ಯಾರಂಟಿ
ಮಾದರಿ ಬಾಳಿಕೆ ಬೆಲೆಗಳ ಹೆಮ್ಮೆ ಹರಟೆಗಳೂ
ಇಲ್ಲ………

ಮಾಲತಿ ಪಟ್ಟಣಶೆಟ್ಟಿಯವರ 'ಗಜಲ್' ಕವನದಿಂದ—

ನೀಲ ವೃಕ್ಷಗಳಲ್ಲಿ ಮೊಗವಿಟ್ಟ ಚಂದಿರನು
ಕರೆದು ತಂದನು ನೆನಪು ಬೆಳುದಿಂಗಳಲ್ಲೆಲ್ಲೂ
ನೆರಳು ಕೊರಳುಗಳಲ್ಲಿ ಬೆಳಕು ಬೆರಳಾಡುತಿದೆ
ನಿನ್ನನಪ್ಪುವ ಮನದಿ ಬೆಳುದಿಂಗಳೆಲ್ಲಲ್ಲೂ

ಎಂ. ಎನ್. ವ್ಯಾಸರಾವ್ ರವರ 'ಉಡುಗೊರೆ' ಕವನದಿಂದ—

ತೆಗೆದಿಕೋ ಗೆಳತಿ
ಇದೇ ನನ್ನ ಉಡುಗೊರೆ
ಈಗಷ್ಟೇ ನನ್ನ ಹೃದಯವನ್ನೇ

ಕೊಯ್ದು ತಂದಿರುವೆ
ಆಲಿಸು ಕೊಂಚ ಆದರ ಬಡಿತ
ರಕ್ತ ಸಿಕ್ತ ದಾಳದಲ್ಲಿ
ಹಸಿ ಹಸಿಯ ಕೆಂಪಿನಲ್ಲಿ
ಹೇಗೆ ಪುಟಿಯುತ್ತಿದೆ ನಿನ್ನ ಹೆಸರ

ಶೂದ್ರ ಶ್ರೀನಿವಾಸ ರವರ 'ಒಂದಿಷ್ಟು ಬಿಡಿ ಶಬ್ದಗಳು' ಕವನದಿಂದ—

ಶಬ್ದಗಳಿಗೆ ಸಿಕ್ಕಿ ನರಳುವ ಮಾತು
ತೂಗುಯ್ಯಾಲೆಯಲಿ ಪಿಸುಗುಟ್ಟುವ
ಚಂದದ ರೆಕ್ಕೆ ಪುಕ್ಕಗಳರಡಿ ಬೆಚ್ಚನೆಯು
ಮನಸ್ಸಿನಲಿ ಪಾಕಗೊಂಡ ಏರಿಳಿತಗಳು

ರೇಖಾ ಕಾಖಂಡಕಿಯವರ 'ಇದೊಂದು ಪದ ಸಂಗ' ಕವನದಿಂದ—

ಎಲ್ಲಿಯಾದರೂ ಕೇಳಿದ್ದೀರಾ
ಎಂಥ ವಿಷಯ
ಮಕ್ಕಳೇ ತಾಯಿಯನು ಹರಿದು
ತಿನ್ನುವ ಕಥೆಯಾ
ಕೇಳಿ, ನನಗೊಬ್ಬ ಮಗನಿದ್ದ
ತುಂಡು ಬಟ್ಟೆಯುಟ್ಟು ನನ್ನ
ಮಾನವ ಕಾಯ್ದಿದ್ದ
ಆದರೀಗ !
ಕೋಟಿ ಮಕ್ಕಳನೇ ಪಡೆದು
ಬಂಜೆಯಾಗಿದ್ದೇನೆ ನಾನು
..............................
ಸದ್ದಿಲ್ಲದೆ ಉಸಿರಾಡುತಿಹೆನು
ಯಾಕೆ ?
ಯಾಕೆ ಗೊತ್ತೆ?
ನಾನು ಭಾರತಿ
ಭಾರತದ ನಾರಿ

ಗೀತಾ ದೇಸಾಯಿಯವರ 'ಭಾಮತಿಯಂಥ' ಕವನದಿಂದ—

ನಾನು ಭಾಮತಿ
ಊಂ, ಹೂಂ ಲೆತ್ತಮನಾಡಿ ಸ್ತೋತ

ಕರ್ಣನ ಕಂಠ ಹಾರವನೆಳೆದ
ಭಾನುಮತಿಯಲ್ಲ ಮತ್ತೆ
ಇತ್ತೀಚೆ ಪ್ರಸಿದ್ಧಿ ಪಡೆದ
ಮಾಟ ಮಂತ್ರಗಳ ಭಾನುಮತಿಯೂ
ನಾನಲ್ಲ
ನನ್ನ ಹೆತ್ತವರಿಟ್ಟ ಹೆಸರೇ
ಭಾಮತಿ (ಪ್ರಕಾಶವತಿ)
........................

## (ಆ) ಕತೆಗಾರರು–ಕಾದಂಬರಿಕಾರರು

ಪಾನಕ ಕುಡಿದ ವ್ಯಾಸರಾಯರು ಪಂಚೆಯ ಅಂಚಿನಿಂದಲೇ ಬಾಯಿ ಒರೆಸಿ ಕೊಂಡು ಮಾತನ್ನು ಮುಂದುವರಿಸಿದರು.

"ಹೊಸಗನ್ನಡ ಸಾಹಿತ್ಯ ಸಂಪನ್ನಗೊಳಿಸಿರುವ ಕೆಲ ಕವಿಗಳ ಸೂಕ್ಷ್ಮ ಪರಿಚಯ ಇದುವರೆಗೆ ಮಾಡಿಸಿದ್ದೇನೆ. ಇನ್ನೂ ಎಷ್ಟೋ ಜನ ಪ್ರಮುಖರೇ ಉಳಿದು ಹೋಗಿ ದ್ದಾರೆ. ಅವರೆಲ್ಲರ ಪರಿಚಯ ಇನ್ನೊಮ್ಮೆ ಮಾಡಿಸುತ್ತೇನೆ. ಈಗ ಹೊಸಗನ್ನಡ ಸಂಪನ್ನಗೊಳಿಸಿರುವ, ಗೊಳಿಸುತ್ತಿರುವ ಕೆಲ ಕತೆಗಾರರು ಹಾಗೂ ಕಾದಂಬರಿಕಾರರ ಪರಿಚಯ ಮಾಡಿಕೊಡುತ್ತೇನೆ. ಈ ದಿಸೆಯಲ್ಲಿ ನಾವು ಪ್ರಥಮತಃ ನೆನೆಯಬೇಕಾದ ವ್ಯಕ್ತಿಗಳೆಂದರೆ ದಿವಂಗತ ಬಿ, ವೆಂಕಟಾಚಾರ್, ಕೆರೂರು ವಾಸುದೇವಚಾರ್ಯ, ಎಂ. ಎಸ್. ಪುಟ್ಟಣ್ಣ, ಗಳಗನಾಥ, ಮಾಸ್ತಿ, ವೀರಕೇಸರಿ ಸೀತರಾಮಶಾಸ್ತ್ರಿ, ತಿ. ತಾ, ಶರ್ಮ ಮುಂತಾದವರುಗಳು. ಇವರುಗಳ ವಿಷಯವನ್ನು ನಾನು ಆಗಲೇ ಪರಿಚಯಿಸಿದ್ದೇನೆ. ಈಗ ಈ ಪ್ರಕಾರದಲ್ಲಿನ ಉಳಿದ ಹೆಸರಾಂತ ಸಾಹಿತಿಗಳ ದರ್ಶನ ಮಾಡೋಣ,

**ನಂಜನಗೂಡು ತಿರುಮಲಾಂಬಾ*** : ಶಾಲೆಯಲ್ಲಿ ಓದುಬರಹ ಕಲಿತದ್ದು ಅಲ್ಪವಾದರೂ ಸಾಂಸಾರಿಕ ಪಾಠ ಶಾಲೆಯಲ್ಲಿ ಬವಣೆಗಳ ಬಿಸಿಲಿನಲ್ಲಿ ಒಣಗಿ ಬಳಲಿ ಕಲಿತದ್ದು ಅಪಾರ. 10ನೇ ವಯಸ್ಸಿನಲ್ಲಿ ಮದುವೆ ಆಗಿ 14ನೇ ವಯಸ್ಸಿನಲ್ಲಿ

---

* ಜೀವಿತ ಕಾಲ : 25-3-1887 ರಿಂದ 31-8-1982. ಮೈಸೂರು ಜಿಲ್ಲೆ ನಂಜನ ಗೂಡು. ತಂದೆ–ವೆಂಕಟಕೃಷ್ಣ ಅಯ್ಯಂಗಾರ್, ತಾಯಿ–ಅಲಮೇಲಮ್ಮ.

ವೈಧವ್ಯ ಲಭಿಸಿದ ನಂತರ ತಂದೆಯ ಪ್ರೋತ್ಸಾಹದಿಂದ ಮನೆಯಲ್ಲೇ ವಿದ್ಯಾಭ್ಯಾಸ ಕಲಿಯಲು ಪ್ರಾರಂಭ. ಛಲದಿಂದ ಕನ್ನಡ, ತೆಲುಗು, ತಮಿಳು ಭಾಷೆಗಳ ಕಲಿಕೆ. ಸಾಹಿತ್ಯ ಆಕೆಯ ಬಾಳ ಸಂಗಾತಿಯಾಯಿತು. ಪತ್ರಿಕೆಗಳಿಗೆ ಲೇಖನ, ಪ್ರಬಂಧ, ಕಾದಂಬರಿ ಬರೆದರು. ಪತ್ರಿಕೆ ನಡೆಸುವ ಸಾಹಸ ಮಾಡಿದರು. 'ಕರ್ನಾಟಕ ನಂದಿನಿ', 'ಸನ್ಮಾರ್ಗ ದರ್ಶಿ', ಹಲವು ವರ್ಷ ನಡೆದು ನಿಂತು ಹೋದವು. 'ಸತಿ ಹಿತೈಷಿಣಿ' ಇವರು ನಡೆಸಿದ ಗ್ರಂಥ ಮಾಲೆ. 1916ರಲ್ಲಿ ರಚಿಸಿದ ಪ್ರಥಮ ಕೃತಿ 'ಸದಾಚಾರ' ಲೇಖನ ಬಹುಮಾನ ಗಳಿಸಿತು. ಇದೇ ಸ್ಫೂರ್ತಿಯಿಂದ ಮುಂದೆ ಅನೇಕ ಕೃತಿಗಳನ್ನು ರಚಿಸಿದರು. 1917 ರಿಂದ ಸುಮಾರು 2 ದಶಕಗಳವರೆಗೆ ಅನೇಕ ಗ್ರಂಥಗಳಿಗೆ ಮೈಸೂರು, ಮದರಾಸು ಮತ್ತು ಬೊಂಬಾಯಿ ಸರಕಾರಗಳಿಂದ ಬಹುಮಾನಗಳು ದೊರೆತಿದ್ದಲ್ಲದೆ ಬಹಳಷ್ಟು ಕೃತಿಗಳು ಶಾಲಾ–ಕಾಲೇಜುಗಳ ಪಠ್ಯ ಪುಸ್ತಕಗಳಾದವು 'ಸುಶೀಲೆ' ಪ್ರಥಮ ಕಾದಂಬರಿ. 7½ ಸಹಸ್ರ ಪ್ರತಿಗಳು ಮಾರಾಟಗೊಂಡು ವಿಕ್ರಮ ಸಾಧಿಸಿದೆ.

ಇತರ ಕೃತಿಗಳು : ನಭಾ, ವಿದ್ಯುಲ್ಲತಾ, ವಿರಾಗಿಣಿ, ದಕ್ಷಕನ್ಯಾ, ವಿಕ್ರಮ, ಮಾತೃ ನಂದಿನಿ, ಪೂರ್ಣ ಕಲಾ. ನಿಳಾ ಕಾಂತ. ವಿವೇಕೋದಯ, ಗಿರಿಜಾಬಾಯಿ, ರವಿವರ್ಮ, ಮಣಿ ಮಾಲ (ಕಾದಂಬರಿಗಳು), ಚಂದ್ರವದನ, ಭಾರ್ಗವ ಗರ್ವಭಂಗ. ರಮಾನಂದ (ನಾಟಕಗಳು); ಭದ್ರಗೀತಾವಳಿ, ಸುಮುಖಿ ವಿಜಯ (ಪದ್ಯ ಸಂಗ್ರಹ ಗಳು) ಇವುಗಳಲ್ಲದೆ ಹಲವಾರು ಪ್ರಬಂಧ ಸಂಗ್ರಹಗಳೂ ಸಹ ಹೊರಬಂದಿವೆ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 30. ಬೀಗರ ಹಾಡು, ಉರಟಣೆ ಹಾಡು ಮುಂತಾದವುಗಳನ್ನು ಸಹ ರಚಿಸಿದ್ದಾರೆ.

1979 – 80ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, 1980 – 81ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

**ದೇವುಡು ನರಸಿಂಹಶಾಸ್ತ್ರಿ*** : ಎಂ.ಎ. ನಂತರ ಉಪಾಧ್ಯಾಯರಾಗಿ, ಮಕ್ಕಳ ಪತ್ರಿಕೆಯ ಸಂಪಾದಕರಾಗಿ ಕನ್ನಡ ಸಾರಸ್ವತ ಲೋಕಕ್ಕೆ ಅಪಾರ ಸೇವೆ ಮಾಡಿದ್ದಾರೆ. ಕತೆಗಾರರಾಗಿ, ಕಾದಂಬರಿಕಾರರಾಗಿ, ಮಕ್ಕಳ ಸಾಹಿತ್ಯ ರಚನಕಾರರಾಗಿ ಹಾಗೂ ನಾಟಕಕಾರರಾಗಿ ಬಹುಮುಖ ಪ್ರತಿಭೆಯನ್ನು ಮೆರೆಸಿದ್ದಾರೆ.

---

* ಜೀವಿತಕಾಲ : (ಡಿಸೆಂಬರ್ 27, 1897–ಅಕ್ಟೋಬರ್ 25, 1962). ಜನನ: ಮೈಸೂರು. ತಂದೆ–ದೇವುಡು ಕೃಷ್ಣಶಾಸ್ತ್ರಿ, ತಾಯಿ–ಸುಬ್ಬಮ್ಮ. ಪುಟ 21, 32, 53 ನೋಡಿ.

ಕೃತಿಗಳು ; ಮಹಾಬ್ರಾಹ್ಮಣ, ಮಹಾಕ್ಷತ್ರಿಯ, ಮಹಾದರ್ಶನ, ಮಹಾ ಸನ್ಯಾಸಿ, ಮಯೂರ (ಕಾದಂಬರಿಗಳು). 'ಮಹಾಕ್ಷತ್ರಿಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಸಂದಿದೆ. ವಿಚಿತ್ರ ಶಿಕ್ಷೆ (ಮಕ್ಕಳ ನಾಟಕ); ಬುದ್ಧಿಯ ಕತೆಗಳು, ದೇಶಾಂತರದ ಕಥೆಗಳು, ಅವಸರ ಮತ್ತು ಇತರ ಕಥೆಗಳು, ಕಂದನ ಕಥೆ ಗಳು, ಕನ್ನಡಿಯ ಕಥೆ, ಚಾಮುಂಡೇಶ್ವರಿ ಮತ್ತು ಇತರ ಕಥೆಗಳು, ಬಂಜೆಯ ಮಗ ಮತ್ತು ಇತರ ಕಥೆಗಳು, ಗಣೇಶನ ಕಥೆ, ಭೀಮಸೇನ ಬೆಕ್ಕು, ಹೊಸಗನ್ನಡ ಪಂಚ ತಂತ್ರ, ಕಥಾ ಸರಿತ್ಸಾಗರ, ಕುಮಾರ ಕಾಲಿದಾಸ, ಬಾಲ ರಾಮಾಯಣ, ಬಾಲ ಭಾಗವತ (ಶಿಶು ಸಾಹಿತ್ಯ).

'ನಮ್ಮ ಪುಸ್ತಕ'ದ ಸಂಪಾದಕರಾಗಿ, 'ಮಕ್ಕಳ ಪುಸ್ತಕ ಭಂಡಾರ'ದ ಸ್ಥಾಪಕ ರಾಗಿ ಇವರು ಶಿಶು ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಚಿರಸ್ಮರಣೀಯ. ದೇವುಡು ರವರು ಒಳ್ಳೆಯ ಕಲಾವಿದರೂ ಆಗಿದ್ದರು. ಹಲವು ನಾಟಕಗಳಲ್ಲದೆ ಸಿನಿಮಾದಲ್ಲೂ ಸಹ ಪಾತ್ರವಹಿಸಿ ಯಶಸ್ಸುಗಳಿಸಿದ್ದರು.

**ಕೆ. ವಿ. ಅಯ್ಯರ್**[1] : ಕೋಲಾರದ ವೆಂಕಟೇಶ ಅಯ್ಯರ್ ಸ್ವಶಕ್ತಿಯಿಂದ ಪ್ರಸಿದ್ಧಿಗೆ ಬಂದ ಪ್ರತಿಭಾವಂತ ಸಾಹಿತಿ. ಶಾಲೆಯಲ್ಲಿ ಓದಿದ್ದು ಎಸ್.ಎಸ್.ಎಲ್.ಸಿ. ಅಭ್ಯಸಿಸಿದ್ದು ಅಂಗಸಾಧನೆ. ಸಿದ್ಧಿ ಪಡೆದದ್ದು ಸಾಹಿತ್ಯ ರಚನೆಯಲ್ಲಿ. ನಾಟಕ ಕಲೆ ಯಲ್ಲೂ ಇವರಿಗೆ ಅತೀವ ಆಸಕ್ತಿ. 'ರವಿ ಕಲಾವಿದರು' ನಾಟಕ ಸಂಸ್ಥೆಯ ಅಧ್ಯಕ್ಷ ರಾಗಿದ್ದರು. ಕೈಲಾಸಂ ಇವರ ಆಪ್ತಸ್ನೇಹಿತ ಎಂದ ಮೇಲೆ ನಾಟಕದಲ್ಲಿ ಆಸಕ್ತಿ ಮೂಡದೆ ಇರಲು ಸಾಧ್ಯವೇ ಇಲ್ಲ. ಇವರ ಸಾಹಿತ್ಯ ಕೃತಿಗಳು ಸಂಖ್ಯೆಯಲ್ಲಿ ಕೆಲವೇ ಆದರೂ ಗುಣದಲ್ಲಿ ಮೇಲ್ಮಟ್ಟದವುಗಳು.

ಇವರ ಕಾದಂಬರಿಗಳಾದ 'ಶಾಂತಲಾ', 'ರೂಪದರ್ಶಿ', ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕಗಳಾಗಿ ಅಂಗೀಕರಿಸಲ್ಪಟ್ಟಿದ್ದು ಅಪಾರ ಯಶಸ್ಸು ಗಳಿಸಿದ್ದವು.

ಇತರ ಕೃತಿಗಳು : ಸಮುದ್ಯತ, ದೆವ್ವದ ಮನೆ.

ಅಂಗಸಾಧನೆ ಬಗ್ಗೆ ಇಂಗ್ಲೀಷಿನಲ್ಲಿ ನಾಲ್ಕು ಪುಸ್ತಕಗಳನ್ನು ರಚಿಸಿದ್ದಾರೆ.

**ಬೆಟಗೇರಿ ಕೃಷ್ಣಶರ್ಮ**[2] : ಇವರು ಹುಟ್ಟಿದ್ದು ಹಳ್ಳಿಯ ಸಂಪ್ರದಾಯ

---

1 ಜೀವಿತ ಕಾಲ. (ಕ್ರಿ.ಶ. 1898-1980) ಕೋಲಾರ ಜಿಲ್ಲೆಯ ದೇವರಾಯ ಸಮುದ್ರ.

2 ಜೀವಿತ ಕಾಲ : (ಕ್ರಿ.ಶ. 1900-1982) ಗೋಕಾಕ್ ತಾಲ್ಲೋಕಿನ ಬೆಟಗೇರಿ; ತಂದೆ-ಶ್ರೀನಿವಾಸರಾವ್. ತಾಯಿ-ರಾಧಾಬಾಯಿ.

ಕಾವ್ಯನಾಮ : 'ಆನಂದ ಕಂದ', ಕರ್ನಾಟಕ ವಿಶ್ವವಿದ್ಯಾಲಯ 'ಡಿಲಿಟ್' ನೀಡಿದೆ. ಮಾತೃಭೂಮಿ, ಸ್ವಧರ್ಮ, ಜಯ ಕರ್ನಾಟಕ ಪತ್ರಿಕೆಗಳ ಸಂಪಾದನೆಯನ್ನೂ ಮಾಡಿದ್ದಾರೆ.

ಮಂತರ ಘಟನೆಯಲ್ಲಿ. ತಾಯಿಯ ಸಾಹಿತ್ಯ ಪ್ರೇಮ, ತಂದೆಯ ಸಂಗೀತ ಜ್ಞಾನ, ಮನೆಯಲ್ಲಿ ಹಾಗೂ ಊರಿನಲ್ಲಿ ನಡೆಯುತ್ತಿದ್ದ ಪೂಜೆ ಪುರಸ್ಕಾರ, ಹಬ್ಬ ಹರಿದಿನಗಳಲ್ಲಿ ನಡೆಯುತ್ತಿದ್ದ ಹಾಡು, ಕೀರ್ತನೆ, ಕೋಲಾಟ, ಬಯಲಾಟ, ಲಾವಣಿ ಪದಗಳು ಇದರ ಮೇಲೆ ಬಹಳ ಪರಿಣಾಮ ಬೀರಿದ್ದವು. ಇವರು ಯಾವ ವಿಶ್ವವಿದ್ಯಾನಿಲಯದಿಂದಲೂ ಪದವಿ ಗಳಿಸದೆ ಇದ್ದರೂ ಕಾವ್ಯಾನಂದ (ನರಸಿಂಹಾಚಾರ್ಯ ಪುಣೇಕರ) ಅವರಿಂದ ಕಲಿತ ಸಂಸ್ಕೃತ ಪಾಠ, ಹಳಗನ್ನಡ ಸಾಹಿತ್ಯಾಭ್ಯಾಸ ಇವರ ಪ್ರತಿಭೆ ಉಜ್ವಲಗೊಳಿಸುವ ಕೆಲಸದಲ್ಲಿ ನೆರವು ನೀಡಿದ್ದವು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಹಲವು ಜನರ ಗೆಳೆತನ ಪಡೆದುದಲ್ಲದೆ ವಿವಿಧ ಭಾಷೆಗಳಲ್ಲಿನ ಉತ್ಕೃಷ್ಟ ಸಾಹಿತ್ಯದ ಪರಿಚಯ ಪಡೆದುಕೊಂಡರು. ಇವರು ಸಾಹಿತ್ಯ ಕ್ಷೇತ್ರದಲ್ಲಿ ಅಡಿ ಇರಿಸಿದುದು ಕವನ ರಚನೆಯಿಂದ. ಹೊರಬಂದಿರುವ ಕವನ ಸಂಗ್ರಹಗಳು; ಮುದ್ದನ ಮಾತು, ಅರುಣೋದಯ, ವಿರಹಿಣಿ, ಒಡನಾಡಿ, ಕಾರ ಹುಣ್ಣಿಮೆ ಹಾಗೂ ನಲ್ ವಾಡುಗಳು ಮುಂತಾದವುಗಳು. 'ನಲ್‌ವಾಡು' ಕವನ ಸಂಗ್ರಹದಲ್ಲಿ ಉತ್ತರ ಕರ್ನಾಟಕದ ಬಯಲು ನಾಡಿನ ಜನರ ನಡೆನುಡಿಗಳು ಜಾನಪದ ಧಾಟಿಯಲ್ಲಿ ಬಹಳ ಸೊಗಸಾಗಿ ಮೂಡಿ ಬಂದಿವೆ.

ಇವರ ಕಥೆ, ಕಾದಂಬರಿಗಳೂ ಬಹಳ ಜನಪ್ರಿಯ. 'ಸಂದರ್ಶನ' ಪ್ರಥಮ ಕಾದಂಬರಿ. 17-18 ವರ್ಷಗಳ ನಂತರ ಬಂದ 'ಅಶಾಂತಿ ಪರ್ವ' ಇನ್ನೊಂದು ಆಕರ್ಷಕ ಕಾದಂಬರಿ 'ಮಗಳ ಮದುವೆ' ಬಹಳ ಜನಪ್ರಿಯಗೊಂಡ ಕಾದಂಬರಿ. 'ಮಾತನಾಡುವ ಕಲ್ಲು', 'ಜಾನಪದ ಜೀವನ', ಪ್ರಮುಖ ಕಥಾ ಸಂಕಲನಗಳು.

ಇವರ ಬಹುಮುಖ ಪ್ರತಿಭೆ ಹೆಚ್ಚು ಪ್ರಕಾಶಗೊಂಡದ್ದು 'ಜಯಂತಿ'ಯ ಸಂಪಾದಕರಾದ ಮೇಲೆ. ಬಹಳ ವರ್ಷ ಯಶಸ್ವಿಯಾಗಿ ನಡೆಸಿದ ಹೆಗ್ಗಳಿಕೆ ಇವರದು. ಇವರಿಗೆ ನಮ್ಮ ರಾಜ್ಯ ಸಾಹಿತ್ಯ ಅಕಾಡೆಮಿಯು 1971ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ದೇವರಾಜ ಬಹದ್ದೂರ್ ಬಹುಮಾನ ಸಹ ಇವರಿಗೆ ಸಂದಿದೆ.

'ರಾಜಯೋಗಿ'. 'ಅಶಾಂತಿ ಪರ್ವ', 'ಮಲ್ಲಿಕಾರ್ಜುನ' ಐತಿಹಾಸಿಕ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಕಾದಂಬರಿಗಳು.

ಇತರ ಕೃತಿಗಳು : ಸಾಹಿತ್ಯ ಸಾಗಿರುವ ದಾರಿ, ಬೀಸುವ ಕಲ್ಲಿನ ಹಾಡುಗಳು, ಮಧ್ಯಮ ವ್ಯಾಯೋಗ, ವೃಚ್ಛಕಟಿಕ, ಆರ್ತನಾದ, ಕನಕದಾಸರ ಕೀರ್ತನೆಗಳು, ಐರಾವತ ನೋಂಪಿ, ಮಕ್ಕಳ ಕಥೆಗಳು. ಕನ್ನಡ ರಾಜ್ಯ ಮುಂತಾದವುಗಳು.

ದಿನೇಶ ಎದ್ದು ನಿಂತ "ತಾತ ಇವೊತ್ಗೆ ಕವಿಚರಿತ್ರೆ ಸಾಕ್ಮಾಡಿ. ನಾಳೆ ಬೆಳಗ್ಗೆ ಪುನಃ ಹೇಳ್ವಿಂತ್ರಿ..."

"ಎಲ್ಗೆ ಹೋಗ್ಬೇಕೋ ನೀನು" ಅಸಮಾಧಾನದಿಂದ ಪ್ರಶ್ನಿಸಿದ ದಿನಕರ.

"ದಹನ ಚಿತ್ರ" ಇದೆ. ಮೂಲೆ ಹೈಸ್ಕೂಲಲ್ಲಿ ಬಾಳ ಚೆನ್ನಾಗಿದೆಯಂತೆ. ನನ್ನ ಸ್ನೇಹಿತ್ನ ಅಣ್ಣ ಪಾರ್ಟು ಮಾಡಿದ್ದಾನಂತೆ" ಯಾರ ಪ್ರತಿಕ್ರಿಯೆಗೂ ಕಾಯದೆ ಓಡಿದ ಹೊರಗೆ.

"ಯಾರ್ದು ಮೇಸ್ಟ್ರೆ ಆ ನಾಟ್ಕ?" ಪ್ರಶ್ನಿಸಿದರು ರಾಯರು. "ಅಜ್ಜಂಪುರದ ಸೀತಾರಾಮ. ಇವರ ಕಾವ್ಯನಾಮ **'ಆನಂದ[1]'** ಸೊರಬ ತಾಲ್ಲೋಕಿಗೆ ಸೇರಿದವರು. ರೇಷ್ಮೆ ಇಲಾಖೆಯಲ್ಲಿದ್ದು ಬಿಟ್ಟು ಮತ್ತೆ ಕೆಲವು ಉದ್ಯಮಕ್ಕೆ ಕೈಹಾಕಿ ಅದರಲ್ಲಿ ಕೈ ಸುಟ್ಟುಕೊಂಡು ಅಂದರೆ ನಷ್ಟವಾಗಿ ಅವನ್ನು ಬಿಟ್ಟು ಕೊನೆಗೆ ಬರವಣಿಗೆ ಹಿಡಿದರು. ಆಳವಾದ ಅಧ್ಯಯನ, ಅನುಭವ ಸಾಹಿತ್ಯದಲ್ಲಿ ಸಿದ್ಧಿ ಪಡೆಯಲು ನೆರವು ನೀಡಿತು. ಕಥೆ, ಕಾದಂಬರಿ, ನಾಟಕ, ಪ್ರಬಂಧ, ಲಘು ಲೇಖನಗಳು 25ಕ್ಕೂ ಹೆಚ್ಚಾಗಿ ಇವರ ಲೇಖನಿಯಿಂದ ರಮ್ಯವಾಗಿ ಹೊರ ಬಂದಿವೆ. ಮುಖ್ಯ ಕೃತಿಗಳು : ಇಸೋಪನ ನೀತಿ ಕಥೆಗಳು, ರಾಬಿನ್ಸನ್ ಕ್ರೂಸೋ, ದಹನ ಚಿತ್ರ, ಮಾಟಗಾತಿ, ಸ್ವಪ್ನ ಜೀವಿ, ಪಕ್ಷಿಗಾನ, ಕೆಲವು ಕತೆಗಳು, ಬೇವು ಬೆಲ್ಲ, ಶಿಲ್ಪಿ ಸಂಕುಲ, ಅಶ್ರುಭಾಷ್ಪ ಜೋಯಿಸರ ಚೌಡಿ, ಆನಂದ ಲಹರಿ, ಐಸನ್ ಹೊ, ಟಾಲ್‌ಸ್ಟಾಯ್ ಆತ್ಮಕಥೆ, ಶಾಲಾ ಉಪಾಧ್ಯಾಯಿನಿಯೊಬ್ಬಳ ದಿನಚರಿ ಮುಂತಾದವುಗಳು. ಡಾ॥ ಜೆಕಿಲ್ ಮತ್ತು ಮಿಸ್ಟರ್ ಹೈಡ್ ಆಧಾರಿತ 'ಪುರುಷಾ ಮೃಗ', ದಿ ವಾಲಿಯಂಟ್ ಆಧಾರಿತ 'ವೀರ ಯೋಧ' ಇತರ ಕೃತಿಗಳು.

ಕನ್ನಡದ ಹೆಮ್ಮೆಯ ವ್ಯಕ್ತಿ ಜ್ಞಾನಪೀಠ ಪ್ರಶಸ್ತಿ ವಿಜೇತ **ಕೋಟದ ಶಿವರಾಮ ಕಾರಂತರು[2].** ಇವರು ಕನ್ನಡ ಸಾಹಿತ್ಯ ಭಂಡಾರಕ್ಕೆ ಇತ್ತಿರುವ ಕೊಡುಗೆ ಅಪಾರ. ಅಮೂಲ್ಯ. ಇವರಷ್ಟು ಕ್ರಿಯಾಪೂರ್ಣ, ಶ್ರದ್ಧಾಪೂರ್ಣ ಬಹುಮುಖ ಸೇವೆಯನ್ನು ಕನ್ನಡದಲ್ಲಿ ಮತ್ತಾರೂ ಮಾಡಿಲ್ಲವೆಂದು ಧೈರ್ಯವಾಗಿ ಹೇಳಬಹುದು. ವ್ಯಕ್ತಿ ಚಿತ್ರ, ಜೀವನ ಕಥೆ, ಪ್ರವಾಸ ಕಥನ, ಕತೆ, ಕಾದಂಬರಿ, ಗೀತ ರೂಪಕ, ನಾಟಕ, ಕವಿತೆ

---

1 ಜೀವಿತ ಕಾಲ : (ಕ್ರಿ.ಶ. 1902 - 1963) ಮೈಸೂರು ಜಿಲ್ಲೆಯ 'ಆನವಟ್ಟಿ' ಹುಟ್ಟಿದ ಸ್ಥಳ.

2 ಜನನ : ಅಕ್ಟೋಬರ್ 10, 1902. ಕಡಲ ತೀರದ 'ಕೋಟ' ಜನ್ಮಸ್ಥಳ. ತಂದೆ–ಶೇಷ ಕಾರಂತ. ತಾಯಿ–ಲಕ್ಷ್ಮಿ. ಇವರ ಕೃತಿಗಳು : ಕಾದಂಬರಿ–44, ನಾಟಕ–16, ಕಥಾ ಸಂಕಲನ–3; ಪ್ರಬಂಧ ಮತ್ತು ಚಿತ್ರಣಗಳು–6; ಕಲೆ–9; ವಿಶ್ವಕೋಶ, ನಿಘಂಟು, ವೈಜ್ಞಾನ ವಿಷಯಗಳು–12, ಕವನ ಸಂಗ್ರಹ–1; ಆತ್ಮಕಥೆ ಮತ್ತು ಜೀವನ ಚರಿತ್ರೆಗಳು–5, ಮಕ್ಕಳ ಸಾಹಿತ್ಯ–25, ಇತರೆ-ಸು. 20, ಒಟ್ಟು ಸು. : 150.

ಹರಟೆ, ಪ್ರಬಂಧ, ವಿಮರ್ಶೆ, ಗ್ರಂಥ ಸಂಪಾದನೆ, ನಿಘಂಟು ರಚನೆ, ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಅವರ ಕ್ರಿಯಾಶಕ್ತಿ ವ್ಯಾಪಿಸಿದೆ. ಕಲೆ ಇವರ ಉಸಿರು. ಇವರ ಎಲ್ಲ ಕೆಲಸಗಳಲ್ಲೂ ಕಲಾಕಾರನ ಕುಶಲತೆ, ಅನುಭವದ ಸ್ಪಷ್ಟತೆ, ಮೋಹಕ ಕುಸುರಿ ಕೆಲಸಗಳನ್ನು ಕಾಣುವುದಲ್ಲದೆ ಇವರದೇ ಆದ ವ್ಯಕ್ತಿತ್ವ ಮೂಡಿರುವುದನ್ನು ಗುರುತಿಸುತ್ತೇವೆ.

'ಕಡಲ ತೀರದ ಭಾರ್ಗವ' ಅವರ ಸ್ನೇಹಿತರು ಕರೆದದ್ದು ವಾಸ್ತವವಾಗಿ ಅವರ ಗುಣ ನಿರೂಪಣೆಯೇ ಆಗಿದೆ. ಕಡಲ ತೀರದ ತಂಪುಗಾಳಿ, ಉಬ್ಬರ ಇಳಿತ, ಅಲೆಗಳ ಭೋರ್ಗರೆತ, ಮುಂಜಾವು, ಸಂಜೆಯ ರಮ್ಯತೆ ಸೂರ್ಯಾಸ್ತದ ನಿತ್ಯ ನೂತನ ಸಿರಿ ಸೊಬಗು ಇವರ ಕೃತಿಗಳಲ್ಲಿ ಮೆರೆಯುತ್ತಿರುವುದನ್ನು ಕಾಣುತ್ತೇವೆ.

ಬಾಲ್ಯದಿಂದಲೇ ಪುಸ್ತಕ ಓದುವುದರಲ್ಲಿ ಆಸಕ್ತಿಯನ್ನು ಬೆಳಸಿಕೊಂಡಿದ್ದ ಕಾರಂತರು ಕಾಲೇಜು ಸೇರಿದ ಮೇಲೆ ಗಾಂಧೀ ಭಕ್ತರಾದರು. ಅಸಹಕಾರ ಚಳುವಳಿಯಲ್ಲಿ ಧುಮುಕಿದರು. ಊರೂರು ಅಲೆದರು. ಅನುಭವ ಬೆಳಸಿಕೊಂಡರು. ದೃಷ್ಟಿ ವಿಶಾಲವಾಯಿತು. ಪತ್ರಿಕಾ ಪ್ರಪಂಚ ಪ್ರವೇಶಿಸಿ 'ವಸಂತ', 'ವಿಚಾರ ವಾಣಿ' ಪತ್ರಿಕೆ ನಡೆಸಿ ಕೈ ಸುಟ್ಟುಕೊಂಡರು. ಸಿನಿಮಾ ಚಿತ್ರವೊಂದನ್ನು ತೆಗೆದು ನಷ್ಟಕ್ಕೊಳಗಾದರು. ನಾಟಕ ರಂಗ ಪ್ರವೇಶಿಸಿ ಅದರಲ್ಲೂ ಯಕ್ಷಗಾನ, ಕೋಲಾಟ ಪ್ರದರ್ಶನದಲ್ಲಿ ಅಪ್ರತಿಮ ಯಶಸ್ಸು ಗಳಿಸಿ ದಕ್ಷಿಣ ಕನ್ನಡ ಜಿಲ್ಲೆಯ ಜೀವಂತ ಕಲೆಯ ಪರಿಚಯ ದೇಶಾದ್ಯಂತ ಮಾಡಿಸಿದ್ದಲ್ಲದೆ 'ಯಕ್ಷಗಾನ ಬಯಲಾಟ' ಎಂಬ ಶ್ರೇಷ್ಠ ಸಂಶೋಧನಾತ್ಮಕ ಕೃತಿ ರಚಿಸಿ ಸ್ವೀಡನ್ ದೇಶದ ಪ್ರಶಸ್ತಿ ಗಳಿಸಿದರು. ಇದಕ್ಕೆ ನಮ್ಮ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿಯೂ ಪ್ರಶಸ್ತಿ ನೀಡಿ ಗೌರವಿಸಿದೆ. ನಿಶಾ ಮಹಿಮೆ, ಸತಿ ಸಂಯುಕ್ತೆ, ಸೇವಾ ಸದನ, ಸಿಡಿಲು ಮಿಂಚು, ತಿಮ್ಮಪ್ಪನ ಒಗ್ಗರಣೆ, ವಿಜಯ ದಶಮಿ, ಕಠಾರಿ ಭೈರವ, ಜ್ವಾಲಾ ಬಂಧನ—ಇವರ ಹೆಸರಾಂತ ನಾಟಕಗಳು. ಚೋಮನ ದುಡಿ, ಕುಡಿಯರ ಕೂಸು, ಬೆಟ್ಟದ ಜೀವ—ಕರಾವಳಿ ಪ್ರದೇಶದ ಜನ ಜೀವನವನ್ನು ಪ್ರತಿಬಿಂಬಿಸುವ ವಿಶಿಷ್ಟ ಕಾದಂಬರಿಗಳು. 'ಮರಳಿ ಮಣ್ಣಿಗೆ' ಅತ್ಯಂತ ಜನಪ್ರಿಯಗೊಂಡಿರುವ ಕೌಟುಂಬಿಕ ಕಾದಂಬರಿ. ಇದು ಇಂಗ್ಲೀಷಿಗೂ ಅನುವಾದಗೊಂಡಿದೆ. ಔದಾರ್ಯದ ಉರುಳಲ್ಲಿ, ಅಳಿದ ಮೇಲೆ, ಒಂಟಿ ದನಿ, ಗರ್ಭ ಗುಡಿ, ಬಿತ್ತಿದ ಬೆಳೆ, ಜಾರುವ ದಾರಿಯಲ್ಲಿ, ಗೊಂಡಾರಣ್ಯ, ಹೆತ್ತಳಾ ತಾಯಿ, ಕರುಳಿನ ಕರೆ –ಮುಂತಾದವುಗಳು ಪ್ರಸಿದ್ಧ ಕಾದಂಬರಿಗಳು. ನೈಜವ್ಯಕ್ತಿ ಚಿತ್ರಣ, ಕುತೂಹಲ ನಿರೂಪಣೆ, ವಾಸ್ತವಿಕ ವಾತಾವರಣ ಸೃಷ್ಟಿ, ಆಡುಮಾತಿನ ಸೊಗಡು ಇವರೆಲ್ಲ ಕಾದಂಬರಿಗಳಲ್ಲೂ ಕಾಣಬರುವ ವೈಶಿಷ್ಟ್ಯಗಳು.

'ವಿಜ್ಞಾನ ಪ್ರಪಂಚ', ನಾಲ್ಕು ಸಂಪುಟಗಳ ಮಹತ್ ಕೃತಿ. 'ಸಿರಿಗನ್ನಡ ಅರ್ಥಕೋಶ' ನಿಘಂಟಿನ ಕ್ಷೇತ್ರದಲ್ಲಿ ಅಪೂರ್ವ ಸಾಧನೆ. 'ಬಾಲ ಪ್ರಪಂಚ' ಮಕ್ಕಳಿ

ಗಾಗಿ ನಿರ್ಮಿತಗೊಂಡಿರುವ ವಿಶ್ವಕೋಶ. ಸರಳ ಶೈಲಿಯಲ್ಲಿ ಸಹಸ್ರಾರು ಚಿತ್ರ, ರೇಖಾಕೃತಿಗಳಿಂದ ಮಕ್ಕಳಿಗೆ ಅರ್ಥವಾಗುವಂತೆ ರಚಿಸಿರುವ ಬೃಹತ್ ಕೃತಿ. ವಿಜ್ಞಾನ, ಸಾಹಿತ್ಯ, ಕಲೆ, ಚರಿತ್ರೆ, ಭೂ ವಿವರಣೆ, ವೈದ್ಯಶಾಸ್ತ್ರ, ಮುಂತಾದ ಸಕಲ ವಿಷಯಗಳನ್ನು ಇದು ಒಳಗೊಂಡಿದೆ. 'ಅಬುವಿನಿಂದ ಬರಾಮಕ್ಕೆ', 'ಅಪೂರ್ವ ಪಶ್ಚಿಮ', 'ಪಾತಾಳದತ್ತ ಪಯಣ', 'ಪಟಲದಲ್ಲಿ ಪಯಣ', 'ಚಿತ್ರಮಯ ದಕ್ಷಿಣ ಹಿಂದೂಸ್ಥಾನ'–ಪ್ರವಾಸ ಸಾಹಿತ್ಯ. 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಇವರ ಆತ್ಮವೃತ್ತ. ಮುಕ್ತ ದ್ವಾರ, ಕಿಸಾ ಗೌತಮಿ, ಬುದ್ಧೋದಯ, ಯಾರೋ ಅಂದರು,—ಪುರಾಣ, ಇತಿಹಾಸ, ಜಾನಪದ ಸಾಹಿತ್ಯದಿಂದ ಕಥಾವಸ್ತುಗಳನ್ನೆತ್ತಿ ಕೊಂಡು ರಚಿಸಿರುವ ಗೀತಾನಾಟಕಗಳು. 'ಮೂಕಜ್ಜಿಯ ಕನಸುಗಳು' ಜ್ಞಾನ ಪೀಠ ಪ್ರಶಸ್ತಿ ಗಳಿಸಿರುವ ಪ್ರಸಿದ್ಧ ಕೃತಿ. 'ಹಿರಿಯ ಕಿರಿಯ ಹಕ್ಕಿಗಳು' ಪಕ್ಷಿಗಳ ಅಂಗ ರಚನೆ, ಜೀವನ ವಿಧಾನ ತಿಳಿಸುವ ವಿಶಿಷ್ಟ ಗ್ರಂಥ. ಇವರ ಅಮೋಘ ಸೇವೆ ಯನ್ನು ಗುರುತಿಸಿ ಮೈಸೂರು, ಕರ್ನಾಟಕ ವಿಶ್ವವಿದ್ಯಾನಿಲಯಗಳು 'ಡಿಲಿಟ್' ನೀಡಿವೆ. ಕೇಂದ್ರ ಸರಕಾರ 'ಪದ್ಮಭೂಷಣ' ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

ಶ್ರೀ ಕಾರಂತರು ಕೈ ಇಕ್ಕದ ಕೆಲಸವಿಲ್ಲ. ವಿದ್ಯಾಕ್ಷೇತ್ರ, ಸಮಾಜ ಸುಧಾರಣೆ, ದಲಿತೋದ್ಧಾರ, ದೇಶಸೇವೆ ಮುಂತಾದ ಕ್ಷೇತ್ರಗಳಲ್ಲೂ ನಿಷ್ಕಾಮ ಸೇವೆ ಸಲ್ಲಿಸಿದ್ದಾರೆ. 'ಬಾಲವನ' ಪುತ್ತೂರಿನಲ್ಲಿ ಬಹುಕಾಲ ಇವರ ಒಂದು ಪ್ರಾಯೋಗಿಕ ಕೇಂದ್ರ ವಾಗಿತ್ತು. ಹರ್ಷ ಮುದ್ರಣಾಲಯ ಇವರು ನಡೆಸುತ್ತಿರುವ ಸ್ವಂತ ಮುದ್ರಣಾಲಯ. ಕನ್ನಡದ ಈ ಕಲೆಗಾರ, ರಾಷ್ಟ್ರದ ಹೆಮ್ಮೆಯ ಸಾಹಿತಿ ಶತವರ್ಷ ಬಾಳಲಿ ಎಂದು ಆಶಿಸೋಣ.

**ಮ. ನ. ಮೂರ್ತಿ*** : ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ನೆನೆಯಬೇಕಾದ ಹಿರಿಯ ಸಾಹಿತಿ. ಇವರು ಉತ್ತಮ ಕಾದಂಬರಿಕಾರರು. ನುರಿತ ಪತ್ರಕರ್ತರು. ಕನ್ನಡ ಟೈಪ್ ರೈಟರ್ ನಿರ್ಮಾಪಕರು. ಕನ್ನಡ ಶೀಘ್ರಲಿಪಿ ತಜ್ಞರು. ಇವರ ಪ್ರಥಮ ಕಾದಂಬರಿ 'ಚಿಕ್ಕದೇವರಾಜ'ಕ್ಕೆ ದೇವರಾಜ ಬಹದ್ದೂರ್ ಪಾರಿತೋಷಕ ಲಭಿಸಿದೆ. 'ಮೀನಾ', 'ಸ್ವಯಂವರ', 'ಬಿಳಿಯ ಹೆಂಡತಿ' ಚಲನಚಿತ್ರವಾಗಿರುವ ಪ್ರಸಿದ್ಧ ಕಾದಂಬರಿಗಳು. ಇವರ ಇತರ ಕೃತಿಗಳು : ಜಯವಂತಿ, ಸಂಜೀವಿನಿ, ಅತಿವೃಷ್ಟಿ, ಅಲಕಾ ನಂದಾ, ಪುರುಷ ಕಸ್ತೂರಿ, ನಾಟ್ಯರಾಣಿ ಶಾಂತಲಾ, ಕಾಲ ಸರ್ಪಿಣಿ, ಶಾಂತಾ, ಮುಡಿಯದ ಹೂ, ಪ್ರೇಮ ಸುಧಾ, ಸಂಹಾರ, ಸಂವಿಧಾನ,

---

* ಜೀವಿತ ಕಾಲ : 1907–1977. ತಂದೆ – ಮಧ್ವರಾವ್; ತಾಯಿ – ಭೀಮಕ್ಕ. ಜನ್ಮಸ್ಥಳ–ಮಡಕಸಿರ ತಾಲ್ಲೋಕಿನ ಮಂದಲಹಳ್ಳಿ. ವಿದ್ಯಾಭ್ಯಾಸ–ಶಿರಾ, ತುಮಕೂರು ಹಾಗೂ ಬೆಂಗಳೂರು.

ಹೊನ್ನಿನ ಹೊಳೆ, ಒಲಿದರೆ ನಾರಿ, ಜಂಬದ ಕೋಳಿ, ನಾನು ಭಾರತೀಯ, ಕವಲು ದಾರಿ, ಸಂಶಯದ ಸುಳಿಯಲ್ಲಿ—ಮುಂತಾದವುಗಳು.

ಮೂರ್ತಿಗಳು ಬಿ.ಎ. ಪದವಿ ಪಡೆದ ನಂತರ ಕೆಲಕಾಲ ಮೈಸೂರು ಸರಕಾರದ ಸೆಕ್ರೆಟರಿಯೇಟ್‌ನಲ್ಲಿ ಉದ್ಯೋಗಿಯಾಗಿದ್ದು, ನಿವೃತ್ತರಾದ ನಂತರ ತಮ್ಮ ವೇಳೆಯನ್ನೆಲ್ಲಾ ಸಾಹಿತ್ಯ ಸೇವೆಗೇ ಮುಡುಪಾಗಿರಿಸಿದ್ದರು. ವಿಜಯನಗರದ ಇತಿಹಾಸದ ಮೇಲೆ ಸಂಶೋಧನೆ ನಡೆಸಿದ್ದರು. ಹಲವು ವರ್ಷಗಳು ಇವರು 'ಪ್ರಜಾಮತ' ವಾರ ಪತ್ರಿಕೆಯ ಕಥಾ ವಿಭಾಗದ ಸಂಪಾದಕರಾಗಿದ್ದು ಅದರ ಅಭಿವೃದ್ಧಿಗೆ ಶ್ರಮಿಸಿದ್ದರು. ವಿಜಯನಗರದ 'ಹಂಪೆ'ಯಲ್ಲಿ ಪುರಂದರದಾಸರ ಉತ್ಸವವನ್ನು ಪ್ರಾರಂಭಿಸಿದ ಹೆಗ್ಗಳಿಕೆ ಇವರದು.

**ಅ. ನ. ಕೃಷ್ಣರಾಯ* :**

'ನಾಡು ನುಡಿಗಳ ನಿಷ್ಠ ಸೇವಕ ನೀನು  
ಕನ್ನಡದ ಗದ್ಯ ಸಾಹಿತ್ಯಕೆ ನಿನ್ನಿಂದ ರಸಸೇಚನ  
'ಹಲವು ಹೋರಾಟಗಳ ಕಡುಗಲಿ' ನಿನ್ನುಸಿರು ಕನ್ನಡತನ  
ಕನ್ನಡಕೆ ಜೀವನವೇ ಮುಡುಪಾಗಿರಿಸಿದ ರಸ ಚೇತನ  
ಕನ್ನಡೋದ್ಧಾರಕ್ಕಾಗಿ ಕಡಿದೊಗದೆ ಸಾಹಿತ್ಯ ಸಂಪ್ರದಾಯದ ಬಂಧನ  
ಸಾಹಿತ್ಯ ಭಾಷಣದಿ ಎಡೆಬಿಡದೆ ನಡೆಸಿದೆ ವಿಚಾರ ಮಂಥನ  
ಕನ್ನಡಿಗರಾತ್ಮ ಜಾಗೃತಿಗಾಗಿ ನಿನ್ನದು ಕನ್ನಡ ಚಳುವಳಿಯ ಸಾಧನ  
ಕನ್ನಡದ ಶ್ರೀಗಂಧವಾಗಿ ಬಾಳ್ ತೇಯ್ದು ನೀ ರಸಚೇತನ....'

'ರಸಚೇತನ'ದಲ್ಲಿ ಗೋಪಾದ 'ಮಧುಪ'ರು ಬರೆದಿರುವ ಈ ಮಾತು ಅ.ನ.ಕೃ.ರವರನ್ನು ಪ್ರತಿಮಿಸುತ್ತದೆ.

ಪ್ರಖ್ಯಾತ ವಿಮರ್ಶಕ ಶ್ರೀಮಾನ್ ಎಲ್. ಎಸ್. ಶೇಷಗಿರಿರಾಯರು ಅದೇ 'ರಸಚೇತನ'ದಲ್ಲಿ ಅ.ನ.ಕೃ.ರ ಬಗ್ಗೆ ಹೇಳಿರುವ ಈ ಮಾತು ಅವರ ಸಮಗ್ರ ಜೀವನ ಹಾಗೂ ಸಾಹಿತ್ಯ ಕೊಡುಗೆಗಳ ಮೇಲೆ ಕ್ಷ-ಕಿರಣ ಬೀರುತ್ತದೆ.

"ಅ.ನ.ಕೃ. ಒಂದು ವ್ಯಕ್ತಿಯಲ್ಲ, ಒಂದು ಶಕ್ತಿ ಎನ್ನುವಂತೆ ಕನ್ನಡ ನಾಡಿನ ಜೀವನದಲ್ಲಿ ಪ್ರಭಾವ ಬೀರಿದವರು. ಕನ್ನಡ ಜನಕ್ಕೆ ಹಲವು ರೀತಿಗಳಲ್ಲಿ ತಮ್ಮ ಭಾಷಣಗಳಿಂದ, ಲೇಖನಗಳಿಂದ, ಪುಸ್ತಕಗಳಿಂದ ಕನ್ನಡದ ಅಭಿಮಾನವನ್ನು (ದುರ

---

* ಜೀವಿತ ಕಾಲ : ಮೇ 9, 1908 ರಿಂದ ಜುಲೈ 8, 1971. ಜನ್ಮಸ್ಥಳ- ಕೋಲಾರ ಜಿಲ್ಲೆಯ ಅರಕಲಗೂಡು. ತಂದೆ-ನರಸಿಂಗರಾಯರು, ತಾಯಿ-ಅನ್ನಪೂರ್ಣಮ್ಮ.

ಭಿಮಾನಕ್ಕೆ ಅವಕಾಶವಿಲ್ಲದಂತೆ) ಬೆಳೆಸಿದ್ದರು. ನಿರ್ಮಲ ಮನಸ್ಸಿನಿಂದ ಘೋರು ಜನ ತರುಣ ಲೇಖಕರ ಬೆನ್ನು ತಟ್ಟಿದವರು ; ಅವರಲ್ಲಿ ವಿಶ್ವಾಸ ಬೆಳೆಸಿದವರು. ಅವರ ಕಾದಂಬರಿಗಳಲ್ಲಿ ಅತಿ ಮಹತ್ವದ ಸಾಧನೆ ಎಂದರೆ ಎರಡು ಎಂದು ತೋರುತ್ತದೆ. ಮೊದಲನೆಯದಾಗಿ ಅವರು ಭಾರತೀಯ ಸಂಸ್ಕೃತಿಯನ್ನು ಜೀವನದಲ್ಲಿ ಅರಗಿಸಿ ಕೊಂಡಾಗ ಅದು ವ್ಯಕ್ತಿತ್ವಕ್ಕೆ ಎಂತಹ ಪ್ರತಿಭೆಯನ್ನು ನೀಡಬಲ್ಲದು ಎನ್ನುವುದನ್ನು ಕಲ್ಪನಾತ್ಮಕವಾಗಿ, ಸಾಕ್ಷಾತ್ಕರಿಸಿಕೊಂಡು ಜೀವಕಳೆ ಕೊಟ್ಟು ಪಾತ್ರಗಳನ್ನು ಸೃಷ್ಟಿ ಸುವುದರಲ್ಲಿ ಯಶಸ್ವಿಗಳಾಗಿದ್ದಾರೆ. ಅ.ನ.ಕೃ. ನಮ್ಮ ಸಂಸ್ಕೃತಿಯ ಜೀವಂತ ಮೂರ್ತಿಗಳನ್ನು ಸೃಷ್ಟಿಸಬಲ್ಲರು. 'ಸಂಧ್ಯಾರಾಗ'ದ ಮೀನಾಕ್ಷಮ್ಮ, ಸಾವಿತ್ರಮ್ಮ, 'ಮಂಗಳಸೂತ್ರ'ದ ಲಕ್ಷಮ್ಮ, ನಾರಣಪ್ಪ, ರತ್ನ, 'ಕಣ್ಣೀರಿ'ನ ಗೌರಿ – ಇವು ಇಂತಹ ಹಲವಾರು ಪಾತ್ರಗಳಲ್ಲಿ ಕೆಲವು. ಗೃಹಲಕ್ಷ್ಮಿ, ರುಕ್ಮಿಣಿ ಮುಂತಾದ ಕಾದಂಬರಿಗಳಲ್ಲಿ ಮತ್ತೆ ಮತ್ತೆ ಅ.ನ.ಕೃ. ಭಾರತ ಸಂಸ್ಕೃತಿ ಬಾಳಿನಲ್ಲಿ ದೇದೀಪ್ಯಮಾನವಾಗಿ ಬೆಳಗು ವುದನ್ನು ಚಿತ್ರಿಸಿದರು..." ಮಾಸ್ತರು ಮಾತು ನಿಲ್ಲಿಸಿದೊಡನೆ ಚಂದ್ರು ನಗುತ್ತ ಪ್ರಾರಂಭಿಸಿದ—

'ದಿಕ್ಕಿಲ್ಲದಿರುವ 'ಶನಿ ಸಂತಾನ'ವನು ಕಂಡು
'ನಗ್ನ ಸತ್ಯ'ದಲಿ ತೋರಿದರು ಈ ಅಪ್ಪಗಳ ದಂಡು
ಕತೆಯ ಹೇಳುತ ಚುಚ್ಚಿ ಚನ್ನಾಗಿ ಗುದ್ದಿ
ಮಡಿವಂತರಿಗೆಲ್ಲ ಹೇಳಿದರು ಚನ್ನಾಗಿ ಬುದ್ಧಿ'

ಮಾಸ್ತರು ಮತ್ತೆ ತಮ್ಮ ವ್ಯಾಖ್ಯೆಯನ್ನು ಮುಂದುವರಿಸಿದರು.

"ಅರಕಲಗೂಡು ನರಸಿಂಹರಾವ್ ಕೃಷ್ಣರಾವ್ : ಎಸ್.ಎಸ್.ಎಮ್. ತನಕ ಶಾಲಾ ಶಿಕ್ಷಣ ಪಡೆದರೂ ಅನಂತರವಾಗಿ ಸಾಹಿತ್ಯಾಭ್ಯಾಸ ಮುಂದುವರಿಸಿ ಪದವೀ ಧರರಿಗೂ ಮಿಗಿಲಾದ ವಿದ್ವತ್ತು ಹಾಗೂ ಪ್ರತಿಭೆಯನ್ನು ಕನ್ನಡ ಹಾಗೂ ಇಂಗ್ಲೀಷಿ ನಲ್ಲಿ ಸಂಪಾದಿಸಿದರು. ಮೈಸೂರು ವಿಶ್ವವಿದ್ಯಾನಿಲಯವು ಅವರ ಸಾಹಿತ್ಯ ಸೇವೆ ಯನ್ನು ಮೆಚ್ಚಿ ಜನವರಿ 27, 1970ರಂದು ಗೌರವದ ಡಿಲಿಟ್ ಪ್ರಶಸ್ತಿ ನೀಡಿ ಗೌರವಿಸಿತು. ಆ ಸಂದರ್ಭದಲ್ಲಿ ಉಪಕುಲಪತಿಗಳಾಗಿದ್ದ ದೇ.ಜ.ಗೌ. ರವರು ಹೇಳಿ ರುವ ಮಾತನ್ನು ಕೇಳಿ...." ಮೇಸ್ಟರು ಪಕ್ಕದಲ್ಲಿರಿಸಿದ್ದ ಚೀಲದಿಂದ ಪುಸ್ತಕವೊಂದನ್ನು ಹೊರತೆಗೆದು ಓದಲು ಪ್ರಾರಂಭಿಸಿದರು.

'ನಮ್ಮ ಹಲವು ಲೇಖಕರನ್ನು, ಕಲಾವಿದರನ್ನು ಪ್ರೋತ್ಸಾಹಿಸಿ ಬೆಳಕಿಗೆ ತಂದ ವರು ಕೃಷ್ಣರಾಯರು. ಅವರು ಲೇಖಕರು, ಕಲಾವಿಮರ್ಶಕರು, ಉಜ್ವಲ ಭಾಷಾ ಪ್ರೇಮಿಗಳು, ಸಂಸ್ಕೃತಿಯ ಆರಾಧಕರು, ವಾಗ್ಮಿ. ಅನೇಕ ಪತ್ರಿಕೆಗಳನ್ನು ಆದರ್ಶ

ಪ್ರಾಯಪ್ರಾಗಿ ಸಂಪಾದಿಸಿ ಪ್ರಕಟಿಸಿದ ಕೀರ್ತಿ ಅವರದ್ದು. ಕನ್ನಡ ನಾಡು-ನುಡಿಗಳ ಸರ್ವಾಂಗೀಣ ಪ್ರಗತಿಗಾಗಿ ಅವರು ಈ ನಾಲ್ಕು ದಶಕಗಳಲ್ಲಿ ಅವಿರತವಾಗಿ ಶ್ರಮಿಸಿದ್ದಾರೆ. ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ ಜಾಗೃತಿಯ ಜಯಗಂಟೆಯನ್ನು ಬಾರಿಸಿದ್ದಾರೆ. ಸಂಸ್ಕೃತಿ ಕರ್ನಾಟಕದ ಕಲ್ಪನೆಗೆ ರೂಪ ಕೊಟ್ಟಿದ್ದಾರೆ. ದೇಶದ ಅನೇಕ ಸಾಹಿತ್ಯ ಸಂಘ ಸಂಸ್ಥೆಗಳೊಡನೆ ಕೃಷ್ಣರಾಯರ ನಿಕಟ ಸಂಪರ್ಕವಿದೆ. ರಾಜ್ಯದ ಸಾಹಿತ್ಯ ಅಕಾಡೆಮಿ, ಸಂಗೀತ, ನಾಟಕ, ಲಲಿತಕಲಾ ಅಕಾಡೆಮಿಗಳೊಡನೆ ಅವರ ಸಂಬಂಧವಿದೆ. ಉಡುಪಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು. 1968ರಲ್ಲಿ ಅವರನ್ನು ರಾಜ್ಯ ಸಾಹಿತ್ಯ ಅಕಾಡೆಮಿಯು ಗೌರವಿಸಿತು.'

ಇವರು ಅಗಾಧ ಸಂಖ್ಯೆಯಲ್ಲಿ ಕೃತಿ ರಚನೆ ಮಾಡಿದ್ದಾರೆ. ಉದಯರಾಗ, ಸಂಧ್ಯಾರಾಗ, ನಟಸಾರ್ವಭೌಮ, ಗೃಹಲಕ್ಷ್ಮಿ, ಕಣ್ಣೀರು, ತಾಯಿ ಕರುಳು, ನಗ್ನ ಸತ್ಯ, ಶನಿಸಂತಾನ, ಮಂಗಳಸೂತ್ರ, ರತ್ನದೀಪ, ಭಾಗ್ಯದ ಬಾಗಿಲು, ಕಣ್ಣಿನ ಗೊಂಬೆ—ಮುಂತಾದ 95 ಸಾಮಾಜಿಕ ಕಾದಂಬರಿಗಳು, ಗರುಡ ಮಚ್ಚೆ, ವೀರ ರಾಣಿ ಕಿತ್ತೂರು ಚೆನ್ನಮ್ಮ, ತಪೋಬಲ, ಪ್ರೌಢ ಪ್ರತಾಪಿ, ಪುಣ್ಯ ಪ್ರಭಾವ, ಭುವನ ಮೋಹಿನಿ ಪ್ರಳಯಾ ನಂತರ, ರಣ ವಿಕ್ರಮ—ಮುಂತಾದ 16 ಐತಿಹಾಸಿಕ ಕಾದಂಬರಿಗಳು. ಅಗ್ನಿಕನ್ಯೆ, ಕಾಮನ ಸೋಲು, ಕಿಡಿ, ಪಾಪ ಪುಣ್ಯ, ಶಿಲ್ಪಿ, ಸುಮರ ಸುಂದರಿ—ಮುಂತಾದ 8 ಕಥಾ ಸಂಕಲನ, ಮದುವೆಯೋ ಮನೆ ಹಾಳೋ, ಸ್ವರ್ಣ ಮೂರ್ತಿ, ಧರ್ಮ ಸಂಕಟ, ಜ್ವಾಲಾಮುಖಿ, ಹಿರಣ್ಯಕಶಿಪು, ಶ್ರೀರಾಮ ಪಾದುಕಾ ಪಟ್ಟಾಭಿಷೇಕ, ಅನುಗ್ರಹ, ಜಗಜ್ಯೋತಿ ಬಸವೇಶ್ವರ, ರಜಪೂತ ಲಕ್ಷ್ಮಿ, ರಾಜ ನರ್ತಕಿ-ಮುಂತಾದ 22 ನಾಟಕಗಳು. ಅಲ್ಲಮ ಪ್ರಭು, ಕನ್ನಡ ಕುಲ ರಸಿಕರು, ಕರ್ಣಾಟಕ ಕಲಾವಿದರು ಭಾಗ 1, 2 ; ಕೈಲಾಸಂ, ದೀನಬಂಧು ಕಬೀರ, ಭಾರತದ ಬಾಪೂ, ವಿಶ್ವಬಂಧು ಬಸವೇಶ್ವರ, ಸ್ವಾಮಿ ವಿವೇಕಾನಂದ—ಮುಂತಾದ 11 ಜೀವನ ಚರಿತ್ರೆಗಳಲ್ಲದೆ ಸುಮಾರು 20 ಪ್ರಬಂಧ, ವಿಮರ್ಶೆಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳು : ಕನ್ನಡದ ದಾರಿ, ಅಖಂಡ ಕರ್ನಾಟಕ, ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಸಮದರ್ಶನ, ಸಾಹಿತ್ಯ ಮತ್ತು ಕಾಮ ಪ್ರಚೋದನೆ, ಸಾಹಿತ್ಯ ಮತ್ತು ಜೀವನ, ಸಾಹಿತ್ಯ ಸಮಾರಾಧನೆ, ನಾಟಕ ಕಲೆ, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ಸಜೀವ ಸಾಹಿತ್ಯ, ಭಾರತೀಯ ಚಿತ್ರ ಕಲೆ. ಇವರು ಸಂಪಾದಿಸಿದ ಗ್ರಂಥಗಳ ಸಂಖ್ಯೆಯೇ ಹತ್ತು. 'ಮರುಳ ಸಿದ್ಧಕಾವ್ಯ' 'ಭಗವದ್ಗೀತಾರ್ಥ ಸಾರ', 'ಕಾಮನ ಬಿಲ್ಲು 1. 2;' 'ಪ್ರಣಯ ಗೀತೆಗಳು', 'ರಸ ಋಷಿ', 'ಭಾರತೀಯ ಕಲಾ ದರ್ಶನ'. 'ಭಾರತೀಯ ಸಂಸ್ಕೃತಿ ದರ್ಶನ' ಮುಂತಾದವುಗಳು. 'ನೀಲ ಲೋಚನೆ', ರಸಿಕಾಗ್ರಣಿ, 'ರುಬಾಯಿಯತ್ ಕಾವ್ಯ', 'ಭಾರತದ

ಕಥೆ'–ಅನುವಾದಿತ ಕೃತಿಗಳು. 'ಕಥಾಂಜಲಿ', 'ವಿಶ್ವವಾಣಿ', 'ಕನ್ನಡ ನುಡಿ', 'ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ'–ಸಂಪಾದಿಸಿದ್ದ ಪತ್ರಿಕೆಗಳು.

ಒಂದೆರಡು ಕ್ಷಣ ಪುಸ್ತಕದಲ್ಲಿ ಮಗ್ನರಾಗಿದ್ದ ಮೇಸ್ಟರು ತಟ್ಟನೆ ತಲೆ ಎತ್ತಿ ಪ್ರಾರಂಭಿಸಿದರು.

'ಗ್ರಾಮಾಯಣ' ಕೃತಿ ಹೆಸರು ಕೇಳಿದೊಡನೆ ನೆನಪಿಗೆ ಬರುವ ವ್ಯಕ್ತಿ **'ರಾವ ಬಹದ್ದೂರ್'*** ಅಂದರೆ ರಾಮಚಂದ್ರ ಭೀಮರಾವ್ ಕುಲಕರ್ಣಿ. ವಿದ್ಯಾಭ್ಯಾಸ ಧಾರವಾಡದಲ್ಲಿ. ಕರ್ನಾಟಕ ಕಾಲೇಜಿನಿಂದ 1935ರಲ್ಲಿ ಬಿ.ಎ. ಪದವಿ ಗಳಿಸಿ ಹೊಸ ಹುಮ್ಮಸ್ಸಿನಿಂದ ಸಾಹಿತ್ಯ ಸೇವೆಗಿಳಿದರು. ಧ್ಯೇಯವಾದಿಗಳಾಗಿ ಗಾಂಧೀತತ್ವದಲ್ಲಿ ಅಪರಿಮಿತ ಶ್ರದ್ಧೆ ಇರಿಸಿಕೊಂಡಿದ್ದವರು. ಅನ್ಯಾಯವನ್ನು ನಿಜಜೀವನದಲ್ಲಾಗಲಿ ರಾಜಕೀಯ ರಂಗದಲ್ಲಾಗಲಿ ಎಂದೂ ಸಹಿಸರು. ಇವರ ಲೇಖನಿ ಕೂರಸಿಯಷ್ಟು ತೀಕ್ಷ್ಣ. ವ್ಯಂಗ್ಯ ಮುಸುಕಿನ ಗುದ್ದು. ಸರಿಕಂಡದ್ದನ್ನು ಯಾವ ದಾಕ್ಷಿಣ್ಯಕ್ಕೂ ಅಂಜದೆ ಹೇಳುವ ಎದೆಗಾರಿಕೆಯೇ ಇವರ ಯಶಸ್ಸಿನ ಗುಟ್ಟು. 'ಜಯಂತಿ' ಮಾಸ ಪತ್ರಿಕೆಯನ್ನು ಸಂಪಾದಕರಾಗಿ ಹಲವು ವರ್ಷ ಚೆನ್ನಾಗಿ ನಡೆಸಿದ ಯಶಸ್ಸೂ ಇವರಿಗೆ ಲಭಿಸಿದೆ. 1938–46ರ ತನಕ ಚರಕಾ ಸಂಘ ವ್ಯವಸ್ಥಾಪಕರಾಗಿ ರಾಷ್ಟ್ರಾದ್ಯಂತ ಸುತ್ತಾಡಿದ್ದಾರೆ. ಗ್ರಾಮೀಣ ಜನರ ಮುಗ್ಧ ಮನೋಭಾವದೊಡನೆ ಪುಡಾರಿಗಳ ಕುತ್ಸಿತ ಬುದ್ಧಿಯನ್ನು ಕಂಡು ನೊಂದಿದ್ದಾರೆ. ಇದರಿಂದಾಗಿ ಇವರ ಮನಸ್ಸಿಗಾಗಿರುವ ನೋವನ್ನು ಇವರ ಸಾವಿರಾರು ಲೇಖನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ.

ಇವರ ಶ್ರೇಷ್ಠ ಕೃತಿ 'ಗ್ರಾಮಾಯಣ' ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿರುವುದಲ್ಲದೆ ಭಾರತೀಯ ಎಲ್ಲ ಭಾಷೆಗಳಿಗೂ ಅನುವಾದಗೊಂಡಿದೆ. ಬಾಂಗ್ಲಾ ಹತ್ಯೆಯ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಕಾದಂಬರಿ 'ಅಸುರಾಯಣ'.

ಇವರ ಕಾದಂಬರಿಗಳಾದ 'ಬಿತ್ತಿ ಬೆಳೆದವರು' ಹಾಗೂ 'ಗೌಡರ ಕೋಣ' ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿವೆ.

ಇತರ ಕೃತಿಗಳು : ಸಾಮ್ಯವಾದ, ಇತಿಹಾಸ ಭೂತ, ವೃಂದಾವನ, ಧೂಮಕೇತು, ಬಾಳು ಬಂಗಾರ, ಮುತ್ತು ಕಟ್ಟಿದಳು, ಕಾಂಚನ ಮೃಗ ಮುಂತಾದವುಗಳು.

---

* ಜೀವಿತ ಕಾಲ : ಸೆಪ್ಟೆಂಬರ್ 24, 1910 ರಿಂದ ಡಿಸೆಂಬರ್ 31, 1984. ಜನ್ಮಸ್ಥಳ – ಜಮಖಂಡಿ ತಾಲ್ಲೋಕು 'ಹಿರೇಪಡಸಲಗಿ'. ತಂದೆ – ಭೀಮರಾಯ, ತಾಯಿ– ಸುಭದ್ರಾ ಬಾಯಿ.

**ಕೃಷ್ಣಮೂರ್ತಿ ಪುರಾಣಿಕ*** : ಕನ್ನಡ ಸಾಹಿತ್ಯ ರಂಗದಲ್ಲಿನ ಅತ್ಯಂತ ಜನಪ್ರಿಯ ಕಾದಂಬರಿಕಾರರು (ಇವರ ಹೆಸರು ಕೆ. ಟಿ. ಪುರಾಣಿಕರು.). ಇವರ 7–8 ಕಾದಂಬರಿಗಳು ಆಗಲೇ ಚಲನಚಿತ್ರಗಳಾಗಿ ಜನರಂಜಿಸಿವೆ. ಇನ್ನೂ ಹಲವು ಚಿತ್ರಣದ ಹಲವು ಹಂತಗಳಲ್ಲಿವೆ. ಇವರ ಒಟ್ಟು ಸಾಹಿತ್ಯ ಕೃತಿಗಳ ಸಂಖ್ಯೆ ಸುಮಾರು 120. ಇವುಗಳಲ್ಲಿ ಕಾದಂಬರಿಗಳು 80, ಕಥಾಸಂಕಲನಗಳು 14, ಉಳಿದವುಗಳು ನಾಟಕ, ವಿಮರ್ಶೆ, ಕವಿತೆಗಳು.

ಸುಮಾರು 35 ವರ್ಷ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಇವರು ವಿದ್ಯಾರ್ಥಿಗಳಿಗೆ ಬೋಧಿಸಿದ್ದಕ್ಕಿಂತ ಹೆಚ್ಚಾಗಿ ತಮ್ಮ ಅನುಭವವನ್ನು ಸಂಪನ್ನಗೊಳಿಸಿಕೊಂಡಿದ್ದರು. ಈ ಅನುಭವಮಾಧುರ್ಯವೇ ಕಾದಂಬರಿಗಳಾಗಿ ಮೂಡಿ ಬಂದಿದೆ.

ಚಲನಚಿತ್ರಗಳಾಗಿ ರೂಪುಗೊಂಡಿರುವ ಕಾದಂಬರಿಗಳು : ಸನಾದಿ ಅಪ್ಪಣ್ಣ, ಮುತ್ತೈದೆ, ಭಾಗೀರಥಿ, ಮಣ್ಣಿನ ಮಗಳು, ಕುಲವಧು, ಧರ್ಮ ದೇವತೆ, ಮದುವೆಯ ಹಾಡು, ದೇವರ ಕೊಸು, ಪಾವನ ಗಂಗಾ, ವಸುಂಧರ.

ಪುರಾಣಿಕರ ಪ್ರಥಮ ಕಾದಂಬರಿ 'ರಾಮನ ಕಥೆ' 1956ರಲ್ಲಿ ಬೆಳಕು ಕಂಡಿತ್ತು. 'ಮಣ್ಣಿನ ಮಗಳು' ಕಾದಂಬರಿ ರಾಜ್ಯ ಸರ್ಕಾರದ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. ಇವರ ಅಮೋಘ ಸಾರಸ್ವತ ಸೇವೆಯನ್ನು ಗುರುತಿಸಿ 1973ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. ತರಳಬಾಳು ಜಗದ್ಗುರುಗಳು ಇವರಿಗೆ 'ಕಾದಂಬರಿ ಶ್ರೀ' ಬಿರುದು ನೀಡಿದ್ದಾರೆ.

'ಕಾದಂಬರಿ ದರ್ಶನ' ಇವರ ಷಷ್ಟ್ಯಬ್ದಿಯ ಸಂದರ್ಭದಲ್ಲಿ ಅಭಿಮಾನಿಗಳು ನೀಡಿರುವ ಅಭಿನಂದನ ಗ್ರಂಥ.

ಮುಖ್ಯ ಕೃತಿಗಳು : ಮುಗಿಲ ಮಲ್ಲಿಗೆ, ಸಾವಂತ್ರಿ, ತೆರದ ಕಣ್ಣು, ಹೊಸ ಬಾಳು, ಬೆವರಿನ ಬೆಲೆ, ಹಸಿರು ನೆಲ, ಪಾವನ ಗಂಗಾ, ಮೌನ ಗೌರಿ, ಹಾಲುಂಡ ತವರು, ಹಾಲು ಕೆನೆ, ಕಹಿ ಜೇನು, ಶಾಂತಿ ಸುಧಾ, ಭಾಗ್ಯವಂತ, ಹಸಿರು ತೋರಣ, ವಾಸಂತಿ, ಮಂಗಳಾಕ್ಷತೆ, ರಾಧೇಯ, ರತಿ ವಿಲಾಸ, ನೆಲದ ನೆರಳು (ಕಾದಂಬರಿಗಳು).

---

* ಜೀವಿತ ಕಾಲ : ಸೆಪ್ಟಂಬರ್ 5, 1911 ರಿಂದ ನವಂಬರ್ 13, 1985. ತಂದೆ–ವೇದಮೂರ್ತಿ ತಮ್ಮಣ್ಣಶಾಸ್ತ್ರಿ, ತಾಯಿ–ಲಕ್ಷ್ಮೀಬಾಯಿ. ಹುಟ್ಟಿದ ಊರು–ಬಿಜಾಪುರ ಜಿಲ್ಲೆಯ 'ಬೀಳಗಿ'. ವಿದ್ಯಾರ್ಹತೆ–ಬಿ.ಎ. (ಆನರ್ಸ್), ಬಿ.ಟಿ.

ರಾಮನ ಕತೆಗಳು, ಅವಳ ನಿರ್ಣಯ, ನಂಜಿಯ ನಂಜು, ಜೀವ ಜೇನು, ಸೌಭಾಗ್ಯ ದೃಷ್ಟಿ, ಸೋಮಯ್ಯನ ಮಗಳು, ಚಂದ್ರಿಕಾ—ಇವು ಕಥಾ ಸಂಕಲನಗಳು. ಸೈರಂಧ್ರಿ–ಸರಳ ರಗಳೆಯ ನಾಟಕ.

**ಜಯಲಕ್ಷ್ಮೀ ಶ್ರೀನಿವಾಸನ್**[1] : ಕರ್ನಾಟಕ ರಾಜ್ಯ ಪ್ರಶಸ್ತಿ ಗಳಿಸಿರುವ (1971) ಈಕೆ ಮೂವತ್ತಕ್ಕೂ ಹೆಚ್ಚು ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ಕಥೆ, ಕವನ, ಕಾದಂಬರಿ, ವಿಮರ್ಶೆ, ಬಾಲ ಸಾಹಿತ್ಯ, ಜೀವನ ಚಿತ್ರ ಗಳನ್ನು ಬರೆದಿರುವುದಲ್ಲದೆ ಅನೇಕ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಗೃಹಕೃತ್ಯಕ್ಕೆ ಸಂಬಂಧಿಸಿದ 'ವೈಭವದ ಮನೆ' ಬಹಳ ಹೆಸರು ಗಳಿಸಿರುವ ಕೃತಿ.

ಇತರ ಕೃತಿಗಳು : ಪರಿಣಯ, ಪುಷ್ಪಹಾರ, ಪ್ರೇಮ (ಕಾದಂಬರಿಗಳು) : ಪರಿಮಳೆ ಮತ್ತು ಸುಲೋಚನೆ, ವಾತ್ಸಲ್ಯ (ಸಣ್ಣ ಕಥೆಗಳು) ; ಮೂರು ಮುತ್ತು ಗಳು, ಮಿಠಾಯಿ (ಬಾಲ ಸಾಹಿತ್ಯ), ಕಲಾವಿದನ ತ್ಯಾಗ, ಚಿನ್ನದ ಬಳೆ ಮತ್ತು ಇತರ ಕಥೆಗಳು (ಅನುವಾದ) ; ಸರೋಜ ನಳಿನಿ (ಜೀವನ ಚರಿತ್ರೆ).

ಈಕೆ ತಮಿಳು, ಇಂಗ್ಲೀಷ್, ಹಿಂದಿ ಭಾಷೆಯಲ್ಲೂ ಸಹ ಪರಿಣತಿ ಗಳಿಸಿದ್ದಾರೆ. ತಮಿಳು ನಾಡಿನ 'ವಿದ್ಯಾರತ್ನ' ಪ್ರಶಸ್ತಿ ವಿಜೇತೆ.

**ಕೊಡಗಿನ ಗೌರಮ್ಮ**[2] : ಕನ್ನಡ ನಾಡು ನುಡಿಗೆ ಗೌರವ ತಂದ ಸಾಹಸಿ ಹೆಂಗಸು, ಪ್ರಬುದ್ಧ ಕತೆಗಾತಿ. ತಿರುಮಲೆ ರಾಜಮ್ಮ ತಮ್ಮ ವೀಣಾ ವಾದನದಿಂದ ಗಾಂಧೀಜಿಯವರ ಮನಸ್ಸನ್ನು ತಣಿಸಿದ್ದರೆ, ಕೊಡಗಿನ ಗೌರಮ್ಮ ಅವರನ್ನೇ ತನ್ನ ಮನೆ ಬಾಗಿಲಿಗೆ ಬರಮಾಡಿಕೊಂಡು ಆವರ ಕೈಯಿಂದಲೇ ಕಿತ್ತಲೆ ರಸ ಕುಡಿದು ಹಿಡಿದಿದ್ದ ಉಪವಾಸ ವ್ರತ ತ್ಯಜಿಸಿ ತನ್ನೆಲ್ಲ ಒಡವೆಗಳನ್ನು ಹರಿಜನೋದ್ಧಾರಕ್ಕಾಗಿ ದಾನ ಮಾಡಿದ ಆದರ್ಶ ಮಹಿಳೆ. ತನಗೆ ಸರಿಕಂಡಿದ್ದನ್ನು ಧೈರ್ಯದಿಂದ ಹೇಳಿದ ಧೀಮಂತ ಸಾಹಿತಿ. 'ಪುನರ್ವಿವಾಹ', 'ಕೆಲವು ಕಾಗದಗಳು', 'ಮನುವಿನ ರಾಣಿ', 'ಕೌಸಲ್ಯಾ ನಂದನ', ಮುಂತಾದ ಕಥೆಗಳಲ್ಲಿ ನಿರೂಪಿತ ಹೆಣ್ಣಿನ ಜೀವನವನ್ನು ನೋಡಿದರೆ ಕಣ್ಣು ಹನಿಯೂಡುತ್ತದೆ. 'ಕಂಬನಿ', 'ಚಿಗುರು', 'ಗೌರಮ್ಮನ ಕಥೆಗಳು' (ಕಥಾ ಸಂಗ್ರಹ ಗಳು), ಉತ್ಸಾಹದ ಈ ಚೆಲುಹುಡುಗಿ ತನ್ನ 27ನೇ ವಯಸ್ಸಿನಲ್ಲೇ ಅಕಾಲ ಮೃತ್ಯು ವಿಗೆ ತುತ್ತಾದುದು ಕನ್ನಡ ಸಾಹಿತ್ಯಕ್ಕಾದ ಅಪಾರ ನಷ್ಟ.

---

1 ಜನನ : ಡಿಸೆಂಬರ್ 12, 1911. ತಮಿಳು ನಾಡಿನ ಕರೂರು. ತಂದೆ–ರಾಮ ನಾಥನ್, ತಾಯಿ–ಸೀತಾಲಕ್ಷ್ಮಿ. 'ಸರೋಜ' ಕಾವ್ಯನಾಮ.

2 ಜೀವಿತ ಕಾಲ: (ಕ್ರಿ.ಶ. 1912–1940). ಮಡಕೇರಿಯಲ್ಲಿ ಜನನ. ತಂದೆ– ಎನ್. ಎಸ್. ರಾಮಯ್ಯ ; ಗಂಡ–ಬಿ. ಟಿ. ಜಿ. ಕೃಷ್ಣ.

**ಫಿ. ಎಂ. ಇನಾಂದಾರರ**[1] ಪೂರ್ಣ ಹೆಸರು "ವೆಂಕಟೇಶ ಮಧ್ವರಾವ್ ಇನಾಂದಾರ್. ಇವರು ಎಂ.ಎ. ಪದವಿ ಗಳಿಸಿದ ನಂತರ ಕೆಲಕಾಲ ನ್ಯಾಯಾಲಯ ದಲ್ಲಿ ಕೆಲಸ ಮಾಡಿ, 1940ರಲ್ಲಿ ಅಧ್ಯಾಪಕ ವೃತ್ತಿ ಕೈಗೊಂಡು ಸರ್ಕಾರಿ ಕಾಲೇಜು ಗಳಲ್ಲಿ ದುಡಿದು ನಿವೃತ್ತರಾದಮೇಲೂ ಖಾಸಗಿ ಕಾಲೇಜು, ಅನಂತರ ಯು.ಜಿ.ಸಿ. ಯಲ್ಲಿ ವೃತ್ತಿಬಾಂಧವ್ಯ ಬಿಡಲಾರದೆ, ಪ್ರಾಧ್ಯಾಪಕರಾಗಿದ್ದರು. ಇವರಿಗೆ ಪಾಠ ಮಾಡುವುದರಲ್ಲಿ ಅಷ್ಟೊಂದು ಆಸಕ್ತಿ. ವಿದ್ಯಾರ್ಥಿಗಳ ಮೇಲೆ ಅಮಿತ ಮಮತೆ. ಇವರು ಕಾದಂಬರಿ, ನಾಟಕ, ಕಥೆ, ಪ್ರವಾಸಿ ಲೇಖನ, ವಿಮರ್ಶೆ ಮುಂತಾಗಿ ಸಾಹಿತ್ಯದ ವಿವಿಧ ಭಾಗಗಳಲ್ಲಿ ಕೃತಿ ರಚಿಸಿದ್ದಾರೆ. ಇವರ ಮುಖ್ಯ ಕೃತಿಗಳು: ಮೂರಾಬಟ್ಟೆ, ಚಿತ್ರಲೇಖಾ, ಕನಸಿನ ಮನೆ, ಕಟ್ಟಿದ ಮನೆ, ಮಂಜು ಮುಸುಕಿದ ದಾರಿ, ಈ ಪರಿಯ ಸೊಬಗು, ಸ್ವರ್ಗದ ಬಾಗಿಲು, ಶಾಪ, ಎರಡು ಧ್ರುವ, ಮೋಹಿನಿ, ನವಿಲು ನೌಕೆ, ಯಾತ್ರಿಕರು, ಬಿಡುಗಡೆ (ನಾಟಕ), ಕಾಳಿದಾಸನ ಕಥಾ ನಾಟಕಗಳು, 'ಪಾಶ್ಚಾತ್ಯ ಕಾವ್ಯ ಮೀಮಾಂಸೆ' ಮುಂತಾದವುಗಳು.

**ಅಶ್ವತ್ಥ**[2]: ಇವರ ನಿಜನಾಮ ಅಶ್ವತ್ಥನಾರಾಯಣ ರಾವ್ ಕೂದುವಳ್ಳಿ. ಇವರು ವೃತ್ತಿಯಲ್ಲಿ ಇಂಜಿನಿಯರ್ ಆದರೂ ಸಾಹಿತ್ಯ ಪ್ರವೃತ್ತಿಯನ್ನು ಮೈಗೂಡಿಸಿ ಕೊಂಡು ಬೆಳೆದವರು. ಕನ್ನಡ ಕಥಾಕ್ಷೇತ್ರದಲ್ಲಿ ಸುಪ್ರಸಿದ್ಧರು. ಕಥೆ, ಕಾದಂಬರಿ, ನಾಟಕಗಳನ್ನು ರಚಿಸಿದ್ದಾರೆ. ಮುಖ್ಯ ಕೃತಿಗಳು: ಬಾಳ ಹೊಳೆ, ಮಹಾಯುದ್ಧ, ಮುನಿಯನ ಮಾದರಿ, ರಂಗನಾಯಕಿ, ಜಯಂತಿ, ಕಣ್ಮರೆ, ಕ್ರಾಂತಿಕಾರ, ಕಲ್ಯಾಣ ಮಸ್ತು, ಬರದ ಸಿರಿ, ಸೊಸೆಗೊಂದು ಉಡುಗೊರೆ, ಅಭಿನಯ ಜಗತ್ತು, ಅಗ್ನಿಸಾಕ್ಷಿ, ಹುಚ್ಚನ ಹೆಂಡತಿ, ಅಶ್ವತ್ಥರ ಕಥೆಗಳು, ಬಹುಮಾನ, ಮೂಗಿನ ಮೇಲೆ, ಮಗು, ದಿವ್ಯದರ್ಶನ, ಕೃಷ್ಣಲೀಲಾ—ಮುಂತಾದವುಗಳು.

"**ಬೀಚಿ**[3] ಅವರ ಹೆಸರನ್ನು ಕೇಳಿದ್ದೀರಾ?" ಪ್ರಶ್ನಿಸಿದರು ಮೇಸ್ಟರು.

"ರಾಮಾಯಣದ ಹೆಸರು ಕೇಳಿದಾಗೆಲ್ಲಾ 'ಬೀಚಿ' ನೆನಪಿಗೆ ಬರ್‍ತಾರೆ. ಅವರು ಹೇಳಿರೊ ಮಾತನ್ನು ಎಂದೂ ಮರ್‍ಯೋದಕ್ಕಾಗಲ್ಲ—'ಶ್ರೀರಾಮ ಅಸಲು ಅಕ್ಕ ಸಾಲಿಗ. ಹೆಂಡತಿಯನ್ನೇ ಬೆಂಕಿಯಲ್ಲಿ ಪುಟಕ್ಕೆ ಹಾಕಿ ಪರೀಕ್ಷೆ ಮಾಡಿದ.' ಅಹ್ಹಹ್ಹಾ..." ಗಹಗಹಿಸಿದ ಮುರುಳಿ. ಎಲ್ಲರೂ ದನಿ ಕೂಡಿಸಿದರು.

---

1 ಜೀವಿತ ಕಾಲ: ಅಕ್ಟೋಬರ್ 1, 1913–ಜನವರಿ 26, 1986. ಜನ್ಮಸ್ಥಳ–ಬೆಳಗಾವಿ ತಾಲ್ಲೋಕಿನ ಹುದಲಿ.

2 ಜನನ: ಜೂನ್ 18, 1912, ಚಾಮರಾಜನಗರ. ವಿದ್ಯೆ–ಬಿ.ಇ. (ಸಿವಿಲ್).

3 ಜೀವಿತ ಕಾಲ: ಏಪ್ರಿಲ್ 1913–1980. ಜನ್ಮಸ್ಥಳ–ಬಳ್ಳಾರಿ ಜಿಲ್ಲೆಯ ಹರಪನ ಹಳ್ಳಿ. ತಂದೆ–ರಾಯಸಮ ಶ್ರೀನಿವಾಸರಾವ್, ತಾಯಿ–ಭಾರತಮ್ಮ.

"ಬೀಚಿ ಮಾತು ಅಂದ್ರೆ ಇವನಿಗೆ ಪ್ರಾಣ...ಎಲ್ಲಾ ಬಾಯಿಪಾಠ ಮಾಡಿದ್ದಾನೆ ಮೇಸ್ಟ್ರೆ!" ಮುರಳಿಯನ್ನು ತೋರಿಸಿ ನುಡಿದ ಚಂದ್ರು.

"ಹೇಳಯ್ಯಾ, ನಾವೂ ಕೇಳಿ ಸ್ವಲ್ಪ ಸಂತೋಷ ಪಡೋಣ" ಮೇಸ್ಟರು ನುಡಿದರು.

ಮುರಳಿ ಪ್ರಾರಂಭಿಸಿದ—

"'ದುಡಿತ ದೇವರು, ಸೋಮಾರಿತನ ದೆವ್ವ.' 'ನನ್ನ ಪವಿತ್ರ ಪೀಳಿಗೆ ಅಳಿದು ಹೋದರೆ ಈ ಬಡ ಜಗತ್ತಿನ ಗತಿ ಏನು? ಎಂದು ಬಂಜೆ ಚೇಳು ಅಳುತ್ತದಂತೆ.' 'ಭಂಡಬಾಯಿ ಇದ್ದರೆ ಬಂಡಿ ಹೊನ್ನು ಇದ್ದಂತೆ.' 'ಮೂಗು ಕೊಟ್ಟ ದೇವರನ್ನು ಮರೆತು ಮೂಗುತಿ ಕೊಟ್ಟ ಮಾನವನನ್ನು ಪೂಜಿಸುವ ಯುಗ ಇದು.'....'ಬೀಚಿ' ಯವರು ಹಾಸ್ಯಚಿಲುಮೆ ಇದ್ದಂತೆ. ಇವು ಕೆಲವು ಸಿಡಿದ ಹಾಸ್ಯಮುತ್ತುಗಳು." ಮುರಳಿ ಹೇಳಿದಾಗ ಎಲ್ಲರೂ ಬೀಚಿ ಉವಾಚ ಆನಂದಿಸಿ ತೃಪ್ತನಗೆ ಬೀರಿದರು.

'ಬೀಚಿ'ಯವರ ಕೃತಿ ಹೆಸರು ಕೇಳಿದರೆ ಎಷ್ಟು ವಿಚಿತ್ರವಾಗಿದೆಯೋ ಅವರ ಸಹಿ ಕೂಡ ಅಷ್ಟೇ ವಿಚಿತ್ರ. 'ಬೀ' ಕನ್ನಡವಾದರೆ 'ಚಿ' ಇಂಗ್ಲೀಷು.

ಅವರ ಕೃತಿಗಳು : ಸತಿ ಸೂಳೆ, ಸರಸ್ವತಿ ಸಂಹಾರ, ಖಾದಿ ಸೀರೆ, ಹೆಂಡ ಕಾಣದ ಗಂಡ, ಸತ್ತವನು ಎದ್ದು ಬಂದಾಗ, ಮೋಡಮ್ಮನ ಗಂಡ, ಏರದ ಬಳೆ, ಬಂಗಾರದ ಕತ್ತೆ, ಮೂರು ಹೆಂಡ ಐದು ಜಡೆ, ಸುನಂದೂಗೆ ಏನಂತೆ, ಲೇವಡಿ ಟೈಪಿಸ್ಟ್, ಆರಿದ ಚಹಾ, ಬಿತ್ತಿದ್ದೇ ಬೇವು, ಕಾಮಂಣ...ಇವೆಲ್ಲಾ ಕಾದಂಬರಿಗಳು. ಹರಟೆಗಳ ಹೆಸರು ಕೇಳಿ ; ಹೆಸರು ಕೇಳಿದೊಡನೆ ನಗು ಬರುತ್ತದೆ : ತಿಂಮನ ತಲೆ, ಆರು ಏಳು ಸ್ತ್ರೀ ಸೌಖ್ಯ, ಅಮ್ಮಾವ್ರ ಕಾಲ್ಗುಣ, ಸಾಹುಕಾರ ಸುಬ್ಬಮ್ಮ, ಹೆಂಡತಿ ನಕ್ಕಾಗ, ಮಾತನಾಡುವ ದೇವರುಗಳು, ಗರತಿಯ ಗುಟ್ಟು...

"'ತಿಂಮ ರಸಾಯನ' ಇದಕ್ಕೆ ಸೇರಲ್ವೆ ಮೇಸ್ಟ್ರೆ?" ಪ್ರಶ್ನಿಸಿದ ದಿನಕರ.

"ತಿಮ್ಮನ ಶಬ್ದಕೋಶ 'ತಿಂಮ ರಸಾಯನ'" ನಕ್ಕು ನುಡಿದರು ಮೇಸ್ಟರು.

"'ಅಂದನಾ ತಿಂಮ' ನಾಲ್ಕು ಸಾಲಿನ ಸುಮಾರು 500 ಚುಟುಕಗಳ ಸಂಗ್ರಹ ಬಾಳ ಚೆನ್ನಾಗಿದೆ ಸಾರ್!" ನುಡಿದ ಮುರಳಿ.

ಬಳ್ಳಾರಿ ಭೀಮಸೇನರಾಯರ ಮಗ 'ಹಾಸ್ಯ ಚಕ್ರವರ್ತಿ' ಬೀಚಿಯವರ ವಿದ್ಯಾಭ್ಯಾಸ ಎಸ್. ಎಸ್. ಎಲ್. ಸಿ. ವರೆಗೆ ಆದರೂ ಜನತಾ ಕಾಲೇಜಿನಲ್ಲಿ ಹಾಸ್ಯ ಡಾಕ್ಟರೇಟ್ ಗಳಿಸಿದ್ದಾರೆ. ಇಂತಹ ಹಾಸ್ಯಪಟು ಸೇರಿ ದುಡಿದ ಇಲಾಖೆ ಪೋಲೀಸ್. ಇದೂ ಜೀವನದ ವ್ಯಂಗ್ಯವೇ ಸರಿ.

ನಗೆಯೆ ಜೀವನವಾಗಿ ಜೀವನವೆ ನಗೆಯಾಗಿ
ಬಾಳಬಯಸಿದ ಬಂಧು ಬೀಚಿಯವರು
ಜಗೆಯ ಬಾಂದಳದಲ್ಲಿ ಕವಿದ ಮೋಡಗಳಲ್ಲಿ
ನಗೆ ಮಿಂಚಿನೆಳೆಸೆಯ್ದ ರಸಿಕರವರು.

.............................................

ಅರವತ್ತರಂಚಿನಲಿ ಹಣಿಕಿ ಹಾರುವ ಜೀವ
ಹಾರೈಸುತಿದೆ ಸರ್ವ ಸಮತೆಯನ್ನು
ಗರುಡನಂದದಿ ಹಾರಿ ಗುರಿಯ ತಲುಪುವ ಛಲವ
ನೀಡವಗೆ ಗುರುದೇವ ಹರಕೆಯನ್ನು.

ಕವಿ ಎಸ್. ಡಿ. ಇಂಚಲರು 60ರ ಹರಯದ ಬೀಚಿಗೆ ಶುಭ ಹಾರೈಸಿದ್ದರು. ಪಾಪ, ಅವರು ಈಗ ಇಲ್ಲ" ನಿಡುಸುಯ್ದರು ಮೇಸ್ಟರು.

**ದೊಡ್ಡೇರಿ ವೆಂಕಟಗಿರಿರಾವ್**[1] : ವೃತ್ತಿಯಲ್ಲಿ ವೈದ್ಯರು. ಚಿತ್ರಗ್ರಹಣ ದಲ್ಲಿ ನಿಷ್ಣಾತರು. ಅಖಿಲ ಭಾರತ ಫೋಟೋಗ್ರಫಿ ಪರಿಷತ್ತಿನ ಉಪಾಧ್ಯಕ್ಷರು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ಅದರಲ್ಲೂ ಕಾದಂಬರಿ ಕ್ಷೇತ್ರದಲ್ಲಿ ಅತ್ಯಂತ ಜನಪ್ರಿಯ ರಾಗಿದ್ದಾರೆ. 'ಸುಧಾ'ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡ ಇವರ ಕಾದಂಬರಿ ಗಳು ಅಪಾರ ಮೆಚ್ಚುಗೆ ಗಳಿಸಿವೆ.

ಇವರ **ಕೃತಿಗಳು** : ತುಂಬಿದ ಕೊಡ (ಕಥಾ ಸಂಕಲನ) ; ಅತ್ತಿಯ ಹೂವು, ಸಂಪ್ರದಾನ, ದೃಷ್ಟಿದಾನ, ಅವಧಾನ, ಇಷ್ಟ ಕಾಮ್ಯ (ಕಾದಂಬರಿಗಳು) ; ರೋಹಿಣಿ (ಕವನ ಸಂಕಲನ) ; ಸಂತಾನ ಸಂಯಮ, ಪ್ರಸವ ಜ್ಞಾನ (ವೈಜ್ಞಾನಿಕ ಕೃತಿಗಳು) ; ಕಂದನ ಹಾಡುಗಳು, ದಾಳಿಂಬೆ ಚೆಲುವೆ (ಬಾಲ ಸಾಹಿತ್ಯ).

**ಭಾರತೀಸುತ**[2] : ಪ್ರಸಿದ್ಧ ಕಾದಂಬರಿಕಾರರು, ಜನಪ್ರಿಯ ಕತೆಗಾರರು, ಶಿಶು ಸಾಹಿತ್ಯ ರಚಕರು ಹಾಗೂ ಪತ್ರಿಕಾಕರ್ತರು. ವಯಸ್ಕರ ಶಿಕ್ಷಣ ಕ್ಷೇತ್ರಕ್ಕೆ ಸಹ ಸಾಕಷ್ಟು ಕೊಡುಗೆಗಳನ್ನಿತ್ತಿರುವ ಬಹುಮುಖ ಪ್ರತಿಭೆಯ ಲೇಖಕ.

---

1 ಜನನ : ಡಿಸೆಂಬರ್ 28, 1913 ; ಶಿವಮೊಗ್ಗ ಜಿಲ್ಲೆಯ ಕೆಳದಿ; ತಂದೆ-ತಿಮ್ಮಪ್ಪ, ತಾಯಿ-ರುಕ್ಮಿಣಿ.

2 ಜೀವಿತ ಕಾಲ : (ಮೇ 15. 1915-ಏಪ್ರಿಲ್ 4, 1976). ಜನ್ಮಸ್ಥಳ-ಕೊಡಗು ಜಿಲ್ಲೆಯ ಮಡಕೇರಿ ತಾಲ್ಲೋಕಿನ ಬಿಳಿಗೇರಿ ಗ್ರಾಮ. ತಂದೆ-ರಾಮಯ್ಯ ; ತಾಯಿ-ಸುಬ್ಬಮ್ಮ.

'ಭಾರತೀಸುತ' – ಇದು ಎಸ್. ಆರ್. ನಾರಾಯಣರಾಯರ ಕಾವ್ಯನಾಮ. ಚಿಕ್ಕ ವಯಸ್ಸಿನಲ್ಲೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದುದರಿಂದ ಹೆಚ್ಚು ಓದಲಾಗ ಲಿಲ್ಲ. ಮದರಾಸಿನ ವಿದ್ವತ್ ಪರೀಕ್ಷೆ ಪಾಸು ಮಾಡಿಕೊಂಡು ಕೆಲ ವರ್ಷಗಳು ಮಡಕೇರಿ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿದ್ದರು.

ಕೃತಿಗಳು : ಪೃಥ್ವಿರಾಜ, ಹುಲಿಯ ಹಾಲಿನ ಮೇವು, ಗಿರಿ ಕನ್ನಿಕೆ, ಎಡಕಲ್ಲು ಗುಡ್ಡದ ಮೇಲೆ, ಬಯಲು ದಾರಿ, ಅವಳ ದಾರಿ, ಇಳಿದು ಬಾ ತಾಯಿ, ವಕ್ರರೇಖೆ, ಗಿಳಿಯು ಪಂಜರದೊಳಿಲ್ಲ, ಬೆಳಕಿನೆಡೆಗೆ, ಬೆಂಕಿಯ ಮಳೆ, ಅಮಾತ್ಯ ನಂದಿನಿ, ಸಾಧನ ಕುಟೀರ, ಹಾವಿನ ಹುತ್ತ, ದೊರೆ ಮಗಳು ಮುಂತಾದ ಸುಮಾರು 32 ಕಾದಂಬರಿ ಗಳು. ಇವುಗಳಲ್ಲಿ ಹುಲಿ ಬೋನು, ಗಿರಿ ಕನ್ನಿಕೆ, ಗಿಳಿಯು ಪಂಜರದೊಳಿಲ್ಲ ಕಾದಂಬರಿ ಗಳಿಗೆ ರಾಜ್ಯ ಸರ್ಕಾರದ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿವೆ. 'ಹುಲಿಯ ಹಾಲಿನ ಮೇವು' ಹಲವು ವರ್ಷ ವಿಶ್ವವಿದ್ಯಾನಿಲಯದ ಪದವಿ ಪರೀಕ್ಷೆಗೆ ಪಠ್ಯಪುಸ್ತಕ ವಾಗಿತ್ತು.

ಇವರು ಪ್ರಕಟಿಸಿರುವ ಕಥಾಸಂಕಲನಗಳ ಸಂಖ್ಯೆ ಎಂಟು ಎಂದರೆ ಅವರೆಷ್ಟು ಜನಪ್ರಿಯ ಕಥೆಗಾರರಾಗಿದ್ದರೆಂದು ತಿಳಿಯುತ್ತದೆ. 'ಜಿಂಬ ಹಿಡಿದ ಮೀನು' ಸಂಕಲನ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದೆ.

ಕಿಲಾಡಿ ಮಂಗಣ್ಣ, ಹನ್ನೊಂದು ಹಂಸಗಳು (ಹ್ಯಾಂಫ್ ಅಂಡರ್ ಸನ್ ಕಥೆಯ ಸರಳಾನುವಾದ) ಗೆಳೆಯ ಮೊಲರಾಯ, ಜೇಸ್ತುಬಿದ್ದ ನರಿ, ನಳದಮಯಂತಿ, ಅಕ್ಕ ತಂಗಿಯರು, ಕಳ್ಳರ ಫಜೀತಿ, ಕಾವೇರಿ, ಕಿನ್ನರರ ಕುಣಿತ, ಕಿಲಾಡಿ ಗವುಜಗ, ಕುಣಿಯುತ ಬಂದರು ಕುಂಬಾರನ ಮಕ್ಕಳು, ಹೊನ್ನು ಹೊಳೆಯ ಅರಸು, ಬಜ್ಜಣ್ಣ ಬಹುದೂರ (ಸಚಿತ್ರ), ಮಂತ್ರದ ಕೊಳಲು ಮುಂತಾದವುಗಳು ಮಕ್ಕಳ ಪುಸ್ತಕ ಗಳು. 'ಸೊಳ್ಳೆ ಹರಡುವ ರೋಗಗಳು' ಕೃತಿಗೆ ಕೇಂದ್ರ ಸರ್ಕಾರದ ಬಹುಮಾನ ಲಭಿ ಸಿದೆ. 'ಡಾ॥ ಜಕೀರ್ ಹುಸೇನ್', 'ಮಲ್ಲಿಗೆ ಹಳ್ಳಿಯ ಜಾಣರು' ಇತರ ಕೃತಿಗಳು. ಬಹುಮುಖ ಪ್ರತಿಭೆಯ ಶ್ರೀಯುತರು ಹಲವು ವರ್ಷ ಪತ್ರಿಕಾ ವ್ಯವಸಾಯ ಸಹ ಕೈಗೊಂಡಿದ್ದರು. 'ರಾಷ್ಟ್ರ ಬಂಧು' ಹಾಗೂ ಕೊಡಗು 'ಗುರುವಾಣಿ' ಸಂಪಾದಕತ್ವ ವಹಿಸಿದ್ದ ಪತ್ರಿಕೆಗಳು.

**ಸಿ. ಕೆ. ನಾಗರಾಜರಾವ್*** : ಪ್ರಸಿದ್ಧ ಕತೆ, ಕಾದಂಬರಿ ಹಾಗೂ ನಾಟಕ ಕಾರರು. ಯುನೈಟೆಡ್ ಆರ್ಟಿಸ್ಟ್ ಕಲಾ ಸಂಸ್ಥೆಯ ಸ್ಥಾಪಕರು. ಹೊಸ ಹೊಸ

---

* ಜನನ : ಜೂನ್ 12, 1915. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ. ತಂದೆ– ಕೃಷ್ಣಮೂರ್ತಿರಾವ್, ತಾಯಿ–ಪುಟ್ಟಮ್ಮ.

ನಾಟಕಗಳನ್ನು ಪ್ರಯೋಗಿಸುವುದರಲ್ಲಿ ಬಹಳ ಆಸಕ್ತಿ. 'ಕಾಡು ಮಲ್ಲಿಗೆ' ಇವರ ಪ್ರಥಮ ಕಥಾಸಂಕಲನ. 'ಮಹಾಕವಿ ಲಕ್ಷ್ಮೀಶನ ಸ್ಥಳ ಮತ್ತು ಕಾವ್ಯ' ಪ್ರಬಂಧಕ್ಕೆ ಸಾಹಿತ್ಯ ಅಕಾಡೆಮಿ ಪುರಸ್ಕಾರ (1970), ಬೃಹತ್ ಚಾರಿತ್ರಿಕ ಕಾದಂಬರಿ 'ಪಟ್ಟ ಮಹಾದೇವಿ ಶಾಂತಲ'ಕ್ಕೆ ಜ್ಞಾನಪೀಠ ಪ್ರಶಸ್ತಿಗೆ ಸಮಾನವಾದ ಮೂರ್ತಿದೇವಿ ಸಾಹಿತ್ಯ ಪುರಸ್ಕಾರ (1978) ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿವೆ. ವಿಶ್ವಕಥಾ ಕೋಶದ 'ಸಾವಿಲ್ಲದವರು' ಸಂಪುಟದ ಸಂಪಾದಕರು. ಶರತ್ ಚಂದ್ರರ ಹಲವಾರು ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಪ್ರಸ್ತುತ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರು.

ಇವರ ಇತರ ಕೃತಿಗಳು : ನಾಯಿಕೊಡೆ (ವಿಡಂಬನ ಚಿತ್ರ); ಶೂದ್ರ ಮುನಿ (ನಾಟಕ); ಏಕಲವ್ಯ (ವಿಮರ್ಶೆ): ಪ್ರೇಮ ಯೋಗಿನಿ, ದರ್ಪ ಚೂರ್ಣ, ಕಾಶೀನಾಥ, ಮಂತ್ರ ದೀಕ್ಷೆ, ವಿಶ್ವೇಶ್ವರಿ, ನನ್ನ ನೆಚ್ಚಿನ ನಾಡೆ, ದೊಡ್ಡಪ್ಪನ ಕನಸು, ಕುರಂಗ ನಯನೆ–ಕಾದಂಬರಿಗಳು. ಶ್ರೀಯುತರು ಒಳ್ಳೆಯ ಅನುವಾದಕರೂ ಕೂಡ. ಹಿಂದಿ ಯಿಂದ, ಬಂಗಾಲಿಯಿಂದ ಅನೇಕ ಕೃತಿಗಳನ್ನು ಅನುವಾದಿಸಿದ್ದಾರೆ. ನಾಗರಾಜ ರಾಯರು ಸುರಿತ ನಟರು. ನೂರಕ್ಕೂ ಹೆಚ್ಚು ನಾಟಕಗಳಲ್ಲಿ ಅವರು ಅಭಿನಯಿ ಸಿದ್ದಾರೆ. ಕೆಲವು ಚಿತ್ರಗಳಿಗೆ ಚಿತ್ರಕಥೆ ಸಹ ಬರೆದಿದ್ದಾರೆ.

**ಮಿರ್ಜಿ ಅಣ್ಣಾರಾಯ**[1] : ಉತ್ತಮ ಕಥೆ, ಕಾದಂಬರಿಗಳನ್ನು ಸಾರಸ್ವತ ಲೋಕಕ್ಕೆ ಇತ್ತು ಸಂಪನ್ನಗೊಳಿಸಿರುವ ಪ್ರಸಿದ್ಧ ಸಾಹಿತಿ.

**ಚದುರಂಗ**[2] : ಇವರ ನಿಜನಾಮ ಶ್ರೀ ಸುಬ್ರಮಣ್ಯರಾಜ ಅರಸ್. ಮೈಸೂರಿನ ಅರಸು ಮನೆತನಕ್ಕೆ ಸೇರಿದವರು. ಮೈಸೂರಿನಲ್ಲಿ ಬಿ.ಎ. ಪದವಿ ಗಳಿಸಿದ ನಂತರ ಪೂನಾಕ್ಕೆ ಹೋಗಿ ಕೆಲಕಾಲ ವಕಾಲತು ಕಲಿತರು. ಚಲನಚಿತ್ರದ ಮೇಲಿದ್ದ ಅಭಿಮಾನದಿಂದ ಬೊಂಬಾಯಿಗೆ ಹೋಗಿ 'ಮೋಶನ್ ಪಿಕ್ಚರ್ಸ್' ಎಂಬ ಸಂಸ್ಥೆ ಸೇರಿ ಸಿನಿಮಾ ವಿಮರ್ಶೆ ಬರೆಯತೊಡಗಿದರು. ಈಗ ಮೈಸೂರಿನಲ್ಲಿ ನೆಲೆಸಿ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದಾರೆ.

ಇವರ ಕೃತಿಗಳು : ಸರ್ವ ಮಂಗಳಾ, ಉಯ್ಯಾಲೆ, (ಈ ಎರಡೂ ಕಾದಂ ಬರಿಗಳು ಚಲನಚಿತ್ರಗಳಾಗಿವೆ) 'ವೈಶಾಖಿ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ (1986) ಪ್ರಶಸ್ತಿ ನೀಡಿದೆ. ನನ್ನ ರಸಿಕ, ಸ್ವಪ್ನ ಸುಂದರಿ, ಬಂಗಾರದ ಗೆಜ್ಜೆ,

---

1 ಪುಟ 69–70 ನೋಡಿ.

2 ಜನನ : ಜನವರಿ 1916 ; ಹುಣಸೂರು ತಾಲ್ಲೂಕಿನ ಕಲ್ಲಹಳ್ಳಿ ಗ್ರಾಮದಲ್ಲಿ; ವಿದ್ಯಾಭ್ಯಾಸ–ಎಂ.ಎ.,

ಇಣುಕು ನೋಟ, ಶವದ ಮನೆ, ಮೀನಿನ ಹೆಜ್ಜೆ — ಕಥಾ ಸಂಕಲನಗಳು. ಕುಮಾರ ರಾಮ, ಇಲಿ ಬೋನು—ನಾಟಕಗಳು.

ಕರ್ನಾಟಕ ಸಾಹಿತ್ಯ ಅಕಾಡೆಮಿ 1978ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

**ದ. ಬಾ. ಕುಲಕರ್ಣಿ**[1] : ಇವರ ಪೂರ್ಣ ಹೆಸರು ದತ್ತಾತ್ರೇಯ ಬಾಲಕೃಷ್ಣ ಕುಲಕರ್ಣಿ. ಇವರು ಮನೋಹರ ಗ್ರಂಥ ಭಂಡಾರದ ಒಡೆಯರು. ಸ್ವತಃ ಕತೆಗಾರರು, ಪ್ರಬಂಧ ರಚನಕಾರರು ಆಗಿದ್ದುದರಿಂದ ಇವರ ಪ್ರಕಾಶನ ಕನ್ನಡ ಗ್ರಂಥ ಭಂಡಾರ ಒಳ್ಳೆಯ ಕೃತಿಗಳಿಂದ ಸಂಪದ್ಭರಿತಗೊಂಡಿದೆ.

ಇವರ ಕೃತಿಗಳು : ನಾ ಕಂಡ ಗೌರಮ್ಮ (ಈ ವ್ಯಕ್ತಿಚಿತ್ರಣದಿಂದಾಗಿಯೇ ಇವರು ಪ್ರಕಾಶಕ್ಕೆ ಬಂದುದು); ಕಪ್ಪು ಹುಡುಗಿ, ನಾಳಿನ ಮನಸು, ಹಾಸು ಹೊಕ್ಕು (ಕಥಾ ಸಂಕಲನಗಳು); ಸಾವಧಾನ (ಪ್ರಬಂಧ ಸಂಕಲನ)."

"ಅಣ್ಣಾ ಬಂದ್ರು. ಏನೋ ಭಾರಿ ಪುಸ್ತಕ ತಂದ್ರು...." ಓಡಿಹೋಗಿ ದಿನೇಶ ತಂದೆಯ ಕೈಯಿಂದ ಪುಸ್ತಕ ಇಸಿದುಕೊಂಡು ಹೆಸರು ಓದಿದ. 'ಪ್ರವಾಸಿ ಕಂಡ ಇಂಡಿಯಾ.'

"ಸಾಹಿತ್ಯ ಪರಿಷತ್ತಿನಲ್ಲಿ ಈ ಪುಸ್ತಕದ ಬಿಡುಗಡೆ ಇತ್ತು. ನನ್ನ ಸ್ನೇಹಿತನ ಬಲವಂತಕ್ಕೆ ಹೋಗ್ಬೇಕಾಯ್ತು. ಹೋದ್ಮೇಲೆ ಅಲ್ಲಿ ಮಾತ್ನಾಡಿದ ಜನ ಎಲ್ಲಾ ಇದನ್ನು ಹೊಗಳಿದ್ರು. ನಾನು ಕೊಂಡು ಓದೋಣ ಅಂತಾ ತಂದೆ" ವಾಸುದೇವ ರಾಯರು ನುಡಿದರು.

"ಲೇಖಕರು ಯಾರು ?" ಚಂದ್ರು ಪ್ರಶ್ನಿಸಿದ.

"**ಎಚ್. ಎಲ್. ನಾಗೇಗೌಡರು**[2] ಅಂತಾ, ನಿವೃತ್ತ ಐ.ಎ.ಎಸ್. ಅಧಿಕಾರಿಯಂತೆ. ಮೈಸೂರು ಸರ್ಕಾರದಲ್ಲಿ ಹಲವಾರು ಹಿರಿಯ ಹುದ್ದೆ ನಿರ್ವಹಿಸಿದ್ದರಂತೆ....ನಿಮ್ಗೆ ಗೊತ್ತಾ ಮೇಸ್ಟ್ರೆ ಅವ್ರ?" ಪ್ರಶ್ನಿಸಿದರು ವಾಸುದೇವರಾಯರು.

---

1 ಜೀವಿತ ಕಾಲ : (ಕ್ರಿ.ಶ. 1916-1963).

2 ಜನನ : ಡಿಸೆಂಬರ್ 1916, ನಾಗಮಂಗಲ ತಾಲ್ಲೋಕು ಹೆರಗನಹಳ್ಳಿ ದೊಡ್ಡಮನೆ ಕುಟುಂಬದಲ್ಲಿ. ವಿದ್ಯಾಭ್ಯಾಸ–ಬಿ.ಎಸ್.ಸಿ., ಎಲ್.ಎಲ್.ಬಿ., ಸಿವಿಲ್ ಸರ್ವಿಸ್ ಸ್ಪರ್ಧೆಯಲ್ಲಿ ಕುಳಿತು ರೆವಿನ್ಯೂ ಪ್ರೊಬೇಷನರ್ ಆಗಿ ಮೈಸೂರು ಸರ್ಕಾರದ ವೃತ್ತಿ ಪ್ರಾರಂಭ. ಅಸಿಸ್ಟೆಂಟ್ ಕಮೀಶನರ್, ಡೆಪ್ಯುಟಿ ಕಮೀಶನರ್, ಸೆಕ್ರೆಟರಿ, ಲೋಕ ಸೇವಾ ಆಯೋಗದ ಸದಸ್ಯ ಮುಂತಾದ ಹಲವಾರು ಗೌರವಾನ್ವಿತ ಹುದ್ದೆಗಳನ್ನು ನಿರ್ವಹಿಸಿದ್ದಾರೆ.

"ಓಹೋ! ಚೆನ್ನಾಗಿ ಗೊತ್ತು. ಅವರು ಸಂಪಾದಿಸಿರೋ 'ಸೋಬಾನೆ ಚಿಕ್ಕಮ್ಮನ ಪದಗಳು' ಬಾಳ ಚೆನ್ನಾಗಿದೆ. 'ಸರೋಜಿನಿ ದೇವಿ', 'ಮಾರ್ಕೊ ಪೋಲೊ' ಜೀವನ ಚರಿತ್ರೆ ಬರೆದಿದ್ದಾರೆ. 'ದೊಡ್ಡ ಮನೆ', 'ಸೊನ್ನೆಯಿಂದ ಸೊನ್ನೆಗೆ', 'ಭೂಮಿಗೆ ಬಂದ ಗಂಧರ್ವ' ಮುಂತಾದ ಉತ್ತಮ ಕಾದಂಬರಿಗಳನ್ನು ರಚಿಸಿದ್ದಾರೆ. ಗ್ರಾಮೀಣರ ಲೇಖನ ಚಿತ್ರಗಳನ್ನು 'ನನ್ನೂರು' ಕೃತಿಯಲ್ಲಿ ಬಹಳ ರಮ್ಯವಾಗಿ ಮೂಡಿಸಿದ್ದಾರೆ. 'ನಾನಾಗುವೆ ಗೀಜಗನ ಹಕ್ಕಿ'—ಕವನ ಸಂಕಲನ. 'ಪದವವೆ ನಮ್ಮ ಎದೆಯಲ್ಲಿ', 'ಹೆಳವರು ಮತ್ತು ಅವರ ಕಾವ್ಯಗಳು', 'ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ'—ಇವರು ಸಂಶೋಧಿಸಿ ಸಂಪಾದಿಸಿರುವ ವಿಶಿಷ್ಟ ಕೃತಿಗಳು. ಕಂಡು ಕೇಳಿದ ಕಥೆಗಳು, ಕಥೆ-ವ್ಯಥೆ, ಕರ್ನಾಟಕ ಜಾನಪದ ಕಥೆಗಳು—ಮುಂತಾಗಿ ಇನ್ನೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಇವರನ್ನು 1974ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

ಪ್ರಸ್ತುತ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸ್ಥಾಪಕ ಅಧ್ಯಕ್ಷರು. ಕರ್ನಾಟಕಾದ್ಯಂತ ಸಂಚರಿಸಿ ಜಾನಪದ ಪರಂಪರೆಯನ್ನು ವೀಡಿಯೋ, ಆಡಿಯೋಗಳಲ್ಲಿ ಸೆರೆಹಿಡಿಯುವ ಪ್ರಯತ್ನದಲ್ಲಿದ್ದಾರೆ. 'ನಾ ಕಂಡ ಪ್ರಪಂಚ' ನಾಗೇಗೌಡರು ಕೈಗೊಂಡ 3 ವಿದೇಶ ಪ್ರವಾಸದ ಫಲ—ಪ್ರವಾಸದ ಸಾಹಿತ್ಯ.

**ಎಂ. ಕೆ. ಇಂದಿರಾ*** : ಪ್ರಚಲಿತ ಲೇಖಕಿಯರ ಪಂಕ್ತಿಯಲ್ಲಿ ಅಗ್ರಸ್ಥಾನ ಪಡೆದಿರುವ ಜನಪ್ರಿಯ ಲೇಖಕಿ. ಕಲ್ಪನೆಯ ಸೌಂದರ್ಯದೊಡನೆ ಅನುಪಮ ಅನುಭವದ ಸಕ್ಕರೆ ಪಾಕವನ್ನು ಸೇರಿಸಿ, ಹುಟ್ಟಿ ಬೆಳೆದ ಮಲೆನಾಡಿನ ಸಿರಿ ನಿಸರ್ಗಕ್ಕೆ ಕನ್ನಡಿ ಹಿಡಿದು ಮಾನವನ ಮನಸ್ಸಿನೊಳಗೆ ಹಿಣಿಕಿ ನೋಡಿ ಮನೋಜ್ಞ ಪಾತ್ರಗಳನ್ನು ಸೃಷ್ಟಿಸುವುದರಲ್ಲಿ ಇವರು ಪಳಗಿದ ಕೈ.

ಇವರ ಕಾದಂಬರಿಗಳು : ಗೆಜ್ಜೆಪೂಜೆ, ಸದಾನಂದ, ಚಿದ್ವಿಲಾಸ, ತಪೋವನದಲ್ಲಿ, ಟು-ಲೆಟ್, ಮುಸುಕು, ಮನ ತುಂಬಿದ ಮಡದಿ, ತುಂಗಭದ್ರ, ಕಲಾದರ್ಶಿ, ಶಾಂತಿ ಧಾಮ, ಮನೆ ಮಗಳು, ಫಣಿಯಮ್ಮ, ನವರತ್ನ, ತಗ್ಗಿನ ಮನೆ ಸೀತೆ, ಕೂಚುಭಟ್ಟ, ಅಂಬರದ ಅಪ್ಸರೆ, ಕಲಾ ಸಂಗಮ, ಮುಂತಾಗಿ ಸುಮಾರು ಐವತ್ತು ಕಾದಂಬರಿಗಳು. ಇವಲ್ಲದೆ ನೂರಾರು ಸಣ್ಣ ಕಥೆಗಳನ್ನು ಕನ್ನಡ ಸಾಹಿತ್ಯ ಭಂಡಾರಕ್ಕೆ ಸೇರಿಸಿದ್ದಾರೆ. ಇವರ ಕಥೆ ಇಲ್ಲದ ವಾರ್ಷಿಕ ವಿಶೇಷ ಸಂಚಿಕೆಗಳು ಒಂದೂ ಹೊರ ಬರಲಾರವು ಅಂದರೆ ಅತಿಶಯೋಕ್ತಿ ಆಗಲಾರದು. ಇವರ 'ಗೆಜ್ಜೆಪೂಜೆ', ಫಣಿಯಮ್ಮ, ಹೂ ಬಾಣ (ಮುತ್ತು ಒಂದು ಮುತ್ತು) ಕಾದಂಬರಿಗಳು ಚಲನಚಿತ್ರ

---

* ಜನನ : ಕ್ರಿ.ಶ. 1917. ಮಲೆನಾಡಿನ ತೀರ್ಥಹಳ್ಳಿ.

ಗಳಾಗಿ ಅಪಾರ ಹೆಸರು ಗಳಿಸಿವೆ. ಇವರ 'ಸದಾನಂದ', 'ನವರತ್ನ' (ಕಥಾಸಂಕಲನ) 'ಫಣಿಯಮ್ಮ' ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿದೆ. 1975ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಶ್ರೇಷ್ಠ ಲೇಖಕಿಯೆಂದು ಸನ್ಮಾನಿಸಿದೆ. ಲೇಖಕಿಯರ ಸಂಘ ಹಾಗೂ ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಸನ್ಮಾನಿಸಿವೆ.

**ವಾಣಿ**[1] : ಶ್ರೀಮತಿ ಬಿ. ಎನ್. ಸುಬ್ಬಮ್ಮನವರ ಕಾವ್ಯನಾಮ 'ವಾಣಿ'. ಕನ್ನಡದ ಹಿರಿಯ ಲೇಖಕಿ, ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಅಧ್ಯಕ್ಷಿಣಿಯಾಗಿದ್ದ ಹೆಗ್ಗಳಿಕೆ ಇವರದು. ಓದಿದ್ದು ಎಸ್.ಎಸ್.ಎಲ್.ಸಿ.ವರೆಗೆ ಆದರೂ ಬಾಲ್ಯದಿಂದಲೂ ಇದ್ದ ಸಾಹಿತ್ಯಾಭಿರುಚಿ ಬೆಳೆದು ಪಲ್ಲವಿಸಿ ಕಾದಂಬರಿಗಾರ್ತಿಯಾಗಿ ರೂಪುಗೊಂಡರು. ವಾಣಿಯವರ ಪ್ರಥಮ ಕಥೆ 'ತಾರಾ' ಕಥಾಂಜಲಿಯಲ್ಲಿ ಪ್ರಕಟಗೊಂಡಾಗ ಅಪಾರ ಮೆಚ್ಚುಗೆ ಗಳಿಸಿತು. ಇದೇ ಮುಂದಿನ ಸಾಹಿತ್ಯ ಸೃಷ್ಟಿಗೆ ನಾಂದಿಯಾಯಿತು. ಬಹಳಷ್ಟು ಲೇಖಕಿಯವರಂತೆಯೇ ಇವರು ಸಾಂಸಾರಿಕ ಜೀವನವನ್ನೇ ಕಥೆ, ಕಾದಂಬರಿಗಳಿಗೆ ವಸ್ತುವಾಗಿ ಬಳಸಿಕೊಂಡರೂ ರಚನೆಯಲ್ಲಿ ಕಲಾವಂತಿಕೆಯನ್ನು ಕಾಣುತ್ತೇವೆ. ವ್ಯಕ್ತಿ ಚಿತ್ರಣದಲ್ಲಿ ನೈಜತೆಯನ್ನು ಗುರುತಿಸುತ್ತೇವೆ. ಅಂತಃಕರಣ ಕಲಕುವಂತಹ ನಿರೂಪಣೆ ಮೆಚ್ಚುವಂತಹುದು.

ಕಾದಂಬರಿಗಳು : ಎರಡು ಕನಸು, ಶುಭ ಮಂಗಳ, ಕಾವೇರಿ ಮಡಿಲಲ್ಲಿ, ಅನಿರೀಕ್ಷಿತ, ತ್ರಿಶೂಲ, ಪ್ರೇಮ ಸೇತು, ಹೊಸ ಬೆಳಕು, ಚಿನ್ನದ ಪಂಜರ, ಶಿಶಿರ ಗಾನ, ಬಲೆ, ಹೂವು ಮುಳ್ಳು, ಬಾಳೆಯ ನೆರಳು, ಮನೆ ಮಗಳು, ಅವಳ ಭಾಗ್ಯ, ಅಂಜಲಿ, ಬಿಡುಗಡೆ (ಎರಡು ಕನಸು, ಶುಭ ಮಂಗಳ ಚಲನಚಿತ್ರಗಳಾಗಿ ಅಪಾರ ಯಶಸ್ಸು ಗಳಿಸಿವೆ) ಮುಂತಾದವು. ಅರ್ಪಣೆ, ಕಸ್ತೂರಿ, ಅಪರೂಪದ ಅತಿಥಿ (ಕಥಾ ಸಂಕಲನಗಳು) ; 'ನವನೀತ' (ವಚನ ಸಂಗ್ರಹ).

ವಾಣಿಯವರಿಗೆ ರಾಜ್ಯ ಸರ್ಕಾರದ ಬಹುಮಾನ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿವೆ. ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಲೇಖಕಿಯರ ಮಹಿಳಾ ಸಮ್ಮೇಳನಗಳೂ ಇವರನ್ನು ಸನ್ಮಾನಿಸಿವೆ.

**ಬಸವರಾಜ ಕಟ್ಟೀಮನಿ**[2] : ಇನ್ನೊಬ್ಬ ಪ್ರತಿಭಾವಂತ ಕ್ರಾಂತಿಕಾರಿ ಸಾಹಿತಿ, ಪತ್ರಕರ್ತ ಹಾಗೂ ದೇಶಭಕ್ತ. ಗೊಡ್ಡು ಆಚಾರ ವ್ಯವಹಾರಗಳನ್ನು ಧಾರ್ಮಿಕ

---

1 ಜನನ : ಆಗಸ್ಟ್ 12, 1917. ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ. ತಂದೆ–ಬಿ. ನರಸಿಂಗರಾವ್, ತಾಯಿ–ಹಿರಿಯಕ್ಕಮ್ಮ, ಪತಿ–ನಂಜುಂಡಯ್ಯ.

2 ಜನನ : ಅಕ್ಟೋಬರ್ 5, 1919. ಬೆಳಗಾವಿ ಜಿಲ್ಲೆಯ ಗೋಕಾಕ.

ಪ್ರವೃತ್ತಿಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ಹೊಸ ಸಮಾಜಕ್ಕೆ ಕತೆ ಕಾದಂಬರಿಗಳ ಮೂಲಕ ದೀವಿಗೆ ಬೆಳಗಿದ ಹುಟ್ಟು ಸಾಹಿತಿ. ಇವರು ಶಾಲೆಯಲ್ಲಿ ಹೆಚ್ಚು ಓದಲಿಲ್ಲ. ಆದರೆ ಹೊರಗೆ, ಪ್ರಪಂಚ ವಿಶ್ವವಿದ್ಯಾನಿಲಯದಲ್ಲಿ ಕಲಿತದ್ದು ಅಪಾರ. ಅನುಭವದ ಡಾಕ್ಟರೇಟ್, ಇವರು 35 ಕಾದಂಬರಿಗಳನ್ನೂ ನೂರಾರು ಕಥೆಗಳನ್ನು (10 ಕಥಾ ಸಂಕಲನಗಳು) ರಚಿಸಲು ಅನುವು ನೀಡಿತು. ಪ್ರಮುಖ ಕಾದಂಬರಿಗಳು : ಆಶ್ರಮ ವಾಸಿ, ಕಸ್ತೂರಿ ಪ್ರಯೋಗ, ಖಾನಾವಳಿಯ ನೀಲಾ, ಜ್ವಾಲಾಮುಖಿಯ ಮೇಲೆ, ನಾನು ಪೋಲಿಸನಾಗಿದ್ದೆ, ಬೀದಿಯಲ್ಲಿ ಬಿದ್ದವಳು, ಮಾಡಿ ಮಡಿದವರು, ಮೋಹದ ಬಲೆಯಲ್ಲಿ, ಜರತಾರಿ ಜಗದ್ಗುರು, ಬಂಗಾರದ ಜಿಂಕೆಯ ಹಿಂದೆ, ದ್ರೋಹಿ, ಗೆಳೆಯನ ಮಡದಿ, ಚಕ್ರವ್ಯೂಹ, ಸಂಗೊಳ್ಳಿ ರಾಯನಾಯಕ, ಪ್ರಪಾತ ಮುಂತಾದವು. ಆಗಸ್ಟ್ ಒಂಬತ್ತು, ಜೋಳದ ಬೆಳೆಯ ನಡುವೆ, ಕಾರವಾನ್, ಸುಂಟರಗಾಳಿ, ಜೀವನ ಕಲೆ, ಸೈನಿಕನ ಹೆಂಡತಿ ಮುಂತಾದ ಕಥಾ ಸಂಕಲನಗಳು ಹೊರ ಬಂದಿವೆ. 'ಪಟ್ಟಣದ ಹುಡುಗಿ' ಇವರು ಬರೆದ ನಾಟಕ. 'ಸೇನಾಪತಿ ಚೆನ್ನಪ್ಪವಾಲಿ' ಜೀವನ ಚರಿತ್ರೆ. 'ನವಿಲೂರ ಮನೆಯಿಂದ' ಶ್ರೀ ಚನ್ನವೀರ ಕಣವಿಯವರೊಂದಿಗೆ, 'ರಸಿಕ ರಂಗ ದರ್ಶನ' ಮಾಧವ ಮಹರ್ಷಿಯವರೊಡಗೂಡಿ ಸಂಪಾದಿಸಿದ ಮಹತ್ ಕೃತಿಗಳು. 'ಕಟ್ಟೀಮನಿಯವರು ಕಾತರದ ಎದೆ ಡವ ಡವ ಎನ್ನುವುದನ್ನು ಕೇಳಿಸಬಲ್ಲರು. ಮೋಹದ ಶಕ್ತಿ ಇಳಿಜಾರಿನಲ್ಲಿ ಪ್ರವಾಹ ನುಗ್ಗಿದಂತೆ ನುಗ್ಗುವುದನ್ನು ಕಾಣಿಸಬಲ್ಲರು. ನಿರಾಸೆಯ ನಿಟ್ಟುಸಿರಿನ ಕಾವು ಮುಖಕ್ಕೆ ತಾಗುವಂತೆ ಮಾಡಬಲ್ಲರು. ಉತ್ಸಾಹದ ಎಳೆಯ ರಕ್ತ ನಮ್ಮ ದಮನಿಗಳಲ್ಲಿ ಚಿಮ್ಮುವಂತೆ ಮಾಡಬಲ್ಲರು.' ಎಂಬ ಶ್ರೀ ಎಲ್. ಎಸ್. ಶೇಷಗಿರಿರಾಯರ ವಿಮರ್ಶೋಕ್ತಿ ನೂರಕ್ಕೆ ನೂರರಷ್ಟು ಸತ್ಯ. ಇವರ ಕಥೆ ಕಾದಂಬರಿಗಳಲ್ಲಿ ವಸ್ತು ವೈವಿಧ್ಯ ಬಹು ಮೆಚ್ಚುವಂತಹುದು. ರಾಜಕೀಯ ಸಾಮಾಜಿಕ ಆರ್ಥಿಕ ಅವ್ಯವಸ್ಥೆ, ಸ್ವಾರ್ಥ, ದ್ರೋಹಿಗಳ ದಬ್ಬಾಳಿಕೆ, ಶ್ರೀಮಂತರ ಹೃದಯ ವಿಹೀನತೆ, ಡಾಂಭಿಕತನ, ಬಡತನದ ಗೋಳು, ಕೌಟುಂಬಿಕ ಸ್ನೇಹ, ಮಧುರ ಪ್ರೇಮ, ವಿರಸ, ಕಲಹ, ಸ್ವಾಭಿಮಾನ, ಔದಾರ್ಯ, ತ್ಯಾಗ ಎಲ್ಲ ಗುಣಗಳೂ ಮೂರ್ತವೆತ್ತು ನಿಂತಿವೆ, ಇವರ ಕೃತಿಗಳಲ್ಲಿ. ಇವರಿಗೆ ಪತ್ರಿಕಾ ಸಂಪರ್ಕ ಬಹಳ ಹೆಚ್ಚು. 'ತರುಣ ಕರ್ನಾಟಕ', 'ಸಮಾಜ', 'ಲೋಕಮತ', 'ಕರ್ನಾಟಕ ಬಂಧು' 'ಸ್ವತಂತ್ರ ಕರ್ನಾಟಕ', 'ವಾಣಿ', 'ವಿಶಾಲ ಕರ್ನಾಟಕ' ಮೊದಲಾದ ಪತ್ರಿಕೆಗಳಲ್ಲಿನ ಪರಿಶ್ರಮ ಇವರು 'ಉಷಾ' ಪತ್ರಿಕೆಯ ಸಂಪಾದಕತ್ವವನ್ನು ಬಹು ಚೆನ್ನಾಗಿ ನಿರ್ವಹಿಸಲು ನೆರವು ನೀಡಿತು. ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿದ ಸರಕಾರ ಇವರಿಗೆ ಶಾಸಕ ಪದವಿಯ ಗೌರವ ನೀಡಿದೆ. ಸೋವಿಯತ್ ರಷ್ಯಾ 'ನೆಹರು ಪಾರಿತೋಷಕ' ಸಮಿತಿಯಿಂದ ಇವರ 'ಜ್ವಾಲಾಮುಖಿಯ ಮೇಲೆ' ಉಜ್ವಲಕಾದಂಬರಿಗೆ ಬಹುಮಾನ ಸಂದಿದೆ. ಇವರು 1969, ಜೂನ್ ತಿಂಗಳಲ್ಲಿ ಸೋವಿಯತ್ ದೇಶದ ಯಾತ್ರೆ ಸಹ ಮಾಡಿ ಬಂದಿದ್ದಾರೆ. 1980ರಲ್ಲಿ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪಟ್ಟ ಕಟ್ಟಿ ಕನ್ನಡ ನಾಡು ಇವರನ್ನು ಗೌರವಿಸಿದೆ."

"ಇವರ ಅನುಭವ ಪ್ರವಾಸ ಕಥನರೂಪದಲ್ಲಿ 'ಕನ್ನಡ ಪ್ರಭ'ದಲ್ಲಿ ಬಾಳ ದಿನ ಬಂತು ಅಲ್ವೆ ಮೇಸ್ಟ್ರೆ?" ರಾಯರು ಪ್ರಶ್ನಿಸಿದಾಗ "ಹೌದು ಓದುಗರಿಗೆ ರಸದೌತಣ ನೀಡಿತು" ನುಡಿದರು ಮೇಸ್ಟರು. ಹುಸಿ ನಗುತ್ತ ಎದುರಿಗಿದ್ದ ತಾಮ್ರದ ಚೊಂಬಿನಿಂದ ಒಂದು ಲೋಟಾ ನೀರು ಬಗ್ಗಿಸಿಕೊಂಡು ಪುನಃ ಪ್ರಾರಂಭಿಸಿದರು.

**ತ.ರಾ.ಸು.*** : ಅಂದರೆ ತರೀಕೆರೆ ರಾಮಸ್ವಾಮಿಯವರ ಮಗ ಸುಬ್ಬರಾಯ. ಕಾದಂಬರಿ ಕ್ಷೇತ್ರದಲ್ಲಿ ಮಹತ್ತರ ಹೆಸರು ಗಳಿಸಿರುವ ಪ್ರತಿಭಾನ್ವಿತ ವ್ಯಕ್ತಿ. ಇವರ ಮಹೋನ್ನತ ಕಾದಂಬರಿಗಳಾದ 'ಚಂದವಳ್ಳಿಯ ತೋಟ', 'ಹಂಸ ಗೀತೆ', 'ಬಿಡುಗಡೆಯ ಬೇಡಿ', 'ನಾಗರ ಹಾವು' ಒಳ್ಳೆಯ ಚಲನಚಿತ್ರಗಳಾಗಿ ಬೆಳ್ಳಿ ಪರದೆಯ ಮೇಲೆ ಮೂಡಿ ಅಪಾರ ಜನಮನ್ನಣೆ ಗಳಿಸಿವೆ. ನಾಗರ ಹಾವಂತೂ ಹೊಸ ವಿಕ್ರಮ ಸಾಧಿಸಿ ಬೇರೆ ಭಾಷೆಗಳಲ್ಲೂ ಚಲನಚಿತ್ರವಾಗಿದೆ. ಇವರ ಚಾರಿತ್ರಕ ಕಾದಂಬರಿಗಳಾದ ರಕ್ತರಾತ್ರಿ, ಕಂಬನಿಯ ಕುಯಿಲು, ತಿರುಗು ಬಾಣ, ರಾಜ್ಯದಾಹ ಅಪಾರ ಜನಪ್ರಿಯತೆ ಗಳಿಸಿದ ಕಾದಂಬರಿಗಳು. ತ.ರಾ.ಸು. ಅವರ ಗದ್ಯಶೈಲಿ ತನ್ನದೇ ಆದ ವಿಶಿಷ್ಟ ವ್ಯಕ್ತಿತ್ವವನ್ನು ಕಾದಿರಿಸಿಕೊಂಡಿದ್ದು ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಪ್ರಸಿದ್ಧವಾಗಿವೆ.

ಇವರ ಇತರ ಕೃತಿಗಳು : ಸಾಕು ಮಗಳು, ಗಾಳಿ ಮಾತು, ಬೆಂಕಿಯ ಬಲೆ, ಬೆಳಕು ತಂದ ಬಾಲಕ, ಒಮ್ಮೆ ನಕ್ಕ ನಗು, ಆಕಸ್ಮಿಕ, ಶಿಲ್ಪಶಿಲೆ, ಚದುರಂಗದ ಮನೆ, ಮನೆಗೆ ಬಂದ ಮಹಾಲಕ್ಷ್ಮಿ, ಎರಡು ಹೆಣ್ಣು ಒಂದು ಗಂಡು, ಕಾರ್ಕೋಟಕ, ಸಿಡಿಲ ಮೊಗ್ಗು, ಶಿಶು ದೈತ್ಯ, ಚಂದನದ ಗೊಂಬೆ, ಡಾಕ್ಟರ್ ಕೋಟ್ನೀಸ್, ಪಂಜರದ ಪಕ್ಷಿ, ಹಾವು ಹಿಡಿದವರು ಮುಂತಾದ ಕಾದಂಬರಿಗಳು.

'ಅ.ನ.ಕೃ.'—ಅ.ನ.ಕೃ. ಕುರಿತ ಪರಿಚಯ ಗ್ರಂಥ. ಆಧುನಿಕ ದೃಷ್ಟಿಕೋನದ ನೂರಾರು ಉತ್ತಮ ಕಥೆಗಳನ್ನೂ ಸಹ ಬರೆದಿದ್ದಾರೆ. 1970ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಇವರನ್ನು ಸನ್ಮಾನಿಸಿದೆ.

ಇವರಿಗೆ 1978ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಿದೆ. ವಿಶ್ವ ಶಾಂತಿ ಪರಿಷತ್ತಿನ ಸದಸ್ಯರಾಗಿ ರಷ್ಯಾ, ಪೂರ್ವ ಜರ್ಮನಿ ಪ್ರವಾಸ ಮಾಡಿ ಬಂದಿದ್ದರು. ಅವರ ಕೊನೆಯ ಕೃತಿ 'ದುರ್ಗಾಸ್ತಮಾನ' ಅವರೆಲ್ಲ ಕಾದಂಬರಿಗಳಿಗೆ

---

* ಜೀವಿತ ಕಾಲ : ಏಪ್ರಿಲ್ 21, 1920 – ಏಪ್ರಿಲ್ 10, 1984. ಹುಟ್ಟಿದ ಸ್ಥಳ–ಮಲೆ ಬೆನ್ನೂರು. ತಂದೆ–ರಾಮಸ್ವಾಮಿ.

ಮುಕುಟ ಪ್ರಾಯ. ಇದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ (1985).

ತ. ರಾ. ಸು. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಶಾಶ್ವತ ಉಳಿಯುವ ಹೆಸರು.

**ತ್ರಿವಿಕ್ರಮ**[1] : ಬಹುಮುಖ ಪ್ರತಿಭೆಯ ಲೇಖಕರು. ಕತೆ, ಕಾದಂಬರಿ, ಜೀವನ ಚರಿತ್ರೆ, ಬಾಲ ಸಾಹಿತ್ಯ, ಪ್ರವಾಸ ಸಾಹಿತ್ಯ ಎಲ್ಲಾ ಕ್ಷೇತ್ರಗಳಲ್ಲೂ ಕೃತಿ ನೀಡಿದ್ದಾರೆ. ಇವರ ಕೃತಿಗಳ ಸಂಖ್ಯೆ ಸುಮಾರು 35 ; ನಾಟ್ಯ ಕಸ್ತೂರಿ, ಕಿಟಕಿಯ ಕಿಂಡಿ, ಹೆಣ್ಣಾಗಿ ಹುಟ್ಟಬಾರದು, ಇಬ್ಬರು ಸವತಿಯರು, ಬೆಳೆಯುವ ಪೈರು, ವಂಶೋದ್ಧಾರಕ, ತಾಯಿ ದೇವರು (ಕಾದಂಬರಿಗಳು), ರಸಗಂಗೆ (ಕವನ ಸಂಗ್ರಹ), ಬೃಂದಾವನ, ಕಾಮನ ಬಿಲ್ಲು (ಕಥಾ ಸಂಗ್ರಹಗಳು) : ಏಕಲವ್ಯ (ಜೀವನ ಚರಿತ್ರೆ) ; ಈಶ್ವರ ಚಂದ್ರ, ವಿದ್ಯಾ ಸಾಗರ, ವೇಲುತಂಬಿ (ಬಾಲ ಸಾಹಿತ್ಯ) ; ಭಾರತ ತೀರ್ಥ (ಪ್ರವಾಸ ಸಾಹಿತ್ಯ.)

" 'ಸತ್ಯಕಾಮ' ಹೆಸ್ರು ಕೇಳಿದ್ದೀರಾ ?" ಪ್ರಶ್ನಿಸಿದರು ಮೇಸ್ಟರು. "ಪುರಾಣದ ಚೆಲುವು ಹೆಣ್ಣನ್ನು ನಿಗಿನಿಗಿಸುವ ಇಪ್ಪತ್ತನೆ ಶತಮಾನದ ಕೃತಕ, ಮೋಹಕ ಪರಿಸರ ದಲ್ಲಿ ಬೆರಗುಗೊಳಿಸುವಂತೆ ತಂದು ನಿಲ್ಲಿಸಿ ಆಕರ್ಷಣೆಯ ಮಹಾಪೂರದಲ್ಲಿ ಹಿಂದಿನ ಧಾರ್ಮಿಕತೆ, ವೈದಿಕ ಶ್ರೇಷ್ಠತೆ ಪ್ರತಿಫಲಿಸುವಂತೆ ಮಾಡುವುದೇ 'ಸತ್ಯಕಾಮ' ಅವರ ಶೈಲಿಯ ವೈಶಿಷ್ಟ್ಯತೆ. ಓದುವ ಎಲ್ಲಾರ್ಗೂ ಇವರು ಸುಪರಿಚಿತರು." ವಾಸುದೇವ ರಾಯರು ನುಡಿದಾಗ ಮೇಸ್ಟರು ಸಂತೋಷದಿಂದ ಅವರತ್ತ ನೋಡಿ ತಮ್ಮ ವ್ಯಾಖ್ಯಾನ ಮುಂದುವರಿಸಿದರು.

**'ಸತ್ಯಕಾಮ'**[2] : ರೈತರ ಮನೆಯಲ್ಲಿ ಹುಟ್ಟಿದ ಇವರು ಹೆಚ್ಚಿನ ವಿದ್ಯಾಭ್ಯಾಸ ವನ್ನು ಮಾಡಲಾಗದೆ ಎಳೆ ವಯಸ್ಸಿನಲ್ಲೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ರಾಷ್ಟ್ರದ ಸೇವೆಗಾಗಿ ಅಹರ್ನಿಶಿ ದುಡಿದರು. ಹಲವು ಬಾರಿ ಜೈಲುವಾಸ ಕೂಡ ಅನು ಭವಿಸಿದರು. ಮಂತ್ರಾಲಯ, ಉಡುಪಿಯಲ್ಲಿ ಹಲವು ವರ್ಷ ಇದ್ದು ಶ್ರದ್ಧೆಯಿಂದ ಸಂಸ್ಕೃತ ಕಲಿತು ಪಾಂಡಿತ್ಯ ಪಡೆದರು. ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಕೆಲ ಕಾಲ ಸಂಪಾದಕ ಮಂಡಳಿಯಲ್ಲೂ ದುಡಿದು ಪತ್ರಿಕೋದ್ಯಮದಲ್ಲಿ ಅನುಭವ ಗಳಿಸಿ ಅದನ್ನು ಉತ್ತಮ ಸಾಹಿತ್ಯ ರಚಿಸುವುದರಲ್ಲಿ ಉಪಯೋಗಿಸಿಕೊಳ್ಳುತ್ತಿದ್ದಾರೆ.

---

1 ಜನನ ಜುಲೈ 19, 1920 ಬೆಂಗಳೂರು. ತಂದೆ–ಕೃಷ್ಣಮೂರ್ತಿ, ತಾಯಿ–ಜಯಲಕ್ಷ್ಮಮ್ಮ.

2 ಜನನ : 1922, ಜಮಖಂಡಿ ತಾಲ್ಲೋಕಿನ ಕಲ್ಲಹಳ್ಳಿ, ಇವರ ನಿಜವಾದ ಹೆಸರು–ಎ. ಕೆ. ಶಹಾಪೂರ್ (ಅನಂತಕೃಷ್ಣ ಶಹಾಪೂರ್).

ಕೃತಿಗಳು : ಕಪಿಲ ವಸ್ತು, ರಾಜ ಬಲಿ, ಬೃಹಸ್ಪತಿ, ಲಾವಣ್ಯ, ಶೃಂಗಾರ ತೀರ್ಥ, ಚಂಡ ಪ್ರಚಂಡ, ಪಂಜರಮಗಳ ನಡುವೆ, ಪುರುಷ ಸೂಕ್ತ, ಮನೆ ಮಾರು, ಕೃಷ್ಣಾರ್ಪಣ, ಆಹುತಿ, ದೇವತೆಗಳ ದಂಡನಾಯಕ, ಸ್ಕಂದ, ರಾಜಕ್ರೀಡೆ ಮುಂತಾದವುಗಳು.

**ಕೋ. ಚನ್ನಬಸಪ್ಪ**[1] : ವಕೀಲರಾಗಿ ಜೀವನ ಪ್ರಾರಂಭಿಸಿ. ಲೇಖಕರಾಗಿ ಹೆಸರು ಗಳಿಸಿ ನಿಷ್ಣಾತ ನ್ಯಾಯಮೂರ್ತಿಗಳಾಗಿ ಇದೀಗ ತಾನೇ ನಿವೃತ್ತರಾಗಿರುವ ಶ್ರೀಯುತರು ಸಾಹಿತ್ಯ ಕ್ಷೇತ್ರದಲ್ಲಿ ಬಹುಮುಖ ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ. ಇವರ ಕೃತಿ 'ಖಜಾನೆ' ಭಾರತ ಸರ್ಕಾರದ ನೂತನ ಅಕ್ಷರಸ್ಥರ ಸಾಹಿತ್ಯ ಸ್ಪರ್ಧೆಯಲ್ಲಿ 1953ರಲ್ಲಿ ಬಹುಮಾನ ಗಳಿಸಿದೆ. 'ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ'ಗೆ ಕುವೆಂಪು ವಿದ್ಯಾವರ್ಧಕ ಟ್ರಸ್ಟ್‌ನ ಪುರಸ್ಕಾರ ಲಭಿಸಿದೆ.

ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ವಿಮರ್ಶೆ, ಜೀವನ ಚರಿತ್ರೆ, ಕವನ, ಮುಂತಾದ ವಿಭಾಗಗಳಲ್ಲಿ ಸಲ್ಲಿಸಿರುವ ಕೃತಿ ಸಂಖ್ಯೆ 50ಕ್ಕೂ ಹೆಚ್ಚು.

ಮುಖ್ಯ ಕೃತಿಗಳು : ರಕ್ತ ತರ್ಪಣ, ಹಿಂದಿರುಗಿ ಬರಲಿಲ್ಲ (ಕಾದಂಬರಿಗಳು); ಗಡೀಪಾರು, ನಮ್ಮೂರ ದೀಪ (ಸಣ್ಣ ಕಥೆಗಳು) ; ಪ್ರಾಣ ಪಕ್ಷಿ, ಹೃದಯ ನೈವೇದ್ಯ (ಕವನ), ಶ್ರೀ ಅರವಿಂದರು, ಶ್ರೀ ಮೃತ್ಯುಂಜಯ ಸ್ವಾಮಿಗಳು, (ಜೀವನ ಚಿತ್ರಗಳು) ; ಬೆಳಕಿನೆಡೆಗೆ, ನಮಗೆ ಬೇಕಾದ ಸಾಹಿತ್ಯ, ರಾಮಕೃಷ್ಣ ಲೀಲಾ ನಾಟಕಂ. ನನ್ನ ಮನಸ್ಸು, ನನ್ನ ನಂಬುಗೆ, ದಿವಾನ್ ಬಹಾದ್ದೂರ್, ರಾಮಕೃಷ್ಣರ ದುಷ್ಟಾಂತ ಕಥೆಗಳು, ಗಾಯಕನಿಲ್ಲದ ಸಂಗೀತ, ಆ ಮುಖ ಈ ಮುಖ, ಈ ರಾಜ್ಯದೊಡೆಯ ರೈತ, ಶ್ರೀ ಅರವಿಂದರು ಮತ್ತು ಅವರ ಆಶ್ರಮ ಮುಂತಾದವು.

**ನಿಡಂಬೂರ್ ವ್ಯಾಸರಾಯ ಬಲ್ಲಾಳ**[2] : ಇಂದಿನ ಪೀಳಿಗೆಯ ಸಮರ್ಥ ಕತೆಗಾರರು ಹಾಗೂ ಕಾದಂಬರಿಕಾರರಲ್ಲಿ ಪ್ರಮುಖರು. ಇವರು ಪ್ರಸಿದ್ಧ ಕತೆಗಾರರು ಹಾಗೂ ಶ್ರೇಷ್ಠ ಕಾದಂಬರಿಕಾರರು. ಚಿಕ್ಕಂದಿನಿಂದ ಮುಂಬಯಿಯಲ್ಲೇ ನೆಲಸಿ ತೈಲ ಕಂಪನಿಯೊಂದರಲ್ಲಿ ಉದ್ಯೋಗಿಯಾಗಿದ್ದು ಸಾಹಿತ್ಯ ಸೇವೆ, ಸಾಂಸ್ಕೃತಿಕಚಟುವಟಿಕೆಗಳಲ್ಲಿ ಆಸ್ಥೆವಹಿಸಿರುವ ಈ ವ್ಯಕ್ತಿ ಕರ್ನಾಟಕ ಸಂಘ, ಸಾಹಿತ್ಯ ಕೂಟ, ಕನ್ನಡ ಕಲಾ ಕೇಂದ್ರಗಳ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಾರೆ. ಮುಂಬಯಿ ಜೀವನ

---

1 ಜನನ : ಫೆಬ್ರವರಿ 21, 1922. ಬಳ್ಳಾರಿ ಜಿಲ್ಲೆ ಆಲೂರು ಮಜರಾ ಕಾನಾಮಡುವು. ತಂದೆ-ಕೋಣನ ವೀರಣ್ಣ ; ತಾಯಿ-ಬಸಮ್ಮ.

2 ಜನನ : ಡಿಸೆಂಬರ್ 1, 1923, ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯಲ್ಲಿ. ತಂದೆ-ರಾಮದಾಸ; ತಾಯಿ-ಕಲ್ಯಾಣಿ.

ಇವರ ಕಥೆ, ಕಾದಂಬರಿಗಳಲ್ಲಿ ಕಲ್ಪನಾತ್ಮಕವಾಗಿ ಮೂಡಿ ಬಂದಿವೆ. ಸುಮಾರು 40 ವರ್ಷಗಳ ಹಿಂದೆ 'ಅಂಕಣ'ಕಾರರಾಗಿ ಇವರು ಮುಂಬಯಿಯಲ್ಲಿ ವಿಜೃಂಭಿಸಿದ್ದರು. 'ನುಡಿ' ಪತ್ರಿಕೆಯಲ್ಲಿ ಅದು ನಡೆದಷ್ಟು ಕಾಲವೂ ಅಂದರೆ ಸುಮಾರು 4 ವರ್ಷ 'ಮರುದನಿ' ಹೊರಡಿಸಿದ್ದರು.

ಬಲ್ಲಾಳರು ನಾಟಕಗಳನ್ನು ರಚಿಸಿದ್ದಾರೆ. ಇಬ್ಸನ್ ಮತ್ತು ಬರ್ನಾರ್ಡ್ ಶಾ ಅವರ ನಾಟಕಗಳ ರೂಪಾಂತರ 'ಗಿಳಿಯು ಪಂಜರದೊಳಿಲ್ಲ' ಮತ್ತು 'ಮುಳ್ಳಿಲ್ಲದೆ ಮಂದಾರ.' 'ನಾನೊಬ್ಬ ಭಾರತೀಯ ಪ್ರವಾಸಿ' (ಪ್ರವಾಸ ಕಥನ); ಸಂಪಿಗೆ, ಮಂಜರಿ, ಕಾಡು ಮಲ್ಲಿಗೆ (ಕಥಾ ಸಂಕಲನಗಳು), ಹೇಮಂತ ಗಾನ, ವಾತ್ಸಲ್ಯ ಪಥ, ಉತ್ತರಾಯಣ, ಬಂಡಾಯ, ಅನುರಕ್ತೆ (ಕಾದಂಬರಿಗಳು), ಖುರ್ಶಿದ್ ನರಿಮನ್ (ಕಿಶೋರ ಸಾಹಿತ್ಯ.) 'ಬಂಡಾಯ'ಕ್ಕೆ (1986) ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆತಿದೆ. 'ಕಾಡು ಮಲ್ಲಿಗೆ' ಕಥಾ ಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, 'ಅನುರಕ್ತೆ' ಕಾದಂಬರಿಗೆ ಮೈಸೂರು ಸರ್ಕಾರದ ಬಹುಮಾನ ದೊರೆತಿದ್ದು ರಾಜ್ಯ ಸಾಹಿತ್ಯ ಅಕಾಡೆಮಿ ಇವರನ್ನು (1983)ರಲ್ಲಿ ಸನ್ಮಾನಿಸಿದೆ.

**ನಿರಂಜನ*** : ಸಾಹಿತ್ಯ ಕ್ಷೇತ್ರದಲ್ಲಿ ಹೆಸರಿಸಬೇಕಾದ ವ್ಯಕ್ತಿ ಶ್ರೀ ನಿರಂಜನ. ಇವರ ನಿಜವಾದ ಹೆಸರು ಕುಳಕುಂದ ಶಿವರಾಯ. ಪ್ರಸಿದ್ಧ ಪತ್ರಿಕೋದ್ಯಮಿ, ಪ್ರಗತಿ ಶೀಲ ಚಳುವಳಿಗಾರ. ನುರಿತ ಕತೆಗಾರ, ಹೆಸರಾಂತ ಕಾದಂಬರಿ ಕರ್ತೃ, ವಾಗ್ಮಿ, ಒಳ್ಳೆಯ ಭಾಷಣಕಾರ. ಜ್ಞಾನ ಗಂಗೋತ್ರಿಯ 'ಕಿರಿಯರ ವಿಶ್ವಕೋಶ'; 'ವಿಶ್ವ ಕಥಾಕೋಶ' ಇವರ ಪ್ರಧಾನ ಸಂಪಾದಕತ್ವದಲ್ಲಿ ಹೊರ ಬಂದಿರುವ ಮಹತ್ತರ ಕೃತಿಗಳು.

ಇವರ ಹಲವಾರು ಕೃತಿಗಳು ಇತರ ಭಾಷೆಗಳಿಗೆ ಅನುವಾದಿತಗೊಂಡಿವೆ. 'ಚಿರಸ್ಮರಣೆ' ಕಾದಂಬರಿಗೆ ಸೋವಿಯತ್ ಲ್ಯಾಂಡ್ ನೆಹರೂ ಬಹುಮಾನ ಬಂದಿದೆ. 'ವಿಮೋಚನೆ', 'ಮದರ್' ಕಾದಂಬರಿಗಳು ರಷ್ಯ ಭಾಷೆಗೆ ಅನುವಾದಗೊಂಡಿವೆ.

---

* ಜನನ : 1924. ಕುಮಾರ ಪರ್ವತದ ತಪ್ಪಲಿನಲ್ಲಿರುವ 'ಕುಳಕುಂದ' ಗ್ರಾಮದಲ್ಲಿ. ಬಾಲ್ಯದ ಕಾವ್ಯನಾಮ : 'ಕಿಶೋರ'. ಇವರು ದುಡಿದಿರುವ ಪತ್ರಿಕೆಗಳು : ರಾಷ್ಟ್ರಬಂಧು, ಜನಶಕ್ತಿ, ಕಂಠೀರವ, ತಾಯಿನಾಡು, ಜನವಾಣಿ, ಸಂಯುಕ್ತ ಕರ್ನಾಟಕ, ವಾಣಿ ಪ್ರಜಾಮತ, ಪ್ರಜಾವಾಣಿ. ಕುಳಕುಂದ ಶಿವರಾಯರು 'ನಿರಂಜನ'ರಾದದ್ದು 1951ರಲ್ಲಿ.

ಇವರ ಕೃತಿಗಳು : ಕಾದಂಬರಿಗಳು 25; ಕಥಾ ಸಂಕಲನಗಳು 9; ನಾಟಕಗಳು 3; ಜೀವನ ಚರಿತ್ರೆ 1; ಅಂಕಣ ಸಂಕಲನಗಳು 7; ಭಾಷಾಂತರಗಳು 10.

ಇವರ ಇತರ ಕೃತಿಗಳು : ಬನಶಂಕರಿ, ಅಭಯ, ದೂರದ ನಕ್ಷತ್ರ, ರಂಗಮ್ಮನ ವಠಾರ, ಕೊನೆ ನಮಸ್ಕಾರ, ವಿಲಾಸಿನಿ, ನಾಸ್ತಿಕ ಕೊಟ್ಟ ದೇವರು, ಹಿಮಾಲಯದ ದಳ್ಳುರಿ, ಅದಃ ಪತನ, ಮಾನವನ ಪಾಡು, ಕಾಲಕ್ಷೇಪ, ಕಲ್ಯಾಣ ಸ್ವಾಮಿ, ಋತು ರಾಜ, ಮೃತ್ಯುಂಜಯ ಮುಂತಾದವುಗಳು. 'ಆಹ್ವಾನ' ಇವರು ರಚಿಸಿರುವ ನಾಟಕ.

ಇವರು ರಚಿಸಿರುವ ಸುಮಾರು 160 ಕಥೆಗಳು ಎರಡು ಭಾಗಗಳಾಗಿ 'ಧ್ವನಿ' ಎಂಬ ಹೆಸರಿನಲ್ಲಿ 1987ರಲ್ಲಿ ಹೊರ ಬಂದಿವೆ. ಉಳಿದ ಅವರೆಲ್ಲಾ ಕೃತಿಗಳು ಐ. ಬಿ. ಹೆಚ್. ಪ್ರಕಾಶನದ ವತಿಯಿಂದ ಸುಮಾರು 30 ಪುಸ್ತಕಗಳಲ್ಲಿ ಹೊರ ಬರಲಿ ರುವುದು ಬಹು ಸಂತಸದ ವಿಷಯ.

**ಶ್ರೀನಿವಾಸರಾವ್ ಕೊರಟಿ*** : ಪ್ರಾಧ್ಯಾಪಕ ಶ್ರೀನಿವಾಸರಾವ್ ಕೊರಟಿ ಚಾರಿತ್ರಕ ಕಥೆ, ಕಾದಂಬರಿ ಕ್ಷೇತ್ರಗಳಲ್ಲಿ ಬಹಳ ಹೆಸರುಗಳಿಸಿದ್ದ ಹಿರಿಯ ಸಾಹಿತಿ. ಆಚಾರ್ಯ ಪಾಠ ಶಾಲೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ನಿವೃತ್ತಗೊಂಡ ನಂತರ ಪೂರ್ಣ ರೂಪದಿಂದ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದರು. ವಿಜಯನಗರದ ಹಿನ್ನೆಲೆ ಯಲ್ಲಿ ಸುಮಾರು 20 ಕಾದಂಬರಿಗಳನ್ನು ರಚಿಸಿದ್ದಾರೆ. 'ಅಮಾತ್ಯರತ್ನ' ಕಾದಂ ಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ವಿಜಯನಗರದ ಹಿನ್ನೆಲೆಯ ಹಲವು ಕಾದಂಬರಿಗಳು ತೆಲುಗಿಗೂ ಅನುವಾದಗೊಂಡಿವೆ. 'ಮಿಸ್ ಲೀಲಾವತಿ', 'ಗೃಹಿಣಿ' ಮುಂತಾದ ಕಾದಂಬರಿಗಳು ಚಲನಚಿತ್ರಗಳಾಗಿ ಅಪಾರ ಯಶಸ್ಸು ಗಳಿಸಿವೆ.

ಇತರ ಕೃತಿಗಳು : ಪರಮೇಶ್ವರ ಪುಲಿಕೇಶಿ, ರಾಯ ಪರಾಭವ, ಗುಣವಂತಿ, ಲಕ್ಷ್ಮಿ, ಉಭಯ ಲೋಕೇಶ್ವರ, ಚಾರಿತ್ರಕ ಕಥಾ ಮಂಜರಿ, ಹೆಣ್ಣಿನ ಹುಚ್ಚು, ನಿರಂಜಿನಿ, ರಾಮರಾಯನ ತಲೆ, ರಾಜಕ್ಷಯ. ಜಗನ್ಮೋಹಿನಿ, ಶಾಂತಿ ವಾದಿ, ದೊಂಬರ ಚೆಲುವೆ, ಸೂಳೆಯ ಕೆರೆ ಮುಂತಾದವುಗಳು.

ದಾಸ ಸಾಹಿತ್ಯದ ಬಗ್ಗೆ ಬಹಳ ಸಂಶೋಧನೆ ನಡೆಸಿ ಹತ್ತಾರು ಕೃತಿಗಳನ್ನು ರಚಿಸಿದ್ದಾರೆ. ಮುಖ್ಯವಾದವುಗಳು ಶ್ರೀ ವಾದಿರಾಜರು, ಶ್ರೀ ಜಯತೀರ್ಥರು, ಶ್ರೀ ಪುರಂದರದಾಸರು.

ಶ್ರೀಯುತರು ಕೆಲವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'ಯ ಸಂಪಾದಕ ಮಂಡಲಿಯ ಸದಸ್ಯರಾಗಿದ್ದರು.

---

* ಜೀವಿತ ಕಾಲ : ಅಕ್ಟೋಬರ್ 1925 – ಏಪ್ರಿಲ್ 1983. ಹುಟ್ಟಿದ ಸ್ಥಳ– ಹೊಸಕೋಟೆ ತಾಲ್ಲೋಕು 'ಕೊರಟಿ'.

ಶಿವಪ್ಪನಾಯಕ, ನೃಪತುಂಗ, ವಿದ್ಯಾರಣ್ಯರು, ಮುಂಡರಗಿ ಭೀಮರಾಯ, ಕಿತ್ತೂರ ಚೆನ್ನಮ್ಮ ಇವರು ರಚಿಸಿರುವ ಕಿಶೋರ ಸಾಹಿತ್ಯ.

**ಜಯತೀರ್ಥ ರಾಜಪುರೋಹಿತ**[1] : ಕರ್ನಾಟಕ ಸರ್ಕಾರದಲ್ಲಿ ಹಲವು ಹುದ್ದೆಗಳನ್ನು ನಿರ್ವಹಿಸಿ; ಐ.ಎ.ಎಸ್. ಹುದ್ದೆಗೇರಿ ಸೆಕ್ರಟರಿಯೇಟ್‌ನಲ್ಲಿ ಹಲವು ವರ್ಷ ದುಡಿದು, ಜೊತೆಯಲ್ಲೆ ಕನ್ನಡ ಸೇವೆಯನ್ನು ಮಾಡಿದ ನಿಷ್ಣಾತ ಸಾಹಿತಿ ಅಧಿಕಾರಿ. ಡೆಪ್ಯುಟಿ ಕಮೀಶನರ್ ಆಗಿದ್ದಾಗ ಕನ್ನಡದಲ್ಲಿ ಮೊದಲ ಬಾರಿಗೆ ತೀರ್ಪು ನೀಡಿದ ಹೆಗ್ಗಳಿಕೆ ಇವರದು. 'ಕನ್ನಡ ತೀರ್ಪುಗಳು' ಎಂಬ ಅವರ ಕೃತಿಗೆ 1977ರಲ್ಲಿ ರಾಜ್ಯ ಸರ್ಕಾರವು ವಿಶೇಷ ಬಹುಮಾನ ನೀಡಿ ಗೌರವಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ 1978ರಲ್ಲಿ ಪ್ರಶಸ್ತಿ ನೀಡಿ ಅವರ ಸಾಹಿತ್ಯ ಸೇವೆಯನ್ನು ಗುರುತಿಸಿದೆ.

ಇತರ ಕೃತಿಗಳು : ಸುಳಿ ಗಾಳಿ (ಸುಧಾ ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ್ದ ಕೃತಿ, ಇದಕ್ಕೆ ಸಾಹಿತ್ಯ ಅಕಾಡೆಮಿಯ ಬಹುಮಾನ ಸಹ ಸಂದಿದೆ.) ಹಾಲು ಜೇನು, ಜೊಹರಾ—ಕಾದಂಬರಿಗಳು ; ಪಾರವ್ವನ ಪಂಚಾಯಿತಿ, ರೋಹಿಣಿ, ಶಿಥಿಲ ಶಿಲೆ, ಮೌಲ್ಯಗಳು—ಕಥಾ ಸಂಕಲನಗಳು ; ಜಗನ್ನಾಥ ದಾಸರು, ಸುರಪುರದ ಶೂರ ನಾಯಕರು, ಸ್ವಾಮಿ ರಾಮತೀರ್ಥ, ಕೃಷ್ಣದೇವರಾಯ—ಜೀವನ ಚರಿತ್ರೆಗಳು. ಜ್ಯಾಕ್ ಲಂಡನ್ನನ 'ಸೀವುಲ್ಫ್', 'ಕಡಲ ತೋಳ' ಹೆಸರಿನಲ್ಲಿ ಅನುವಾದಗೊಂಡಿದೆ.

'ತುಂಗಾ-ತರಂಗ', ಪಂಪಾ ತುಂತುರ, ಪಂಪಾ ಸಂಪದ—ಸಂಪಾದಿತ ಕೃತಿಗಳು. 'ತುಂಗೆ ಯಂಗಳದಲ್ಲಿ'—ಗೀತ ರೂಪಕ.

**ಗೋವಿಂದಮೂರ್ತಿ ದೇಸಾಯಿ**[2] : ಒಳ್ಳೆಯ ಕತೆಗಾರರು, ಕಾದಂಬರಿಕಾರರು. ಕೃತಿಗಳು ಸುಮಾರು ಹತ್ತು. ಶಿಲಾಮುಖ, ಸಂಸ್ಥಾಪಕರು, ಚಾಲುಕ್ಯ ಚಕ್ರೇಶ್ವರ, ಗಾಂಧಿ ಮತ್ತು ಮಹಿಳೆಯರು, ಬಾಪೂಜಿಯ ಬದುಕು ಮುಂತಾದವುಗಳು.

**ಶೇಷ ನಾರಾಯಣ**[3] : ಪ್ರಸಿದ್ಧ ಕತೆಗಾರರು ಹಾಗೂ ಕಾದಂಬರಿಕಾರರು. ಇವರ ಇತ್ತೀಚಿನ ಕಾದಂಬರಿ 'ಬೀಸು'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹು

---

1 ಜೀವಿತ ಕಾಲ : (1925-1986). ಹುಟ್ಟಿದ ಸ್ಥಳ - ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೋಕಿನ 'ಕನಕಗಿರಿ', ಬಿ.ಎ.ಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿ ತಹಶೀಲ್ದಾರರಾಗಿ ಸರಕಾರದ ನೌಕರಿ ಹಿಡಿದರು. ಕನ್ನಡ ಅಭಿವೃದ್ಧಿ ಇಲಾಖೆಯಲ್ಲಿ ಮುಖ್ಯರಾಗಿ ಶಿಕ್ಷಣ ಇಲಾಖೆಯ ನೇಕಾರರಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ರಿಜಿಸ್ಟ್ರಾರ್ ಆಗಿ ಸೇವೆ ಸಲ್ಲಿಸಿದ್ದರು.

2 ಜನನ : ಸೆಪ್ಟಂಬರ್ 19, 1926. ಧಾರವಾಡ ಜಿಲ್ಲೆ ಶಿರಹಟ್ಟಿ. ತಂದೆ-ದಾಸಪ್ಪನಾಯ್ಕ, ತಾಯಿ-ಯಮುನಾಬಾಯಿ.

3 ಜನನ : ಆಗಸ್ಟ್ 18, 1927. ಮದರಾಸು ರಾಜ್ಯದ 'ಪಾಳ್ಯ.' ತಂದೆ-ಸುಬ್ರಮಣ್ಯಂ ; ತಾಯಿ-ಕಾವೇರಮ್ಮ.

ಮಾನ (1982) ದೊರೆತಿದೆ. 'ಬಾಲ ಮುರುಳಿ' ಮಕ್ಕಳ ಕೃತಿಗೆ ದಕ್ಷಿಣ ಭಾಷಾ ಸಂಸ್ಥೆಯ ಬಹುಮಾನ ಸಂದಿದೆ.

ಇತರ ಕೃತಿಗಳು : ಸೀಳು ನಾಯಿ, ಮೊಲ್ಲೆ ಮಲ್ಲಿಗೆ (ಕಥಾ ಸಂಕಲನಗಳು); ನೊರೆ, ಎರಡು ಉಂಗುರ, ಮೂಲಾ ನಕ್ಷತ್ರ (ಕಾದಂಬರಿಗಳು); ವಿಭೀಷಣ (ನಾಟಕ); ಪಾರ್ಥಿಬನ ಕನಸು, ತಮಿಳು ಕಥೆಗಳು (ಅನುವಾದ).

**ಗೀತಾ ಕುಲಕರ್ಣಿ**[1] : ಇವರ ವಿದ್ಯಾಭ್ಯಾಸ ಮಂಗಳೂರಿನ ಬೆಸೆಂಟ್ ರಾಷ್ಟ್ರೀಯ ಶಾಲೆ, ಉಡುಪಿಯ ಕ್ರಿಶ್ಚಿಯನ್ ಶಾಲೆ, ಶಿವರಾಮ ಕಾರಂತರ 'ಬಾಲವನ'ದಲ್ಲಿ ನಡೆಯಿತು. ಗೀತಾ ಕುಲಕರ್ಣಿ ದಿಟ್ಟತನಕ್ಕೆ ಹೆಸರಾದವರು. 'ಸುವರ್ಣೆಯ ಗ್ರೀನ್ ರೂಂ' ಕತೆಯಿಂದ ಪ್ರಸಿದ್ಧಿಗೆ ಬಂದರು. 1979ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

ಇತರ ಕೃತಿಗಳು : ಕಂಬನಿ ಒರೆಸಿದ ಕೈ, ಸ್ವಪ್ನ ಮಂದಿರ, ಗರ್ಭ, ಶೋಭನಾ, ದೀಪ ಮಿಂಚಿತು, ಸಂಬಂಧ, ನೂಲ ಏಣಿ, ತೇಲಿಹೋದ ಮೋಡ (ಕಾದಂಬರಿಗಳು); ಮನಸಂಧಾನ, ಸುವರ್ಣೆಯ ಗ್ರೀನ್ ರೂಂ, ಚಿಪ್ಪಿನೊಳಗಿದ್ದ ಮುತ್ತು, ಪಾತಾಳ, ತುಳು ಜಾನಪದ ಕಥೆಗಳು (ಕಥಾ ಸಂಕಲನಗಳು); ಏಳು ಕನ್ನಿಕೆಯರು, ಹಾರುವ ಕಂಬಳಿ, ಅರವತ್ತನಾಲ್ಕು ವಿದ್ಯೆ (ಬಾಲ ಸಾಹಿತ್ಯ) : ಹುರಿಗಾಳು (ನಗೆ ಬರಹ) ; ತಿಮ್ಮಪ್ಪನಾಯಕ (ಜೀವನ ಚರಿತ್ರೆ).

ಕಂಬನಿ ಒರೆಸಿದ ಕೈ, ಸಂಬಂಧ, ದೀಪ ಮಿಂಚಿತು, ಮೌನ ಸಂಧಾನ—ವಿಶ್ವವಿದ್ಯಾನಿಲಯದ ಹಲವು ತರಗತಿಗಳಿಗೆ ಪಠ್ಯಪುಸ್ತಕಗಳಾಗಿವೆ.

**ಯಶವಂತ ಚಿತ್ತಾಲ**[2] : ನವ್ಯಪ್ರಜ್ಞೆಯ ಕತೆಗಾರ, ಕಾದಂಬರಿಕಾರ. ಇವರ ಸೃಜನಾತ್ಮಕ ಕಾದಂಬರಿ 'ಶಿಕಾರಿ'ಗೆ (1979) ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಪ್ರಶಸ್ತಿ ದೊರೆತಿದೆ. 'ಕತೆಯಾದಳು ಹುಡುಗಿ'ಗೆ (1980) ಕರ್ನಾಟಕ

---

1 ಜೀವಿತ ಕಾಲ : (ಜುಲೈ 4, 1927 – ಮೇ 25, 1986.) ಮಂಗಳೂರಿನ ಬಳಿಯ 'ಪಾಪೂರು' ಹುಟ್ಟಿದೂರು ; ತಂದೆ–ಕೆ. ಟಿ. ಆಳ್ವ, ತಾಯಿ–ಕಮಲಾ. ತಂದೆ ತಾಯಿ ಗಳಿಟ್ಟಿದ್ದ ಹೆಸರು–ಅಹಲ್ಯಾ. ಈಕೆಯ ಅಕ್ಕ 'ಲೀಲಾ' ಡಾ॥ ಶಿವರಾಮ ಕಾರಂತರ ಪತ್ನಿ. ಅಹಲ್ಯಾರ ಪತಿ ಎಚ್. ಜಿ. ಕುಲಕರ್ಣಿ, ಗಂಡನ ಮನೆಗೆ ಬಂದ ಮೇಲೆ 'ಗೀತಾ ಕುಲಕರ್ಣಿ' ಆದರು.

2 ಜನನ : ಆಗಸ್ಟ್ 3, 1928. ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿ. ಮುಂಬಯಿಯ ಖಾಸಗಿ ಸಂಸ್ಥೆಯಲ್ಲಿ ಉದ್ಯೋಗದಲ್ಲಿದ್ದಾರೆ. ವಿದ್ಯಾಭ್ಯಾಸ ಧಾರವಾಡ, ಮುಂಬಯಿಯಲ್ಲಿ.

ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ. ಮುಂಬಯಿಯ ಜೀವನ ಇವರ ಮೇಲೆ ಬಹಳ ಪ್ರಭಾವ ಬೀರಿದೆ. ಇದನ್ನು ಅವರೆಲ್ಲ ಕಥೆ ಕಾದಂಬರಿಗಳಲ್ಲಿ ಕಾಣ ಬಹುದು. ಇವರು ಬರವಣಿಗೆಯಲ್ಲಿ ಬಳಸುವ ತಂತ್ರ, ಭಾಷೆ, ಸಂಕೇತ ಓದುಗರ ಮೇಲೆ ಮೋಡಿಯ ಪ್ರಭಾವ ಬೀರಿದೆ. ಅದಕ್ಕೇ ಇವರು ಬಹಳ ಜನಪ್ರಿಯ ರಾಗಿದ್ದಾರೆ.

ಇವರ ಇತರ ಕೃತಿಗಳು ; 'ಸಂದರ್ಶನ', 'ಅಬೋಲೀನ್' (ಕಥಾ ಸಂಕಲನ ಗಳು) ; ಮೂರು ದಾರಿಗಳು, (ಕಾದಂಬರಿ) ; 'ಸಾಹಿತ್ಯ, ಸೃಜನ ಶೀಲತೆ ಮತ್ತು ನಾನು' (ವಿಚಾರ ಸಾಹಿತ್ಯ).

**ತ್ರಿವೇಣಿ*** : ನಿಜನಾಮ ಅನುಸೂಯ, 'ತ್ರಿವೇಣಿ' ಕಾವ್ಯನಾಮ. ಮನೋ ವೈಜ್ಞಾನಿಕ ಕಥೆ, ಕಾದಂಬರಿ ರಚಿಸುವುದರಲ್ಲಿ ಸಿದ್ಧ ಹಸ್ತರು. ಬೆಕ್ಕಿನ ಕಣ್ಣು, ಶರ ಪಂಜರ, ಬೆಳ್ಳಿ ಮೋಡ, ಹಣ್ಣೆಲೆ ಚಿಗುರಿದಾಗ, ಅಪಸ್ವರ, ಅಪಜಯ, ಮುಚ್ಚಿದ ಬಾಗಿಲು, ಕೀಲು ಬೊಂಬೆ, ಮುಂತಾದವುಗಳು ಈ ದಿಸೆಯಲ್ಲಿ ಬಂದಿರುವ ಪ್ರಸಿದ್ಧ ಹಾಗೂ ಜನಪ್ರಿಯ ಕಾದಂಬರಿಗಳು. 'ಶರ ಪಂಜರ', 'ಬೆಳ್ಳಿ ಮೋಡ', 'ಹಣ್ಣೆಲೆ ಚಿಗುರಿದಾಗ' ಯಶಸ್ವಿ ಚಲನಚಿತ್ರಗಳಾಗಿ ಮೂಡಿ ಅಪಾರ ಮೆಚ್ಚುಗೆ ಗಳಿಸಿವೆ. ಈಕೆ ಕನ್ನಡ ಸಾರಸ್ವತ ಲೋಕಕ್ಕೆ ಸುಮಾರು 22 ಕಾದಂಬರಿ, 3 ಕಥಾ ಸಂಕಲನ ಗಳನ್ನು ನೀಡಿದ್ದಾರೆ.

ಅವಳ ಮನೆ (ಕಾದಂಬರಿ), ಸಮಸ್ಯೆಯ ಮಗು (ಕಥಾ ಸಂಕಲನ) ಗ್ರಂಥಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ.

ಈಕೆ ಎಳೆಯ ವಯಸ್ಸಿನಲ್ಲೇ ಗತಿಸಿದುದು (1963) ಕನ್ನಡ ಸಾಹಿತ್ಯಕ್ಕಾದ ಅಪಾರ ನಷ್ಟ.

ಈಕೆಯ ಇತರ ಮುಖ್ಯ ಕಾದಂಬರಿಗಳು : ಅವಳ ಮನೆ, ಕಾಶಿಯಾತ್ರೆ, ಮೊದಲ ಹೆಜ್ಜೆ, ಅವಳ ಮಗಳು, ಕಂಕಣ, ಮುಕ್ತಿ, ಹೂವು ಹಣ್ಣು, ಬಾನು ಬೆಳಗಿತು, ಸೋತು ಗೆದ್ದವಳು, ತಾವರೆಯ ಕೊಳ, ವಸಂತ ಗಾನ, ದೂರದ ಬೆಟ್ಟ, ಹೃದಯ ಗೀತ ಮುಂತಾದವು.

ಎರಡು ಮನಸ್ಸು, ಹೆಂಡತಿಯ ಹೆಸರು (ಕಥಾ ಸಂಕಲನಗಳು).

---

* ಜನನ : ಕ್ರಿ.ಶ. 1928. ಮೈಸೂರು ಮಹಾರಾಜ ಕಾಲೇಜಿನ ಬಿ.ಎ. ಪದವೀ ಧರೆ (ಮನಶಾಸ್ತ್ರ). ಮರಣ–ಜುಲೈ 1963. ತಂದೆ–ಬಿ. ಎಂ. ಕೃಷ್ಣಸ್ವಾಮಿ, ತಾಯಿ– ತಂಗಮ್ಮ.

**ಶಂಕರ ಮೊಕಾಶಿ**[1] : ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದು ಅಲ್ಲಿ ನಿವೃತ್ತರಾದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಯನ ಸಂಸ್ಥೆಯಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದಾರೆ. ಇವರ 'ನಟ ನಾರಾಯಣ' ಕಾದಂಬರಿಗೆ ಸುಧಾ ನಡೆಸಿದ್ದ ಸ್ಪರ್ಧೆಯಲ್ಲಿ (1982)ರಲ್ಲಿ ಪ್ರಥಮ ಬಹುಮಾನ ಬಂದಿದೆ. ಇವರ ಇತರ ಕೃತಿಗಳು : ದಿ ಕ್ಯಾಪ್ಟೀವ್, ಗಂಗವ್ವ ಗಂಗಾಮಾಯಿ, ಮಾಯಿ ಮೂರು ಮುಖಗಳು.

ಏಟ್ಸ್ ಕುರಿತು ಒಂದು ಸಂಶೋಧನಾ ಗ್ರಂಥ ರಚಿಸಿದ್ದಾರೆ. ಇವರನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ 1986ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

**ಎನ್. ಪಂಕಜಾ**[2] : ಬಹುಮುಖ ಪ್ರತಿಭೆಯ ಇವರು ಕಥೆ, ಕಾದಂಬರಿ, ನಾಟಕ, ಹಾಸ್ಯ ಬರಹ, ಮಕ್ಕಳ ಪುಸ್ತಕ ಮುಂತಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿ ರಚಿಸಿದ್ದಾರೆ. ಇವರ ಪ್ರಸಿದ್ಧ ಕಾದಂಬರಿ 'ಬರಲೆ ಇನ್ನು ಯಮುನೆ', 'ಸಿಪಾಯಿ ರಾಮು' ಹೆಸರಿನಿಂದ ಚಲನಚಿತ್ರವಾಗಿ ಅಪಾರ ಜನಪ್ರಿಯಗೊಂಡಿದೆ. ಆಕಾಶವಾಣಿಯಲ್ಲಿ ಕಿರುನಾಟಕಗಳು ಪ್ರಸಾರಗೊಂಡಿವೆ. 'ಬಳ್ಳಿ ಮೊಗ್ಗು' ಕನ್ನಡ ಸಾಹಿತ್ಯ ಪರಿಷತ್ತು 1978ರಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಉತ್ತಮ ಮಹಿಳಾ ಪುಸ್ತಕವಾಗಿ ಬಹುಮಾನ ಗಳಿಸಿದೆ.

ಇತರ ಕೃತಿಗಳು : ಉಷಾನಿಷೆ, ಮಲಯ ಮಾರುತ, ಗೂಡು ಬಿಟ್ಟ ಹಕ್ಕಿ, ತೆರೆ ಸರಿಯಿತು, ಅಲೆಗೆ ಸಿಕ್ಕ ಎಲೆ, ಪ್ರತಿಕಾರದ ಸುಳಿಯಲ್ಲಿ, ವೀಣಾ ಓ ವೀಣಾ, ಗಗನ, ಕಾವೇರಿಯ ಆರ್ತರವ, ಬಳ್ಳಿ ಮೊಗ್ಗು, ದೀಪ, ತೇಲಿಬಂದ ಬಂಧನ, ಮುಗಿಲ ಮಿಂಚು (ಕಾದಂಬರಿಗಳು) ; ಪಾದ್ರಿಯ ಕುದುರೆ, ಬಿ. ವೆಂಕಟಾಚಾರ್ಯ, ಕಮಲಾ ನೆಹರು (ಮಕ್ಕಳ ಪುಸ್ತಕಗಳು) ; ನಮಸ್ಕಾರ ಗರುಡಮ್ಮನವರೇ ಏನ್ಸಮಾಚಾರ, ತರಂಗ ರಂಗ, ಕಾವೇರಮ್ಮ ಅಮೇರಿಕಾದಲ್ಲಿ (ಹಾಸ್ಯ ಬರಹಗಳು).

ಹಲವು ಕಥೆಗಳನ್ನು ಇಂಗ್ಲೀಷಿನಲ್ಲೂ ಸಹ ಬರೆದಿದ್ದಾರೆ. ಇಂಗ್ಲೀಷಿನಿಂದ ಹಲವು ನಾಟಕ, ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

---

1 ಜನನ : ಮೇ 8, 1928, ಧಾರವಾಡ. ತಂದೆ–ರಾವಜಿರಾವ ಮೊಕಾಶಿ, ತಾಯಿ–ಸುಂದರಿಬಾಯಿ. 'ಕನಸಿಗ' ಇದು ಇವರ ಕಾವ್ಯನಾಮ.

2 ಜನನ : ಜೂನ್ 2, 1929 ಬೆಂಗಳೂರು. ತಂದೆ–ಎಸ್. ಪಿ. ರಾಘವಾಚಾರ್ ; ತಾಯಿ–ಶಾಂತಮ್ಮ, ಪತಿ–ಎನ್. ತಿರುಮಲೆ.

**ಡಾ॥ ದೇವೇಂದ್ರಕುಮಾರ ಹಕಾರಿ**[1] : ಇವರ ಕಾವ್ಯನಾಮ 'ರವಿ.' ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ಇವರ ಕಾದಂಬರಿ 'ಕೂಗುತಿವೆ ಕಲ್ಲು' ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

ಕೃತಿಗಳು : ಚಿನ್ಮಯಿ, ಆಚೆ ಈಚೆ (ಕಾವ್ಯ), ಕೂಗುತಿವೆ ಕಲ್ಲು, ಚೆಲ್ವ ಕೋಗಿಲೆ (ಕಾದಂಬರಿಗಳು), ಕಿರಾತಾರ್ಜುನೀಯ ಪ್ರಸಂಗ (ಸಂಗ್ರಹ) ; ಅಮೃತ ಮತಿ, ಶಾಕುಂತಲ (ನಾಟಕ) ; ಇದುವೆ ಬಸವನ ಬದುಕು, ಸಣ್ಣ ಕತೆಗಳು (ಸಂಪಾದನೆ) ; ಆರದ ಜೀವ (ಜೀವನ ಚರಿತ್ರೆ).

**ಟಿ. ಕೆ. ರಾಮರಾವ್**[2] : ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ಪತ್ತೇದಾರಿ ವಿಭಾಗದಲ್ಲಿ ಅತ್ಯಂತ ಜನಪ್ರಿಯವಾಗಿರುವ ಸಾಹಿತಿ. ಕುತೂಹಲಕಾರಿ, ಪತ್ತೇದಾರಿ ಕಥೆ, ಕಾದಂಬರಿ ಬರೆಯುವುದರಲ್ಲಿ ಅದ್ವಿತೀಯರು. ಇವರ ಕಥೆ, ಕಾದಂಬರಿಗಳಿಲ್ಲದೆ ಒಂದು ಪತ್ರಿಕೆಯೂ ಹೊರ ಬರಲಾರದು ಎಂದರೆ ಅತಿಶಯೋಕ್ತಿಯಾಗದು. ಅತ್ಯಂತ ಬೇಡಿಕೆಯಲ್ಲಿರುವ ಸಾಹಿತಿ. ಇವರು ಪತ್ತೇದಾರಿಯಲ್ಲದೆ ಇತರೆ ಕುತೂಹಲ ಕಾರಿ ಸಾಮಾಜಿಕ ಹಾಗೂ ಚಾರಿತ್ರಿಕ ಕಾದಂಬರಿಗಳನ್ನು ರಚಿಸಿದ್ದಾರೆ. 5-6 ಕಾದಂ ಬರಿಗಳು ಚಲನಚಿತ್ರವಾಗಿಯೂ ರೂಪುಗೊಂಡು ಅಪಾರ ಜನಮನ್ನಣೆ ಗಳಿಸಿವೆ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 70. ಹೆಸರಾಂತ ಕಾದಂಬರಿಗಳು : ಬಂಗಾರದ ಮನುಷ್ಯ, ಕೋವಿ ಕುಂಜ, ಕೆಂಪು ಮಣ್ಣು, ಸೀಮಾ ರೇಖೆ, ದಿಬ್ಬದ ಬಂಗಲೆ, ಮಣ್ಣಿನ ದೋಣಿ, ಕಹಳೆ ಬಂಡೆ, ಸೀಳು ನಕ್ಷತ್ರ, ವರ್ಣ ಚಕ್ರ, ತೋರು ಬೆರಳು, ಮುಂತಾದವುಗಳು. ಉಬ್ಬರವಿಳಿತ, ಎತ್ತರದ ಮನೆಯವನು, ಜೆಂಕಿ ಗೂಡು, (ಕಥಾ ಸಂಕಲನಗಳು); ಶ್ಯಾಮ್‌ಪ್ರಸಾದ್ ಮುಖರ್ಜಿ, ಲಾಲಾ ಲಜಪತರಾಯ್, ಜೆ. ಎನ್. ತಾತಾ, ಟಿ. ವಿ. ಸುಂದರಂ ಅಯ್ಯಂಗಾರ್, ಸ್ವಾಮಿ ವಿವೇಕಾನಂದ (ಮಕ್ಕಳ ಪುಸ್ತಕಗಳು); ಗೋಳದ ಮೇಲೊಂದು ಸುತ್ತು (ಪ್ರವಾಸ ಸಾಹಿತ್ಯ).

**ಎಸ್. ವಿ. ಶ್ರೀನಿವಾಸರಾವ್**[3] : ಸುಮಾರು ಮೂರು ದಶಕಗಳಿಂದ ಸಾರಸ್ವತ ಲೋಕಕ್ಕೆ ಚಿರಪರಿಚಿತವಾಗಿರುವ ಹೆಸರು. ಇವರ ಕಥೆ ವಿಶ್ವ ಕರ್ನಾಟಕ, ಕತೆಗಾರ,

---

1 ಜನನ : ಏಪ್ರಿಲ್ 14, 1931. ರಾಯಚೂರು ಜಿಲ್ಲೆ ಚಿಕ್ಕೇನಕೊಪ್ಪ. ತಂದೆ-ಸಿದ್ದಪ್ಪ, ತಾಯಿ-ಮಲ್ಲವ್ವ.

2 ಜನನ : ಅಕ್ಟೋಬರ್ 7, 1931. ತಂದೆ-ಕೃಷ್ಣಮೂರ್ತಿ, ತಾಯಿ-ನಾಗಮ್ಮ.

3 ಪೂರ್ಣ ಹೆಸರು ಸಾರಂಗಿ ವೆಂಕಟರಾಮಯ್ಯ ಶ್ರೀನಿವಾಸರಾವ್. ಜನನ : ಡಿಸೆಂಬರ್ 24, 1931, ತುಮಕೂರು. ಕನ್ನಡದಲ್ಲಿ ಎಂ.ಎ., ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ, ರಷ್ಯನ್ ಭಾಷೆಯ ಡಿಪ್ಲಮೋ ಪಡೆದಿರುವುದಲ್ಲದೆ ಇಂಜನಿಯರಿಂಗ್ ಓದಿ ಭಾರತ ಸರ್ಕಾರದ ರಕ್ಷಣಾ ವಿಭಾಗದ ಸಿ.ಐ.ಎಲ್. (CIL) ಇಲಾಖೆಯಲ್ಲಿ ಸೈಂಟಿಫಿಕ್ ಆಫೀಸರಾಗಿದ್ದಾರೆ.

ಉಷಾ. ಕಥಾಂಜಲಿ ಕಾಲದಿಂದ ಪ್ರಾರಂಭಗೊಂಡು ಈಗಿನ ಎಲ್ಲಾ ಹೆಸರಾಂತ ಪತ್ರಿಕೆಗಳಲ್ಲೂ ಪ್ರಚುರಗೊಳ್ಳುತ್ತಿವೆ. ಧಾರಾವಾಹಿಯಾಗಿ ಪ್ರಕಟಗೊಂಡಿರುವ ಕಾದಂಬರಿಗಳು : ಕಾಡ ಬೆಳದಿಂಗಳು, ಮಬ್ಬು ಮುಂಜಾವು, ಇಬ್ಬನಿ, ಸ್ವರ ಮೇಳ, ಸ್ವಾತಿಯ ಹನಿ ('ಸುಧಾ'ದಲ್ಲಿ), ಸುಣ್ಣವಿಲ್ಲದ ವೀಳ್ಯ, ಸೋನಾರ್ ಬಾಂಗ್ಲಾ, ಹರಿಗೋಲು (ಕನ್ನಡ ಪ್ರಭದಲ್ಲಿ) ; ಮಂಥನ, ರಂಗಸ್ಥಳ (ಪ್ರಜಾಮತದಲ್ಲಿ) ; ಗೆಜ್ಜೆ ಕಟ್ಟಿದ ಹೆಜ್ಜೆ (ಮಂಗಳದಲ್ಲಿ) ; ಪವನ ಚಕ್ರ (ಮಲ್ಲಿಗೆಯಲ್ಲಿ) ; ಇನ್ನೂ ನಾಲ್ಕು ಕಾದಂಬರಿಗಳು ಪ್ರಕಟಗೊಂಡಿವೆ. 'ಪ್ರೌಢ ಪ್ರತಾಪ ವೀರ ರಾಜೇಂದ್ರ' ಕೊಡಗು ರಾಜ ಮನೆತನದ ಬೃಹತ್ ಕಾದಂಬರಿ. ಇವರು ಹಿಂದಿಯಿಂದ ಅನುವಾದಿಸಿರುವ 'ಒರಿಯ ಕಥೆಗಳು' ಕಥಾ ಸಂಕಲನಕ್ಕೆ ರಾಜ್ಯ ಸರ್ಕಾರದ 1983ರ ಪುರಸ್ಕಾರ ದೊರೆತಿದೆ. ಕಾಗೆಯ ಗೂಡಿನಲಿ ಕೋಗಿಲೆ ಹಾಡಿತು, ಗಾಳಿ ಮೋಡದ ಗೆಳತಿ, ಗೊಂಚಲು (ಕಥಾ ಸಂಕಲನಗಳು) ; ಇಮ್ಮಡಿ ಪುಲಿಕೇಶಿ, ಕೆರೂರ ವಾಸುದೇವಾಚಾರ್ಯ, ನಮ್ಮ ವಾಯುಪಡೆ, ಗಂಗರಾಜ ದುರ್ವಿನೀತ, ಬಾನುಲಿ ನಾಟಕಗಳು, ಮಕ್ಕಳೇ ಇವರನ್ನು ನೀವು ಬಲ್ಲಿರಾ ? ಆಕಂದ್ರನ (ಮಕ್ಕಳ ಪುಸ್ತಕಗಳು). ಇಪ್ಪತ್ತಕ್ಕೂ ಹೆಚ್ಚು ರೇಡಿಯೋ ನಾಟಕ/ರೂಪಕಗಳು ಆಕಾಶವಾಣಿಯಿಂದ ಪ್ರಸಾರಗೊಂಡಿವೆ.

**ಎಂ. ಜಿ. ಭೀಮರಾವ್ (ವಂಶಿ)*** : ಅನುವಾದ ಕ್ಷೇತ್ರದಲ್ಲಿ ಅತ್ಯಂತ ಜನಪ್ರಿಯ ಹೆಸರು. ತೆಲುಗಿನಿಂದ ಇವರು ಅನುವಾದಿಸಿರುವಷ್ಟು ಕಥೆ, ಕಾದಂಬರಿಗಳನ್ನು ಇನ್ನು ಯಾರೂ ಕನ್ನಡಕ್ಕೆ ಅನುವಾದಿಸಿರುವುದಿಲ್ಲ. ಇವರ ಅನುವಾದಗಳು ಪ್ರಕಟವಾಗದ ಒಂದೂ ನಿಯತಕಾಲಿತ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇವರ ಅನುವಾದ ಹಾಗೂ ಸ್ವಂತ ಕೃತಿಗಳ ಸಂಖ್ಯೆ ಸುಮಾರು 105. ಮೊದಲ ಕಾದಂಬರಿ 'ಚಕ್ರ ಭ್ರಮಣ' ; ಇತ್ತೀಚಿನ ಕೃತಿ 'ಅನಂತ'.

ಕೃತಿಗಳು : ಕುಂದಣದ ಗೊಂಬೆ, ದೀಪ ಬೆಳಗಿತು, ತುಳಸೀ ದಳ, ತುಳಸಿ, ಭಾನು, ಪೌಲಸ್ತ್ಯನ ಪ್ರಣಯ ಕಥೆ, ತಾರೆ, ಸುಹಾಸಿನಿ, ಬಂಗಾರದ ಪಾರಿವಾಳ, ಸಮಾನಾಂತರ ರೇಖೆಗಳು, ರಚಯಿತ್ರಿ, ಹಿಮದ ಹೂವು, ಮೈಥಿಲಿ, ಹರಿಣಿ, ಬೆಳದಿಂಗಳ ಬಾಲೆ, ಅರಣ್ಯ ಕಾಂಡ, ಕಿರುಗೆಜ್ಜೆಯ ಮರುದನಿ, ('ಆನಂದ ಭೈರವಿ' ಚಲನಚಿತ್ರ), ಆನಂದೋ ಬ್ರಹ್ಮ, ಒಲುಮೆಯ ಬಂಧನ, ಈ ಕರೆಯು ನಿನಗಾಗಿ, ಆಗಮನ ಮುಂತಾದವುಗಳು.

ಸುಮಾರು ಮುನ್ನೂರಕ್ಕೂ ಹೆಚ್ಚು ಕಥೆ ಹಾಗೂ ಬಿಡಿಲೇಖನಗಳು ಪ್ರಕಟಗೊಂಡಿವೆ.

---

* ಜನನ : ಆಕ್ಟೋಬರ್ 29, 1931 ಮೈಸೂರು. ತಂದೆ–ಶ್ರೀ ಬ್ರಹ್ಮಾವರಂ ಗೋವಿಂದರಾವ್ ; ತಾಯಿ–ನರಸಮ್ಮ. ಪುಟ 21, 30, 53 ನೋಡಿ.

**ನಿರುಪಮಾ**[1] : ಪಾದರಸದ ಚಟುವಟಿಕೆಯುಳ್ಳ ಉತ್ಸಾಹ ಪೂರ್ಣ ಪ್ರತಿಭಾವಂತ ಲೇಖಕಿ, ಶ್ರೀಮತಿ ಪದ್ಮಾ ರಾಮಚಂದ್ರರಾವ್. ಕಾವ್ಯನಾಮ 'ನಿರುಪಮಾ' ಸಂಗೀತ, ಕುಶಲ ಕಲೆಗಳಲ್ಲೂ ಪರಿಣತಿ ಪಡೆದಿರುವ ಈಕೆ ಈ ಬಗ್ಗೆ ದೇಶದ ಹೆಸರಾಂತ ಪತ್ರಿಕೆಗಳಲ್ಲಿ ಬರೆದಿದ್ದಾರೆ, ಬರೆಯುತ್ತಿದ್ದಾರೆ. ಕಥೆ, ಕಾದಂಬರಿ, ಮಕ್ಕಳ ಪುಸ್ತಕ, ನಾಟಕ ವಿಚಾರ ಪೂರ್ಣ ಲೇಖನಗಳನ್ನು ಬರೆದಿರುವುದಲ್ಲದೆ ವಿಜಯನಗರ ಕಾಲದ ಸಾಹಿತ್ಯ, ಸಂಸ್ಕೃತಿ ಐತಿಹಾಸಿಕ ಘಟನೆಗಳ ಬಗ್ಗೆ ಬಹಳ ಸಂಶೋಧನೆ ಮಾಡಿದ್ದಾರೆ. 'ಭುವನ ವಿಜಯ' ಕಾದಂಬರಿ ಇದಕ್ಕೆ ಉದಾಹರಣೆ, 'ಭಾರತೀಯ ನಾರಿ ನಡೆದು ಬಂದ ದಾರಿ' ಭಾರತದ ಎಲ್ಲ ಭಾಷೆಗಳ ಕವಿಯಿತ್ರಿ, ಲೇಖಕಿಯರ ಸಮಗ್ರ ಪರಿಚಯ ಮಾಡಿಕೊಡುವ ಬೃಹತ್ ಸಂಶೋಧಕ ಗ್ರಂಥ, ಹಲವು ವರ್ಷಗಳ ಅವಿಶ್ರಾಂತ ಪರಿಶ್ರಮದ ಫಲ. 1975ರ ಮಹಿಳಾ ವರ್ಷದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪುಸ್ತಕ ಸ್ಪರ್ಧೆಯಲ್ಲಿ 'ಮಹಿಳೆ ಮತ್ತು ವಿವಾಹ' ಪುಸ್ತಕಕ್ಕೆ ಬಹುಮಾನ ಬಂದಿದೆ.

ಕೃತಿಗಳು : ಅಮೃತ ಕಲಶ, ಪರಿತ್ಯಕ್ತೆ, ಜೀವನ ಸ್ರವಂತಿ, ವಿಡಿತ-ಸಿಡಿತ, ರಾಗ ರಾಗಿಣಿ, ಭುವನ ವಿಜಯ (ಕಾದಂಬರಿಗಳು) ; ತುಂಗಭದ್ರೆಯ ಮಡಿಲಲ್ಲಿ, ನಾಳೆ, ಬಾವುಟ ಅತ್ತಿತು, ಆ ಹುಡುಗಿ (ಕಥಾ ಸಂಕಲನಗಳು) ; ಕಸ್ತೂರಿ ಬಾ, ವಿಶ್ವನಾಥ ಸತ್ಯನಾರಾಯಣ, ನಮ್ಮ ಬಾವುಟದ ಕಥೆ, ವಿಜಯ, ಸ್ವಾತಂತ್ರ್ಯ ಹೋರಾಟದ ಕಥೆ (ಮಕ್ಕಳ ಪುಸ್ತಕಗಳು) ; ಕರ್ನಾಟಕದ ಕವಿಯತ್ರಿಯರು, ಮಹಾಭಾರತದಲ್ಲಿ ಮಹಿಳಾ ಪಾತ್ರಗಳು. ಸಂಪಾದಿಸಿರುವ ಕೃತಿಗಳು : ಅಮುಕ್ತ ಮಾಲ್ಯದ, ಮನು ಚರಿತ್ರೆ ವಸು ಚರಿತ್ರೆ ಮುಂತಾದವುಗಳು ಅನುವಾದಿತ ಕೃತಿಗಳು.

**ದೇವಕಿ ಮೂರ್ತಿ**[2] : ಈಕೆ ಜನಪ್ರಿಯ ಕತೆ ಹಾಗೂ ಕಾದಂಬರಿಗಾರ್ತಿ. ಈಕೆಯ ಕೃತಿಗಳು ಸುಮಾರು 15.

ಮುಖ್ಯವಾದವುಗಳು : ಉಪಾಸನೆ, ಬಳ್ಳಿ ಚಿಗುರಿತು, ಎರಡು ದಾರಿ, ಶಿಶಿರ ವಸಂತ, ಸೆರೆ, ಚಂಡಮಾರುತ, ಒಡಕು ದೋಣಿ.

'ಉಪಾಸನೆ' ಚಲನಚಿತ್ರವಾಗಿ ರೂಪುಗೊಂಡು ಅಪಾರ ಜನ ಮನ್ನಣೆ ಗಳಿಸಿದೆ.

---

1 ಜನನ : 1931, ತುಮಕೂರು ಜಿಲ್ಲೆಯ ಹೊಳವನ ಹಳ್ಳಿ. ಕನ್ನಡದಲ್ಲಿ ಎಂ.ಎ., ಡಿಗ್ರಿ ಪಡೆದು ಈಗ ಡಾಕ್ಟರೇಟ್‌ಗೆ ಅಧ್ಯಯನ ನಡೆಸಿದ್ದಾರೆ. ಸಂಸ್ಕೃತ, ಬಂಗಾಳಿ, ತೆಲುಗಿನಲ್ಲೂ ಮಾಹಿತಿ ಗಳಿಸಿದ್ದಾರೆ. ತಂದೆ – ಕೃಷ್ಣಾಚಾರ್, ಗಂಡ – ಶ್ರೀ ರಾಮಚಂದ್ರರಾವ್ ನಿವೃತ್ತ ಅಧಿಕಾರಿಗಳು. ತಾತ–ಹೆಸರಾಂತ ವಿದ್ವಾಂಸ ಹೊಳವನಹಳ್ಳಿ ಶೇಷಾಚಾರ್ಯರು.

2 ಜನನ : ಜೂನ್ 23, 1931, ಮೈಸೂರು. ತಂದೆ–ಎಸ್. ಆನಂದರಾವ್, ತಾಯಿ–ಕಮಲಾ. ಈಕೆ ಬಿ.ಎ. ಪದವೀಧರೆ.

**ದು. ನಿಂ. ಬೆಳಗಲಿ**[1] : (ದುರಡುಂಡೀಶ್ವರ ನಿಂಗಪ್ಪ ಬೆಳಗಲಿ) ಒಂದಿ ವಿದ್ವಾಂಸರಾದರೂ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಹೆಸರು ಗಳಿಸಿದ್ದಾರೆ.

ಕೃತಿಗಳು : ಬಿಸಿಲು ಬೆಳದಿಂಗಲು, ತಿರ್ರುಗಣಿ ಮಂಡು, ಹತ್ತು ಹೆಡೆಯ ಹಾವು, ಹಡೆದವರು, ಸೀಮೆಂಗಳು, ಜೋಗಿ ಮರಡಿ (ಕಾದಂಬರಿಗಳು).

'ಗೌಡರ ಮಗಳು ಗೌರಿ' ಕಥಾ ಸಂಕಲನ ಕರ್ನಾಟಕ ವಿದ್ಯಾವರ್ಧಕ ಸಂಘದ ಬಹುಮಾನ ಗಳಿಸಿದೆ. ಬೆನ್ನು ಹಿಂದಿನ ಕಣ್ಣು, ಸಿಟ್ಯಾಕೊ ರಾಯಣನ ವಠ್ಯಾಲ, ಮಾಸ್ತರನ ಹೆಂಡತಿ (ಕಥಾ ಸಂಕಲನಗಳು) ; ಸರ್ವಜ್ಞ, ಮುರುಗೇಂದ್ರ ಮಹಾ ಸ್ವಾಮಿಗಳು, ಚಕೋಡಿ ತಮ್ಮಪ್ಪನವರು (ಬಾಲ ಸಾಹಿತ್ಯ); ಕನ್ನಡದಲ್ಲಿ ಕಾದಂಬರಿ ಸಾಹಿತ್ಯ (ವಿಮರ್ಶೆ) ; ಪ್ರೇಮ ಚಂದರ್, ಬದುಕು ಬರಹ (ಇತರೇ ಕೃತಿಗಳು).

**ತ. ಪು. ವೆಂಕಟರಾವ್**[2] : ಕನ್ನಡದ ಕಾದಂಬರಿ ಕ್ಷೇತ್ರದಲ್ಲಿ ಹೆಸರಿಸಬೇಕಾದ ವ್ಯಕ್ತಿ. ಇವರ ಹಲವು ಕಾದಂಬರಿಗಳು ಬಿಳಿಗಿರಿಯ ಬನದಲ್ಲಿ, ಕಪ್ಪೆಚಿಪ್ಪು, ಕಲ್ಲು ವೀಣೆ ನುಡಿಯಿತು, ರಾಗ ಅನುರಾಗ ಮುಂತಾದವು ಯಶಸ್ವೀ ಚಲನಚಿತ್ರಗಳಾಗಿವೆ. ಬಹಳಷ್ಟು ಇವರ ಕಾದಂಬರಿಗಳು ಧಾರಾವಾಹಿಯಾಗಿ ಪ್ರಕಟಗೊಂಡಿವೆ.

ಇತರ ಕೃತಿಗಳು : ಮೋಜಿನ ಮದ್ವೆ, ಪ್ರಣಯಾರಾಧನೆ, ಬತ್ತಿದ ಹೂ ಅರಳಿತು, ನಿಲುಕದ ಹೂ, ಕವಲೊಡೆದ ಮನ, ಮಧು ಮಾಸಕೆ ಮಯೂರಿ, ಸಾಗರ ದಲ್ಲಿ ಕಲಹಂಸ, ಪ್ರವಾಸಿ ಮಂದಿರ, ಸಾಗರ ತರಂಗ, ವಂಶಾವಳಿ, ಅಗ್ನಿ ಚುಂಬನ, ದೇವರ ಮನೆ, ಅದೃಷ್ಟ ರೇಖೆ, ಬರ ಸಿಡಿಲು, ಪ್ರಣಯ ಪಕ್ಷಿ ಹಾರಿತು, ಆಕಾಂಕ್ಷೆಯ ಅಲೆಗಳು, ಎಲ್ಲಾ ಪಾಪಿಗಳೇ, ನಿಲುಕದ ಹೂ, ಹೊನ್ನ ಶೂಲ, ಮದನಿಕೆ, ಪಚ್ಚೆ ಕಳಸ, ಸ್ವರ್ಣ ಬಾಣ, ಸಮುದ್ರ ಮಂಥನ, ಮುಂತಾದ 30 ಕಾದಂಬರಿಗಳು.

**ಸೂರ್ಯನಾರಾಯಣ ಚಡಗ**[3] : ಕನ್ನಡದ ಪ್ರಸಿದ್ಧ ಕತೆಗಾರ ಹಾಗೂ ಕಾದಂಬರಿಕಾರ. ಒಳ್ಳೆಯ ವಾಗ್ಮಿ, 'ನಂದನ' ಪ್ರಕಾಶನದ ಸಂಪಾದಕ. ಇವರ ಬೃಹತ್ ಕಾದಂಬರಿ 'ಮನೆತನ'ಕ್ಕೆ 1971ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

---

1 ಜನನ : ಮಾರ್ಚ್ 30, 1931, ಬೆಳಗಲಿ. ತಂದೆ–ನಿಂಗಪ್ಪ, ತಾಯಿ– ಚೆನ್ನಮ್ಮ.

2 ಜನನ : ಅಕ್ಟೋಬರ್ 26, 1931. ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಯಲ್ಲಿ. ತಂದೆ–ಪುಟ್ಟುರಾವ್ ಸಮಾಜ ಶಿಕ್ಷಣ ಇಲಾಖೆಯಲ್ಲಿ ವೃತ್ತಿ.

3 ಜನನ : ಏಪ್ರಿಲ್ 13, 1932. ಉಡುಪಿ ತಾಲ್ಲೋಕಿನ ಪಾಂಡೇಶ್ವರ. ತಂದೆ– ನಾರಾಯಣ, ತಾಯಿ–ಶೇಷಮ್ಮ.

ಲಭಿಸಿದೆ. , ಇವರು 25ಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳು ಮನೆ ತುಂಬಿದ ಮಡದಿ, ಹೆಣ್ಣು–ಹೊನ್ನು–ಮಣ್ಣು, ಮನೆ ನಿನ್ನದು ಮನ ನನ್ನದು, ಬತ್ತದ ಕಣ್ಣೀರು, ಸ್ವರ್ಗದ ಬಾಗಿಲು, ಮಧುರ ಮೈತ್ರಿ, ಗಂಗಾ ಭವಾನಿ, ಸೀಮಂತಿನಿ, ಅರಿಶಿನ ಕುಂಕುಮ, ಮನೆಗೆ ಬಂದ ಸೊಸೆ, ಅಮರ ಸರಸ್ವತಿ, ಮಾಂಗಲ್ಯ ದೇವರು ಮುಂತಾದವುಗಳು. ಜರತಾರಿ ಕುಪ್ಪಸ, ನಮ್ಮೂರಿನ ಕತೆಗಳು (ಕಥಾ ಸಂಕಲನಗಳು) ; 'ಜಯದೇವಿ ತಾಯಿ', 'ನಗೆ ನಂದನ', 'ಕಾಮಧೇನು' 'ದಕ್ಷಿಣ ಕನ್ನಡದ ಬರಹಗಾರರು'. ಶ್ರೀಯುತರು ಸಂಪಾದಿಸಿ ಹೊರ ತಂದಿರುವ ಬೃಹತ್ ಕೃತಿಗಳು.

**ಎ. ಪಂಕಜ**[1] : ಮಾತೃಭಾಷೆ ತಮಿಳಾದರೂ ರೂಢಿಸಿಕೊಂಡು ಸಾಹಿತ್ಯ ರಚನೆ ಮಾಡುತ್ತಿರುವುದು ಕನ್ನಡದಲ್ಲಿ. ಸಮಾಜ ಸೇವೆ ಹಾಗೂ ಬ್ಯಾಂಕಿಂಗ್ ಉದ್ಯಮದಲ್ಲಿ ಆಸಕ್ತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ ನಡೆಸುತ್ತಿರುವ 'ಚಂದನಾ' ಪತ್ರಿಕೆಯ ಸಂಪಾದಕ ವರ್ಗದಲ್ಲಿದ್ದಾರೆ. ಬೇರೆ ಮಾತೃಭಾಷೆಯವರು ಕನ್ನಡ ಕೃತಿ ರಚಿಸಿದುದಕ್ಕಾಗಿ ಇಟ್ಟಿರುವ ಕೇಂದ್ರ ಸರ್ಕಾರದ ಬಹುಮಾನ ಇವರ 'ಸೊಗಸು ಗಾತಿ' ಮತ್ತು 'ಕಾಗದದ ದೋಣಿ' ಪುಸ್ತಕಗಳಿಗೆ ಲಭ್ಯವಾಗಿದೆ.

ಇತರ ಕೃತಿಗಳು : ನಾದ ಭಂಗ, ವಿಜಯ ಗೀತ, ಬಂಗಾರದ ಬಲೆ, ಸುಖ ಸ್ವಪ್ನ, ರಾಗ ಸಂಧಾ, ಅನುರಾಗ ಬಂಧನ, ಹೊಸ ಹಾದಿಯಲ್ಲಿ, ಪ್ರೇಮ ಸಂಗಮ, ಬಯಕೆಯ ಬೆಂಕಿ, ಅವನೇ ಕಾರಣ. ಸ್ನೇಹ ಸಂಬಂಧ, ನೋವು-ನಲಿವು, ಬಲಿ ಪಶು, ಮಮತೆಯ ಮಡಿಲಲ್ಲಿ (ಕಾದಂಬರಿಗಳು) ; ಊರ್ಮಿಳಾ (ನಾಟಕ) ; ನೀನಾ (ಪತ್ತೆ ದಾರಿ); ಮದುವೆ ಮತ್ತು ಸ್ತ್ರೀ (ವಿಚಾರ ಸಾಹಿತ್ಯ).

**ನೀಳಾದೇವಿ**[2] : ಕಥೆ, ಕಾದಂಬರಿ, ಪ್ರವಾಸ ಕಥನ, ಮಕ್ಕಳ ಸಾಹಿತ್ಯ ಮುಂತಾದ ಸಾಹಿತ್ಯದ ಹಲವು ವಿಭಾಗಗಳಲ್ಲಿ ಯಶಸ್ಸು ಗಳಿಸಿರುವ ಈಕೆ ಕನ್ನಡ ಜನತೆಗೆ ಚಿರಪರಿಚಿತ ಸಾಹಿತಿ. 'ಸುಧಾ' ಕಾದಂಬರಿ ಸ್ಪರ್ಧೆಯಲ್ಲಿ (1967) ಇವರ ಕಾದಂಬರಿ 'ಕಾಗದದ ಚೂರು' ಬಹುಮಾನ ಗಳಿಸಿ ಈಕೆಯನ್ನು ಪ್ರಸಿದ್ಧಿಗೆ ತಂದಿತು. ಇವರ ಪ್ರಥಮ ಕಥೆ 'ಅಪ್ಪಾ ನಾನೂ ಬರ್ತೀನಪ್ಪಾ' ಪ್ರಕಟಗೊಂಡಾಗ (ತಾಯಿ ನಾಡು ಪತ್ರಿಕೆಯಲ್ಲಿ) ಈಕೆಗೆ 15 ವರ್ಷ.

---

1 ಜನನ : ಏಪ್ರಿಲ್ 20, 1932, ಪಾಪಗಡ. ತಂದೆ–ಶ್ರೀನಿವಾಸಾಚಾರ್, ತಾಯಿ–ವಕುಳಮ್ಮ, ಪತಿಯ ಹೆಸರು–ಅನಂತಸ್ವಾಮಿ.

2 ಜನನ : ಆಗಸ್ಟ್ 22, 1932 ಮೈಸೂರಿನಲ್ಲಿ. ತಂದೆ–ಕೆ.ಎಸ್. ರಾಮಸ್ವಾಮಿ, ತಾಯಿ–ರುಕ್ಮಿಣಿಯಮ್ಮ.

ಕೃತಿಗಳು : ಅನುರಾಧ, ಒಲವಿನ ಜಾಲ, ಕಣ್ಣು ಮುಚ್ಚಾಲೆ, ಹುಲ್ಲು ಹಸಿರಾಯಿತು, ಜೀವನ ಹೆಜ್ಜೆ, ಅಂತಃ ಸರಿತೆ, ಪ್ಲಾಟ್ ಫಾರಂ ಮೇಲೆ ಒಂದು ರಾತ್ರಿ, ಮೂಕರಾಗ, ಅಂತರ, ದುಂಬಿತೊರೆಯಾಸೆ (ಕಾದಂಬರಿಗಳು) ; ರೂಪ ದಾಹ, ಅಲೆಯ ಆಟ, ಮಾಣಿಕ್ಯ (ಕಥಾ ಸಂಕಲನಗಳು) ; ನಾಕಂಡ ಆಖಂಡ (ಪ್ರವಾಸ ಸಾಹಿತ್ಯ). ಈಕೆ ಮಕ್ಕಳಿಗಾಗಿ ಹಲವಾರು ವಿದೇಶಿ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

'ಸಬಲನ ವಿದೇಶ ಪ್ರವಾಸ' ಪ್ರವಾಸ ಕಥನ 'ತರಂಗ'ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ರೆಡ್ ಇಂಡಿಯನ್ ಮಕ್ಕಳ ಜಾನಪದ ಕತೆಗಳು (ಶಿಶು ಸಾಹಿತ್ಯ). 'ಬೇಡಿ ಬಂದವಳು' ಚಲನಚಿತ್ರವಾಗಿರುವ ಕಾದಂಬರಿ.

**ಜನಾರ್ಧನ ಗುರ್ಕಾರ್**[1] : ರೈಲ್ವೆ ಇಲಾಖೆಯಲ್ಲಿ ಆಫೀಸರಾಗಿರುವ ಶ್ರೀಯುತರು ಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಕೊಡುಗೆಗಳನ್ನು ನೀಡಿ ಸಂಪನ್ನಗೊಳಿಸಿದ್ದಾರೆ. ಇವರ ಕೃತಿಗಳ ಸಂಖ್ಯೆ ಸುಮಾರು 20. ದಿಂಬನ ನಾಯಿ, ಬಾವಿ ತೋಡಿದವರು, ಅಷ್ಟಗ್ರಹ ಆಸ್ಪತ್ರೆ, ಹಳ್ಳದಿಂದ ಹಾದಿಗೆ, ಕಪಿಮುಷ್ಟಿ, ಕಾಂತೆಯ ಕನಸು, ಗುಡಿಯ ಸುತ್ತಮುತ್ತ, ಗಂಗಾವತಾರ, ಚೂಡಾಲ, ಪ್ರೇಮಾರಾಧನೆ, ಪರಾವಲಂಬಿ (ಕಾದಂಬರಿಗಳು) ; ಕಂಬದ ಹುಚ್ಚು (ಕಥಾ ಸಂಕಲನ) ; ಎವರೆಸ್ಟ್ ವೀರ, ಬೆಂಜಮಿನ್ ಪ್ರಾಂಕ್ಲಿನ್ (ಅನುವಾದಗಳು) ; ಜಾತಿ ಮತ್ತು ಭಾರತ (ವಿಚಾರ ಸಾಹಿತ್ಯ).

**ಡಾ|| ಯು. ಆರ್. ಅನಂತಮೂರ್ತಿ**[2] : ಬಹುಮುಖ ಪ್ರತಿಭೆಯ ಧೀಮಂತ ಲೇಖಕ, ಉತ್ತಮ ಕತೆಗಾರ, ಕಾದಂಬರಿಕಾರ, ಕವಿ, ವಿಮರ್ಶಕ ಹಾಗೂ ಪತ್ರಿಕಾ ಸಂಪಾದಕ ('ರುಜುವಾತು' ತ್ರೈಮಾಸಿಕ ಪತ್ರಿಕೆ) ಕಾಮನ್ ವೆಲ್ತ್ ವಿದ್ಯಾರ್ಥಿ ವೇತನ ಪಡೆದು ಸಂಶೋಧನೆ ನಡೆಸಿದ್ದಾರೆ. ಸೃಜನಾತ್ಮಕ ಲೇಖನಕ್ಕಾಗಿ 'ಹೋಮಿ ಬಾಬಾ' ಫೆಲೋಷಿಪ್ ಪಡೆದಿದ್ದಾರೆ. ಸಂದರ್ಶಕ ಪ್ರಾಧ್ಯಾಪಕರಾಗಿ ವಿಶ್ವಾದ್ಯಂತ ಸುತ್ತಿದ್ದಾರೆ. ಒಳ್ಳೆಯ ವಾಗ್ಮಿಗಳು, ವಿಚಾರ ವಾದಿಗಳು ಇವರ ಕೃತಿ ರಚನೆ ಸಂಖ್ಯೆಯಲ್ಲಿ ಕೆಲವೇ

---

1 ಜನನ : ನವಂಬರ್ 26, 1932. ದಕ್ಷಿಣ ಕನ್ನಡ ಜಿಲ್ಲೆಯ ಮುದ್ರಬೆಟ್ಟು. ತಂದೆ–ಶಾಮಯ್ಯ, ತಾಯಿ–ಕಲ್ಯಾಣಿ.

2 ಜನನ : ಡಿಸೆಂಬರ್ 21, 1932. ತೀರ್ಥಹಳ್ಳಿಯ 'ಮೇಳಿಗೆ'. ತಂದೆ–ರಾಜಗೋಪಾಲಾ ಚಾರ್ಯ, ತಾಯಿ–ಸತ್ಯಭಾಮ. ವಿದ್ಯೆ ಇಂಗ್ಲೀಷ್ ಸಾಹಿತ್ಯದಲ್ಲಿ ಎಂ. ಎ., ಬರ್ಮಿಂಗ್ ಹ್ಯಾಂ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. (ರಾಜಕಾರಣ ಮತ್ತು ಕತೆ-ಕಾದಂಬರಿ).

ಆದರೂ ಮೌಲಿಕವಾಗಿ ಮಹತ್ವ ಗಳಿಸಿದವುಗಳು. ಇವರ ಬಹಳಷ್ಟು ಕೃತಿಗಳು ಬೇರೆ ಬೇರೆ ಭಾಷೆಗಳಿಗೂ ಅನುವಾದಗೊಂಡಿವೆ.

ಕೃತಿಗಳು : ಸಂಸ್ಕಾರ, ಭಾರತೀ ಪುರ, ಎಂದೆಂದೂ ಮುಗಿಯದ ಕಥೆ, ಪ್ರಶ್ನೆ, ಮೌನಿ, ಅವಸ್ಥೆ, ಪ್ರಜ್ಞೆ ಮತ್ತು ಪರಿಸರ, ಆವಾಹನೆ, ಹದಿನೈದು ಪದ್ಯಗಳು ಇತ್ಯಾದಿ. ಇವರ ಕೃತಿಗಳನ್ನಾಧರಿಸಿದ 'ಘಟಶ್ರಾದ್ಧ' ಮತ್ತು 'ಬರ' ಚಲನ ಚಿತ್ರಗಳಾಗಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಶಸ್ತಿ ಗಳಿಸಿವೆ. 'ಸಂಸ್ಕಾರ' ಅತ್ಯುತ್ತಮ ಚಲನಚಿತ್ರವಾಗಿ ದಾಖಲೆ ಗಳಿಸಿದೆ.

ಶ್ರೀಯುತರು 1987ರ ಜುಲೈ ತಿಂಗಳಲ್ಲಿ ಕೇರಳದ ಕೊಟ್ಟಾಯಂನ ಗಾಂಧಿ ವಿಶ್ವವಿದ್ಯಾಲಯದ ಕುಲಪತಿಗಳಾಗಿ ನೇಮಕಗೊಂಡಿರುವುದು ಬಹು ಹೆಮ್ಮೆಯ ವಿಷಯ.

**ಸಮೇತನಹಳ್ಳಿ ರಾಮರಾಯ**[1] : ಹೆಲ್ತ್ ಇನ್ಸ್‌ಪೆಕ್ಟರ್ ವೃತ್ತಿಯಿಂದ ನಿವೃತ್ತರಾದ ಮೇಲೆ ತಮ್ಮ ವೇಳೆಯನ್ನು ಸಂಪೂರ್ಣವಾಗಿ ಸಾಹಿತ್ಯ ಸೇವೆಯಲ್ಲಿ ತೊಡಗಿಸಿದ್ದಾರೆ. ಇವರದು ಬಹುಮುಖ ಪ್ರತಿಭೆ, ಕತೆಗಾರರು, ಕಾದಂಬರಿಕಾರರು, ಕವಿಗಳು ಹಾಗೂ ನಾಟಕಕಾರರೂ ಹೌದು.

ಇವರ ಕೃತಿ 'ಶಾಕುಂತಲಾ' (ಕಾವ್ಯ) 1971ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ. ಸ್ವರ್ಗ ಸೋಪಾನ, ತಲಕಾಡುಗೊಂಡ ಕೃತಿಗಳಿಗೆ ರಾಜ್ಯ ಸರಕಾರದ ಬಹುಮಾನ, 'ಸಿರಿಯಲ ದೇವಿ' ಕೃತಿಗೆ ಸಂಯುಕ್ತ ಕರ್ನಾಟಕ ಕಾದಂಬರಿ ಸ್ಪರ್ಧೆ ಬಹುಮಾನ, ಶಿಲ್ಪ ಸಂಗೀತ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ ಲಭಿಸಿದೆ.

ಇವರ ಕೃತಿಗಳ ಸಂಖ್ಯೆ ಸುಮಾರು 25.

ಇತರ ಮುಖ್ಯ ಕೃತಿಗಳು : ಮಹಾಸ್ವೇತೆ, ಎಲೆ ಮರೆಯ ಹೂ, ಪ್ರಾಣ ವೀಣೆ, ಜೂಲಿಯಸ್ ಸೀಸರ್, ಸವತಿಗಂಧ ವಾರಣೆ, ಯದುವೊಡೆಯ, ರಾಸಲೀಲೆ, ಕಲಾರಾಧನೆ, ನಾಟ್ಯಮಂದಾರ.

**ಶ್ರೀನಿವಾಸ ಉಡುಪ**[2] : ಬಹಳ ವರ್ಷಗಳಿಂದ ಕನ್ನಡ ಸಾರಸ್ವತ ಲೋಕವನ್ನು ಕಥೆ, ಕಾದಂಬರಿಗಳಿಂದ ಸಂಪನ್ನಗೊಳಿಸುತ್ತಿರುವ ಅತ್ಯಂತ ಜನಪ್ರಿಯ

---

1 ಜನನ : ನವೆಂಬರ್ 24, 1917, ಬೆಂಗಳೂರು ಜಿಲ್ಲೆ ಸಮೇತನಹಳ್ಳಿ. ತಂದೆ–ಶ್ರೀನಿವಾಸರಾವ್, ತಾಯಿ–ರುಕ್ಮಿಣಿಯಮ್ಮ.

2 ಜನನ : ಜನವರಿ 8, 1933. ಹೊಸನಗರ ತಾಲ್ಲೋಕು ಹುಂಚ. ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ ಕೆಲಸದಲ್ಲಿದ್ದಾರೆ.

ಲೇಖಕ. 'ಒಲಿದು ಬಂದವಳು' ಕಾದಂಬರಿ 1967ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. 'ಅಮೃತ ಹೃದಯ' ನಾಟಕ ಅಖಿಲ ಭಾರತ ಆಕಾಶವಾಣಿ ಬೆಂಗಳೂರು ಕೇಂದ್ರದಿಂದ ಪುರಸ್ಕಾರ ಗಳಿಸಿದೆ.

ಶ್ರೀಯುತರು ರಚಿಸಿರುವ ಕಾದಂಬರಿಗಳು ಸುಮಾರು 45, ಕಥಾ ಸಂಕಲನಗಳು 8, ನಾಟಕಗಳು 3. ಸಂಪಾದಿಸಿರುವ ಕೃತಿಗಳು 6, ಬಿಡಿ ಬರಹಗಳು ನೂರಾರು.

ಮುಖ್ಯ ಕೃತಿಗಳು : ಬಾಳಿನ ವೈಭವ, ಕೆಂಪು ತುಟಿ, ಪ್ರೇಮದ ಮನೆ, ಶೀಲವಂತೆ, ಜೀವನದ ಜತೆಗಾರ, ತುಂಬಿದ ಬಾಳು, ಒಲಿದು ಬಂದವಳು, ಸೋತ ಹೃದಯ, ಮನೆಗೆ ಬಂದವಳು, ಅಭಿಮನ್ಯು (ಮಕ್ಕಳ ಕಾದಂಬರಿ) ; ಸ್ನೇಹ ಶೀಲೆ, ವಿಜಯಲಕ್ಷ್ಮಿ ಮುಂತಾದ ಕಾದಂಬರಿಗಳು. ಮನೆಗೆ ಬಂದ ಮಗಳು, ನಿರಾಶೆಯ ಕೊನೆಯಲ್ಲಿ, ಬದುಕು, ಹೆಗ್ಗಡತಿ ಹೆತ್ತ ದೆವ್ವ, ಹೊಸ ಕಥೆಗಳು, ಪುರಾಣ ಕಥೆಗಳು (ಕಥಾ ಸಂಕಲನಗಳು) ; ರೇಷ್ಮೆಸೀರೆ, ಅಮೃತ ಹೃದಯ, ಗಣಪತಿ ಭರವಸೆ, ಮದುವೆ ಹೆಣ್ಣು (ನಾಟಕಗಳು).

**ಸುಧಾಕರ**[1] : ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀಯುತರು ಕನ್ನಡ ಸಾರಸ್ವತ ಲೋಕವನ್ನು ತಮ್ಮ ಬಹುಮುಖ ಕೃತಿಗಳಿಂದ ಸಂಪನ್ನಗೊಳಿಸಿದ್ದಾರೆ.

ಇವರ 'ಗರಿಕೆ ಬೇರು' ಕಥಾ ಸಂಕಲನ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

ಪ್ರಮುಖ ಕೃತಿಗಳು : ಕಣ್ಣೆ ಕಿತ್ತ ಹಸು, ಹತ್ತು ಕಥೆಗಳು (ಕಥಾ ಸಂಕಲನಗಳು) ; ಜಾನಪದ ಬೆಡಗಿನ ವಚನಗಳು, ನಮ್ಮ ಸುತ್ತಿನ ಗಾದೆಗಳು, ಶಿವಗಂಗೆ ಸುತ್ತಿನ ಜನಪದ ಕಥೆಗಳು (ಜಾನಪದ); ಸಹ್ಯಾದ್ರಿ (ಸಂಪಾದನೆ).

ಮೇಸ್ಟರು ಮಾತು ನಿಲ್ಲಿಸಿದೊಡನೆ ದಿನಕರ ಪ್ರಶ್ನಿಸಿದ.

"ಮೇಸ್ಟ್ರೇ 'ವಂಶ ವೃಕ್ಷ'ದ ಭೈರಪ್ಪನವರ ವಿಷಯ ಇನ್ನೂ ಹೇಳ್ಳೇ ಇಲ್ವಲ್ಲಾ ?"

**ಡಾ॥ ಎಸ್. ಎಲ್. ಭೈರಪ್ಪ**[2] : ಚೆನ್ನಪಟ್ಟಣ ತಾಲ್ಲೋಕಿನ 'ಸಂತೆ ಶಿವರ' ಗ್ರಾಮದವರು. ತತ್ವಶಾಸ್ತ್ರ ಪದವಿ ಗಳಿಸಿದೊಡನೆ ವಾಯುಪಡೆ ಸೇರಲು ಬಯ

---

1 ಜನನ : ಮೇ 31, 1933. ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೋಕಿನ ಎಣ್ಣೆಗೆರೆ. ತಂದೆ–ಹುಚ್ಚ ಕಾಳೇಗೌಡ, ತಾಯಿ–ಸಾಕಮ್ಮ.

2 ಜನನ : ಜುಲೈ 26, 1934.

ಸಿದ್ದರು. 'ಅದು ಕೈಗೂಡದೆ ಮತ್ತೆ ವಿದ್ಯಾಭ್ಯಾಸ ಮುಂದುವರಿಸಿ ಎಂ.ಎ. ಪದವಿ ಗಳಿಸಿ ಗುಜರಾತಿನ 'ವಲ್ಲಭ ವಿಶ್ವವಿದ್ಯಾನಿಲಯ'ದ ಸ್ನಾತಕೋತ್ತರ ವಿಭಾಗದಲ್ಲಿ ಫಿಲಾಸಫಿ ಅಧ್ಯಾಪಕರಾಗಿ ಕೆಲಕಾಲ ಸೇರಿದರು. 'ಸತ್ಯ ಮತ್ತು ಸೌಂದರ್ಯ' ಕುರಿತು ನಿಬಂಧ ಬರೆದು ಡಾಕ್ಟರೇಟ್ ಗಳಿಸಿದರು. ಅನಂತರ ಹುಬ್ಬಳ್ಳಿ, ಮೈಸೂರು ಕಾಲೇಜುಗಳಲ್ಲಿ ಉಪನ್ಯಾಸಕರಾಗಿದ್ದು ಅದನ್ನು ಬಿಟ್ಟು ಕೇಂದ್ರ ಸರ್ಕಾರದ ಶಿಕ್ಷಣ ಪ್ರತಿಷ್ಠಾನದಲ್ಲಿ ರೀಡರ್ ಆಗಿದ್ದು ಈಗ ಮೈಸೂರಿನ ರೀಜನಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಇವರ ಉತ್ಕೃಷ್ಟ ಕಾದಂಬರಿ 'ವಂಶ ವೃಕ್ಷ'ಕ್ಕೆ ಸಾಹಿತ್ಯ ಅಕಾಡೆಮಿಯ ಬಹುಮಾನ ಸಂದಿದೆ. (1965) ಇದು ಯಶಸ್ವಿ ಚಲನಚಿತ್ರ ವಾಗಿಯೂ ಪ್ರಶಸ್ತಿ ಗಳಿಸಿದೆ.

ಇತರ ಕೃತಿಗಳು : ನಿರಾಕರಣ, ದೂರ ಸರಿದರು, ನಾಯಿ ನೆರಳು, ಗೃಹ ಭಂಗ, ಮತದಾನ, ಗ್ರಹಣ, ತಬ್ಬಲಿಯು ನೀನಾದೆ ಮಗನೆ, ದಾಟು, ಅನ್ವೇಷಣೆ, ಧರ್ಮಶ್ರೀ, ಜಲಪಾತ, ಪರ್ವ, ಸಾಕ್ಷಿ, ನೆಲೆ (ಕಾದಂಬರಿಗಳು); ನಾನೇಕೆ ಬರೆಯು ತ್ತೇನೆ, ಸತ್ಯ ಮತ್ತು ಸೌಂದರ್ಯ, ಸಾಹಿತ್ಯ ಮತ್ತು ಪ್ರತೀಕ, ಕಥೆ ಮತ್ತು ಕಥಾ ವಸ್ತು (ಇತರೇ ಕೃತಿಗಳು).

'ದಾಟು' ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ವಿಶೇಷ ಬಹುಮಾನ ಸಂದಿದೆ.

**ಡಾ|| ಅನುಪಮಾ ನಿರಂಜನ*** : ಬಹುಮುಖ ಪ್ರತಿಭೆಯ ಸಾಹಿತಿ. ಈಕೆ ವೈದ್ಯಕೀಯ ವೃತ್ತಿ ಕೈಗೊಂಡಿದ್ದು ಜನಗಳ ದೇಹಕ್ಕೆ ಚಿಕಿತ್ಸೆಯೊದಗಿಸುವುದಲ್ಲದೆ ಮನಸ್ಸಿನ ಒಳಹೊಕ್ಕು ತುಡಿತ, ಮಿಡಿತ ಗುರುತಿಸಿ ಅದರಿಂದ ಸಮಾಜದ ಮೇಲಾ ಗುವ ಪರಿಣಾಮವನ್ನು ಗಮನಿಸಿ ಸೂಕ್ತ ಅನುಪಾನ ನೀಡುವುದರಲ್ಲಿ ಇವರದು ಸಿದ್ಧ ಹಸ್ತ. ಬುದ್ಧಿಯ ವಿಕಾಸಕ್ಕೆ ಪ್ರೇರಕವಾಗಬಲ್ಲ ವಿಚಾರ ಸಾಹಿತ್ಯ ನೀಡುವುದಲ್ಲದೆ ವೈದ್ಯಕೀಯ ಗ್ರಂಥಗಳನ್ನೂ ಸಹ ರಚಿಸಿದ್ದಾರೆ. ನೂರಾರು ಕಥೆಗಳು, 20ಕ್ಕೂ ಮಿಗಿಲಾಗಿ ಕಾದಂಬರಿಗಳನ್ನೂ ಕನ್ನಡ ಸಾಹಿತ್ಯ ಭಂಡಾರಕ್ಕೆ ನೀಡಿ ಸಂಪನ್ನಗೊಳಿ ಸಿದ್ದಾರೆ. ಶಿಶು ಸಾಹಿತ್ಯಕ್ಕೂ ಸಹ 'ದಿನಕ್ಕೊಂದು ಕಥೆ', 'ಕೇಳು ಕಿಶೋರಿ' ಮುಂತಾದ ಉತ್ತಮ ಕೃತಿಗಳನ್ನು ನೀಡಿದ್ದಾರೆ. 'ಸ್ನೇಹ ಯಾತ್ರೆ' (ಪ್ರವಾಸ ಕಥನ); ದಾಂಪತ್ಯ ದೀಪಿಕೆ, ವಧುವಿಗೆ ಕಿವಿಮಾತು, ಆರೋಗ್ಯ ಭಾಗ್ಯಕ್ಕೆ ವ್ಯಾಯಾಮ, ಆರೋಗ್ಯ ದರ್ಶನ, ತಾಯಿ ಮಗು (ವಿಜ್ಞಾನ ಹಾಗೂ ಆರೋಗ್ಯ ವಿಭಾಗಕ್ಕೆ ಸಂಬಂಧಿಸಿದವು) 'ಕಲ್ಲೋಲ' (ನಾಟಕ).

---

* ಜನನ : ಮೇ 17, 1934, ತೀರ್ಥಹಳ್ಳಿಯಲ್ಲಿ. ಹುಟ್ಟು ಹೆಸರು–ವೆಂಕಟಲಕ್ಷ್ಮಿ. ತಂದೆ–ಡಿ. ಶಿವರಾಮಯ್ಯ; ತಾಯಿ–ಲಕ್ಷ್ಮೀದೇವಮ್ಮ. ವಿದ್ಯಾಭ್ಯಾಸ–ಎಂ.ಬಿ.ಬಿ.ಎಸ್.

ರೂಪಾರಿಯ ಲಕ್ಷ್ಮಿ (1960) (ಕಥಾ ಸಂಕಲನ), ಆರೋಗ್ಯ ದರ್ಶನ (1971) ಗ್ರಂಥಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. 1978ರಲ್ಲಿ ಸಾಹಿತ್ಯ ಅಕಾಡೆಮಿ ಪುರಸ್ಕಾರ ಹಾಗೂ ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ ಲಭಿಸಿವೆ.

ಪ್ರಸಿದ್ಧ ಕಾದಂಬರಿಗಳು : ಅನಂತ ಗೀತ, ಶ್ವೇತಾಂಬರಿ, ಹಿಮದ ಹೂ, ಸ್ನೇಹ ಪಲ್ಲವಿ, ಪರೀಕ್ಷೆ, ಮುಕ್ತಿ ಚಿತ್ರ, ಮಾಧವಿ, ಋಣ, ಮೂಡಲ ಪಡುವಣ, ಆಕಾಶ ಗಂಗೆ, ಹೃದಯ ವಲ್ಲಭ ಮುಂತಾದ 25 ಕೃತಿಗಳು.

ಕಥಾ ಸಂಕಲನಗಳು : ಕಣ್ಮಣಿ, ರೂಪಾರಿಯ ಲಕ್ಷ್ಮಿ, ನೀರಿಗೆ ನೈದಿಲೆ ಶೃಂಗಾರ, ಏಳು ಸುತ್ತಿನ ಮಲ್ಲಿಗೆ, ಗಿರಿಧಾಮ, ಪುಷ್ಪಕ ಮುಂತಾದವುಗಳು.

ಇವರ ಹಲವಾರು ಕಥೆ ಹಾಗೂ ಕಾದಂಬರಿಗಳು ಭಾರತೀಯ ಇತರ ಭಾಷೆಗಳಿಗೂ ಅನುವಾದಗೊಂಡಿವೆ. ಇತ್ತೀಚೆಗೆ (ಏಪ್ರಿಲ್ 87) ಅವರ ಕೃತಿ 'ನೆನಪು ಸಿಹಿ ಕಹಿ'ಗೆ ಶಾಶ್ವತಿ ಸಂಸ್ಥೆ ವತಿಯಿಂದ ತಿರುಮಲಾಂಬಾ ಪ್ರಶಸ್ತಿ (10,000ರೂ.ಗಳು) ಲಭಿಸಿದೆ.

**ಎಚ್. ಎಸ್. ಪಾರ್ವತಿ*** : ಕನ್ನಡ ಲೇಖಕಿಯರ ಸಂಘದ ಮಾಜಿ ಅಧ್ಯಕ್ಷೆ. ಬೆಂಗಳೂರಿನ ಆಕಾಶವಾಣಿಯಲ್ಲಿ ಕೆಲಸದಲ್ಲಿದ್ದಾರೆ. ಸಾಹಿತ್ಯದಂತೆ ಸಂಗೀತ, ನಾಟಕಗಳಲ್ಲೂ ಶ್ರೀಮತಿಯವರಿಗೆ ವಿಶೇಷ ಆಸಕ್ತಿ. ಹಲವಾರು ನಾಟಕ, ಟಿ.ವಿ. ಹಾಗೂ ಚಲನಚಿತ್ರಗಳಲ್ಲೂ ನಟಿಸಿದ್ದಾರೆ. ಸಾಹಿತ್ಯದಲ್ಲಿ ಅತೀವ ಆಸಕ್ತಿಯಿರುವ ಈಕೆ ಕತೆ, ಕಾದಂಬರಿ, ನಾಟಕಗಳನ್ನು ರಚಿಸಿರುವುದಲ್ಲದೆ ಹಲವಾರು ಉತ್ತಮ ಕೃತಿಗಳನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರ ಸಹ ಸಂಪನ್ನಗೊಳಿಸಿದ್ದಾರೆ.

ಕೃತಿಗಳು : ಪರಾಜಯ, ನೇಸರು ನೆಳಲು, ಜೀವನ ಜಾಲ, ಜಾ ಬಾಲ, ರಣ ಹದ್ದುಗಳು (ಅನುವಾದ ಕಾದಂಬರಿಗಳು) ಸ್ವರ-ಅಪಸ್ವರ, ಬದಲಾದ ಪ್ರತಿಬಿಂಬ, ಹೆಣ್ಣು ಹೃದಯ, ಒಂಟಿ ಮೋಡ (ಕಥಾ ಸಂಕಲನಗಳು).

ದುರ್ಗೇಶ ನಂದಿನಿ, ಬಿಳಿಯ ರಕ್ತ, ದರ್ಬಾರಿ ರಾಗ, ಮಾಸಿದ ಸೆರಗು, ತ್ಯಾಗ ಪತ್ರ, ಪಂಜಾಬಿ ಲೋಕ ಕತೆಗಳು ಮುಂತಾದವು ಅನುವಾದ ಕೃತಿಗಳು.

ಆರ್. ಕಲ್ಯಾಣಮ್ಮ—ಜೀವನ ಮತ್ತು ಕಾರ್ಯ (ಜೀವನ ಚರಿತ್ರೆ) ಶಾರದಾ ಮಣಿ ದೇವಿ (ಮಕ್ಕಳ ಸಾಹಿತ್ಯ),

---

* ಜನನ : ಫೆಬ್ರವರಿ 3, 1934, ಬೆಂಗಳೂರು. ತಂದೆ–ಶ್ರೀನಿವಾಸರಾವ್; ತಾಯಿ–ಮಹಾಲಕ್ಷ್ಮಮ್ಮ. ಈಕೆ ಹಿಂದಿಯಲ್ಲಿ ಎಂ.ಎ. ಪದವೀಧರೆ.

ಭಾರತಿ, ಓಡಿಸಾ ಒಳಗು, ಸುನಂದಾಭಿನಂದನ, ನವೋದಯ ಕಾವ್ಯದಲ್ಲಿ ಪ್ರಕೃತಿ ಚಿತ್ರಣ ; ಸಂಪಾದಿತ ಕೃತಿಗಳು.

**ಎನ್. ಎಸ್. ಚಿದಂಬರರಾವ್**[1] : ಕಥಾ ಕ್ಷೇತ್ರದಲ್ಲಿ ಬಹಳ ಸುಪರಿಚಿತರು. ಸುಮಾರು 275ಕ್ಕೂ ಹೆಚ್ಚು ಕಥೆಗಳನ್ನು ಬರೆದಿದ್ದಾರೆಂದರೆ ಇವರ ಅಪಾರ ಜನ ಪ್ರಿಯತೆ ಅರ್ಥವಾದೀತು.

ಕೃತಿಗಳು : 'ಸರಿಯುವ ತೆರೆಗಳು' (ಕಥಾ ಸಂಕಲನ); 'ಕತೆಗಳು—1981' 'ಅಲೆಗಳು' (ಕಥಾ ಸಂಕಲನಗಳು—ಸಂಪಾದನೆ); 'ಬೆಂಕಿಯ ನೆರಳು', 'ನಿರ್ದೇಶನ' (ಕಾದಂಬರಿಗಳು); ಎಚ್ಚಮ ನಾಯಕ (ಜೀವನ ಚಿತ್ರ).

ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿ ಚೆಳ್ಳಕೆರೆ, ಸಂತೆ–ಬೆನ್ನೂರು, ಮಲ್ಲಾಡಿ ಹಳ್ಳಿ ಮುಂತಾದೆಡೆಗಳಲ್ಲಿ ನಾಗರೀಕರು ಸನ್ಮಾನಿಸಿದ್ದಾರೆ. ರಾಷ್ಟ್ರೋತ್ಥಾನ ಪರಿಷತ್ತು ಸಹ ಸನ್ಮಾನಿಸಿದೆ.

**ಆರ್ಯಾಂಬ ಪಟ್ಟಾಭಿ**[2] : 'ತ್ರಿವೇಣಿ'ಯವರ ಸಹೋದರಿ. ಅಕ್ಕನಂತೆಯೇ ಈಕೆಯೂ ಕಾದಂಬರಿ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಭಾವಾತೀತ ಜ್ಞಾನ (Transdental Meditation)ದಲ್ಲಿ ಈಕೆಗೆ ಬಹಳ ಆಸಕ್ತಿ.

ಕಾದಂಬರಿಗಳು : ಹೊಂಗನಸು, ಆರಾಧನೆ, ಕಸ್ತೂರಿ, ಆ ಹಾಡು, ಸಾಕ್ಷಾತ್ಕಾರ, ಪರಂಪರೆ, ಕುಣಿಕೆ, ಬೇವು–ಬೆಲ್ಲ, ಮರಳಿ ಗೂಡಿಗೆ, ಬದುಕಿನ ಬವಣೆ ಯಲ್ಲಿ, ಅತ್ತು ನಗಿಸಿದಾಗ, ಕಪ್ಪು–ಬಿಳುಪು, ಎರಡು ಮುಖ, ಬೀಸಿದ ಬಲೆ, ಪ್ರೇಮ ಕಥೆ, ಸವತಿಯ ನೆರಳು, ದೇವ ಮಾನವ ಮುಂತಾದ ಸುಮಾರು 25 ಕಾದಂಬರಿಗಳು. ಇವುಗಳಲ್ಲಿ ಕೆಲವು ಚಲನಚಿತ್ರಗಳಾಗಿ ಅಪಾರ ಯಶಸ್ಸು ಗಳಿಸಿವೆ.

ಕಥಾ ಸಂಕಲನಗಳು : ಉದಯ ರವಿ, ಮರಳಿ ಬಂದ ಮಮತೆ, ನನ್ನವಳು, ಮುಂತಾದವುಗಳು.

ಇತರ ಕೃತಿಗಳು : ಭಾರತದ ಮಹಾ ಪುರುಷರು, ರಣಧೀರ ಕಂಠೀರವ ನರಸಿಂಹರಾಜ ಒಡೆಯರ್, ನಾಲ್ವಡಿ ಕೃಷ್ಣರಾಜ ಒಡೆಯರ್ ಮುಂತಾದವುಗಳು.

---

1 ಜನನ : ಸೆಪ್ಟಂಬರ್ 28, 1936, ಶಿವಮೊಗ್ಗ ಜಿಲ್ಲೆಯ ಚನ್ನಗಿರಿ. ತಂದೆ– ಎಸ್. ಶಂಕರಪ್ಪ, ತಾಯಿ–ಸೀತಮ್ಮ. ವಿದ್ಯಾಭ್ಯಾಸ–ಬಿ.ಎ. (ಆನರ್ಸ್) ಬಿ.ಇಡಿ. ಇದಲ್ಲದೆ ಹಿಂದಿಯಲ್ಲಿ ರಾಷ್ಟ್ರ ಭಾಷಾ ವಿಶಾರದ ಪದವೀಧರರು. ವೃತ್ತಿ–ಶಾಲಾ ಉಪಾಧ್ಯಾಯರು.

2 ಜನನ : ಮಾರ್ಚ್ 12, 1936, ಮಂಡ್ಯ. ಬಿ.ಎ. ಪದವೀಧರೆ.

**ನಾ. ಡಿಸೌಜ**[1] : ಇತ್ತೀಚೆಗೆ ಅಧಿಕ ಸಂಖ್ಯೆಯಲ್ಲಿ ಇವರ ಕಥೆ, ಕಾದಂಬರಿಗಳು ರಾಜ್ಯದ ಹೆಸರಾಂತ ಎಲ್ಲಾ ಪತ್ರಿಕೆಗಳಲ್ಲೂ ಕಾಣಬರುತ್ತಿವೆ. ಸುಧಾ ವಾರ ಪತ್ರಿಕೆಯವರು ನಡೆಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ಇವರ ಕೃತಿ 'ಮುಳುಗಡೆ' ಬಹುಮಾನ ಗಳಿಸಿದೆ.

ಕೃತಿಗಳು : ಬಂಜೆ ಬೆಂಕಿ, ನೆಲೆ, ನಿನ್ನುದ್ಧಾರ ವೆಷ್ಟಾಯಿತು, ಸ್ವರ್ಗದ ಬಾಗಿಲಲ್ಲಿ (ಕಥಾ ಸಂಕಲನಗಳು); ಭೂತದ ಎದುರು-ಬೇತಾಳ, ತಬ್ಬಲಿ, ದ್ವೀಪ, ಪ್ರೀತಿಯೆಂಬ ಚುಂಬಕಾ, ದುರ್ಗವೆಂಬ ವ್ಯೂಹ, ಮುಂದೇನು ಬಾಲಗಂದರ್ವ. ಹೂವ ಚೆಲ್ಲುತ ಬಾ, ಅಜ್ಞಾತ, ಈ ನೆಲ ಈ ಜಲ, ಮಂಜಿನ ಕಾವು, ದೇವರಿಗೆ ದಿಕ್ಕು, ನೇತ್ರಾಣಿ ಗುಡ್ಡಕೆ ಯಾತ್ರೆ, ಪ್ರಜ್ಞಾಬಲಿ (ಕಾದಂಬರಿಗಳು); ಹಕ್ಕಿಗಳಿಗೆ ಬಂತು ಬಣ್ಣ, ಸದಾಶಿವಬ್ರಹ್ಮೇಂದ್ರ, ಪುಲಿನ ಬಿಹಾರಿದಾಸ್, ಬಾಲ ಗಂಧರ್ವ, ಕದಂಬ ಮಯೂರ ಶರ್ಮ (ಕಿಶೋರ ಸಾಹಿತ್ಯ).

**ಭೂಸನೂರಮಠ ರಾಜಶೇಖರ**[2] : ಕರ್ನಾಟಕ ವಿಜ್ಞಾನ ಕಾಲೇಜಿನಲ್ಲಿ ಭೌತ ಶಾಸ್ತ್ರದ ಅಧ್ಯಾಪಕರಾಗಿರುವ ಶ್ರೀಯುತರು ಬಹಳಷ್ಟು ಕಾದಂಬರಿಗಳನ್ನು ವಿಜ್ಞಾನದ ಹಿನ್ನೆಲೆಯಲ್ಲೇ ರಚಿಸಿದ್ದಾರೆ. ಇವು ಧಾರಾವಾಹಿಯಾಗಿ ಹೊರಬಂದು ಅಪಾರ ಜನ ಮನ್ನಣೆ ಗಳಿಸಿವೆ.

ಕೃತಿಗಳು : ಶುಕ್ರ ಗ್ರಹದ ಸಾಹಸಿ ಯಿರಘಾನ್, ಮಂಗಳ, ಸಿಗ್ನೀ ಸಂಗೀತ, ರಾಕ್ಷಸ ದ್ವೀಪ, ನಾಳಿನ ಮಕ್ಕಳ ಕಥೆಗಳು (4 ಭಾಗಗಳಲ್ಲಿ), ಅಟ್ಲಾಂಟಿಸ್.

ವಿಜ್ಞಾನ ದೃಷ್ಟಿಯಲ್ಲಿ ಸೃಷ್ಟಿ, ಪ್ರೌಢ ದೇವರಾಯರ ಕಾವ್ಯದ ಕಥಾ ಸಂಗ್ರಹ, ಭೌತಶಾಸ್ತ್ರ ಪ್ರವೇಶ ಮುಂತಾದವುಗಳು ಇತರ ಗ್ರಂಥಗಳು. ಶ್ರೀಯುತರು ಇಂಗ್ಲೀಷಿನಲ್ಲೂ ಕೃತಿ ರಚನೆ ಮಾಡಿದ್ದಾರೆ.

**ಕೆ. ಟಿ. ಗಟ್ಟಿ**[3] : ಧಾರಾವಾಹಿ ಕಾದಂಬರಿಗಳ ಮುಖೇನ ಪ್ರಸಿದ್ಧಿಗೆ ಬಂದ ಸಾಹಿತಿ. ಚಿಕ್ಕ ವಯಸ್ಸಿನಿಂದಲೇ ಕಥೆಗಳನ್ನು ಬರೆಯುತ್ತಿದ್ದರು. ಶಬ್ದಗಳು,

---

1 ಜನನ : ಜೂನ್ 6, 1937, ಶಿವಮೊಗ್ಗ ಜಿಲ್ಲೆಯ ಸಾಗರ. ತಂದೆ-ಡಿಸೋಜಾ. ತಾಯಿ-ರೊವಿನಾ. ಇವರ ಪೂರ್ಣ ಹೆಸರು-ನಾರ್‌ಬರ್ಟ್ ಡಿಸೋಜ.

ಶಿವಮೊಗ್ಗ ಲೋಕೋಪಯೋಗಿ ಇಲಾಖೆಯಲ್ಲಿ ವೃತ್ತಿಯಲ್ಲಿದ್ದಾರೆ. 1987ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಆಯ್ಕೆಗೊಂಡಿದ್ದಾರೆ.

2 ಜನನ : ಜನವರಿ 16, 1938, ಹುಬ್ಬಳ್ಳಿ.

3 ಜನನ : 1938.

ಕರ್ಮಣ್ಯೇ ವಾಧಿಕಾರಸ್ತೇ, ಅಬ್ರಾಹ್ಮಣ ಪ್ರಸಿದ್ಧಿಯನ್ನು ತಂದುಕೊಟ್ಟ ಕಾದಂಬರಿಗಳು. ಇಥಿಯೋಪಿಯಾ ದೇಶದಲ್ಲಿ ಹಲವು ವರ್ಷಗಳು ಶಿಕ್ಷಕರಾಗಿದ್ದು ಈಗ ಕರ್ನಾಟಕಕ್ಕೆ ಆಗಮಿಸಿ ಉಡುಪಿಯ ಬಳಿಯ ಕಾಡುಬೆಟ್ಟು ಗ್ರಾಮದಲ್ಲಿ ನೆಲೆಸಿ ನಿರಂತರ ಸಾಹಿತ್ಯ ಸೇವೆಯಲ್ಲಿ ನಿರತರಾಗಿದ್ದಾರೆ. ಇಂಗ್ಲೀಷಿನಲ್ಲೂ ನಾಲ್ಕು ಕೃತಿಗಳನ್ನು ರಚಿಸಿದ್ದಾರೆ.

ಇತರ ಕೃತಿಗಳು : ಕೂಪ, ಅವಿಭಕ್ತರು, ಶಿಲಾ ತಪಸ್ವಿ, ಸ್ವರ್ಣ ಮೃಗ, ಬಿಸಿಲುಗುದುರೆ, ಅಮುಕ್ತ. ಮೃತ್ಯೋರ್ಮಾ ಅಮೃತಂಗಮಯ, ಪೂಜಾರಿ, ಯುಗಾಂತರ.

**ಡಾ॥ ಬೆಸಗರಹಳ್ಳಿ ರಾಮಣ್ಣ**[1] : ವೃತ್ತಿಯಲ್ಲಿ ಇವರು ವೈದ್ಯರು. ಸಾಹಿತ್ಯ ರಚನೆ ಇವರು ಆರಿಸಿಕೊಂಡಿರುವ ಪ್ರವೃತ್ತಿ. ವೈದ್ಯಕೀಯ ವೃತ್ತಿಯಲ್ಲಿ ಲಭಿಸುವ ಅನುಭವವನ್ನು ಕಥೆ, ಕಾದಂಬರಿಗಳಲ್ಲಿ ಹೃದಯಂಗಮವಾಗಿ ಚಿತ್ರಿಸುವುದರಲ್ಲಿ ಇವರು ಸಿದ್ಧಹಸ್ತರು.

ಇವರ ಕೃತಿಗಳಾದ : 'ನೆಲದ ಒಡಲು' ಮತ್ತು 'ಗರ್ಜನೆ' ಕಥಾ ಸಂಕಲನಗಳಿಗೆ 1967 ಮತ್ತು 1972ರಲ್ಲಿ ಕ್ರಮವಾಗಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿವೆ.

ಇತರ ಕೃತಿಗಳು : ಹರಕೆಯ ಹಣ, ಒಂದು ಹುಡುಗಿಗೆ ಬಿದ್ದ ಕನಸು ಮುಂತಾದವುಗಳು.

**ದಯಾನಂದ ತೊರ್ಕೆ**[2] : ಪೂರ್ಣ ಹೆಸರು ಪಾಂಡುರಂಗ ದಯಾನಂದ ತೊರ್ಕೆ. ಒಳ್ಳೆಯ ಕತೆಗಾರರು, ಕಾದಂಬರಿಕಾರರು.

ಕೃತಿಗಳು : ಅನುರಾಗ, ಅಗ್ನಿ ಕಾಂಡ, ಸೆಳೆತ, ಸೀಮಾ, ಗೆಜ್ಜೆ ನಾದ, ವಿಮುಕ್ತಿ, ಪರ್ಣಕುಟೀರ, ಬಂಧನ, ಕಲಾನಿಧಿ, ದೇವಿ, ಹೊಂಗಿರಣ, ಶಾಲಿನಿ (ಕಾದಂಬರಿಗಳು); 'ಮುಕ್ತಿ' ಫೋಟೊ ಕಾಮಿಕ್ಸ್ 'ಸುಧಾ' ವಾರ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

**ಪೂರ್ಣಚಂದ್ರ ತೇಜಸ್ವಿ**[3] ; ಇವರ ಕಾದಂಬರಿ 'ಕರ್ವಾಲೋ'ಗೆ 1981ರ ಶ್ರೇಷ್ಠ ಕಾದಂಬರಿ ಎಂದು ರಾಜ್ಯ ಸರಕಾರದ ಪುರಸ್ಕಾರ ಲಭಿಸಿದೆ.

---

1 ಜನನ : ಮೇ, 18, 1938, ಮಂಡ್ಯ ಜಿಲ್ಲೆಯ ಬೆಸಗರಹಳ್ಳಿ. ತಂದೆ–ಚಿಕ್ಕ ಎಲ್ಲೇಗೌಡ, ತಾಯಿ–ದೊಡ್ಡ ತಾಯಮ್ಮ.

2 ಜನನ : ಜೂನ್ 8, 1938, ಉತ್ತರ ಕನ್ನಡ ಜಿಲ್ಲೆ ತೊರ್ಕೆಯಲ್ಲಿ.

3 ಜನನ : ಸೆಪ್ಟಂಬರ್ 8, 1938. ರಾಷ್ಟ್ರಕವಿ ಡಾ॥ ಕುವೆಂಪುರವರ ಪುತ್ರ.

ಶ್ರೀಯುತರು ಒಳ್ಳೆಯ ಕಥೆಗಾರರು, ಕಾದಂಬರಿಕಾರರು, ಕವಿಗಳು ಹಾಗೂ ನಾಟಕಕಾರರು. ಇವರ ಕೃತಿಗಳ ಸಂಖ್ಯೆ ಸುಮಾರು 10.

ಬೃಹನ್ನಳೆ, ಸೋಮುವಿನ ಸ್ವಗತ ಲಹರಿ (ಕವನ ಸಂಗ್ರಹಗಳು), ಸ್ವರೂಪ, ನಿಗೂಢ ಮನುಷ್ಯರು (ಕಾದಂಬರಿಗಳು) ಹುಲಿಯೂರಿನ ಸರಹದ್ದು, ಅಬಚೂರಿನ ಪೋಸ್ಟಾಫೀಸು (ಸಣ್ಣ ಕಥಾ ಸಂಕಲನಗಳು), ಯುವಳ ಪ್ರಶ್ನೆ (ನಾಟಕ).

ಇವರ ಕೃತಿ : 'ಚಿದಂಬರ ರಹಸ್ಯ' ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಬಹುಮಾನ ಗಳಿಸಿದೆ (1985—ಐದು ಸಹಸ್ರ ರೂಪಾಯಿಗಳು).

**ಮಂಗಳಾ ಸತ್ಯನ್**[1] : ಈಕೆಯ ಕೃತಿಗಳು ಸುಮಾರು 30. ಇವುಗಳಲ್ಲಿ ಕಥಾ ಸಂಕಲನ, ಕಾದಂಬರಿ ಹಾಗೂ ನಾಟಕ ಸೇರಿವೆ.

ಮುಖ್ಯವಾದವುಗಳು : ಭಾಗ್ಯಜ್ಯೋತಿ, ಮುಗ್ಧಮಾನವ, ಕಾನನದ ಕರುಣಾಳು, ವಿಷದ ಒಡಲು, ಪುತ್ರಕಾಮಿ, ನಿನಗಾಗಿ, ನವ ವಸಂತ, ಬಂಗಾರ ಭೂಷಿತೆ, ಹೂವೆರಡು ಕೊನೆಯೊಂದು, ವಂಚಿತೆ, ಆ ಮುಖ, ಹಣದ ಮಗಳು, ಅರಸಿ ಬಂದವಳು, ಸ್ವರ್ಗಸನ್ನಿಧಿ, ಅಮೃತಮಯಿ, ಆಶಾದೀಪ, ಪ್ರಣಯ ತಾಂಡವ ಮುಂತಾದ 25 ಕಾದಂಬರಿಗಳು.

ಮದ್ವೆ ಮಸ್ಲತ್, ಧೀರೋದಾತ್ತ ಕಂಸ (ನಾಟಕಗಳು).

'ಭಾಗ್ಯ ಜ್ಯೋತಿ' ಮತ್ತು 'ಮುಗ್ಧ ಮಾನವ' ಚಲನಚಿತ್ರಗಳಾಗಿ ರೂಪು ಗೊಂಡು ಅಪಾರ ಜನಮನ್ನಣೆ ಗಳಿಸಿವೆ.

**ಕಾಕೋಳು ಸರೋಜಾರಾವ್**[2] : ಅಧಿಕ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಕನ್ನಡ ಸಾಹಿತ್ಯಕ್ಕಿತ್ತಿರುವ ಜನಪ್ರಿಯ ಲೇಖಕಿ. (60ಕ್ಕೂ ಹೆಚ್ಚು ಕಾದಂಬರಿ ಗಳು).

ಕೆಲ ಪ್ರಮುಖ ಶೀರ್ಷಿಕೆಗಳು : ಬಲಿದಾನ, ತೀರದ ಆಸೆ, ಅಧಿಕಾರ, ಕುಂಕುಮ ಬಲ, ಮೌನ ಗೀತೆ, ಚಿರ ವಿರಹಿ, ಅವಳ ಹೆಜ್ಜೆ, ಹೊನ್ನಿನ ಹಂಬಲಾ, ಚಿಗುರೆಲೆ ಬಾಡಿದಾಗ, ಮಾಗಿಯ ಕನಸು, ನಿಶ್ಚಿತಾರ್ಥ, ಬಳ್ಳಿ ಹಬ್ಬಿದಾಗ, ಬೆಳಕು ಹರಿದಾಗ, ಹೆಜ್ಜೆ ಗೆಜ್ಜೆ, ಗೆದ್ದವರು ಯಾರು? ಪರ್ವ ಕಾಲ, ತಾಯಿಯ ಸೆರಳು,

---

1 ಜನನ : ಏಪ್ರಿಲ್ 10, 1940, ಹಾಸನ ಜಿಲ್ಲೆ ಹೊಳೇನರಸಿಪುರ. ತಂದೆ–ಸುಬ್ಬರಾವ್, ತಾಯಿ–ಗುಂಡಮ್ಮ.

2 ಜನನ : ಡಿಸೆಂಬರ್ 23, 1940, ಬೆಂಗಳೂರು. ತಂದೆ–ಪದ್ಮನಾಭಾಚಾರ್, ತಾಯಿ–ಭಾಮಾ.

ಮೋಹದ ಬಲೆ, ಎರಡು ಮನೆ, ಕ್ಷಮೆ, ಸಾಕ್ಷಿ, ಶರಣಾಗತ, ಮನೆ ಸೊಸೆ, ಗುಪ್ತ ಗಾಮಿನಿ, ದೆವ್ವದ ಮನೆ ಮುಂತಾದವುಗಳು.

**ಡಾ॥ ಶ್ರೀನಿವಾಸ ಕುಲಕರ್ಣಿ**[1] : ಆಕಾಶವಾಣಿ ಕ್ಷೇತ್ರದಲ್ಲಿ ಚಿರಪರಿಚಿತ ಹೆಸರು. ಈಗ ದೂರದರ್ಶನದಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳತೊಡಗಿದ್ದಾರೆ. ಶ್ರೀಯುತರು ಒಳ್ಳೆಯ ಕವಿಗಳು, ಕತೆಗಾರರು, ಕಾದಂಬರಿಕಾರರು, ನಾಟಕಕಾರರೂ ಹೌದು.

ಇವರ ಕೃತಿಗಳು : 'ಬಾಳು ನಂಜು–ಬಯಕೆ ಮಂಜು' (ಕಥಾ ಸಂಕಲನ) ; ಕೆಥಾರ್ಸಿಸ್ (ಕವನ ಸಂಗ್ರಹ).

**ಪ್ರೇಮಾ ಭಟ್**[2] : ಕರ್ನಾಟಕ ಸರ್ಕಾರದಲ್ಲಿ (ವಿಧಾನಸೌಧಾದಲ್ಲಿ) ಅಧಿಕಾರಿಯಾಗಿರುವ ಶ್ರೀಮತಿ ಪ್ರೇಮಾ ಭಟ್ ಬಹು ಜನಪ್ರಿಯ ಕತೆಗಾರ್ತಿ, ಹೆಸರಾಂತ ಕಾದಂಬರಿಗಾರ್ತಿ. ಇವರು ಬಹು ಸಂಖ್ಯೆಯಲ್ಲಿ ಕತೆ ರಚಿಸಿರುವುದಕ್ಕೆ ಅವರ ಬೃಹತ್ ಕಥಾಸಂಕಲನ 'ಅಕ್ಷತೆ'ಯೇ ಸಾಕ್ಷಿ. ಇದರಲ್ಲಿ 108 ಕಥೆಗಳಿವೆ. ಹಲವಾರು ಕಾದಂಬರಿಗಳು ಹೆಸರಾಂತ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಚಾರಗೊಂಡಿರುವುದೇ ಇವರ ಜನಪ್ರಿಯತೆಯದ್ಯೋತಕ.

ಇವರ ಕೃತಿಗಳು : ಅವಳಬಾಳು, ಕುಂಕುಮಶೋಭಿನಿ, ಅಲೆಗಳು, ಮಲ್ಲಿಗೆ ಮುಡಿಗೇರಿತು, ಇದ್ದು ಹೋದ ಜೀವ, ಹೂ ಬಿಸಿಲು, ನಂದಿನಿ, ತಾರಾಬಲ, ಭಾವ ಬಂಧನ, ಮನೆ ಮನ, ಗೊಂದಲ, ಅಕ್ಷರ ಲಕ್ಷ್ಮಿ ಮುಂತಾದವು ಕಾದಂಬರಿಗಳು.

ಮನ ಮೆಚ್ಚಿದವಳು, ತಲೆ ತಿರುಕರು (ಕಥಾ ಸಂಕಲನ), ಮನೆ (ಕವನ ಸಂಕಲನ).

ಕಛೇರಿಯ ವ್ಯವಹಾರವನ್ನು ಕನ್ನಡದಲ್ಲಿ ನಿರ್ವಹಿಸಿದ್ದಕ್ಕಾಗಿ ಕರ್ನಾಟಕ ಸರ್ಕಾರ ಇವರಿಗೆ ಬಹುಮಾನ ನೀಡಿದೆ.

**ಜಿ. ಎಸ್. ಸದಾಶಿವ**[3] : (ಗುಂಡೂಮನೆ ಶ್ರೀ ಪಾದರಾವ್ ಸದಾಶಿವ).

---

1 ಜನನ : ಜನವರಿ 6, 1939, ರಾಯಚೂರು ಜಿಲ್ಲೆಯ ಕೊಪ್ಪಳ. ತಂದೆ– ಅನಂತ ರಾವ್, ತಾಯಿ–ಕಸ್ತೂರಿಬಾಯಿ.

2 ಜನನ : ಸೆಪ್ಟಂಬರ್ 22, 1941, ಉಡುಪಿ ತಾಲ್ಲೋಕಿನ ಹೆರ್ಗ. ಪತಿ– ಶ್ರೀನಿವಾಸಭಟ್, ಕೃಷಿ ವಿಶ್ವವಿದ್ಯಾನಿಲಯದಲ್ಲಿ ಕೆಲಸದಲ್ಲಿದ್ದಾರೆ. ಪ್ರೇಮಾ ಭಟ್ ಇತ್ತೀಚೆಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಎಂ.ಎ. ಪದವಿ ಪಡೆದಿದ್ದಾರೆ.

3 ಜನನ : 1941, ಶಿವಮೊಗ್ಗ ಜಿಲ್ಲೆಯ ಹಾಸನ ಜನ್ಮಸ್ಥಳ. ತಂದೆ–ಶ್ರೀ ಪಾದರಾವ್, ತಾಯಿ–ಲಲಿತಮ್ಮ.

ಒಳ್ಳೆಯ ಕಥೆಗಾರರು, ನಾಟಕ ಕರ್ತೃಗಳು, ಪ್ರಬಂಧಕಾರರು, ವಿಮರ್ಶಕರು, ಪ್ರಸ್ತುತ 'ಮಯೂರ' ಪತ್ರಿಕೆಯ ಸಂಪಾದಕರು.

ಕೃತಿಗಳು : ಮಗುವಾಗಿ ಬಂದವನು, ತುಣುಕುಗಳು, ಹದಿನೈದು ಕತೆಗಳು ಮುಂತಾದವುಗಳು.

**ಸಾಯಿ ಸುತೆ**[1] : ಕಾದಂಬರಿಗಾರ್ತಿಯೆಂದೇ ಪ್ರಸಿದ್ಧರಾಗಿದ್ದರೂ ಶ್ರೀಮತಿಯವರು ಹಲವಾರು ಸಣ್ಣ ಕಥೆಗಳನ್ನೂ ಬರೆದಿದ್ದಾರೆ. ಮಕ್ಕಳಿಗಾಗಿಯೂ ಕೃತಿಗಳನ್ನು ರಚಿಸಿದ್ದಾರೆ. ಇವರ ಹಲವಾರು ಕಥೆ, ರೂಪಕಗಳು ಆಕಾಶವಾಣಿಯಿಂದಲೂ ಪ್ರಸಾರಗೊಂಡಿವೆ.

ಪ್ರಕಟಗೊಂಡಿರುವ ಇವರ ಕೃತಿಗಳ ಸಂಖ್ಯೆ 40ಕ್ಕೂ ಹೆಚ್ಚು. ಮುಖ್ಯವಾದ ಕೆಲ ಶೀರ್ಷಿಕೆಗಳು : ಮಿಂಚು, ಹೊಂಬೆಳಕು. ಬಾಡಿದ ಹೂವು, ಮಂಗಳ ದೀಪ, ಸ್ವರ್ಣ ಮಂದಿರ, ಪ್ರೇಮ ಸಾಫಲ್ಯ, ವಸಂತದ ಚಿಗುರು, ವಿವಾಹ ಬಂಧನ, ಹೃದಯ ರಾಗ, ಮಮತೆಯ ಸಂಕೋಲೆ, ಗಿರಿಧರ, ಗಂಧರ್ವ ಗಿರಿ, ನಾಟ್ಯ ಸುಧಾ, ವಸುಂಧರ, ಡಾ॥ ವಸುಧಾ, ಅಮೃತ ಸಿಂಧು, ಇಬ್ಬನಿ ಕರಗಿತು, ಶ್ವೇತ ಗುಲಾಬಿ, ನಿಶೆಯಿಂದ ಉಷೆಗೆ, ಬೆಳ್ಳಿ ದೋಣಿ, ರಾಗ ಬೃಂದಾವನ ಮುಂತಾದವುಗಳು.

ಈಕೆಯ ಕಾದಂಬರಿ 'ಶ್ವೇತಗುಲಾಬಿ' ಚಲನಚಿತ್ರವಾಗಿ ಜನಪ್ರಿಯತೆ ಗಳಿಸಿದೆ.

**ಉಷಾ ನವರತ್ನರಾಂ**[2] : ಇಂದಿನ ಅತ್ಯಂತ ಜನಪ್ರಿಯ ಕಾದಂಬರಿಗಾರ್ತಿ. ಇವರ ಕಾದಂಬರಿಗಳು ನಾಡಿನ ಎಲ್ಲಾ ಪತ್ರಿಕೆಗಳಲ್ಲೂ ಧಾರಾವಾಹಿಯಾಗಿ ಪ್ರಕಟಗೊಂಡಿವೆ, ಪ್ರಕಟಗೊಳ್ಳುತ್ತಿವೆ. ಸಂಗೀತ, ನೃತ್ಯ, ನಾಟಕಗಳಲ್ಲಿ ಆಸಕ್ತಿಯಿರುವ ಈಕೆ ಸ್ಥಳೀಯ ಶಾಲೆಯೊಂದನ್ನು ನಡೆಸುತ್ತಿದ್ದಾರೆ. ಇವರ ಅನೇಕ ಕಾದಂಬರಿಗಳು (ಹೊಂಬಿಸಿಲು, ಬಂಧನ, ಕೃಷ್ಣ ನೀ ಬೇಗನೆ ಬಾರೋ ಮುಂತಾದವುಗಳು) ಚಲನಚಿತ್ರಗಳಾಗಿ ಅಪಾರ ಜನ ಮೆಚ್ಚುಗೆ ಗಳಿಸಿವೆ.

---

1 ಜನನ : 1942. ನಿಜನಾಮ–ರತ್ನಾ ಅಶ್ವಥ್.

2 ಜನನ : ನವೆಂಬರ್ 25, 1943, ಬೆಂಗಳೂರು. ತಂದೆ–ಸುಬ್ಬರಾವ್, ತಾಯಿ–ಶಾಂತಮ್ಮ. ಪ್ರಸಿದ್ಧ ಸಾಹಿತಿ 'ನವರತ್ನರಾಂ' ಇವರ ಪತಿ.

ಇವರ ಕಾವ್ಯನಾಮಗಳು : ಮಿಸ್‌ರಾವ್, ವಿಚಾರ ಪ್ರಿಯ, ಅನುರಾಧಾ. ಫ್ರೆಂಚ್, ಜರ್ಮನ್ ಭಾಷೆಗಳ ಡಿಪ್ಲಮೊ ಪಡೆದಿದ್ದಾರೆ. ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ.

ಕೃತಿಗಳು : ಹ್ಯಾಪಿ ಬರ್ತ್ ಡೇ, ಆಂದೋಲನ, ಆಶ್ವಾಸನೆ, ಆಸರೆ, ಬಂಧನ, ಇಲ್ಲೇ ಸ್ವರ್ಗ, ಹರಿದ ಹೊನಲು, ಹೊಸರಾಗ, ಹೃದಯ ಮಿಲನ, ಮೂಡಿಬಂದ ಬೆಳಕು, ಪ್ರಗತಿಯ ಪಥದಲ್ಲಿ, ದೋಣಿ ಸಾಗಲಿ, ಪ್ರೀತಿಸಿ ನೋಡು, ಹಗಲು ಗನಸು, ಕೈಹಿಡಿದು ನಡೆಸೆನ್ನನು ಮುಂತಾಗಿ ಸುಮಾರು 50 ಕಾದಂಬರಿಗಳು.

ಕಥೆಗಳನ್ನು ರಚಿಸುವುದರಲ್ಲೂ ಇವರು ಸಿದ್ಧಹಸ್ತರು. ಹಲವಾರು ನಾಟಕಗಳನ್ನೂ ರಚಿಸಿದ್ದಾರೆ (ಸುಮಾರು 24).

ಶ್ರೀಮತಿಯವರು ಕೆಲಕಾಲ 'ಗೆಳತಿ' ಪತ್ರಿಕೆಯ ಸಂಪಾದಕಿಯಾಗಿದ್ದರು. 1982–83ರಲ್ಲಿ ರಾಜ್ಯ ಸರ್ಕಾರವು ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

ಕೆಲ ಇಂಗ್ಲೀಷ್ ಪತ್ರಿಕೆಗಳಿಗೆ 'ಅಂಕಣಕಾರ'ರಾಗಿದ್ದಾರೆ.

**ನಾ. ಮೊಗಸಾಲೆ**[1] : (ನಾರಾಯಣ ಭಟ್ಟ ಮೊಗಸಾಲೆ) ಇವರದು ವೈದ್ಯಕೀಯ ವೃತ್ತಿಯಾದರೂ ಸಾಹಿತ್ಯದಲ್ಲೂ ಪರಿಣತಿ ಸಾಧಿಸಿದ್ದಾರೆ. ಉತ್ತಮ ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ವರ್ಧಮಾನ ಪ್ರಶಸ್ತಿ ಪೀಠದ ಪ್ರಧಾನ ನಿರ್ದೇಶಕರು. 'ನನ್ನದಲ್ಲದ್ದು' ಕಾದಂಬರಿಗೆ ರಾಜ್ಯ ಅಕಾಡೆಮಿಯ (1977) ಪ್ರಶಸ್ತಿ ಲಭಿಸಿದೆ.

ಇತರ ಕೃತಿಗಳು : ನೆಲ ಮುಗಿಲುಗಳ ಮಧ್ಯೆ, ಮಣ್ಣಿನ ಮಕ್ಕಳು, ಕನಸಿನ ಬಳ್ಳಿ, ಅನಂತ, ವಲ್ಲಭ, ಹದ್ದು, ಪ್ರಕೃತಿ (ಕಾದಂಬರಿಗಳು) ; ಆಶಾಂಕುರ, ಹಸಿರು ಬಿಸಿಲು (ಕಥಾ ಸಂಕಲನಗಳು) ; ವರ್ತಮಾನದ ಮುಖಗಳು, ಪಲ್ಲವಿ, ಮೊಗಸಾಲೆಯ ನೆನಪುಗಳು (ಕವನ ಸಂಗ್ರಹಗಳು) ; ಪುರೂರವ (ಗೀತಾ ನಾಟಕ).

**ಎ. ಪಿ. ಮಾಲತಿ**[2] : ಕಥೆ, ಕಾದಂಬರಿ, ವಿಚಾರ ಪೂರಿತ ಲೇಖನಗಳಿಂದ ಸಾರಸ್ವತ ಲೋಕವನ್ನು ಸಂಪನ್ನಗೊಳಿಸುತ್ತಿರುವ ಲೇಖಕಿ. 'ಗ್ರಾಮೀಣ ಮಹಿಳೆಯರು' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ ಬಂದಿದೆ. 'ಅನಿಶ್ಚಯ' ಕಾದಂಬರಿಗೆ ವಿದ್ಯಾವರ್ಧಕ ಸಂಘದ ಬಹುಮಾನ ಸಂದಿದೆ. ಅರ್ಧಾಂಗಿ, ಅತೃಪ್ತೆ, ಹಳ್ಳಿಗೆ ಬಂದ ಎಳೆಯರು ಮುಂತಾದ ಸುಮಾರು ಹನ್ನೆರಡು ಕೃತಿಗಳು ಹೊರ ಬಂದಿವೆ.

---

1 ಜನನ : ಆಗಸ್ಟ್ 27, 1944, ಕಾಸರಗೋಡು ತಾಲ್ಲೋಕಿನ ಕೋಳ್ಯೂರು ಗ್ರಾಮದ ಮೊಗಸಾಲೆ ಎಂಬ ಪ್ರದೇಶ. ತಂದೆ–ವಿಠಲಭಟ್ಟ, ತಾಯಿ–ಸರಸ್ವತಿ.

2 ಮೇ 6, 1944, ಉತ್ತರ ಕನ್ನಡ ಜಿಲ್ಲೆಯ ಭಟ್ಕಳ. ತಂದೆ–ಗಣೇಶ ಕೃಷ್ಣಭಟ್ಟ, ತಾಯಿ–ಕಾವೇರಿ.

**ಬರಗೂರು ರಾಮಚಂದ್ರಪ್ಪ**[1] : ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಎರಡು ವರ್ಷ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು. 'ಸುಂಟರ ಗಾಳಿ' ಕಥಾ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ. ಉತ್ತಮ ಕಥಾ ಚಿತ್ರಕ್ಕಾಗಿ ಚಲನಚಿತ್ರ ಪ್ರಶಸ್ತಿ ಸಹ ಗಳಿಸಿದ್ದಾರೆ. ಸಮ್ಯಪ್ರಜ್ಞೆಯ ಸುರಿತ ಕತೆಗಾರರು, ಹೆಸರಾಂತ ಕಾದಂಬರಿಕಾರರು.

ಕೃತಿಗಳು : ಮರಕುಟಿಗ, ಕಪ್ಪು ನೆಲದ ಕೆಂಪು ಕಾಲು, ಒಂದು ಊರಿನ ಕತೆ, ಸೂತ್ರ, ಸಾಹಿತ್ಯ ಮತ್ತು ರಾಜಕಾರಣ ಮುಂತಾದವು.

**ಈಶ್ವರ ಚಂದ್ರ**[2] : ಇವರದೊಂದು ಕಥೆ 'ಮುನಿ ತಾಯಿ' ಉತ್ತಮ ಚಲನ ಚಿತ್ರವಾಗಿ (ಕಥಾ ಸಂಗಮ) ಮೂಡಿದ್ದು ಅಪಾರ ಜನಪ್ರಿಯತೆ ಗಳಿಸಿದೆ. ಇವರ ವೃತ್ತಿ ಇಂಜನಿಯರಿಂಗ್ ಆದರೂ ಸಾಹಿತ್ಯ ಕೃಷಿಯನ್ನು ಪ್ರವೃತ್ತಿಯಾಗಿ ಬೆಳೆಸಿಕೊಂಡು ಅಪಾರ ಕೊಡುಗೆಗಳನ್ನು ನೀಡುತ್ತಾ ಬಂದಿದ್ದಾರೆ. ಕಥಾ ಸಾಹಿತ್ಯ, ಬಾಲ ಸಾಹಿತ್ಯ ಇವರು ಆರಿಸಿಕೊಂಡಿರುವ ಸಾಹಿತ್ಯ ವಿಭಾಗಗಳಾದರೂ ವೈಜ್ಞಾನಿಕ ಕೃತಿಗಳನ್ನೂ ಸಹ ರಚಿಸಿದ್ದಾರೆ.

ಇವರ ಕಥಾ ಸಂಕಲನ 'ತೀರ' (1968) ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. 'ಮಕ್ಕಳ ನರೇಂದ್ರ ವಿವೇಕಾನಂದ' 1970ರಲ್ಲಿ ಕೇಂದ್ರ ಸರಕಾರದ ಬಹುಮಾನ ಗಳಿಸಿದೆ.

ಇವರ ಇತರ ಕೃತಿಗಳು : ಶಿವಪ್ಪ ನಾಯಕ, ಅ. ನ. ಕೃಷ್ಣರಾವ್, ಕಲ್ಯಾಣ ಸ್ವಾಮಿ, ಗೆಳೆತನ, ಒಂದೇ ಸೂರಿನ ಕೆಳಗೆ, ಸಿಮೆಂಟ್ ಮನುಷ್ಯರು, ನಕಾಶೆ ಕಲೆ. ವೆಲ್ಡಿಂಗ್. ಎರಡು ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'ಯಲ್ಲಿ ಸಂಪಾದಕರಾಗಿದ್ದರು.

**ಶ್ರೀ ಕೃಷ್ಣ ಆಲನಹಳ್ಳಿ**[3] : ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರು, ಕಥೆ, ಕಾದಂಬರಿಗಳಿಂದ ಅತ್ಯಂತ ಜನಪ್ರಿಯರಾಗಿದ್ದಾರೆ. 'ಕಾಡು' ಹಾಗೂ 'ಪರ

---

1 ಜನನ : ಅಕ್ಟೋಬರ್ 18, 1946, ತುಮಕೂರು ಜಿಲ್ಲೆ ಬರಗೂರು. ತಂದೆ–ರಂಗದಾಸಪ್ಪ, ತಾಯಿ–ಕೆಂಚಮ್ಮ.

2 ಜನನ : ಜುಲೈ 14, 1946, ಶಿವಮೊಗ್ಗ ಜಿಲ್ಲೆಯ ಚನ್ನಗಿರಿ. ಇವರ ಪೂರ್ಣ ಹೆಸರು ಹೆಚ್. ಆರ್. ಈಶ್ವರ ಚಂದ್ರ ವಿದ್ಯಾಸಾಗರ್.

3 ಜನನ : ಏಪ್ರಿಲ್ 3, 1947, ಮೈಸೂರು ಜಿಲ್ಲೆಯ ಆಲನಹಳ್ಳಿ. ತಂದೆ–ಚಿಟ್ಟೀಗೌಡ, ತಾಯಿ–ಸಣ್ಣಮ್ಮ.

ಸಂಗದ ಗೊಡೆತಿಮ್ಮ' ಕಾದಂಬರಿಗಳು ಚಲನಚಿತ್ರಗಳಾಗಿ ರೂಪುಗೊಂಡು ಅಪಾರ ಜನ ಮೆಚ್ಚುಗೆ ಗಳಿಸಿವೆ. 'ಕಾಡು' ಕಾದಂಬರಿಗೆ ರಾಜ್ಯ ಪ್ರಶಸ್ತಿ, 'ಮಣ್ಣಿನ ಹಾಡು' ಕವಿತಾ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯು ಸದಸ್ಯರಾಗಿದ್ದರು.

ಇವರ ಇತರ ಕೃತಿಗಳು : ಕಾಡುಗಿಡದ ಹಾಡು ಪಾಡು (ಕವಿತಾ ಸಂಕಲನ); ಭುಜಂಗಯ್ಯನ ದಶಾವತಾರ (ಕಾದಂಬರಿ); ಗ್ರಾಮಾಯಣ ಸಮೀಕ್ಷೆ, ಅವಲೋಕನ, ಅಂತಃಕರಣ (ಸಂಪಾದನೆ), ತಪ್ತ. ಪೀನೆಕ್ಸ್ (ಕಥಾ ಸಂಕಲನಗಳು) ; ಡೋಗ್ರಾ ಪಹಾರಿ, ಪ್ರೇಮ ಗೀತೆಗಳು ಮುಂತಾದವುಗಳು.

**ಕಾಳೇಗೌಡ ನಾಗವಾರ**[1] : ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಒಳ್ಳೆಯ ಕವಿಗಳು, ಕತೆಗಾರರು, ಕಾದಂಬರಿಕಾರರು. ಜನ ಪದ ಸಾಹಿತ್ಯದಲ್ಲಿ ಬಹಳ ಆಸಕ್ತಿ, ಈ ವಿಭಾಗದಲ್ಲಿ ಸಂಶೋಧನೆ ಸಹ ನಡೆಸಿದ್ದಾರೆ. ಇವರ ಕಥಾ ಸಂಕಲನ 'ಬೆಟ್ಟ ಸಾಲು ಮಳೆ' (1979) ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. ಬಂಡಾಯ ಸಾಹಿತ್ಯ ಸಂಘಟನೆಯ ಸಂಚಾಲಕರು.

ಇವರ ಕೃತಿಗಳು : ಕರಾವಳಿಯಲ್ಲಿ ಗಂಗಾಲಗ್ನ, ಬೇಕಾದ ಸಂಗಾತಿ, ಬೀದಿ ಮಕ್ಕಳು ಬೆಳದೊ, ತ್ರಿಪದಿರಗಳೆ, ಜನಪದ ಸಾಹಿತ್ಯ ಇತ್ಯಾದಿ.

'ಅಲೆಗಳು' ಕಥಾ ಸಂಕಲನಕ್ಕೆ 1985ರ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ.

**ವಿಜಯ ಸಾಸನೂರ**[2] : ರಾಜ್ಯದ ಹಿರಿಯ ಐ.ಪಿ.ಎಸ್. ಅಧಿಕಾರಿ. ರಾಜ್ಯದ ಹಲವೆಡೆ ಪೊಲೀಸ್ ಇಲಾಖೆಯ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರಚಾರ ಇಲಾಖೆ ಹಾಗೂ ಚಲನಚಿತ್ರ ಅಭಿ ವೃದ್ಧಿ ನಿಗಮ ಮುಂತಾದೆಡೆಯಲ್ಲೂ ದುಡಿದಿದ್ದಾರೆ. ಕುತೂಹಲಕಾರಿ, ಪತ್ತೆದಾರಿ, ಕಾದಂಬರಿಗಳನ್ನು ರಚಿಸುವುದರಲ್ಲಿ ಎತ್ತಿದ ಕೈ. ಇವರು ಸುಮಾರು ಹತ್ತು ಕಾದಂ ಬರಿಗಳು, 7 ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ವಿಗ್ರಹ ಚೋರರು, (ಮಹಾ ಪ್ರಚಂಡರು), ಅಜಿತ್, ಯಶಸ್ವಿ ಚಲನಚಿತ್ರಗಳಾಗಿವೆ.

ಇತರ ಕೃತಿಗಳು : ಯುದ್ಧ, ಇಂದ್ರಜಾಲ.

---

1 ಜನನ : ಫೆಬ್ರವರಿ 2, 1947, ಚನ್ನಪಟ್ಟಣದ ಬಳಿಯ 'ನಾಗವಾರ' ಗ್ರಾಮದಲ್ಲಿ. ತಂದೆ–ಸಿದ್ದೇಗೌಡ, ತಾಯಿ–ಲಿಂಗಮ್ಮ.

2 ಜನನ : 1948, ಬೆಳಗಾಂವಿಯಲ್ಲಿ.

**ಬಿ. ಎಲ್. ವೇಣು*** : ಅತ್ಯಂತ ಜನಪ್ರಿಯ ಕಾದಂಬರಿಕಾರ, ಕತೆಗಾರ ಹಾಗೂ ಚಲನಚಿತ್ರ ಕಥಾ ಲೇಖಕ. 20 ಚಿತ್ರಕ್ಕೂ ಹೆಚ್ಚು ಚಲನಚಿತ್ರಗಳಿಗೆ ಸಂಭಾಷಣೆಗಳನ್ನು ರಚಿಸಿದ್ದಾರೆ. (ಬೆತ್ತಲೆ ಸೇವೆ, ಪ್ರೇಮ ಜಾಲ, ಪ್ರೇಮ ಪರ್ವ, ಅಜೇಯ, ಸಂಭವಾಮಿ ಯುಗೇ ಯುಗೇ, ಮೆಟ್ಟಿಲುಗಳು ಮುಂತಾದವುಗಳು). 'ಬೆತ್ತಲೆ ಸೇವೆ' ಕಾದಂಬರಿ ಪ್ರಜಾಮತ ರಾಜ್ಯ ಮಟ್ಟದ ಸ್ಪರ್ಧೆಯಲ್ಲೂ 'ಅತಂತ್ರರು' ಕಾದಂಬರಿ 'ಸುಧಾ' ಕಾದಂಬರಿ ಸ್ಪರ್ಧೆಯಲ್ಲೂ ಬಹುಮಾನ ಗಳಿಸಿವೆ.

ಇವರ ಕಾದಂಬರಿಗಳಾದ ಬೆತ್ತಲೆ ಸೇವೆ, ಪರಾಜಿತ, ಪ್ರೇಮ ಪರ್ವ, ಪ್ರೀತಿ ವಾತ್ಸಲ್ಯ, ಪ್ರೇಮ ಜಾಲ, ಅಜೇಯ ಯಶಸ್ವೀ ಚಲನಚಿತ್ರಗಳಾಗಿವೆ.

ಇತರ ಕೃತಿಗಳು : ಮೆಟ್ಟಿಲುಗಳು, ಕುಣಿಯಿತು ಹೆಜ್ಜೆ ನಲಿಯಿತು ಗೆಜ್ಜೆ, ರಾಮ ರಾಜ್ಯದಲ್ಲಿ ರಾಕ್ಷಸರು. ನಿರೀಕ್ಷಣೆ, ಸಹೃದಯಿ ಮತ್ತು ಬೇರು ಬಿಟ್ಟವರು, ಹೃದಯ ರಾಗ, ಅತಂತ್ರರು, ಗುಹೆ ಸೇರಿದಾಗ, ಗಂಡುಗಲಿ ಮದಕರಿನಾಯಕ ಮುಂತಾದವು (ಕಾದಂಬರಿಗಳು) ; ಬಣ್ಣಗಳು, ದೊಡ್ಡ ಮನೆ ಎಸ್ಟೇಟ್, ಪ್ರೇಮ ಮದುವೆ ಮತ್ತು ಶೀಲ (ಕಥಾ ಸಂಕಲನಗಳು) ; ಯಮಲೋಕದಲ್ಲಿ ಮಾನವ (ನಾಟಕ).

ಇವರ ಬಹಳಷ್ಟು ಕಾದಂಬರಿಗಳು ನಾಡಿನ ಹೆಸರಾಂತ ಎಲ್ಲಾ ಪತ್ರಿಕೆಗಳಲ್ಲೂ ಧಾರಾವಾಹಿಯಾಗಿ ಬಂದಿರುವುದು ಹೆಗ್ಗಳಿಕೆಯ ವಿಷಯ.

**ಎಂ. ಕೆ. ಜಯಲಕ್ಷ್ಮಿ** : ಇವರ ಕಾದಂಬರಿ 'ತಾಯಿ ಹರಕೆ' 'ಕೂಡಿ ಬಾಳಿದರೆ ಸ್ವರ್ಗ' ಎಂಬ ಹೆಸರಿನಿಂದ ಚಲನಚಿತ್ರವಾಗಿ ಜನಮೆಚ್ಚುಗೆ ಗಳಿಸಿತ್ತು. ತ್ರಿವೇಣಿಯವರ ಸಮಕಾಲಿನವರಾದ ಈಕೆ ಕಾದಂಬರಿ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಗಳಿಸಿದ್ದ ಸಾಹಿತಿ.

ಕೃತಿಗಳು : ಸುಮಾರು 15. ಮುಖ್ಯವಾದವುಗಳು : ಕನಸಿನ ಕತೆ, ಮೋಡ ಚದುರಿತು, ಬಾಳು ಬೆಳಗಿತು, ತಾಯಿ ಹರಕೆ, ಪತನದ ಹಾದಿ, ಪ್ರೇಮ ಪಂಜರ, ಕನಸು ನನಸು, ಸಂಸಾರ ಸಮರ, ಬಾಳಿನ ಪಥ, ಮಾಯದ ಬಲೆ, ಮಂಗಳವಾದ್ಯ ಮೊಳಗಿತು, ಸಮರ ಕೋಲಾಹಲ ಮುಂತಾದವುಗಳು. 'ಪತನದ ಹಾದಿ' ಇವರ ಕೊನೆಯ ಕಾದಂಬರಿ.

---

* ಜನನ : ಸೆಪ್ಟಂಬರ್ 27, 1949. ಪೂರ್ಣ ಹೆಸರು–ಬಿ. ಎಲ್. ವೇಣುಗೋಪಾಲ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿಯಲ್ಲಿ ಉದ್ಯೋಗ, (ಪ್ರಸ್ತುತ ಚಿತ್ರದುರ್ಗದಲ್ಲಿ).

**ಅಶ್ವಿನಿ*** : ಲೇಖಕಿಯರಲ್ಲಿ ಅದರಲ್ಲೂ ಕಾದಂಬರಿ ಕ್ಷೇತ್ರದಲ್ಲಿ ಕನಕಮ್ಮ ಎಂ.ವಿ, 'ಅಶ್ವಿನಿ' ಕಾವ್ಯನಾಮದಿಂದ ಸುಪರಿಚಿತರು, ಇವರ ಜನಪ್ರಿಯ ಕಾದಂಬರಿ 'ಬೆಸುಗೆ', 'ಕಪ್ಪು ಕೊಳ' ಚಲನಚಿತ್ರಗಳಾಗಿ ಅಪಾರ ಜನಮೆಚ್ಚುಗೆ ಗಳಿಸಿವೆ.

ಇವರ ಇತರ ಕೃತಿಗಳು : ನಿಲುಕದ ನಕ್ಷತ್ರ, ಮೈತ್ರಿ, ಮೃಗತೃಷ್ಣಾ, ವಿಜೇತ, ನಾನು ಲೇಖಕಿ ಅಲ್ಲ, ಬಿಂದಿಯಾ, ಹುತ್ತದ ಸುತ್ತ, ಬಾಲ್ಯ ಸಖಿ, ಪ್ರೇಮ ಸೋಪಾನ ಮುಂತಾದವುಗಳು. ಇವರು ಸಾಕಷ್ಟು ಸಂಖ್ಯೆಯಲ್ಲಿ ಕಥೆಗಳನ್ನೂ ಸಹ ರಚಿಸಿದ್ದಾರೆ.

**ಮಾವಿನಕೆರೆ ರಂಗನಾಥನ್** : ಕನ್ನಡದ ಅತ್ಯಂತ ಜನಪ್ರಿಯ ಕಥೆಗಾರರು. ರುಕ್ಮಿಣಿ ಚಿತ್ರ ಬಂಧನಾ, ಉತ್ತರಾಯಣ, ಪರ್ಜನ್ಯ, ಮಿಥುನ, ಉಳಿದದ್ದು ಆಕಾಶ (ಕಥಾ ಸಂಕಲನಗಳು); ಏಳು ಸುತ್ತಿನ ಕೋಟೆ (ಕಾದಂಬರಿ); ದಿಗಂತ, ಶ್ರೀನಿವಾಸ, ಶಿಕ್ಷಣ–ಸಂಸ್ಕೃತಿ, ಕಥಾ ಪಲ್ಲವ (ಸಂಪಾದನೆಗಳು) ; ಪರ್ಜನ್ಯ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

**ಎಂ. ರಾಮಮೂರ್ತಿ** : ವೀರ ಕೇಸರಿ ಸೀತರಾಮಶಾಸ್ತ್ರಿಗಳ ಹಿರಿಯ ಮಗ. ತಂದೆಯಂತೆಯೇ ಮಗ ದೇಶ ಪ್ರೇಮಿ, ಭಾಷಾ ಪ್ರೇಮಿ, ಅ.ನ.ಕೃ. ಜೊತೆ ಸೇರಿ ಕನ್ನಡದ ಉನ್ನತಿಗಾಗಿ ಶ್ರಮಿಸಿದ ಧೀಮಂತ ವ್ಯಕ್ತಿ. ಎಳೆಯ ವಯಸ್ಸಿನಲ್ಲೇ ಅಕಾಲ ಮೃತ್ಯುವಿಗೆ ತುತ್ತಾದುದು ಕನ್ನಡ ನಾಡಿನ ದುರ್ಭಾಗ್ಯ.

ತಂದೆ ಚಾರಿತ್ರಿಕ ಕಾದಂಬರಿ ಕ್ಷೇತ್ರದಲ್ಲಿ ಹೆಸರಾದರೆ, ಮಗ ಪತ್ತೆದಾರಿ ಕ್ಷೇತ್ರದಲ್ಲಿ ಹೊಸ ವಿಕ್ರಮವನ್ನೇ ಸಾಧಿಸಿದ ಸಾಹಿತಿ.

ಕೃತಿಗಳು : ಮಂಜಿನ ಗೊಂಬೆ, ಅದೃಷ್ಟದ ಮಚ್ಚೆ, ರಾಜದಂಡ, ಪುನರಾಗಮನ, ಬಯಕೆ ಈಡೇರಲಿಲ್ಲ, ಅವನ ಪ್ರೇಯಸಿ, ರಕ್ತ ಚುಂಬನ, ಸಾಗರಿ, ಪ್ರೇಮ ಮಂದಿರ, ಕಾಲುವೆ ಮನೆ, ಯಾರವನು, ಜುಲೇಖ, ವಿಷ ಕನ್ಯೆ, ಮುತ್ತಿನ ಬಳೆಯವಳು, ಐದು ದಿನಗಳು, ಮಾಟಗಾತಿ, ಏಕಾಕಿನಿ, ಅವಳ ಡೈರಿ, ನೀಲ ಕಮಲ, ಆ ಸುಂದರಿಯರು, ಪತ್ತೆ ಮಾಡಬೇಡಿ ಮುಂತಾದವುಗಳು.

**ವಿದ್ಯುಲ್ಲತಾ** : 'ರಥ ಸಪ್ತಮಿ' ಕಾದಂಬರಿಯ ಕರ್ತೃ, ಶ್ರೀಮತಿ ವಿದ್ಯುಲ್ಲತಾ ಪ್ರವರ್ಧಮಾನಕ್ಕೆ ಬರುತ್ತಿರುವ ಸಾಹಿತಿ. ಈಕೆ ಕನ್ನಡದ ಹೆಸರಾಂತ ಕಾದಂಬರಿಕಾರರಾದ ಶ್ರೀ ವಿಜಯ ಸಾಸನೂರ ಅವರ ಪತ್ನಿ.

---

* ಜನ್ಮಸ್ಥಳ : ಕೋಲಾರ. ಎಂ.ಎಸ್.ಸಿ. ಪದವೀಧರೆ, ಕೃಷಿ ವಿಶ್ವವಿದ್ಯಾನಿಲಯದಲ್ಲಿ ಪ್ರತಿಷ್ಠಿತ ಹುದ್ದೆಯಲ್ಲಿದ್ದಾರೆ.

ಈಕೆಯ ಕೃತಿಗಳು : ಪ್ರತಿಬಿಂಬ (ನೀಳ್ಗತೆ); 'ರಥ ಸಪ್ತಮಿ' ಕಾದಂಬರಿ ಯಶಸ್ವಿ ಚಲನಚಿತ್ರವಾಗಿ ರೂಪುಗೊಂಡು ಅಪಾರ ಜನಮನ್ನಣೆ ಗಳಿಸಿದೆ. ಈಕೆಯ ಇನ್ನೊಂದು ಕಿರು ಕಾದಂಬರಿ 'ರಕ್ತ ಸಂಬಂಧ', ಟೆಲಿ ಚಿತ್ರವಾಗಲಿದೆ, 'ಇಂಚರ', 'ದೂರ ಸಮೀಪಗಳ ನಡುವೆ' (ಕಾದಂಬರಿಗಳು).

**ಶಾರದೆ (ಮಾಲತಿ ರಾಮದಾಸ್)**[1] : ಈಕೆಯ ಹಲವು ಕಾದಂಬರಿಗಳು ಕರ್ನಾಟಕದ ಪ್ರಸಿದ್ಧ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿವೆ. ಸಣ್ಣ ಕಥೆಗಳೂ ಸಹ ಬಹು ಜನಪ್ರಿಯವಾಗಿವೆ.

ಕೃತಿಗಳು : ಬಾಳ ಬೆಳಕು, ಜೋಡಿ ಹಕ್ಕಿ, ಆರತಿ, ಜೀವನ ರಾಗ, ತ್ಯಾಗಮಯಿ, ಸ್ಮಾರಕಗಳು, ಒಲವಿನ ಬಲೆಯಲ್ಲಿ, ಕಣ್ಮಣಿ, ಕವಲೊಡೆದ ದಾರಿ ಮುಂತಾದವುಗಳು.

**ಹೆಚ್. ಆರ್. ಇಂದಿರಾ**[2] : ಕತೆ, ನಾಟಕ, ಕಾದಂಬರಿಗಳನ್ನು ಬರೆದಿದ್ದಾರೆ. 'ಕಥಾ ಪಲ್ಲವ' ಎಂಬ ಲೇಖಕಿಯರ ಕಥಾ ಸಂಕಲನ ಸಂಪಾದಿಸಿದ್ದಾರೆ. ಉದಯೋನ್ಮುಖ ಸಾಹಿತಿಯಾಗಿ ಪೂರ್ಣ ಪ್ರಕಾಶಿಸುವ ಮುನ್ನವೇ ದುರ್ವಿಧಿಯ ಕೈವಶರಾದುದು ಕನ್ನಡ ಸಾಹಿತ್ಯಕ್ಕಾದ ಅಪಾರ ನಷ್ಟ.

ಕೃತಿಗಳು : ಬಯಕೆಯ ಬಳ್ಳಿ, ಮರಳಿ ಹಳ್ಳಿಗೆ, ಲಕ್ಷ್ಮಿ ಕಟಾಕ್ಷ, ಕಲಾರತ್ನ, ಚೌಕಾಬಾರಾ, ಸುಚಿತ್ರಾ, ಅಮಿತ ಕಿರಣ, ದಾದಿ (ಕಾದಂಬರಿಗಳು) ; ಸಪ್ತಸ್ವರ, ಸಪ್ತ ಸರೋಜ (ಅನುವಾದ) ; ಫ್ಯಾಶನ್ ಯುಗ (ಕಥಾ ಸಂಕಲನ) ; ಗುಡ್ ಲಕ್, ಬಿದ್ದೆನಲ್ಲ ಬೇಸ್ತು, ಶಿನಿಮಾಸ್ಟಾರ್, ನಗ ಬೇಡಿ, ಪ್ರತಿಭಾನ್ವಿತೆ, ಧರೆಗಿಳಿದು ಬಾ ದೇವಿ (ಕಿರು ನಾಟಕಗಳು).

ಕಥಾ, ಕಾದಂಬರಿ ಕ್ಷೇತ್ರ ಬಹು ವಿಶಾಲವಾದುದು. ಹೆಸರಿಸಬೇಕಾದ ಸಾಹಿತಿಗಳು ಅಪಾರ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರ ಪೂರ್ಣ ವಿವರ ಸಧ್ಯಕ್ಕೆ ನನ್ನ ಬಳಿಯಿಲ್ಲ. ಆದ್ದರಿಂದ ಸೂಕ್ಷ್ಮವಾಗಿ ಪರಿಚಯ ಮಾಡಿಕೊಟ್ಟೆನಿ" ಎಂದು ನುಡಿದ ವ್ಯಾಸರಾಯರು ಮಾತನ್ನು ಮುಂದುವರಿಸಿದರು.

---

1 ಜನ್ಮಸ್ಥಳ : ಚಿಕ್ಕಮಗಳೂರು. ಎಂ. ಎ. ಪದವೀಧರರು, ಹಿಂದಿ ಭಾಷೆಯಲ್ಲೂ ಪರಿಶ್ರಮವಿದೆ.

2 ಜನನ : ಅಜ್ಜಂಪುರ, ತಂದೆ–ಹಿರೇನಲ್ಲೂರ ಶಾನುಭೋಗ ರಾಮಸ್ವಾಮಿ.

**ವಿಶುಕುಮಾರ್ :** ಇತ್ತೀಚೆಗೆ ಕ್ಯಾನ್ಸರ್ ರೋಗಕ್ಕೆ ಆಹುತಿಯಾದ ವಿಶು ಕುಮಾರ್ ಒಬ್ಬ ಪ್ರತಿಭಾನ್ವಿತ ಕಾದಂಬರಿಕಾರ, ಕಥಾಲೇಖಕ, ಚಿತ್ರನಟ ಹಾಗೂ ನಿರ್ದೇಶಕ.

ಇವರ ಪ್ರಸಿದ್ಧ ಕೃತಿಗಳು : ಮದರ್, ಕರಾವಳಿ, ವಿಪ್ಲವ, ಹಂಸಕ್ಷೀರ, ಭೂಮಿ, ಕರ್ಮ, ಈ ಪರಿಯ ಬದುಕು, ಭಟಕಳದಿಂದ ಬೆಂಗಳೂರಿಗೆ, ಮಿಯಾಂವ್ ಕಾಮತ್, ಗಗನಗಾಮಿಗಳು, ಪ್ರಜೆಗಳು ಪ್ರಜೆಗಳು, ನೆತ್ತರಗಾನ, ಭಗವಂತನ ಆತ್ಮಕಥೆ.

**ಕುಂ. ವೀರಭದ್ರಪ್ಪ :** ಇವರ 'ಕಪ್ಪು' ಕಾದಂಬರಿ 1981ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಗಳಿಸಿದೆ. ಸಾಹಿತ್ಯ ಅಕಾಡೆಮಿಯ ಸದಸ್ಯರು (1987).

ಇವರ ಇತರ ಕೃತಿಗಳು : ಬೇಲಿ ಮತ್ತು ಹೊಲ, ಬೇಟೆ, ಅಸ್ತಿ.

**ಮೈ. ಸು. ಶೇಷಗಿರಿರಾವ್ :** ಮೈಸೂರು ಸುಬ್ಬರಾವ್ ಶೇಷಗಿರಿರಾವ್. ಜನನ : ಆಗಸ್ಟ್ 16, 1931. ಇವರ ಕೃತಿಗಳ ಸಂಖ್ಯೆ ಸುಮಾರು 40.

ಮುಖ್ಯ ಕೃತಿಗಳು : ಪುಣ್ಯವತಿ, ಶುಭ ಮುಹೂರ್ತ, ಪ್ರೇಮ ದರ್ಶನ, ದೈವದ ಬಲೆಯಲ್ಲಿ, ಪತಂಗ, ಪ್ರಣಯ, ದೇವದಾಸ, ಜನಪದ ಸಾಹಿತ್ಯ ದರ್ಶನ ಕೆ. ಹಿರಣ್ಣಯ್ಯ, ತಾಯಾಗಿ ಹೆತ್ತಳು ಮಾಯೆ, ಸಂತಾನ ಲಕ್ಷ್ಮಿ ಮುಂತಾದವು.

**ಸಾರಾ ಅಬೂಬಕ್ಕರ್ :** ಪುರುಷ ಪ್ರಧಾನ ಸಮಾಜದಲ್ಲಿ ಹೆಂಗಸರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಧೈರ್ಯದಿಂದ ಪ್ರತಿಭಟಿಸಿದ ಧೀರೋದಾತ್ತ ಹೆಣ್ಣು ಈಕೆ. ಅರ್ಥಹೀನ ಆಚಾರ ವಿಚಾರಗಳನ್ನು ಪ್ರಶ್ನಿಸಿದ ಮೊದಲ ಮುಸ್ಲಿಂ ಕಾದಂಬರಿ ಗಾರ್ತಿ. ಈಕೆಯ ಜನ್ಮದಿನ ನೆನಪಿಡುವುದು ಬಹಳ ಸುಲಭ ಏಕೆಂದರೆ ಈಕೆಯೂ ಹುಟ್ಟಿದ್ದು ಮುಹಮ್ಮದ್ ಪೈಗಂಬರ್ ಹುಟ್ಟಿದ ದಿನವೇ. ಈಕೆ 1987ರಲ್ಲಿ ನೇಮಕ ಗೊಂಡ ರಾಜ್ಯ ಸಾಹಿತ್ಯ ಅಕಾಡೆಮಿಯ ಸದಸ್ಯೆಯಾಗಿದ್ದಾರೆ.

ಕೃತಿಗಳು : ಚಂದ್ರಗಿರಿಯ ತೀರದಲ್ಲಿ.

**ಮಾ. ಭಿ. ಶೇಷಗಿರಿರಾವ್ :** ಭಾಗ್ಯತಾರೆ, ಮಂಗಳೆಯ ಮದುವೆ, ಆಟೋರಿಕ್ಷಾದಲ್ಲಿ ಅಪ್ಸರೆ, ನಕ್ಷತ್ರ ನಕ್ಕಿತು, ಅಶೋಕ ವನ, ಹೆಣ್ಣಾಗಿ ಬಾಳಿದವಳು, ವೀಣಾ, ಬಾಳಿಗೊಂದು ನಮಸ್ಕಾರ, ಅವಳದೊಂದು ಪ್ರಶ್ನೆ, ಕಂಬನಿಯ ಮಾಲೆ, ಯಶಸ್ವಿನಿ, ಅಪಶ್ರುತಿ, ಪ್ರೇಮದ ಪುನರ್ಜನ್ಮ, ಸೌಂದರ್ಯ ದೇವತೆ, ವಿದ್ಯಾವತಿ, ವಿಷಗಾಳಿ, ಜೀವನ ಚದುರಂಗ, ಮಾಯಾ ಜಾಲ, ಮೋಹಿನಿ ಮುಂತಾದ ಕಾದಂಬರಿಗಳ ಕರ್ತೃಗಳು.

ಇವರು ಹಲವಾರು ಪತ್ತೇದಾರಿ ಕಾದಂಬರಿಗಳನ್ನು ರಚಿಸಿದ್ದಾರೆ :

ಚಿನ್ನದ ಹದ್ದಿನ ಬೇಟೆ, ಚೀನಾದಲ್ಲಿ ಪತ್ತೇದಾರ ಶಂಕರ್, ಸುಂದರಿಯ ಪಾತ್ರ, ನೀ ಸಾಯಬೇಕು, ದೀಪ ಆರಿತು—ಗುಂಡು ಹಾರಿತು, ಅವನೇಕೆ ಮಾಯವಾದ, ವಿಷಗಾಳಿ, ಮಾಯಾಜಾಲ, ಮೋಹಿನಿ ಲೈಲಾ—ಮುಂತಾದವು.

**ಹೆಚ್. ಜಿ. ರಾಧಾದೇವಿ :** ಸುಮಾರು 30 ಕಾದಂಬರಿಗಳನ್ನು ರಚಿಸಿದ್ದಾರೆ. ಕತ್ತಲಲ್ಲಿ ಕಂಡ ಮಿಂಚು, ಸೊಬಗಿನ ಸೆರೆಮನೆ, ವಜ್ರ ಪಂಜರ, ಗೆಲುವಿನ ಹಾದಿ, ಹಾಲು ಕೊಳದ ಹಂಸ, ಒಲಿದು ಬಂದ ಅಪ್ಸರೆ, ದುಂಬಿ ಮುಟ್ಟದ ಹೂವು, ಚಂದನ ಕಸ್ತೂರಿ, ಸುವರ್ಣ ಸೇತುವೆ, ಭ್ರಮರ ಬಂಧನ, ಜೇನು ಬೆರೆತ ಹಾಲು, ಒಲವಿನ ಸುಧೆ, ಚೆಲ್ಲಿದ ಪನ್ನೀರು, ಸ್ವಾತಿಹನಿ ಸಿಡಿದಾಗ, ಬಂಗಾರದ ಮೆಟ್ಟಿಲು, ಸೌಭಾಗ್ಯ ಸಂಪದ, ಸಪ್ತವರ್ಣ ಮಿನುಗಿತು, ಬೇರು ಕಡಿದ ಮರ, ಶುಭ ವಸಂತ ಮುಂತಾದವು.

**ಉಷಾದೇವಿ :** ಮುಡಿಯೇರಿದ ಹೂ, ಬೆಳದಿಂಗಲ ಬಿಸಿಲು, ನೆನಪಿನ ಸುಳಿಯಲ್ಲಿ, ಹೃದಯ ಬೆಳಗಿತು, ಮೂರು ಮತ್ತೊಂದು, ಮುರಿದ ಸರಪಳಿ, ಪಡೆದು ಬಂದ ಭಾಗ್ಯ, ಮೊಗ್ಗಿನ ಜಡೆ, ಕಾರಂಜಿ, ಪ್ರೇಮದ ಕರೆ, ನೀತಿ ದೇವನ ಸನ್ನಿಧಿಯಲ್ಲಿ, ನೀರ ಮೇಲಿನ ಗುಳ್ಳೆ ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ.

**ಈಚನೂರು ಶಾಂತಾ :** ಸ್ವೀಕೃತಿ, ಸ್ಪಂದನ, ವಿಭ್ರಾಂತ, ನಿನ್ನೆ ನಡೆದ ನನ್ನ ಕಥೆ, ಬಂಧಿತರು, ಬಾಳೊಂದು ಭಾವಗೀತೆ, ಕಲ್ಪನಾ ಛಾಯೆಯಲಿ.

**ಸುಂದರ ನಾಡಕರ್ಣಿ :** ಇವರ 'ಮಂಡಿ ಮನೆ' ಕಾದಂಬರಿ 1978ರ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

ಇತರ ಕೃತಿಗಳು : ಮೋಹಿತರು, ಗೋಡೆಗಳು, ಅವರ ನಡುವೆ, ಸುದ್ದಿ (ಕಥಾ ಸಂಕಲನ) ; ಮಥನ, ಹಸಿರು ದೀಪ, ಉಸಿರುಗಳ ಬೀದಿಯಲಿ, ಅಂತರದ ನೀರು, ನೆಗಸು (ಕಾವ್ಯ). (ಪುಟ 193 ನೋಡಿ)

**ಎಸ್. ದಿವಾಕರ್ :** ಮಲ್ಲಿಗೆ ಪತ್ರಿಕೆ ಸಂಪಾದಕರಾಗಿದ್ದು ಈಗ 'ಸುಧಾ' ಸಂಪಾದಕ ವರ್ಗದಲ್ಲಿದ್ದಾರೆ. ಒಳ್ಳೆಯ ಕಥೆಗಾರರು, ಇವರ ಅನುವಾದಿತ ಕೃತಿ 'ಕಥಾ ಜಗತ್ತು' 1986ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ. ಇದರಲ್ಲಿ ನೋಬೆಲ್ ಪ್ರಶಸ್ತಿ ವಿಜೇತರ ಕಥೆಗಳಿವೆ.

ಇತರ ಕೃತಿಗಳು : ಇತಿಹಾಸ (ಕಥಾಸಂಕಲನ) ; ಮಾಸ್ಟರ್ ಬಿಲ್ಡರ್ (ಇಬ್ಸನ್ ನಾಟಕ) ; ಪ್ರಪಂಚ ಪುಸ್ತಕ (ವಿಮರ್ಶೆ) ; ಸಣ್ಣ ಕತೆ 1983 (ಸಂಪಾದಿತ).

**ನರೇಂದ್ರಬಾಬು :** ಕಾದಂಬರಿಕಾರರಾಗಿ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದವರು ಚಲನಚಿತ್ರರಂಗ ಪ್ರವೇಶಿಸಿ ಕಥಾ ಲೇಖಕರಾಗಿ, ಸಂಭಾಷಣಕಾರರಾಗಿ ವಿಜೃಂಭಿಸುತ್ತಿದ್ದಾರೆ. ಇವರ ಪ್ರಸಿದ್ಧ ಕೃತಿಗಳು : ಸತ್ಯಭಾಮ, ಓದಿದ ಹುಡುಗಿ, ಹಾವಾಡಿಗ, ಕುಡಿನೋಟ, ಹಕ್ಕಿಗಿಟ್ಟ ಗುರಿ ಮುಂತಾದವು.

**ಹೆಚ್. ವಿ. ಸಾವಿತ್ರಮ್ಮ :** ಹಳೆಯ ಪೀಳಿಗೆಯ ಹೆಸರಾಂತ ಲೇಖಕಿ, ಕತೆ, ಕಾದಂಬರಿಗಳನ್ನು ಬರೆದಿರುವುದಲ್ಲದೆ ಮಕ್ಕಳಿಗಾಗಿಯೂ ಕೃತಿ ರಚಿಸಿದ್ದಾರೆ. ಹಲವಾರು ಗ್ರಂಥಗಳನ್ನು ಅನುವಾದ ಮಾಡಿದ್ದಾರೆ.

ಇವರ ಕೃತಿಗಳು: ಮರುಮದುವೆ, ಸರಿದಬೆಳಕು, ಮದುವಣಗಿತ್ತಿ, ಸ್ವರಭಸ್ಮ, ಶಶಿಕಲಾ, ಲಕ್ಷ್ಮಿ, ಪ್ರತೀಕ್ಷೆ (ಕಥಾ ಸಂಕಲನಗಳು); ಮಹಾತ್ಮಾ ಗಾಂಧಿ ಅವರ ಜೀವನ ಚರಿತ್ರೆ (ಅನುವಾದ).

**ಡಾ|| ಎಚ್. ತಿಪ್ಪೇರುದ್ರಸ್ವಾಮಿ:** ಕರ್ತಾರನ ಕಮ್ಮಟ, ಜಡದಲ್ಲಿ ಜಂಗಮ, ನೆರಳಾಚೆಯ ಬೆಳಗು, ವಿಜಯ ಕಲ್ಯಾಣ, ಜ್ಯೋತಿ ಬೆಳಗುತಿದೆ, ಕರ್ನಾಟಕ ಶರಣ ಕಥಾಮೃತ ಮುಂತಾದವುಗಳು.

**ಶಾಂತಿನಾಥ ದೇಸಾಯಿ:** ಬೀಜ, ಸೃಷ್ಟಿ, ವಿಕ್ಷೇಪ, ರಾಕ್ಷಸ, ಕೆಲವು ಆಯ್ದ ಕತೆಗಳು ಮುಂತಾದವು. ಇವರ 'ರಾಕ್ಷಸ' ಕಾದಂಬರಿ 1977ರ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

**ಮನು:** ಇವರ ಪೂರ್ಣ ಹೆಸರು, ಪಿ. ಎನ್. ರಂಗನ್, ಮೇಲುಕೋಟೆ ಸ್ಥಳದವರು. ಇವರು ವಿಜ್ಞಾನ ಮತ್ತು ಹಿಂದಿಯಲ್ಲಿ ಪದವಿ ಗಳಿಸಿರುವುದಲ್ಲದೆ ಮನಶ್ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಇವರ 'ಚಕ್ರವ್ಯೂಹ' ಕಾದಂಬರಿ 'ಸಾಹಸ ಸಿಂಹ' ಹೆಸರಿನಲ್ಲಿ ಚಲನಚಿತ್ರವಾಗಿ ಅಪಾರ ಯಶಸ್ಸು ಗಳಿಸಿದೆ.

ಇತರ ಕೃತಿ: ಹಿಮಜ್ವಾಲೆ (ಕಾದಂಬರಿ).

**ಎಸ್. ಅನಂತನಾರಾಯಣ:** ತೀರದ ಬಯಕೆ, ಮುರುಪು ಮಂಟಪ, ಪಯಣದ ಹಾದಿಯಲ್ಲಿ, ಆಲದ ಹೂ, ಸ್ವಪ್ನವಾಸವದತ್ತ, ಅತ್ತಿಗೆ, ಹುಲ್ಲುಗಾವಲಿನಲ್ಲಿ ಪುಟ್ಟ ಪಟ್ಟಣ ಮುಂತಾದ ಇನ್ನೂ ಹಲವಾರು ಕೃತಿಗಳು.

**ಎಂ. ಕೆ. ಜಯಲಕ್ಷ್ಮಿ:** ಪತನದ ಹಾದಿ, ತಾರೆ ಮಿನುಗಿತು, ಕನಸಿನ ಕಡೆ, ಹೂವು ಚೆಲ್ಲಿದ ಹಾದಿ, ಪ್ರೇಮ ಪಂಜರ, ಕನಸು–ನನಸು, ಬಾಳಿನ ಪಥ, ಬಾಳ ಮುಂಜಾವು, ಸಂಸಾರ ಸಮರ ಮುಂತಾದವು.

**ಈಚನೂರು ಜಯಲಕ್ಷ್ಮಿ:** ವಸಂತ ಪಲ್ಲವಿ, ಅಸಹಾಯಕರು, ದಡಬಿಟ್ಟ ದೋಣಿ, ಚೈತ್ರದ ಹಾಡು, ಮಾನಸರಾಗ, ಆಗಂತುಕರು.

**ಎಚ್. ಕೆ. ಅನಂತರಾವ್:** 'ಅಂತ' ಕಾದಂಬರಿಯಿಂದ ಒಮ್ಮೆಗೇ ಖ್ಯಾತಿ ಗಳಿಸಿದವರು. ಇದು ಅತ್ಯಂತ ಜನಪ್ರಿಯ ಚಲನಚಿತ್ರವಾಗಿ ಯಶಸ್ಸು ಗಳಿಸಿದೆ. ಇವರ ಇತರ ಕೃತಿಗಳು: ಜಾಲ, ಶೋಧನೆ, ಸೆಳೆತ.

**ನೆಲ್ಲಾಲ ಸತ್ಯಂ:** ಅನುವಾದ ಕ್ಷೇತ್ರದಲ್ಲಿ ಹೆಸರಿಸಬಹುದಾದ ವ್ಯಕ್ತಿ. ಕೃತಿಗಳು: ಕೆಂಪಿನ ಮೊಟ್ಟೆ, ಅಶುಭಸ್ಯ ಶೀಘ್ರಂ, ಶೃಂಗಾರ ರಸ ರಾತ್ರಿಗಳು, ಶಿಷ್ಯ ಚತುಷ್ಟಯ, ಮಹಾತ್ಯಾಗಿ, ಸುಧಾಮಯಿ, ನೀಲಾಂಬರಿ ಮುಂತಾದವು.

**ಆದ್ಯ ರಾಮಾಚಾರ್ಯ:** ಸೂರ್ಯಾಸ್ತ, ಭವಾನಿ, ರಂಭಾ, ರಾಧೇಯ, ಶ್ರೀ ಸಮರ್ಥ ಇತ್ಯಾದಿ.

**ಸಿ. ಎನ್. ಮುಕ್ತಾ:** ಕುಸುಮ ಕಸ್ತೂರಿ, ಪ್ರೇಮಾಂಜಲಿ, ದಡ ಸೇರಿದ ನೌಕೆ, ದುಂಬಿ ಕೊರೆದ ಹೂವು, ವಿಮುಕ್ತಿ ಮುಂತಾದವು.

**ಎಂ. ಸಿ. ಪದ್ಮಾ :** ಮಂಗಳ ಯಾತ್ರೆ, ಸುಪ್ರಭಾತ, ಮನ ಬೆಳಗಿತು, ಪ್ರೇಮಮಯಿ, ಸವತಿ ಕಸ್ತೂರಿ, ಶಶಿಕಿರಣ, ಮಂಜು ಕರಗಿತು, ಚಿಟ್ಟೆಯಾಗಿ ಹಾರಿತು (ಕಥಾ ಸಂಕಲನ).

**ಚಿತ್ರಲೇಖ :** ಸಮಯದ ಗೊಂಬೆ, ಶೃತಿ, ಅಳಿವು ಉಳಿವು, ಮುದುಡಿದ ತಾವರೆ ಅರಳಿತು, ಪ್ರೇಮ ಪಲ್ಲವಿ, ಹೊನ್ನಿನ ಗಾಳ, ಮಿಲನ, ಪವಿತ್ರ, ಚಂದ್ರಿಕಾ, ಪ್ರೇಮದ ಬಲೆ, ಅರ್ಚನ–ಚೇತನ, ಮುಂತಾದ ಸುಮಾರು 20 ಕಾದಂಬರಿಗಳು.

**ಬಿ. ಜಿ. ಸತ್ಯಮೂರ್ತಿ :** ಒಲವಿನ ಒಸರು, ಪ್ರೇಮದ ಬಾಳು, ಹೃದಯ ವೀಣೆ ಮುಂತಾದವು.

**ಎಸ್. ಮಂಗಳಾ ಸತ್ಯನ್ :** ಪುತ್ರಕಾಮಿ, ನಿನಗಾಗಿ, ಬಂಗಾರ ಭೂಷಿತೆ, ನವ ವಸಂತ, ಹೂವೆರಡು ಕೊನೆಯೊಂದು, ಮುರಳೀ ಗಾನ, ಅಮೃತಪಾನ, ಪ್ರೇಮ ದುಂಬಿ, ಆಮುಖಿ, ಮುಗ್ಧ ಮಾತು, ಭಾಷೆಯ ಬಂಧನ.

**ರಮಾನಂದ ಅಮೀನ :** ಶ್ರಾದ್ಧದ ದಿನ, ರತ್ನಮಾಲಾ, ಬೆಳದಿಂಗಳ ಬೇಸಿಗೆ, ಬಚ್ಚಿಟ್ಟ ಬಯಕೆ, ಜಗಿಯಲಾರದ ಸಂಕಟ, ನೀರು ಉಂಡ ನೆಲ, ಚೆಲುವಿನ ಚಿಗುರು, ಗಂಡಸು ಜೋಗಿ, ಕಬ್ಬಿಣದ ಕಡಲೆ, ನಾರಿ (ಕಥಾಸಂಕಲನ).

**ಕೆ. ಆರ್. ಪದ್ಮಾ :** ಮನೋರಂಜನಿ, ಆನಂದಗಾನ, ವರಮಾಲಾ, ಪ್ರಣಯ ರವಿ, ಶುಭಯೋಗ, ಅಂಕಿತ, ಹೆಣ್ಣಿನ ಮಾಂಗಲ್ಯ, ಬಾಳಗೀತೆ, ಆರಿದದೀಪ, ಪ್ರೇಮದ ಕೊಡುಗೆ.

**ಎಂ. ಜಿ. ಭೀಮರಾವ್ :** ರಾಜೀವಪುರ, ವಿಶಾಲನಯನ, ಬೆಟ್ಟಕ್ಕೆ ಹೊತ್ತ ಕಲ್ಲು, ಬೇಡಿ ಬಂದ ಭಾಗ್ಯ, ಬಲಿಪೀಠ, ಒಂದೇ ಹಾಡು ಎರಡು ರಾಗ.

**ವಿಜಯಶ್ರೀ :** ನಿವೇದಿತಾ, ಚಾಟಿ, ರಾಜಕುಮಾರಿಯ ಕಥೆ, ದೂರದ ತೀರ, ನಾವಿಕನಿಲ್ಲದ ನೌಕೆ, ಶಮನ, ಭ್ರಮಾಧೀನೆ, ಸುಮಂಗಲೆ, ಕಾರ್ಮೋಡ, ಹೃದಯ ಸ್ಪಂದನ, ಚಂದ್ರಿಕಾ ಚಕೋರಿ.

**ಗಾಯತ್ರಿಮೂರ್ತಿ :** ದೋಣಿ ಸಾಗಲಿ ತೀರಕೆ, ಹಂಬಲ.

**ತನುಜ :** ನವದಿಗಂತ, ಸಂದಿಗ್ಧ, ಸಂಕಲನ, ಅತೃಪ್ತ ಸಿಂಧು, ನೆರಳು ಸರಿದಾಗ, ತಿರುವು, ಮಮತೆಯ ಮರೀಚಿಕೆ, ಆಕರ್ಷಣ

**ಛಾಯಾದೇವಿ ಸಂಜಪ್ಪ :** ಸ್ವರ್ಗ ಸೋಪಾನ, ಮಾಧುರಿ, ಬೆಳ್ಳಿ ಮಿನುಗಿತು, ಸಂಗಮ, ಮಾತೃಹೃದಯ, ಆಸೆಯ ಅಲೆಗಳು ಮುಂತಾದ ಸುಮಾರು 10 ಕಾದಂಬರಿಗಳು.

**ವಿಶಾಲಾಕ್ಷಿ ದಕ್ಷಿಣಾಮೂರ್ತಿ :** ಸುಳಿಗೆಸಿಕ್ಕವರು, ಪ್ರೇಮರಶ್ಮಿ, ವ್ಯಾಪ್ತಿ ಪ್ರಾಪ್ತಿ, ಪ್ರೇಮ ಜಲಪಾತ, ಭ್ರಮೆಯ ಬದುಕಿನ ಸುತ್ತ, ಅನುರಾಗಿಣಿ, ಕಲ್ಲುಬೊಂಬೆ ಕರಗಿತು, ವಸುಮತಿ, ಆಂದೋಳನ, ಅವಳು ಪಡೆದ ಭಾಗ್ಯ.

ಒಂದು ನಿಮಿಷ ಮಾತು ನಿಲ್ಲಿಸಿ ವ್ಯಾಸರಾಯರು ಒಂದು ಲೋಟಾ ನೀರನ್ನು ಕುಡಿದು ಮೈ ಮುರಿದರು. "ಕಾದಂಬರಿ. ಕಥಾಕ್ಷೇತ್ರವನ್ನು ಸಂಪನ್ನಗೊಳಿಸಿರುವವರು. ಸಂಪನ್ನಗೊಳಿಸುತ್ತಿರುವವರು ಇನ್ನು ಹಲವಾರು ಜನರಿದ್ದಾರೆ. ಸದ್ಯಕ್ಕೆ ಅವರ ಹೆಸರನ್ನು ಮಾತ್ರ ಹೇಳ್ತೀನಿ. ನೀವೇ ಅವರ ವಿಷಯವನ್ನು ಸಂಗ್ರಹಿಸಿ ನಂಗೆ ಮುಂದಿನ ಸಾರಿ ರಜಾಕ್ಕೆ ಬಂದಾಗ ಹೇಳ್ಬೇಕು ಏನಂತೀರಿ" ಪ್ರಶ್ನಿಸಿದೊಡನೆ ದಿನಕರ "ಹೂಂ ಆಗ್ಲಿ ಸಾರ್" ಅಂದ.

ಮೇಷ್ಟರು ಮುಂದುವರಿಸಿದರು ಕೈಲಿದ್ದ ಪುಟ್ಟ ಪುಸ್ತಕ ಮುಖದ ಮುಂದೆ ಹಿಡಿದುಕೊಂಡು.

"ಸೇವಾನವಿರಾಜಮಲ್ಲ. ಸಾನೆ ಗುರೂಜಿ, ಮಾ. ಭ. ಪರ್ಲ, ರಾಮಚಂದ್ರ ಕೊಟ್ಟಲಗಿ, ಸುನೀತಿ ಕೃಷ್ಣಮೂರ್ತಿ. ಲಲಿತಾಂಬ ಚಂದ್ರಶೇಖರ್, ಜಯಲಕ್ಷ್ಮೀ ಶ್ರೀನಿವಾಸನ್, ಸಂಧ್ಯಾಶರ್ಮ, ಅನಸೂಯಾ ರಾಮರೆಡ್ಡಿ, ನಳಿನೀ ಮೂರ್ತಿ, ಪದ್ಮಾ ಗುರುರಾಜ್, ಗೀತಾ ನಾಗಭೂಷಣ, ಉಷಾದೇವಿ, ಸುದರ್ಶನದೇಸಾಯಿ, ಬೇಲೂರು ರಾಮಮೂರ್ತಿ ಮುಂತಾದವರುಗಳು".

ದಿನಕರ ತಕ್ಷಣ ಪ್ರಶ್ನಿಸಿದ. "ಹೋದವರ್ಷ ಅಕಾಡೆಮಿ ಬಹುಮಾನ ಬಂದ ಬೋಳುವಾರು ಮಹಮದ್ ಕುಂಞ ಮುಂತಾದ ಅಕಾಡೆಮಿ ಬಹುಮಾನ ಗಳಿಸ್ದೋರನ್ನೇ ಬಿಟ್ಟು ಬಿಟ್ಟಿದ್ದೀರಲ್ಲಾ ಮೇಸ್ಟ್ರೇ ?"

ಮುಗುಳ್ನಕ್ಕ ವ್ಯಾಸರಾಯರು "ನಿಮಗಿರೋ ಆಸಕ್ತಿ ಎಷ್ಟು ಹೊಗಳಿದ್ರೂ ಸಾಲ್ದು. ತಾಳಿ ಒಂದ್ನಿಮಿಷ. ಸಾಹಿತ್ಯ ಅಕಾಡೆಮಿ ಕಿರು ಟಿಪ್ಪಣಿ ಬಂದಿದೆ. ಅದ್ರಲ್ಲಿ ಎಲ್ಲಾರ ಹೆಸ್ರೂ ಇದೆ. ಹೇಳ್ತೀನಿ" ಎಂದು ಚೀಲದಲ್ಲಿ ಕೈಹಾಕಿ ಒಂದು ತೆಳು ಪುಸ್ತಕ ಹೊರತೆಗೆದು "ಕಾದಂಬರಿ, ಕಥಾ ಕ್ಷೇತ್ರದಲ್ಲಿ ಬಹುಮಾನ ಬಂದಿರೋರ ಹೆಸ್ರು ಅವರ ಕೃತಿ ಹೇಳ್ತೀನಿ. ಈಗಾಗ್ಲೆ ಕೆಲವರ ಹೆಸ್ರು ಹೇಳಿದ್ದೀನಿ. ಅವ್ರನ್ನ ಬಿಟ್ಟು ಬಿಡ್ತೀನಿ... ಹೂಂ....ಕೇಳಿ.

1966 ರಲ್ಲಿ ಕುಸುಮಾಕರ ದೇವರ ಗಣ್ಣೂರರ 'ನಾಲ್ಕನೆಯ ಆಯಾಮ' ಕಾದಂಬರಿಗೆ, ಅದೇ ವರ್ಷ ಶ್ರೀಮತಿ ಮಲ್ಲಿಕಾರವರ 'ಜೀವನ ಗಂಗಾ' ಕಾದಂಬರಿಗೆ, 1968 ರಲ್ಲಿ ಶ್ರೀ ವೀರಭದ್ರಾರವರ 'ಈ ಭೂಮಿ ಆ ಆಕಾಶ' ಕಥಾಸಂಕಲನಕ್ಕೆ. ಪದ್ಮನಾಭ ಸೋಮಯಾಜಿರವರ 'ಪಂಡಿತರಾಜ ಜಗನ್ನಾಥ' ಕಾದಂಬರಿಗೆ ಮತ್ತು ಯು. ಮಾಧವ ಆಚಾರ್ಯರ 'ಬಾಗಿದ ಮರ' ಸಂಕಲನಕ್ಕೆ 1970 ರಲ್ಲಿ ಬಹುಮಾನ ಬಂದಿವೆ. 1971 ರಲ್ಲಿ ಕೆ. ಸದಾಶಿವರ 'ಅಪರಿಚಿತರು' ಕಥಾಸಂಕಲನಕ್ಕೆ. 1973 ರಲ್ಲಿ ಶ್ರೀ ವಿಷ್ಣುಶರ್ಮರ 'ಕಡಲು' ಕಾದಂಬರಿಗೆ, ಹಾಗೂ ಶ್ರೀಮತಿ ಮಾತೆ ಮಹದೇವಿಯವರ 'ಹೆಪ್ಪಿಟ್ಟ ಹಾಲು' ಕಾದಂಬರಿಗೆ. 1974 ರಲ್ಲಿ ಶ್ರೀ ಕಾಮರೂಪಿಯವರ 'ಕುದುರೆ ಮೊಟ್ಟೆ' ಕಾದಂಬರಿಗೆ, ಶ್ರೀ ಬಿ. ಸಣ್ಣಪ್ಪನವರ 'ತೇಪೆ' ಸಂಕಲನಕ್ಕೆ, ಎ. ಎಸ್. ಪ್ರಸನ್ನರವರ 'ಉಳಿದವಗು' ಕಥಾಸಂಕಲನಕ್ಕೆ, 1975 ರಲ್ಲಿ ಚಂದ್ರಕಾಂತ

ಕುಸನೂರರವರ 'ಯಾತನಾ ಶಿಬಿರ' ಕಾದಂಬರಿಗೆ, 1976ರಲ್ಲಿ ಶ್ರೀಮತಿ ವೀಣಾರವರ 'ಕವಲು' ಕಥಾಸಂಕಲನಕ್ಕೆ, 1978ರಲ್ಲಿ ರಾಜಶೇಖರ ನಿಡವಾನ್ನಿಯವರ 'ಮಂದಿ ಮನೆ' ಕಥಾಸಂಕಲನಕ್ಕೆ, 1980ರಲ್ಲಿ ಶ್ರೀಮತಿ ಸಿ. ಎನ್. ಜಯಲಕ್ಷ್ಮೀದೇವಿಯವರ 'ಗಂಗರಸ ದುರ್ವಿನೀತ' ಕಾದಂಬರಿಗೆ, 1982ರಲ್ಲಿ ಜಯಂತಕಾಯ್ಕಿಣಿಯವರ 'ತೆರದಷ್ಟೇ ಬಾಗಿಲು' ಕಥಾಸಂಕಲನಕ್ಕೆ, 1983ರಲ್ಲಿ ಬೋಳುವಾರು ಮಹಮದ್ ಕುಂಞರವರ 'ದೇವರುಗಳ ರಾಜ್ಯದಲ್ಲಿ' ಕೃತಿಗೆ ಬಹುಮಾನ ಸಂದಿದೆ.

ಈಗ ಪತ್ತೇದಾರಿ ಕಾದಂಬರಿ ರಚನಕಾರರುಗಳು ಹಾಗೂ ಕೃತಿಗಳ ಹೆಸರು ಹೇಳ್ತೀನಿ.

ಎಂ. ರಾಮಮೂರ್ತಿ, ಟಿ. ಕೆ. ರಾಮರಾವ್‌ರವರ ನಂತರ ಈ ಪತ್ತೇದಾರಿ ಕಾದಂಬರಿ ಕ್ಷೇತ್ರದಲ್ಲಿ ಹೆಸರಿಸಬೇಕಾದ ವ್ಯಕ್ತಿಗಳು.

**ಎನ್. ನರಸಿಂಹಯ್ಯ** : ಪುಂಡರ ಪುಂಡ, ಸ್ಮಶಾನ ಬೈರಾಗಿ, ಪುರುಷೋತ್ತಮನ ಪರಾಜಯ, ಪತ್ತೇದಾರ ಪುರುಷೋತ್ತಮ, ಹೆಣ್ಣು ಮಾಯೆಯಲ್ಲ. ಪ್ರಚಂಡ ಚೋರ, ಘಟಿಂಗ ಪಿಶಾಚಿ, ಹೆಣ್ಣು ಕುದುರೆ, ಕುರೂಪಿಯಾದ ಕೊಲೆಗಾರ, ಅಪರಾಧಿಯ ಅಂತ್ಯ, ಸೀತಮ್ಮನ ಸವತಿ, ಎರಡು ದೆವ್ವಗಳು, ಕಣ್ಮರೆಯಾದ ಕಾಂತೆ. ಡಕಾಯಿತರ ದಳಪತಿ, ಕಾಮದ ಕಣ್ಣು ಮುಂತಾದ ಸುಮಾರು ನೂರು ಕಾದಂಬರಿಗಳು.

**ಬಿ. ಕೆ. ಸುಂದರರಾಜ್** : ವಿಶ್ವಾಸ ಘಾತಕಿ, ಹುತ್ತದಲ್ಲಿದ್ದ ಹಾವು, ಬೆಂಕಿಯ ಪಂಜರ, ಪಾರ್ಸಿ ಹುಡುಗಿ, ಸ್ವಾರ್ಥಿಯ ದೌರ್ಜನ್ಯ, ಅಪರಾಧಿಯ ಹಂಬಲ, ರಕ್ತ ರಾಕ್ಷಸಿ, ಅನಾಮಧೇಯ ಪತ್ರ ಮುಂತಾದ ಸುಮಾರು 20 ಕಾದಂಬರಿಗಳು.

**ಬಿ. ಪಿ. ಕಾಳೆ** : ಸೇಡಿನ ಯಜ್ಞ, ವಿಚಿತ್ರ ಜಟ, ಇಂದುಮುಖಿ, ಘಾತಕ ಶಶಿಕಂಠ, ಅಂಬಿಕೆ.

**ಜಿಂದೆ ನಂಜುಂಡಸ್ವಾಮಿ** : ಜಂಟಿ ಪ್ರೇಯಸಿ, ಚಾಣಕ್ಯರ ಸಂಘ, ಮೃತ್ಯು ಪಂಜರದಲ್ಲಿ ಮೃತ್ಯುಂಜಯ, ರಕ್ತದಾಹದ ರಣಹದ್ದು, ನಾನೇ ಕೊಲೆಗಾರ, ಓಡಿಹೋದ ಗೂಢಚಾರ.

**ಎಂ. ಶಿವಾಜಿರಾವ್** : ಟ್ರಂಕ್‌ಕಾಲ್, ಡ್ರಮ್ಮಿನಲ್ಲಿ ಶವ, ಆಕ್ಟೋಪಸ್. ಚೂರಿಗಳು ಎರಡು, ಅಪರಾಧಿ ಯಾರು, ದ್ವೀಪ. (ಇವರು ಹಲವಾರು ಸಾಮಾಜಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಮುಖ್ಯವಾದವುಗಳು : ದೋಣಿ ಸಾಗಲಿ, ವೀಣೆ ನುಡಿಯಿತು, ಚಾರುಮತಿ, ಯಾವ ಜನ್ಮದ ಮೈತ್ರಿ, ದೇವಾಲಯದಲ್ಲಿ, ಸರಸ ಸರಿದಳು, ನಡೆದದ್ದೇ ಒಂದು ಮುಂತಾದವು)

**ಪುಲಿಕೇಶಿ** : ಕಣ್ಮರೆಯಾದ ಕಾಮಿನಿ, ರಹಸ್ಯ ಲಕ್ಷ್ಮಿ, ಸುಂದರಿಯರ ಕೊಲೆ, ನಗರದಲ್ಲಿ ಗೂಢಚಾರಿ.

**ಶೇಷಾಚಲ** : ಭಯಂಕರ ಸ್ತ್ರೀ, ಯೌವನದ ರಕ್ತ, ರುಧಿರತರಂಗ. ಭಯಾನಕ, ಮಿ॥ ನಟವರಲಾಲ್.

**ಕೆ. ಆರ್. ಪದ್ಮಜೆ** : ರಕ್ತದ ಅರಮನೆ, ವಜ್ರದ ಹಿಡಿ.

**ರಮೇಶ** : ಕೊಂದವರು ಯಾರು, ಕುಟಿಲ ಕಾರಸ್ಥಾನ, ಬ್ಲ್ಯಾಕ್ ಕ್ಯಾಟ್, ಚೋರ ಶಿಖಾಮಣಿ, ಕಳ್ಳರ ಕೈಚಳಕ, ಡಾ॥ ಗಿರೀಶ್, ರತ್ನಗೋಲ.

**ನವಗಿರಿನಂದ** : ಹಂತಕನು ಯಾರು, ಕಾಲಾಬರ್ಬೂರ. ಬಾಕೀ ಕೊಲೆಗಾರ.

**ವಿಜಯಾ ಸುಧಾಕರ್** : ಮಾಯವಾದ ಹೆಣಗಳು, ಗೂಢಚಾರಿ–696, ಸುಂದರಿಯ ರಹಸ್ಯ. ಕಾಡು ಚಿಕ್ಕು, ಅಬಲೆಗೆ ಬಂದ ಆಪತ್ತು, ಮುಖವಿಲ್ಲದ ಸುಂದರಿ.

**ಬಿ. ಹೆಚ್. ಸಂಜೀವಮೂರ್ತಿ** : ಲವ್ ಫೇವ್, ಸೇಡಿನ ಕಿಡಿ, ದರೋಡೆಯ ರಾಣಿ, ಜಂಗಲ್ ಗರ್ಲ್. ಮಿಸ್ಟರ್ ಶ್ರೀ, ಆ ರಹಸ್ಯವೇನು ? ಇಂಡಿಯನ್ ಜೇಮ್ಸ್, ಒಲವಿನ ಸೇಡು.

**ಬಿ. ವಿ. ಅನಂತರಾವ್** : ಅಪಾಯಕ್ಕೆ ಅಂಜಬೇಡ, ಏಟಿಗೆ ಎದಿರೇಟು, ಡೆತ್ ವಾರಂಟ್, ಸಂಚು, ಕತ್ತಲಿಗೆ ನೂರು ಕಣ್ಣು, ಟ್ವಿಂಕಲ್ ಟ್ವಿಂಕಲ್.

**ಕಾಕೋಳು ರಾಮಯ್ಯ** : ರಹಸ್ಯ ದ್ವೀಪ, ಪರಾರಿಯಾದ ಖೈದಿ, ಸೇಡಿನ ಸರ್ಪ, ಮಾಯವಾದ ವಿಜ್ಞಾನಿ.

**ಕ್ಯಾತ್ಸಂದ್ರ ಚಂದ್ರಶೇಖರ್** : ಅರ್ಧರಾತ್ರಿ ! ಅಪಾಯ, ಚಾಣಾಕ್ಷರ ತಂತ್ರ, ಅಪಾಯದ ಅಡಿಯಲ್ಲಿ ಗೂಢಚಾರ, ತೆರೆಯ ಮರೆಯಲ್ಲಿ, ಪ್ರೇತದ ಒಂದೆ ಮೃತ್ಯು.

ಈ ಪ್ರಕಾರದಲ್ಲಿ ಕೃತಿ ರಚಿಸಿರುವ ಇತರರು ಜಿ. ಪ್ರಕಾಶ್, ರಘುಸುತ, ಚೈತನ್ಯ, ವಿ. ಸುಬ್ರಮಣ್ಯಂ, ಎಸ್. ಜಿ. ಶಿವಶಂಕರ್, ವಿಜಯ ದಿವಾಕರ್, ಕೆ. ಕುಮಾರ್, ಗೀತಾನಂದ, ಚಕ್ರವರ್ತಿ, ಕೆ. ರವೀಂದ್ರನಾಥ, ಹೆಚ್. ಎಸ್. ರವಿ, ಮುರಳಿ, ಚೂಡಾಮಣಿ, ಆರ್. ಜಿ. ಕುಮಟಾ, ಸೀತಾರಾಮ ಭಟ್ಟ, ಮಹಾಬಲಶೆಟ್ಟಿ ಮುಂತಾದವರುಗಳು.

## (ಇ) ನಾಟಕಕಾರರು

ಒಂದು ನಿಮಿಷ ಮೌನವಾಗಿ ಕುಳಿತ ವ್ಯಾಸರಾಯರು ಪುನಃ ಮಾತನ್ನು ಮುಂದುವರಿಸಿದರು.

"ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಜನಪ್ರಿಯ ಹಾಗೂ ರಂಜನೀಯ ವಿಭಾಗವೆಂದರೆ 'ನಾಟಕ', ಇದು ಕ್ರಿಸ್ತಪೂರ್ವದಷ್ಟು ಪ್ರಾಚೀನವಾದುದಾದರೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದೊರೆತಿರುವ ಅತಿ ಹಳೆಯ ಕೃತಿಯೆಂದರೆ 'ಮಿತ್ರವಿಂದಾ ಗೋವಿಂದ' (ಶ್ರೀ ಹರ್ಷನ 'ರತ್ನಾವಳಿ' ನಾಟಕದ ಅನುವಾದ) ಇದನ್ನು ರಚಿಸಿದ ಕಾಲ ಕ್ರಿ.ಶ. 17–18ನೇ ಶತಮಾನ. ಚಿಕ್ಕದೇವರಾಯನ ಆಸ್ಥಾನ ಕವಿ ಸಿಂಗರಾಯ ಇದರ ಕರ್ತೃ. ಆದರೆ ಇದಕ್ಕೆ ಬಹು ಹಿಂದೇ ಯಕ್ಷಗಾನ ಆಟಗಳು ಪ್ರಚಲಿತವಿದ್ದವೆಂದು ಸಾಕ್ಷಾಧಾರಗಳಿಂದ ತಿಳಿದು ಬರುತ್ತದೆ. 19ನೇ ಶತಮಾನದ ಹೊತ್ತಿಗೆ ಈ ವಿಭಾಗ ಪ್ರವೃದ್ಧಮಾನಕ್ಕೆ ಬರಹತ್ತಿತ್ತು. ಮುಮ್ಮಡಿ ಕೃಷ್ಣರಾಯನ ಆಸ್ಥಾನ ಕವಿ ಅಳಿಯ ಲಿಂಗರಾಜ ಸುಮಾರು 40 ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದನೆಂದು ತಿಳಿದು ಬರುತ್ತದೆ.

ಕ್ರಿ. ಶ. 1887 ರ ಸುಮಾರಿನಲ್ಲಿ ರಚಿತಗೊಂಡ ಕರ್ಕಿ ವೆಂಕಟರಮಣ ಶಾಸ್ತ್ರಿಗಳ 'ಇಗ್ಗಪ್ಪಹೆಗಡೆ ವಿವಾಹ ಪ್ರಹಸನ' ಮತ್ತು ಶಿವರಾಮ ಧಾರೇಶ್ವರರ 'ಕನ್ಯಾವಿಕ್ರಯ' ಗಳಿಂದಲೇ ಕನ್ನಡದಲ್ಲಿ ಸಾಮಾಜಿಕ ನಾಟಕಗಳ ಪರಂಪರೆ ಪ್ರಾರಂಭವಾಯಿತು ಎಂದು ತೋರುತ್ತದೆ. 19ನೇ ಶತಮಾನದ ಕೊನೆಯಲ್ಲಿ ದೊರೆಯುವ ಇತರ ಸಾಮಾಜಿಕ ನಾಟಕಗಳೆಂದರೆ ವೆಂಕಟರಂಗೋಕಟ್ಟಿಯವರ 'ಆರು ಬೆರಳಿನ ಕುರುಹು', ಬೆನಗಲ್ ರಾಮರಾಯರ 'ಕಲಹಪ್ರಿಯಾ ಪ್ರಹಸನ'.

19ನೇ ಶತಮಾನದ ಕೊನೆಯ ಭಾಗದಲ್ಲಿ ಪೌರಾಣಿಕ. ಚಾರಿತ್ರಿಕ ಹಾಗೂ ಅನುವಾದ ನಾಟಕಗಳು ಅಮಿತ ಸಂಖ್ಯೆಯಲ್ಲಿ ಬರತೊಡಗಿದ್ದವು.

ಚುರಮುರಿ ಶೇಷಗಿರಿರಾಯರು[1], ಬಸವಪ್ಪ ಶಾಸ್ತ್ರಿ[2], (ಅಭಿನವ ಕಾಳಿದಾಸರೆಂದು ಪ್ರಸಿದ್ಧರಾಗಿದ್ದರು.) ಧೊಂಡೋ ನರಸಿಂಹ ಮುಳಬಾಗಲರು[3],

---

1 ಇವರ ನಾಟಕಗಳು : ಶಾಕುಂತಲ, ಕೋರಣಗಲ್ಲು, ಮೃಚ್ಛಕಟಿಕ, (ಅನುವಾದಗಳು) 'ಶಾಕುಂತಲ'ವೇ ಪ್ರಥಮ ಕನ್ನಡ ಅನುವಾದ. ಹೆನ್ರಿ ಫಿಲ್ಡಿಂಗ್‌ನ ಕೃತಿಯೊಂದನ್ನು ಆಧರಿಸಿ 'ಸುಂದರನಾಟಕ'ವೆಂಬ ಏಕಾಂತ ನಾಟಕ ರಚಿಸಿದ್ದರೆಂದೂ ಹೇಳಲಾಗುತ್ತದೆ.

2 ಪುಟ 41, 53, 125 ನೋಡಿ.

3 ಇವರು ಸಂಸ್ಕೃತದಿಂದ ಅನುವಾದಿಸಿರುವ ಕೃತಿಗಳು : ಉತ್ತರ ರಾಮಚರಿತ ಮತ್ತು ಮೃಚ್ಛಕಟಿಕ, ಮಾಳವಿಕಾಗ್ನಿ ಮಿತ್ರ, ವೇಣಿ ಸಂಹಾರ–ಗದ್ಯಾನುವಾದಗಳು.

ಸೋಸಲೆ ಅಯ್ಯಾಶಾಸ್ತ್ರಿ[1], ಕೆರೂರ ವಾಸುದೇವಾಚಾರ್ಯ[2], ಬೆಳ್ಳಾವೆ ನರಹರಿ ಶಾಸ್ತ್ರಿ[3], ನಲವಡಿ ಶ್ರೀಕಂಠ ಶಾಸ್ತ್ರಿ[4], ನಂಜನಗೂಡು ಸುಬ್ಬಾಶಾಸ್ತ್ರಿ[5], ನಂಜನಗೂಡು ಶ್ರೀಕಂಠ ಶಾಸ್ತ್ರಿ[6] ಮುಂತಾದವರುಗಳು ಈ ವಿಭಾಗವನ್ನು ಸಂಪನ್ನಗೊಳಿಸಿರುವವರಲ್ಲಿ ಮುಖ್ಯರು.

ಕನ್ನಡ ಸಾಹಿತ್ಯದ ನವೋದಯ ಕಾಲದ ಆಚಾರ್ಯ ಬಿ. ಎಂ. ಶ್ರೀ[7]. ಇವರ ಪ್ರಸಿದ್ಧ ನಾಟಕಗಳು: ಗದಾಯುದ್ಧ ನಾಟಕಂ, ಪಾರಸೀಕರು ಮತ್ತು ಅಶ್ವತ್ಥಾಮನ್, ಇವು ಗ್ರೀಕ್ ದುರಂತ ನಾಟಕಗಳ ಸ್ಫೂರ್ತಿಯಿಂದ ನಿರ್ಮಿತಗೊಂಡವುಗಳು.

ಈ ಆಚಾರ್ಯರಿಂದ ಪ್ರಭಾವಿತರಾದ ಹೆಸರಾಂತ ಸಾಹಿತಿಗಳೆಂದರೆ, ಕುವೆಂಪು[8], ಮಾಸ್ತಿ[9], ವಿ. ಸೀತಾರಾಮಯ್ಯ[10]. ಸಿ. ಕೆ. ವೆಂಕಟರಾಮಯ್ಯ[11], ಪು. ತಿ. ನ.[12], ಎಂ. ಆರ್. ಶ್ರೀ[13], ಕಾರಂತ[14] ಮುಂತಾದವರುಗಳು. ಇವರುಗಳ ಕೊಡುಗೆ ಅಮೂಲ್ಯ.

ಹೆಸರಿಸಬೇಕಾದ ಕೃತಿಗಳು :

ಕುವೆಂಪುರವರ ವಾಲ್ಮೀಕಿಯ ಭಾಗ್ಯ. ಯಮನ ಸೋಲು, ಮಹಾರಾತ್ರಿ, ಚಂದ್ರಹಾಸ, ಶೂದ್ರತಪಸ್ವಿ, ಬೆರಳ್‌ಗೆ ಕೊರಳ್, ಸ್ಮಶಾನ ಕುರುಕ್ಷೇತ್ರ, ಜಲಗಾರ, ನನ್ನ ಗೋಪಾಲ, ಬಲಿದಾನ, ರಕ್ತಾಕ್ಷಿ; ಮಾಸ್ತಿಯವರ ಕಾಕನಕೋಟೆ, ತಾಳೀಕೋಟೆ,

---

1 ಪುಟ 30, 126 ನೋಡಿ. ಇವರು ಅನುವಾದಿಸಿರುವ ಕೃತಿಗಳು : ವಿಕ್ರಮೋರ್ವಶೀಯ, ಪ್ರತಾಪಸಿಂಹ ಚರಿತ್ರೆ (ಹಿಂದೂಸ್ಥಾನಿ ನಾಟಕವೊಂದರ ಅನುವಾದ)

2 ಪುಟ 126 ನೋಡಿ.

3 ಪುಟ 55, ನೋಡಿ. ಇವರ ನಾಟಕಗಳು : ಭೋಜಕುಮಾರ, ನಾಟಕ ಮಂಜರಿ, ಸತಿ ಸುಲೋಚನ, ಅನಸೂಯ, ಹಾಸ್ಯ ಕಲ್ಲೋಲ, ಪುರಂದರದಾಸರು, ಹೇಮರೆಡ್ಡಿ ಮಲ್ಲಮ್ಮ, ಭಾಮಾ ಪರಿಣಯ, ಕಾಳಿದಾಸ, ಜಲಂಧರ ಮುಂತಾದವುಗಳು.

4 (ನಲವಡಿ ಶ್ರೀಕಂಠಶಾಸ್ತ್ರಿ): ಗೃಹಲಕ್ಷ್ಮಿ, ಸತೀಸತ್ವಪರೀಕ್ಷೆ, ದೈವಚಿತ್ತ, ಬೇಡರ ಕಣ್ಣಪ್ಪ, ಜಗಜ್ಯೋತಿ ಬಸವೇಶ್ವರ, ಲೀಲಾವತಾರ, ಸಂಪೂರ್ಣ ರಾಮಾಯಣ, ಭಕ್ತ ಸುಧನ್ವ, ಸೋಹಂ ಮುಂತಾದವು.

5 ಪುಟ 152 ನೋಡಿ. ಸುಂದರಕಾಂಡದ ಸುಬ್ಬಾಶಾಸ್ತ್ರಿಗಳೆಂದು ಪ್ರಸಿದ್ಧರಾಗಿದ್ದರು. ಕೃತಿಗಳು : ಸೀತಾಚರಿತ್ರೆ (ಕಾವ್ಯ), ಶೂದ್ರಕನ ಮೃಚ್ಛಕಟಿಕವನ್ನು ಇವರು ಅನುವಾದಿಸಿದ್ದರು. ಸಂಸ್ಕೃತದಲ್ಲೂ ಕೃತಿ ರಚಿಸಿ ಶಾರದಾಪೀಠದಿಂದ ಸನ್ಮಾನಿತರಾಗಿದ್ದರು.

6 ಪುಟ 55 ಮತ್ತು 152 ನೋಡಿ. ವರದಾಚಾರ್ಯರ ರತ್ನಾವಳಿ ಕಂಪನಿಗೋಸ್ಕರ ಅನೇಕ ನಾಟಕಗಳನ್ನು ರಚಿಸಿದ್ದಾರೆ. ಸೀತಾಪರಿಣಯ, ಸೀತಾಸ್ವರ್ಣಮೃಗ, ಅಭಿಜ್ಞಾನ ಪ್ರಧಾನ. ಧ್ರುವವಿಜಯ, ರಾಜಸೂಯ ಯಾಗ, ನಿರುಪಮಾ, ನವೀನ ಪ್ರಪಂಚ ಮುಂತಾದವುಗಳು. ಶಾಸ್ತ್ರಿಗಳು ಸಂಸ್ಕೃತದಿಂದ ಅಲ್ಲದೆ ತೆಲುಗಿನಿಂದಲೂ ಅನೇಕ ಕೃತಿಗಳನ್ನು ಅನುವಾದಿಸಿದ್ದಾರೆ.

7 ಪುಟ 138 ನೋಡಿ. 8 ಪುಟ 21, 37, 160 ನೋಡಿ.

9 ಪುಟ 21, 32, 143 ; 10 ಪುಟ 22. 31, 150 ;

11 ಪುಟ 146 ; 12 ಪುಟ 32, 55, 162 ;

13 ಪುಟ 92, 141 ; 14 ಪುಟ 108, 200 ನೋಡಿ.

ಯಶೋಧರಾ, ತಿರುಪಾಣಿ, ಕನಕಣ್ಣ, ಹರಿದಾಸ ದೀಕ್ಷೆ, ಶಾಂತಾ, ಸಾವಿತ್ರಿ, ಉಷಾ, ಭಟ್ಟರ ಮಗಳು, ಹ್ಯಾಮ್‌ಲೆಟ್ ; ಸಿ. ಕೆ. ವೆಂಕಟರಾಮಯ್ಯನವರ 'ನಚಿಕೇತ', ಮಂಡೋದರಿ ; ವಿ. ಸೀತಾರಾಮಯ್ಯನವರ 'ಆಗ್ರಹ', ಚ್ಯವನ, ಪಿಗ್‌ಮೇರಿಯನ್ ; ಎಂ. ಆರ್. ಶ್ರೀಯವರ 'ಕಂಠೀರವ ವಿಜಯ', ಧರ್ಮದುರಂತ; ಪು. ತಿ. ನ, ರವರ 'ವಸಂತ ಚಂದನ', ಪರ್ಷಹರ್ಷ, ಶಬರಿ, ಶರದ್ವಿಲಾಸ, ದೀಪಲಕ್ಷ್ಮಿ, ಗೋಕುಲ ನಿರ್ಗಮನ, ಅಹಲ್ಯೆ, ಸತ್ಯಾಯನ, ಹರಿಶ್ಚಂದ್ರ, ದೋಣಿಯ ಬಿನದ, ವಿಕಟ ಕವಿ ವಿಜಯ ; ಕಾರಂತರ 'ಲವಕುಶ', ಸಾವಿತ್ರಿ ಸತ್ಯವಾನ, ಕಿಸಾಗೌತಮಿ, ಬುದ್ಧೋದಯ, ಮುಕ್ತದ್ವಾರ, ಋತುಯಾತ್ರೆ, ಬದುಕಬಹುದು, ಸುಲಿಗೆಗೆ ಇಲ್ಲವು ಸಾವು, ಯಾರೋ ಅಂದರು, ಸೋಮಿಯ ಸೌಭಾಗ್ಯ; ಬೇಂದ್ರೆಯವರ ಸಾಯೋ ಆಟ, ಜಾತ್ರೆ : ಗೋಕಾಕರ 'ಜನನಾಯಕ' ; ಡಿ. ವಿ. ಜಿ. ಯವರ 'ವಿದ್ಯಾರಣ್ಯ ವಿಜಯ' : ರಾಮಚಂದ್ರ ಶರ್ಮರವರ 'ಬಾಳ ಸಂಜೆ' ; ಗೋವಿಂದ ಪೈಗಳ 'ಹೆಬ್ಬೆರಳು' ; ದೇವುಡುರವರ 'ಯಾಜ್ಞವಲ್ಕ್ಯ' ; ಜಿ. ಪಿ. ರಾಜರತ್ನಂರವರ 'ಬಾಹುಬಲಿ ವಿಜಯ ; ಗೊಮ್ಮಟ ಶಿಲ್ಪಿ, ಕೀಚಕ, ಗಂಡುಗೊಡಲಿ ; ಕಡಂಗೋಡ್ಲು ಶಂಕರಭಟ್ಟರ 'ಗುರು ದಕ್ಷಿಣೆ ; ಕುರ್ತಕೋಟಿಯವರ 'ಆಮನಿ', ಸ್ವಪ್ನದರ್ಶಿ, ಮಹಾಪ್ರಸ್ಥಾನ, ಶೋಕ ವೃಕ್ಷ, ಮುಂತಾದವುಗಳನ್ನು ಹೆಸರಿಸಬಹುದು. ಇವುಗಳಲ್ಲಿ ಹಲವು ರಂಗನಾಟಕ, ಗೀತನಾಟಕ ಹಾಗೂ ಏಕಾಂಕಗಳಾಗಿವೆ. ಇವು ಚಾರಿತ್ರಿಕ, ಪೌರಾಣಿಕ ಅಥವಾ ಸಾಮಾಜಿಕ ವಸ್ತುವನ್ನು ಹೊಂದಿದ್ದು ರಂಗದ ಮೇಲೆ ಸುಲಭವಾಗಿ ಅಭಿನಯಿಸುವ ರೀತಿಯಲ್ಲಿವೆ.

ಈಗ ನಾಟಕ ವಿಭಾಗದಲ್ಲಿ ಪ್ರಖ್ಯಾತರಾಗಿರುವ ಕೆಲ ಪ್ರಮುಖ ಸಾಹಿತಿಗಳ ಶೈಲಿಯ ಪರಿಚಯವನ್ನು ಮಾಡಿಕೊಳ್ಳೋಣ. ಇದರಲ್ಲಿ ವೈವಿಧ್ಯತೆ, ಕಾಲಕಾಲಕ್ಕೆ ಆಗಿರುವ ಬೆಳವಣಿಗೆ ಗುರುತಿಸಬಹುದು." ಎಂದು ನುಡಿದ ವ್ಯಾಸರಾಯರು ತಮ್ಮ ಡೈರಿಯನ್ನು ತೆರೆದು ಮುಂದಿರಿಸಿಕೊಂಡು ಓದಲು ಪ್ರಾರಂಭಿಸಿದರು.

ಕೆರೂರ ವಾಸುದೇವಾಚಾರ್ಯರ 'ರುಕ್ಮಿಣೀ ಹರಣ' ನಾಟಕದಿಂದ ಉದ್ಧೃತ : (ಕಾಲ ಸು. 1917–18).

ಶ್ರೀ ಕೃಷ್ಣ : ಹೀಗೇಕೆ ಚಮತ್ ಚಮತ್ಕಾರ ಮಾತಾಡುವಿ ಮಿತ್ರಾ ?
ಹುಚ್ಚು ಹಿಡಿದಿರುವುದೇನು ನಿನಗೆ ?

ವಿದೂಷಕ : ಶ್ರೀ ಕೃಷ್ಣಾ, ಸಧ್ಯಕ್ಕೆ ನನಗೆ ಹುಚ್ಚು ಹಿಡಿದಿಲ್ಲ.' ನಿನಗೆ ಹಿಡಿದ ಹುಚ್ಚನ್ನು ಇನ್ನು ಮೇಲೆ ಬೇಗನೆ ನೀನು ನನಗೆ ಹಿಡಿಸುವುದು ಗಟ್ಟಿ. ಯಾವ ಚಂದ್ರಾನನೆಯನ್ನು ಕಂಡು ನಿನಗೀಗ ಹುಚ್ಚು ಹಿಡಿದಿತು ಹೇಳು ?

ಶ್ರೀ ಕೃಷ್ಣ : ಇಂದು ಜಗನ್ಮೋಹಿನಿಯೋರ್ವಳು ನನ್ನ ಚಿತ್ತವನ್ನು ಅಪಹರಿಸಿ ಕೊಂಡು ಬಿಟ್ಟಳು.

ಧಾಟಿ : ಏರಾSSS ನಾSSS ಸಾಮೀ ಮಿನಾರಾ
ನಮರಾಮಾ ಚಾಮೀ ಕರಾಂಗಿ ।
ಭುವನಕಿಳಿದ ರತಿ ಮನೋಜ ಸತಿ ವಿನೋದವತಿ ॥ಪ॥
ಹಾಸದಿ ಸುಧಾಂಬುವನೆ ಸುರಿದು ।
ಎಸೆವಪಾಂಗಶರ ತಳೆದು ॥
ಪೊಸ ವಿಲಾಸಗಳ ತಳೆದು ।
ಶಶಿಮುಖಿ ವಿಮೋಹಿಸಿದಳೈ ॥

ವಿದೂಷಕ : ಯಾವ ಶಶಿಮುಖಿಯುಮತ್ತೆ ! ನಿನ್ನನ್ನು ಒಳಿತಾಗಿ ಮೋಹಿಸಿದವಳೆಂದರೆ ರಾಧೆಯೊಬ್ಬಳೆ ಎಂದು ತಿಳಿದಿದ್ದೆನು.

ಶ್ರೀ ಕೃಷ್ಣ : (ನಕ್ಕು) ರಾಧೆಯ ಮಾತು ಇನ್ನೇಕೆ ? ಗೋಕುಲವನ್ನು ಬಿಟ್ಟು ಬರುವಾಗಲೇ ಅಲ್ಲಿಯ ಸಂಬಂಧಗಳನ್ನೆಲ್ಲ ಮರೆತು ಬಿಡಬೇಕೆಂದು ಪ್ರತಿಜ್ಞೆಯನ್ನು ಮಾಡಿರುವೆನಲ್ಲವೆ ?

ಬಿ. ಎಂ. ಶ್ರೀಯವರ 'ಗದಾಯುದ್ಧ' ನಾಟಕದಿಂದ ಉದ್ಧೃತ

ಸಂಜಯಂ : ರಾಜರಾಜ, ಶರಶಯನದೊಳ್ ಭೀಷ್ಮರಿರ್ತ್ತಲಿರ್ದಪರ್, ವಿಜಯಂಗೆಯ್ಕಿಂ.

ದುರ್ಯೋಧನಂ : ಕುರುಪಿತಾಮಹ, ಬಾಲಕಂ ವಂದಿಸುವೆಂ.

ಸಂಜಯಂ : (ಕಿವಿಯೊಳ್) ಅಜ್ಜಾ, ನಿಮ್ಮ ಮೊಮ್ಮಂ ಕುರುಕುಲಾಂಬರದ್ಯುಮಣಿ ದುರ್ಯೋಧನಂ ಬಂದಂ.

ಭೀಷ್ಮಂ : ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
ಧವಳವಿಲೋಚನೋತ್ಪಲವಧೂಜನಮುಂ ಬೆರಸಪ್ಪ ದಿಕ್ತಟಂ
ಧವಳಿಸೆಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪಕೌ
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ
ಏಕಾಂಕಿಯಾಗಿ ನಿನ್ನ ಬಂದ ಒರವಿನೊಳೆ ಸಮರವೃತ್ತಾಂತಂ
ತಿಳಿದುದು.

ದುರ್ಯೋಧನಂ : ಅಜ್ಜ, ನನಗೆ ಮುಳಿಂಗದಿರಿಂ
ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇಳ್ದ ಹಿತೋಪದೇಶಮುಂ
ಮನದೊಳಿಟಂಕಿಗೊಂಡನಿಲನಂದನವೈರದೆ ನಿಮ್ಮ ನಿಂದ್ರನಂ
ದನನೊಡನಾನೆಕಾಡಿಸಿದೆನಾನೆ ಕಡಂಗಿದೆನೆನ್ನ ಪಾಪಕರ್ಮನ
ಕತದಿಂದಮಿೂ ಸಿಮಗಮಿೂಯಿರವಾದುದೆ ಸಿಂಧುನಂದನಾ

ಮಾಸ್ತಿಯವರ ಸಾವಿತ್ರಿ ನಾಟಕದಿಂದ ಉದ್ಧೃತ.

ಸಾವಿತ್ರಿಯ ತಂದೆ ಮತ್ತು ಮಾವಂದಿರು ಸತ್ಯವಾನನ ಸಾವಿನ ಸಮ್ಮುಖದಲ್ಲಿ ಪರಸ್ಪರ ಸಂತೈಸಿಕೊಳ್ಳುತ್ತಿರುವ ಸನ್ನಿವೇಶವಿದು.

ರಾಜ : ಜೇಡರ ಹುಳು ಕಟ್ಟಿದ ಗೂಡನ್ನು ಹುಡುಗರು ಕಿತ್ತು ಹಾಕುವ ಹಾಗೆ ಆ ಜೀವನ ಕೆಟ್ಟು ಹೋಯಿತು. ನಿಮ್ಮ ಕುಮಾರಿಗೆ ದೇವರು ಅನ್ಯಾಯ ಮಾಡಿದನು.

ಅಶ್ವಪತಿ : ಆದರೆ ಪರಮಾತ್ಮನ ಇಚ್ಛೆಯನ್ನು ನಾವು ಕಾಣೆವು. ನೆರೆಹೊರೆಯ ಮಕ್ಕಳು ಸೇರಿ ಮದುವೆ ಮನೆ ಮಠ ಎಂದು ಆಡುತ್ತಿರುವಾಗ ತಾಯಿ ಬಂದು ಮಗುವನ್ನು ಕರೆದುಕೊಂಡು ಹೋದ ಹಾಗೆ, ತನ್ನ ವಸ್ತುವನ್ನು ಪರಮಾತ್ಮನು ಕೊಂಡು ಹೋದನು. ನಮ್ಮ ಆಟ ಕೆಟ್ಟು ನಾವು ದುಃಖ ಪಡುವೆವು.

ರಾಜ : ತಾವು ಪ್ರಜ್ಞರು.

ಅಶ್ವಪತಿ : ನನ್ನ ದುಃಖ ತಮ್ಮ ದುಃಖಕ್ಕಿಂತ ಕಡಿಮೆ, ಆದ್ದರಿಂದ ನಾನು ಪ್ರಾಜ್ಞನಂತೆ ಮಾತನಾಡುತ್ತೇನೆ, ಋಷಿವರ್ಯ, ಏನಾಗಿದೆ ಹೇಳಬೇಕು.

ಎ. ಸೀ. ಅವರ 'ಆಗ್ರಹ' ದಿಂದ ಉದ್ಧೃತ : ಇದರ ರಚನಕಾಲ ಸುಮಾರು 1930.

ಕೃಪ : ಇನ್ನು ಪಾಳೆಯವರು ಯಾರೂ ಉಳಿಯುವ ಆಸೆಯಿಲ್ಲ, ಕೃತವರ್ಮ.

ಅಶ್ವತ್ಥಾಮ : ದಾರಿಯಲ್ಲಿ ಅಪಶಕುನಗಳಾದವು ಮಾವ. ರುದ್ರಪೂಜೆ ಮಾಡಿ ಮನಸ್ಸನ್ನು ಧೈರ್ಯ ಮಾಡಿಕೊಂಡು ಬಂದೆ. ಇನ್ನು ಬಿಡಿ. ನನ್ನ ದಾರಿ ಸ್ಪಷ್ಟವಾಗಿ ಕಾಣುತ್ತದೆ.

ಕೃಪ : ಕಗ್ಗತ್ತಲಲ್ಲಿ ಸ್ಪಷ್ಟವಾಗಿಯೇ ಕಾಣುತ್ತಿರಬೇಕು; ಈ ಹೇಡಿ ರಾತ್ರಿಯಲ್ಲಿ !

ಅಶ್ವತ್ಥಾಮ : ಹುಂ. ಪುನಃ ಉಪದೇಶಕ್ಕೆ ಮೊದಲು ಮಾಡಿದಿರೇನು ? ಕಾಲ ಮೀರುತ್ತಿದೆ. ಕಾಡದೆ ಹೊರಟು ಹೋಗಿ.

ಕೃಪ : ಕಂಬವನ್ನು ಕಿತ್ತು ಮಾಳಿಗೆಯನ್ನು ಮೇಲೆ ಕೆಡವಿಕೊಳ್ಳುವರೇನೋ ?

ಅಶ್ವತ್ಥಾಮ : (ಕಿವಿ ಮುಚ್ಚಿಕೊಂಡು ಮುಂದೆ ಹೋಗಲು ಪ್ರಯತ್ನಿಸುವನು).

ಕೃತವರ್ಮ : ಅಶ್ವತ್ಥಾಮಾ, ನಿನ್ನಿಷ್ಟ ನಾವೂ ಬಹಳ ಹೊತ್ತು ಯೋಚಿಸಿ ನಿನ್ನನ್ನು ಹಿಂಬಾಲಿಸಿ ಬಂದೆವು.

ಅಶ್ವತ್ಥಾಮ : ಕಾರ್ಯದಿಂದ ನನ್ನನ್ನು ತಿರುಗಿಸುವ ಉದ್ದೇಶದಿಂದಲಾದರೆ ನಿಮ್ಮ ಶ್ರಮ ವ್ಯರ್ಥ.

ಎಂ. ಆರ್. ಶ್ರೀ ರವರ 'ಕಂಠೀರವ ವಿಜಯ' ದಿಂದ ಉದ್ಧೃತ :

(ನಾಂದ್ಯಂತದಲ್ಲಿ ಸೂತ್ರಧಾರನು ಪ್ರವೇಶಿಸುವನು)

ವೃತ್ತ॥ ಭರದಿಂ ಮುಲೋಕಮುಂ ತಲ್ಲಣಿಸೆ ಪಟುತರ ಧ್ಯಾನದಿಂದಂತರಿಕ್ಷಂ।
ಬಿರಿಯಲ್ ದೈತ್ಯೇಂದ್ರನಂ ತಾಂ ನಿಶಿತನಖಕುಠಾರಾಗ್ರದಿಂ
ಸೀಳಿಗೀರ್ವಾ ॥
ಣರ ರಾಜ್ಯಸ್ಥಾಪನಂ ಗೈಡತಿಬಲಮಹಿಮಾಧ್ಯಾರವೀರಾವತಾರಂ
ವರದಂ ಕಂಠೀರವಾಸ್ಯಂ ಕುಡುಗೆ ಮಿಗ ಮಿತಶ್ರೇಯುಮಂ
ಪ್ರೇಮದಿಂದಂ ॥

ಸೂತ್ರಧಾರ : (ಕಿವಿಗೊಟ್ಟು ಕೇಳಿ) ಅಹಾ! ಇದೇನು ಕಲ ಕಲ ವಾಗುವುದು,

(ತೆರೆಯಲ್ಲಿ)

ಹೋ! ಅಗೋ ಕಾಡುಹಂದಿ! ಹೋ! ಹೋ!

ಸೂತ್ರಧಾರ : ಆಗಲೇ ನನ್ನ ಮಿತ್ರರು ವೇಷಗಳನ್ನು ಧರಿಸಿ ಕಾಡು ಹಂದಿಯನ್ನಟ್ಟಿ ಕೊಂಡು ಬರುತ್ತಿರುವರು. ಇಲ್ಲಿ ನಾನಿರುವುದು ಸರಿಯಲ್ಲ (ನಿಷ್ಕ್ರಮಿಸುವನು).

[ಇಂತಿದು ಪ್ರಸ್ತಾವನೆ]

ಮುಂದಿನ ದೃಶ್ಯ ಕಾಡಿನಲ್ಲಿ ಪ್ರಾರಂಭವಾಗುತ್ತದೆ. (ಕಂಠೀರವ, ತಿಮ್ಮಪ್ಪ ನಾಯಕ, ದೊಡ್ಡರಾಜಯ್ಯ ಮತ್ತು ದಾಸರಾಜಯ್ಯ ಓಡುತ್ತಾ ಬರುವರು.)

ನಾಟಕ ಮುಂದುವರಿಯುತ್ತದೆ. 3 ಅಂಕಗಳಲ್ಲಿ ಮುಕ್ತಾಯವಾಗುತ್ತದೆ.

ಪು. ತಿ. ನ. ರವರ 'ಹಂಸದಮಯಂತಿ' ಗೀತರೂಪಕದಿಂದ ಉದ್ಧೃತ:

ದಮಯಂತಿ : (ದೂರದಲ್ಲಿ) ಅಂಜಿಕೆಯೇಕೆ. ಸಖಿ, ಇಗೋ ಇಗೋ ಸಿಕ್ಕಿಯೇ ಬಿಟ್ಟಿತು. ಈ ಠಕ್ಕಿನ ಹಕ್ಕಿ, (ಹತ್ತಿರದಲ್ಲಿ) ಸಿಕ್ಕಿ ಸಿಕ್ಕಿ ತಪ್ಪಿಸಿ ಕೊಳ್ಳುತ್ತಿಯಾ ಕೆಟ್ಟ ಹಕ್ಕಿ!

(ಹಾಡು)

ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ
ದಕ್ಕದೆಯೆ ಪ್ರೇಪೆಕ್ಕೆ ಪಿಕ್ಕಿಯೆ
ಪಕ್ಕೆ ಬಡಿದು ಕೊಕ್ಕೆಸೋರೆ
ಮಾಡಿ ನಕ್ಕುನಡೆವೆ
ಕಕ್ಕುಲತೆಗೊಳ್ಳುವೆನ್ನೊ
ಳುಕ್ಕಳಿಕೆ ತರುವೆ.

ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ—

ಹಂಸ : ಕಕ್ಕುಲತೆಯೆನ್ನೊಳೇಕೆ, ಚಿಕ್ಕವಳೆ
ಉಕ್ಕಳಿಕೆಗೊಳ್ಳು ನೀನು ತಕ್ಕನೊಳೆ.

ದಮಯಂತಿ : ಎಲೆ ದುಷ್ಟ ಹಕ್ಕಿ,
ತಕ್ಕವ ತಕ್ಕವನೆಂಬು

ಚಕ್ಕಂದವಾಡುವ
ದಿಟ್ಟ ಹಕ್ಕಿ ತಕ್ಕುದನುಗ್ಗೈವೆ ನಿನಗೆ
"ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ—

(ಹಿಡಿಯ ಹೋಗುವಳು, ಒಂದು ಗರಿ ಮಾತ್ರ ಕೈಗೆ ಬರುತ್ತದೆ ಹಕ್ಕಿ ತಪ್ಪಿಸಿಕೊಂಡಿದೆ).

ಪಕ್ಕ ಬಡಿದು ಈ ಹಕ್ಕಿ ಮರಳಿಯೂ ತಪ್ಪಿಸಿಕೊಂಡಿತು.

ಕಾರಂತರ 'ಸೋಮಿಯ ಸೌಭಾಗ್ಯ' ಗೀತನಾಟಕದಿಂದ ಉದ್ಧೃತ: (ಕಾಲ, ಸುಮಾರು 1940).

ಗುರ್ವ : ನಂಗ ತಿಳಿತೂ
ನಿನ್ನಕಾಂಬೋಕೆ
ನೀಮದ್ವಿ ನೆರೆದಿದ್ದಿ
ಕಾಣ್ಲಿಕ್ಕೆ ಬಂದಾರೆ

ಸೋಮಿ : ನನ್ನ ತಳ್ಬೇಡಾ
ಗುಡಿಯ ಹೊರಗಂಟೆ
ಈ ಮದ್ವೀನೆ ಬ್ಯಾಡಪ್ಪ
ಮನೆಯ ಬಿಡ್ಲಾರೆ

ಗುರ್ವ : ಹಾಂಗನ್ಬೇಡಾ
ನನ್ನ ಹೆಂಗರು
ನೀ ಹೆಣ್ಣು ಆದ್ಮೇಲೆ
ಮದ್ವಿ ಬ್ಯಾಡೇನೆ ?

ಸೋಮಿ : ಮದ್ವಿ ಬ್ಯಾಡಪ್ಪ
ನಾಗುಡಿಯ ಬಿಡ್ಲಾರೆ
ನಿನ್ನನ್ನು ಬಿಟ್ಟರೆ
ಪ್ರಾಣ ಹಾರೀತು

* * * *

ಚನಿಯ : ನನ್ನಾಟದ ಹೆಂಡ್ತಿಯು
ಹಾರಿಹೋಗ್ತಾಳೋ
ನನ್ಯಾಕೆ ತಂದಾರು
ಬೆಳೆಸಿ ಬಂದಾರು
ಹಾದೀಲಿ ಸಾಯ್ತಿದ್ದೆ
ಗೋಳು ತಪ್ತಿತ್ತು
ಆಸೋಮಿ ಹೋದ್ಮೇಲೆ
ಬದುಕು ಉಳ್ದೀತಾ

**ಶಾಂತಕವಿ* :** (ಸಕ್ಕರಿ ಬಾಳಾಚಾರ್ಯ) 'ಸಂಸ್ಕೃತ' ವಿದ್ವಾಂಸರ ಮನೆಯಲ್ಲಿ ಜನನ. ಬಾಲ್ಯದಿಂದಲೂ ಹುಡುಗನಿಗೆ ಹಾಡು, ಕುಣಿತಗಳಲ್ಲೇ ಆಸಕ್ತಿಯಿತ್ತು. ಸಕ್ಕರಿಬಾಳಾಚಾರ್ಯ ತಮ್ಮ ಕುಲದೈವ ಶಾಂತೇಶನ ಹೆಸರನ್ನು ತಮ್ಮ ಕಾವ್ಯನಾಮವಾಗಿ ಇಟ್ಟುಕೊಂಡಿದ್ದರು.

ಶಾಂತಕವಿ ತಮ್ಮ ಹದಿನೇಳನೇ ವಯಸ್ಸಿನಲ್ಲಿ ರಚಿಸಿದ ಪ್ರಥಮ ನಾಟಕ 'ಉಷಾಹರಣ'. ಇದು 1873 ರಲ್ಲಿ ಯಶಸ್ವಿಯಾಗಿ ಪ್ರದರ್ಶಿಸಲ್ಪಟ್ಟಿತು. 'ಕರ್ನಾಟಕ ಸಂಗೀತ ನಾಟಕ ಮಂಡಳಿ' ಸ್ಥಾಪಿಸಿ ಅದರ ಮೂಲಕ ತಾವೇ ಬರೆದ ಶ್ರೀಯಾಳ ಸತ್ವ ಪರೀಕ್ಷೆ, ಕೀಚಕ ವಧೆ, ಸುಂದೋಪಸುಂದ ವಧೆ, ವತ್ಸಲಾಹರಣ, ಸೀತಾರಣ್ಯ ಪ್ರವೇಶ, ಸುಧನ್ವವಧೆ, ಶಕುಂತಲೆ ಮುಂತಾದವುಗಳನ್ನು ರಚಿಸಿ ಪ್ರದರ್ಶಿಸಿ ಅಪಾರ ಜನಮೆಚ್ಚುಗೆ ಗಳಿಸಿದರು.

ಇವರ 25 ನೇ ವಯಸ್ಸಿನಲ್ಲಿ ಅಂದರೆ 1881 ರಲ್ಲಿ ಇವರನ್ನು ಅಭಿಮಾನಿಗಳು ಸಾರ್ವಜನಿಕ ಸಮಾರಂಭ ನಡೆಸಿ ಸತ್ಕರಿಸಿದ್ದರು.

ಶಾಂತಕವಿಯ ನಾಟಕಗಳು ಯಕ್ಷಗಾನ ಬಯಲಾಟಕ್ಕೂ ಇಂದಿನ ನಾಟಕಕ್ಕೂ ಮಧ್ಯಸ್ವರೂಪದವು.

ಇವರು ರಚಿಸಿರುವ ನಾಟಕಗಳ ಸಂಖ್ಯೆ ಸುಮಾರು 65.

**"ಗರೂಡ ಸದಾಶಿವರಾಯರು[2] :** ಒಳ್ಳೆಯ ನಟರಾಗಿದ್ದುದಲ್ಲದೆ ನಾಟಕ ಕಾರರೂ ಆಗಿದ್ರು ಅಂತಾ ನಮ್ಮ ತಂದೆ ಹೇಳ್ತಾ ಇದ್ರು. ಅವರದೊಂದು ನಾಟಕಕ್ಕೆ ರಾಜ್ಯಪ್ರಶಸ್ತಿ ಕೂಡ ಬಂತು ಅಂತ ಜ್ಞಾಪ್ಕ." ರಾಯರು ಮಾತು ನಿಲ್ಲಿಸುವ ಮುನ್ನವೇ ವ್ಯಾಸರಾಯರು ಪ್ರಾರಂಭಿಸಿದರು.

"ಹೌದು. ಅವರ ಕೊನೆನಾಟಕ 'ಉಗ್ರ ಕಲ್ಯಾಣ' ರಾಜ್ಯ ಸರ್ಕಾರದ ಬಹುಮಾನ ಪಡೆದಿತ್ತು. ಅದರ ಪ್ರಯೋಗಗಳು ಕರ್ನಾಟಕದಾದ್ಯಂತ ನಡೆದು ದಿಲ್ಲಿಯ ವರೆಗೂ ದಿಗ್ವಿಜಯ ನಡೆಸಿತ್ತು. ಗರೂಡರು ಸ್ವತಃ ಪ್ರಭೋದಾನಂದನ ಪಾತ್ರ ವಹಿಸುತ್ತಿದ್ದರು. ಗರೂಡರು ಹಣಕ್ಕಾಗಿಯಾಗಲಿ ಹೆಸರಿಗಾಗಿಯಾಗಲಿ ಹಾತೊರೆ ದವರಲ್ಲ. ಕಲೆಯ ಸೇವೆಗಾಗಿ ಟೊಂಕಕಟ್ಟಿ ತಪಶ್ಚರ್ಯ ಮಾಡಿದವರು 75 ವರ್ಷಗಳ ಅವರ ಜೀವನದಲ್ಲಿ 50 ಕ್ಕೂ ಮೇಲ್ಪಟ್ಟ ವರ್ಷಗಳನ್ನು ರಂಗಭೂಮಿಯ ಸಿಹಿ, ಕಹಿ ಅನುಭವಿಸುವುದರಲ್ಲೇ ಕಳೆದಿದ್ದರು. ಕನ್ನಡ ಕಲೆಯ, ಕನ್ನಡ ಕುಲದ ದೊಡ್ಡ ಆಸ್ತಿ ಯಾಗಿದ್ದರು ಗರೂಡರು.

---

* ಜೀವಿತಕಾಲ: (1856–1920). ಹುಟ್ಟಿದ ಸ್ಥಳ: ಧಾರವಾಡ ಜಿಲ್ಲೆಯ ಸಾತೇನ ಹಳ್ಳಿ. ತಂದೆ: ಗೋಪಾಲಾಚಾರ್ಯ.

2 ಜೀವಿತಕಾಲ: ಸು (1880–1955). ತಂದೆ: ಗುರುನಾಥಶಾಸ್ತ್ರಿ, ಸಂಸ್ಕೃತ ವಿದ್ವಾಂಸರು. 1925ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಕರ್ನಾಟಕ ನಾಟಕಾಲಂಕಾರ' ಎಂಬ ಬಿರುದು ಲಭಿಸಿತ್ತು.

'ಅಭಿನಯ ಕೇಸರಿ' ಇವರಿಗೆ ಸಂದಿದ್ದ ಸಾರ್ಥಕ ಬಿರುದು. 'ಗದಗ ಶ್ರೀ ದತ್ತಾತ್ರೇಯ ನಾಟಕ ಮಂಡಳಿ' ಇವರು ಕಟ್ಟಿ ನಡೆಸಿದ ಪ್ರಸಿದ್ಧ ನಾಟಕ ಮಂಡಳಿ. 'ಪಾದುಕಾ ಪಟ್ಟಾಭಿಷೇಕ' ಲಕ್ಷಾಂತರ ಜನರನ್ನು ತಣಿಸಿದ ರಂಗಭೂಮಿಯ ಇತಿಹಾಸದಲ್ಲಿ ಮಹತ್ತರವಾದ ನಾಟಕ. ಗರೂಡರದು ಕಲಾವಂತರ ವಂಶ.

ಲೋಕಮಾನ್ಯ ತಿಲಕರ ರಾಷ್ಟ್ರೀಯ ಹೋರಾಟಕ್ಕೆ ಸಂಬಂಧಿಸಿದ, ಬಂಧ ವಿಮೋಚನೆಯಿಂದ ನಾಟಕರಂಗ ಪ್ರವೇಶಿಸಿದ ಗರೂಡರು ಸುಮಾರು 50 ನಾಟಕಗಳನ್ನು ಬರೆದು ಯಶಸ್ವಿಯಾಗಿ ಪ್ರಯೋಗ ನಡೆಸಿದ್ದರು. ಪೌರಾಣಿಕ, ಸಾಮಾಜಿಕ, ಐತಿಹಾಸಿಕ ನಾಟಕಗಳಲ್ಲದೆ ರಾಷ್ಟ್ರೀಯ ಭಾವನೆಯನ್ನು ಕೆರಳಿಸುವ ನಾಟಕಗಳನ್ನು ಬರೆದು ಜನರಲ್ಲಿ ಜಾಗೃತಿಯನ್ನುಂಟು ಮಾಡಿದ್ದಾರೆ. ಅವರ ಪ್ರಸಿದ್ಧ ನಾಟಕಗಳು: ಸತ್ಯ ಸಂಕಲ್ಪ, ಎಚ್ಚಮನಾಯಕ, ಮಾರ್ಕಂಡೇಯ, ಕೀಚಕ ವಧೆ, ಬಲಸೀಹ ತಾರಾ, ಶಕ್ತಿ ವಿಲಾಸ, ಶಶಿಕಲಾ, ಉಗ್ರ ಕಲ್ಯಾಣ, ವಿಷಮ ವಿವಾಹ, ಕಂಸ ವಧೆ, ನಾನು ಕನ್ನಡಿಗ, ಶ್ರೀ ಶರಣ ಬಸವೇಶ್ವರ, ತುಕಾರಾಮ ಮುಂತಾದವುಗಳು.

**ಎಂ. ಎಲ್. ಶ್ರೀಕಂಠೇಶಗೌಡರು:** ಸುಮಾರು 90 ವರ್ಷಗಳ ಹಿಂದೆಯೇ ಕನ್ನಡಕ್ಕಾಗಿ ಶ್ರದ್ಧೆಯಿಂದ ಕೆಲಸ ಮಾಡಿದ ಈ ವ್ಯಕ್ತಿ, ಬಿ.ಎ., ಬಿ.ಎಲ್., ಪದವಿ ಗಳಿಸಿದ ನಂತರ ಸರಕಾರದ ನ್ಯಾಯಾಂಗ ಇಲಾಖೆಯಲ್ಲಿದ್ದರು. ಇವರು ಎರಡು ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

'ರಾಮವರ್ಮ ಲೀಲಾವತಿ' ರೋಮಿಯೋ ಅಂಡ್ ಜೂಲಿಯಟ್‌ನ ಭಾವಾನುವಾದ. 'ಪ್ರತಾಪರುದ್ರದೇವ' ಮ್ಯಾಕ್‌ಬೆತ್‌ನ ಭಾವಾನುವಾದ. ಇವೆರಡರಲ್ಲೂ ಶ್ರೀಕಂಠೇಶಗೌಡರು ಕಥಾ ಸನ್ನಿವೇಶಗಳನ್ನು ದೇಶಿಯ ವಾತಾವರಣಕ್ಕೆ ಅನುಗುಣವಾಗಿ ಮಾರ್ಪಡಿಸಿಕೊಂಡು ಸಂಭಾಷಣೆಗೆ ಜೊತೆಯಲ್ಲಿ ಪದ್ಯ, ವಚನಗಳನ್ನು ಸೇರಿಸಿ ನಾಟಕ ಜನಾನುರಾಗಿಯಾಗುವಂತೆ ಮಾಡಿದ್ದಾರೆ.

ಹಂಗೂಕೆಟ್ಟ ಹಿಂಗೂಕೆಟ್ಟ ರಂಗಧಾಮ ।
ತಂಗಳಿಟ್ಟು ಹಳಸಿ ಹೋಯ್ತು ಪಂಗನಾಮ ॥

ನೋಡಿ ಜಾನಪದ ಧಾಟಿಯಲ್ಲಿ ಅಂದು ಹೇಳಿದ ಪದ್ಯ ಇಂದೂ ಇಂಪಾಗಿಯೇ ಇದೆ ಎಂದೆನಿಸುತ್ತದೆ. 'ಚಾಮನೃಪ ಚಂದ್ರಪ್ರಭ' ಗೌಡರ ಸ್ವತಂತ್ರ ಪದ್ಯ ಗ್ರಂಥ. ಇದರಲ್ಲಿ ಸಂಸ್ಕೃತದ ವೃತ್ತ, ಛಂದಸ್ಸಿನ ಪದ್ಯಗಳೂ, ಕಂದ ಪದ್ಯಗಳೂ ಇವೆ.

**ಕೈಲಾಸಂ*:** (ತ್ಯಾಗರಾಜ ಪರಮಶಿವ ಕೈಲಾಸಂ) 'ಕನ್ನಡಕ್ಕೊಬ್ಬನೇ ಕೈಲಾಸಂ' 'ಕರ್ನಾಟಕ ಪ್ರಹಸನ ಪ್ರಪಿತಾಮಹ' ಎಂದು ಪ್ರಸಿದ್ಧರಾಗಿರುವ ಟಿ. ಪಿ. ಕೈಲಾಸಂ ಕನ್ನಡ ನಾಟಕ ರಂಗದಲ್ಲಿ ಅಮರವಾಗುಳಿದಿದ್ದಾರೆ.

---

* ಜೀವಿತಕಾಲ: (1884-1946) (ಪುಟ 152 ನೋಡಿ) ತಂದೆ: ಹೆಸರಾಂತ ನ್ಯಾಯಾಧೀಶ ಪರಮಶಿವಯ್ಯರ್. ಪ್ರಾರಂಭದಲ್ಲಿ 'ಗುಂಡೂ' ಹೆಸರಿನಿಂದ ನಾಟಕ ರಚಿಸುತ್ತಿದ್ದರು.

ಭೂವಿಜ್ಞಾನದಲ್ಲಿ ಉನ್ನತ ವ್ಯಾಸಂಗ ಮಾಡಲು ಇಂಗ್ಲೆಂಡಿಗೆ ತೆರಳಿದ್ದ ಕೈಲಾಸಂ ಉನ್ನತ ಶ್ರೇಣಿಯಲ್ಲೇ ತೇರ್ಗಡೆ ಹೊಂದಿ ಏಳು ವರ್ಷಗಳ ನಂತರ ತಾಯ್ನಾಡಿಗೆ ಹಿಂತಿರುಗಿದರೂ ಅವರ ಮೇಲೆ ಅಲ್ಲಿನ ನಾಟಕ ರಂಗ ಬಹು ಪ್ರಭಾವ ಬೀರಿತ್ತು. ಈ ಪ್ರಭಾವದ ಪರಿಣಾಮವೇ ಹೊಸ ಹೊಸ ಪ್ರಯೋಗಕ್ಕೆ ನಾಂದಿಯಾಯಿತು. ಸಮಾಜದ ಲೋಪ ದೋಷಗಳನ್ನು ಎತ್ತಿ ತೋರಿಸಿ ಜನರ ಲಕ್ಷ್ಯವನ್ನು ಎಳೆಯುವುದೇ ಉದ್ದೇಶವಾಗಿತ್ತು. ಹೀಗೆ ಹುಟ್ಟಿ ಬಂದದ್ದು ಅವರ ಮೊದಲ ನಾಟಕ 'ಟೊಳ್ಳು ಗಟ್ಟಿ' ಇದಕ್ಕೆ ಮೈಸೂರು ಯುವರಾಜ ನರಸಿಂಹರಾಜ ಒಡೆಯರ ಪಾರಿತೋಷಕ ಲಭಿಸಿತ್ತು. ' ಭಾವನಾ ರೂಪದಲ್ಲಿ ರೂಪುಗೊಳ್ಳುತ್ತಿದ್ದ ಇವರ ಬಹಳಷ್ಟು ನಾಟಕಗಳನ್ನು ಇವರ ಸ್ನೇಹಿತರೇ ಲಿಪಿ ರೂಪಕ್ಕಿಳಿಸಿದ್ದಾರೆ. ಇವರುಗಳು ಹೀಗೆ ಲಖಿತಗೊಳಿಸಿದೆ ಹೋಗಿದ್ದರೆ ಬಹುಶಃ ಯಾವ ನಾಟಕವೂ ಅವರ ಲೇಖನಿಯಿಂದ ಹೊರಬರುತ್ತಿರಲಿಲ್ಲ.

ಕೈಲಾಸಂ ಕನ್ನಡದಲ್ಲಲ್ಲದೆ ಇಂಗ್ಲೀಷಿನಲ್ಲೂ ನಾಟಕಗಳನ್ನು ರಚಿಸಿದ್ದಾರೆ. ಕರ್ಣ, ಏಕಲವ್ಯ, ಭರತ, ಕೀಚಕ ಮುಂತಾದವು ಮುಖ್ಯವಾದವುಗಳು.

ಕನ್ನಡದ ನಾಟಕಗಳು: ಬಂಡ್ವಾಳ್‌ವಿಲ್ಲದ ಬಡಾಯಿ, ಸೂಳೆ, ಪೋಲಿಕಿಟ್ಟಿ, ಹೋಂ ರೂಲ್, ಬಹಿಷ್ಕಾರ, ಗಂಡಸ್ಕತ್ರಿ, ವೈದ್ಯನವ್ಯಾಧಿ, ಸೀಕರಣೆ, ಸಾವಿತ್ರಿ, ಪಾತೂತವರ್ಮನೆ, ಅಮ್ಮಾವ್ರಗಂಡ, ನಮ್ ಕ್ಲಬ್ಬು, ಸತ್ತವನ ಸಂತಾಪ, ಅನುಕೂಲ ಕ್ಕೊಬ್ಬಣ್ಣ, ತಾಳಿಕಟ್ಟೊಕ್ಕೂಲೀನೆ.

ಕೈಲಾಸಂ ಮದರಾಸಿನಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನಕ್ಕೆ (1945) ಅಧ್ಯಕ್ಷರಾಗಿದ್ದರು. ಅವರು ದೈವಾಧೀನರಾದಾಗ ಅವರಿಗೆ 62 ವರ್ಷ. ಅವರು ಇನ್ನಿಲ್ಲವಾದರೂ ಅವರು ಬಿಟ್ಟು ಹೋಗಿರುವ ನಾಟಕಗಳು ತಮ್ಮದೇ ವ್ಯಕ್ತಿತ್ವದಿಂದಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಶಾಶ್ವತ ಉಳಿದಿರುತ್ತವೆ.

ಅವರ ನಾಟಕ ಶೈಲಿ ಬಹು ವಿಶಿಷ್ಟವಾದದ್ದು. ಕೆಲ ಉದಾಹರಣೆಗಳು.

'ಟೊಳ್ಳುಗಟ್ಟಿ' ಯಿಂದ

'ಈಗಿನ ಕಾಲದಲ್ಲಿ ನಮ್ಮನೆಗಳಲ್ಲಿ ಗಂಡ್ಮಗು ಹುಟ್ಟುತ್ಲೂನೂವೇ ಪಂಚಾಕ್ಷರಿ ಜಪ ಪ್ರಾರಂಭಿಸಿಬಿಡ್ತೇವು–ಮುಂದಕ್ಬರ್ಬೇಕು, ಮುಂದಕ್ಬರ್ಬೇಕು ಅಂತ. ಮುಂದಕ್ಬರ ಬೇಕು ಅಂದ್ರೇನೋ ಆದೇವರ್ಗೇ ಬೆಳ್ಳಂ ಬೆಳಕು. ಆ ಮಗನ್ಗೋ ಎಂಟು ವಯಸ್ಸಾಗೋವರೆಗೂ ಈ ಜಪದಲ್ಲಿ ಅದ್ದೀ ಅದ್ದೀ ನೆನಸಿ, ಓದಿ ಪ್ಯಾಸ್ ಮಾಡೋಕೆ ಅಂತ ಸ್ಕೂಲಿಗೆ ಸಾಗಿಸಿ ಬಿಡತೇವು. ಸ್ಕೂಲ್ನಲ್ಲಿ ಸಂ ಹುಡುಗ್ರು ಓದೋದಂದ್ರೇನು, ಪ್ಯಾಸ್ ಮಾಡೋದಂದ್ರೇನು, ಇದನ್ನೆಲ್ಲಾ ತಪ್ಸೀಲಾಗಿ ವಿವರಿಸ್ತೇನು. ಲಾಲಿಸಬೇಕು'

'ಕೋಳೀಕೆರಂಗಾ' ಯಿಂದ

ನಾನ್ ಹುಟ್ಟಿದ್ದು ಹೈಪ್ರಳ್ಳಿ

ಬ್ಯಳದದ್ದು ಬ್ಯಾಡ್ರ‍ಳ್ಳಿ
ಮದುವೆ ಮಾದನ್ನಳ್ ನನ್ ಹೊಲಗೊಳ್ ಆರನ್ನಾಳ್ಳೀ
ನಾ ಶಾನ್ ಬೋಗಯ್ಯ್ಯ
ಅಲ್ಡೆ ಶೇಕ್ದಾರಪ್ಪ
ಇವ್ರೆಲ್ಲೂ ಕಂಡವ್ರೆ ನನ್ನಾ !

o o o o

'ಬಂಡ್ವಾಳವಿಲ್ಲದ ಬಡಾಯಿ' ಯಿಂದ

ಬಿಸ್‌ನೆಸ್‌ನಲ್ಲಿ ಎಂಥ ಡಫ್ಫರ್ರೂ ದುಡ್ಡಿದೆ. But start ಮಾಡೋವಾಗ ಮಟ್ಗೆ ಹುಷಾರಾಗಿರಬೇಕು. I shall give you an example. ಪುಳ್ಳಯ್ಯ ಅಂತ ನಮ್ಮ friendಉ – friend ಏನು...same streetಉ. ಚಿಕ್ಕಂದ್ನಲ್ಲಿ ಹೊರಳಾಡಿದ್ದು...same schoolಉ. ಸೇರಿ dismiss ಆದದ್ದು...same classಉ. ಓದದೆ ಫೇಲಾಗಿ ಒದೆ ತಿಂದದ್ದು...ಆಮೇಲೆ ನನ್ನ LLB ಆದಾಗ್ಲೆ ಅವನ್ನ meet ಮಾಡಿದ್ದು...ಬೇರೆ ವಿಧವಾಗಿ Turnout ಆಗೋಯ್ತು. The first ಕೋಳಿ we boughtಉ – Turned out to be a cockಉ!

**ನಾ. ಕಸ್ತೂರಿ* :** (ಕಸ್ತೂರಿ ನಾರಾಯಣ)

'ನಾಟಕದ ಕಸ್ತೂರಿ' ಎಂದೇ ಪ್ರಸಿದ್ಧರಾಗಿದ್ದ ಶ್ರೀಯುತರು ಕನ್ನಡ ರಂಗ ಭೂಮಿಯ ಉಚ್ಛ್ರಾಯಕ್ಕೆ ಬಹಳ ಶ್ರಮಿಸಿದವರು. 'ಕೊರವಂಜಿ' ಯ ಖಾಯಂ ಬರಹಗಾರರಾಗಿದ್ದರು.

ಇವರದು ಬಹುಮುಖ ಪ್ರತಿಭೆ.

ಕೃತಿಗಳು : ಗಗ್ಗಯ್ಯನ ಗಡಿಬಿಡಿ, ಮಂಕಾಸುರವಧೆ, ವರಪರೀಕ್ಷೆ, ಏಕಚಕ್ರ, ನಂದಿಗ್ರಾಮ, ಚಿತ್ರವಿಚಿತ್ರ, ಕಾಡಾನೆ (ನಾಟಕಗಳು) : ಯದ್ವಾತದ್ವಾ, ಅಲ್ಲೋಲ-ಕಲ್ಲೋಲ, ಉಪಾಯವೇದಾಂತ, ಚಕ್ರದೃಷ್ಟಿ, ಗೃಹದಾರಣ್ಯಕ, (ಪ್ರಬಂಧ ಸಂಕಲನಗಳು).

ಸತ್ಯಸಾಯಿಬಾಬಾರವರ ನಿಕಟವರ್ತಿಗಳಾಗಿದ್ದ ಕಸ್ತೂರಿ 'ಸನಾತನ ಸಾರಥಿ' ನಿಯತಕಾಲಿಕದ ಸಂಪಾದಕರಾಗಿದ್ದರು. ಕೆಂಪ ಮೈಸೂರಿಗೆ ಹೋಗಿದ್ದು. ಹಾಸ್ಯದ ಚಟಾಕಿ (ನಗೆ ಬರಹಗಳು).

ಸತ್ಯಸಾಯಿಬಾಬಾರವರ ಜೀವನ ಚರಿತ್ರೆಯಲ್ಲದೆ ಆವರ ಉಪನ್ಯಾಸಗಳ ಹನ್ನೊಂದು ಸಂಪುಟ (ಸತ್ಯಂ, ಶಿವಂ, ಸುಂದರಂ) ಗಳ ಸಂಪಾದಕರಾಗಿದ್ದರು.

'ಪಾತಾಳದಲ್ಲಿ ಪಾಪಚ್ಚಿ' (ಶಿಶು ಸಾಹಿತ್ಯ) ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಜನಪ್ರಿಯಗೊಂಡಿರುವ ಪ್ರಸಿದ್ಧ ಕೃತಿ.

---

* ಜೀವಿತಕಾಲ : ಡಿಸೆಂಬರ್ 25, 1897ರಿಂದ ಆಗಸ್ಟ್ 14, 1987. ಹುಟ್ಟಿದ ಊರು : ಕೇರಳದ ತ್ರಿಪ್ಪುನಿತುರ. ಪುಟ 109 ನೋಡಿ.

'ಗಾಳಿಗೋಪುರ' (ಕಾದಂಬರಿ); ಅಣುಕು-ಮಿಣುಕು (ಕವನ ಸಂಕಲನ); ಅನರ್ಥಕೋಶ (ಹಾಸ್ಯ).

**ಸಂಸ* :** (ಎ. ಎನ್. ಸ್ವಾಮಿ ವೆಂಕಟಾದ್ರಿ ಅಯ್ಯರ್)

ಐತಿಹಾಸಿಕ ಘಟನೆಗಳನ್ನು ಯಶಸ್ವಿಯಾಗಿ ನಾಟಕ ಮಾಧ್ಯಮಕ್ಕೆ ಅಳವಡಿಸಿದವರಲ್ಲಿ ಸಂಸರು ಮುಖ್ಯರು. ಇವರ ಬಹಳಷ್ಟು ನಾಟಕಗಳಲ್ಲಿ ದೊರೆಯ ವಿರುದ್ಧದ ಪಿತೂರಿ ಇದಕ್ಕೆ ವಿರುದ್ಧವಾಗಿ ಹೋರಾಡುವ ರಣಧೀರನೊಬ್ಬನ ಪ್ರತಿಕ್ರಿಯೆ ಮುಖ್ಯ ಘಟನೆಗಳಾಗಿರುತ್ತವೆ. ಈ ತರಹ ತಂತ್ರ, ಪ್ರತಿ ತಂತ್ರ ನಾಟಕಗಳಲ್ಲಿ ಕುತೂಹಲ ವನ್ನು ಮೊದಲಿನಿಂದ ಕೊನೆಯ ತನಕ ಕೆರಳಿಸಿಟ್ಟಿರುತ್ತದೆ. ಸಂಸರು ತಮ್ಮ ನಾಟಕಗಳಲ್ಲಿ ಅಳವಡಿಸಿರುವುದು ಹಳಗನ್ನಡ ಮಿಶ್ರಿತಭಾಷೆ, ನಾಂದಿ ಹಾಗೂ ಭರತ ವಾಕ್ಯಗಳು ವೃತ್ತಿಗಳಲ್ಲಿವೆ. ಅಲ್ಲಲ್ಲಿ ಕಂದ ಪದ್ಯಗಳೂ ಇರುತ್ತವೆ. ಸಂಸರು ಸಮರ್ಥ ರಾದ ವಿದ್ವಾಂಸರಾಗಿದ್ದುದರಿಂದ ಹಳಗನ್ನಡವನ್ನು ಹದವರಿತು ಕಿವಿಗೆ ಇಂಪಾಗುವಂತೆ ಉಪಯೋಗಿಸಿದ್ದಾರೆ. ಇವರ ಪ್ರಸಿದ್ಧ ನಾಟಕಗಳು: ನಾಟಕ ಚಕ್ರ, ಬೆಟ್ಟದರಸು, ಮಂತ್ರಶಕ್ತಿ, ಬಿರುದೆಂತೆಂಬರ ಗಂಡ, ಸುಗುಣ ಗಂಭೀರ, ವಿಗಡ ವಿಕ್ರಮರಾಯ, ವಿಜಯನಾರಸಿಂಹ ಮುಂತಾದವುಗಳು.

'ಸಂಸ ಪದ' ಪದ್ಯ ಸಂಗ್ರಹ 'ಶ್ರೀ ಮಂತೋದ್ಯಾನ ವರ್ಣನಂ' ಚಂಪೂಗ್ರಂಥ.

**ಆದ್ಯರಂಗಾಚಾರ್ಯ[2] :** (ಶ್ರೀರಂಗ) 'ಪದ್ಮಭೂಷಣ' ಪ್ರಶಸ್ತಿ ವಿಜೇತರಾದ 'ಶ್ರೀರಂಗ'ರು ಕನ್ನಡ ಸಾರಸ್ವತ ಲೋಕದಲ್ಲಿ ಪ್ರಜ್ವಲಿಸುವ ತಾರೆ. ಬಹುಮುಖ ಪ್ರತಿಭೆಯ ಶ್ರೀಯುತರು ನಾಟಕ ರಂಗದಲ್ಲಂತೂ ಅಪಾರ ಯಶಸ್ಸು ಗಳಿಸಿದ್ದವರು. ಹಲವಾರು ಪ್ರಯೋಗಗಳನ್ನು ಮಾಡಿ ನಾಟಕ ರಂಗಕ್ಕೆ ಹೊಸ ಆಯಾಮ ತಂದುಕೊಟ್ಟ ಕೀರ್ತಿಭಾಜನರು. 1955 ರಲ್ಲಿ ನಡೆದ ರಾಯಚೂರಿನ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು. 1968 ರಲ್ಲಿ ರಾಷ್ಟ್ರೀಯ ಸಂಗೀತ ನಾಟಕ ಅಕಾಡೆಮಿ ಫೆಲೋಶಿಪ್ ಕೊಟ್ಟು ಗೌರವಿಸಿತ್ತು. ಇವರ ಕೃತಿ 'ಕಾಳಿದಾಸ' 1971ರ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿತ್ತು.

ನಾಟಕ ರಂಗಕ್ಕೆ ಶ್ರೀರಂಗರ ಕೊಡುಗೆ ಅಪಾರ. 100 ಕ್ಕೂ ಹೆಚ್ಚು ನಾಟಕ ಗಳನ್ನು (50 ಕ್ಕೂ ಮಿಗಿಲಾಗಿ ಏಕಾಂಕಗಳು, ಸುಮಾರು 35 ದೊಡ್ಡ ನಾಟಕಗಳು

---

* ಜನನ: ಜನವರಿ 1898, ಯಳಂದೂರಿನ ಬಳಿಯ 'ಅಗರ'ದಲ್ಲಿ. ಮರಣ: ಫೆಬ್ರವರಿ 1939. ಇವರು 'ವೆಂಕಟಾದ್ರಿ ಪಂಡಿತ' ಹೆಸರಿನಿಂದಲೂ ಕೃತಿ ರಚನೆ ಮಾಡಿದ್ದಾರೆ. ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 27.

2 ಜೀವಿತಕಾಲ: (26-9-1904 ರಿಂದ 17-10-1984). ಬಿಜಾಪುರ ಜಿಲ್ಲೆಯ ಅಗರ್‌ಖೇಡ್‌ನಲ್ಲಿ ಜನನ. ಇವರ ಪೂರ್ಣ ಹೆಸರು ರಂಗಾಚಾರ್ಯ ವಾಸುದೇವಾಚಾರ್ಯ ಜಾಗೀರ್‌ದಾರ್. ಸಂಸ್ಕೃತ ಅಧ್ಯಾಪಕರು, ಅನಂತರ ವಾರ್ತಾ ಮತ್ತು ಪ್ರಸಾರ ಇಲಾಖೆಯಲ್ಲಿ ಕೆಲಸ, ಬೆಂಗಳೂರಿನ ಆಕಾಶವಾಣಿಯ ನಿರ್ದೇಶಕ ಮುಂತಾದ ಪ್ರತಿಷ್ಠಿತ ವೃತ್ತಿ ನಿರ್ವಹಿಸಿದ್ದರು.

ಮತ್ತು ಪ್ರಹಸನಗಳು) ನೀಡಿದ್ದಾರೆ. ಮುಖ್ಯವಾದವುಗಳು: ಉದರ ವೈರಾಗ್ಯ, ಹರಿಜನ್ವಾರ, ಸಂಸಾರಿಗ, ಕಂಸ, ನರಕದಲ್ಲಿ ನರಸಿಂಹ, ಪ್ರಪಂಚ ಪಾಣಿಪತ್ತು, ಜರಾಸಂಧ, ಕೇಳು ಜನಮೇಜಯ, ರಂಗಭಾರತ, ಕರ್ತಾರನಕಮ್ಮಟ, ಭಾರತ ಭಾಗ್ಯ ವಿಧಾತಾ, ನೀ ಕೊಡೆ ನಾ ಬಿಡೆ, ಶತಾಯು ಗತಾಯು, ಸ್ವರ್ಗಕ್ಕೆ ಮೂರೇಬಾಗಿಲು, ಪರಮೇಶ್ವರ ಪುಲಿಕೇಶಿ, ತಾರಕ ಸಂಹಾರ ಮುಂತಾದವುಗಳು.

'ಭರಮಪ್ಪನ ಭೂತ' ಪತ್ತೇದಾರಿ ಕಾದಂಬರಿ. 'ದಿ ಇಂಡಿಯನ್ ಥಿಯೇಟರ್' ರಂಗಭೂಮಿ ಕುರಿತ ಕೃತಿ. ಪ್ರಕೃತಿ ಪುರುಷ, ವಿಶ್ವಾಮಿತ್ರನ ಸೃಷ್ಟಿ, ಉತ್ತರವಿಲ್ಲದ ಪ್ರಶ್ನೆ, ವಿಷ ಚಕ್ರವ್ಯೂಹ ಮುಂತಾದವು ಕಾದಂಬರಿಗಳು.

ರಾಜ್ಯ ಸಾಹಿತ್ಯ ಅಕಾಡೆಮಿ 1976 ರಲ್ಲಿ ಇವರಿಗೆ ವಿಶೇಷ ಪ್ರಶಸ್ತಿ ನೀಡಿ ಗೌರವಿಸಿತ್ತು.

ಶ್ರೀರಂಗರ ನಾಟಕ ಶೈಲಿಗೆ ಉದಾಹರಣೆಯಾಗಿ ಒಂದು ತುಣುಕು:

2ನೇ ವ್ಯಕ್ತಿ: ನೋಡಿರಿ ರಾಯರ, ಗಂಡ ಹೆಂಡತಿ ಸೀನ್‌ದ ಬಗ್ಗೆ ನೀವು ಕೇಳಿದ್ದು ಬಹಳ ಯೋಗ್ಯ ಅದ. ಯಾಕಂದ್ರ, ಹೇಳಿ ಕೇಳಿ ಸಾಮಾಜಿಕ ನಾಟಕ; ವೇಷ-ಭೂಷಣ ಸೆಟಿಂಗ್ ಇದ್ಯಾವುದರ ಆಡಂಬರ ಇರೋದಿಲ್ಲ. ಅದಕ್ಕೆ ನನಗೇನನ್ನಸ್ತದ ಅಂದ್ರ ಬಡತನ ಮತ್ತು ಪ್ರೇಮ- ಇವೆರಡನ್ನೂ ಸೇರಿಸ್ಬೇಕು.

1ನೇ ವ್ಯಕ್ತಿ: (ನಿಜವಾಗಿ ಚಕಿತನಾಗಿ)
ಬಡತನ ಮತ್ತು ಪ್ರೇಮ! ಅವೆರಡರ ಸಂಬಂಧ?
(ಒಮ್ಮೆಗೇ ಹೊಳೆದಂತಾಗಿ)
ಓಹೊ! ತಿಳೀತು! ಗಂಡ ಬಡವ ಇರ್ಬೇಕು, ಹೆಂಡತಿಯಲ್ಲಿ ಪ್ರೇಮ ಇರ್ಬೇಕು—

3ನೇ ವ್ಯಕ್ತಿ: (ಇದೂ ಒಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು) ಹಹಹ! ಅಲ್ಲ, ರಾಯರ, ಹಾಂಗಲ್ಲ; ಸರಿಯಾಗಿ ಕೇಳಿಕೊಳ್ಳಿರಿ.

1ನೇ ವ್ಯಕ್ತಿ: (2ನೇ ವ್ಯಕ್ತಿಯನ್ನು ನೋಡುತ್ತ)
ಹಾಂಗಲ್ಲ

2ನೇ ವ್ಯಕ್ತಿ: (ಹಿರಿತನದ ನಗೆಯಿಂದ)
ತಕ್ಕಮಟ್ಟಿಗೆ ನಿಮ್ಮ ಊಹೆ ಸರಿಯಾದದ್ದೆ ಅಂತ ಹೇಳ್ಬಹುದು ಗಂಡ ಬಡವ ಇರ್ತಾನ. ನಿಜ; ಆದರೆ ಹುಟ್ಟಾ ಬಡವ ಅಲ್ಲ, ನಿಜವಾಗಿ ಹುಟ್ಟಾ ಶ್ರೀಮಂತ. ಆದರೆ ಹುಡುಗಿ ಹುಟ್ಟಾ ಬಡವಿ. ಮ್ಯಾಲೆ ಅನಾಥಳು. ಆಕೆಯ ಮ್ಯಾಲೆ ಪ್ರೇಮ ಆ ಹುಡುಗನ್ದು. ಆಕೇನ್ನ ಮದುವೆ ಆದರೆ ಮನೆಯಿಂದ ಹೊರಗೆ ಹಾಕ್ತೀನಿ ಅಂತಾನ ಹುಡುಗನ

ತಂದೆ, ಹುಡುಗ ಕೇಳೋದಿಲ್ಲ. ಹುಡುಗೇನ್ನ ಮದುವೆ ಆಗಿಯೆ ಬಿಡ್ತಾನ.............................('ಕತ್ತಲೆ ಬೆಳಕು' ನಾಟಕದಿಂದ)

**ಎಚ್. ಎಲ್. ಎನ್. ಸಿಂಹ* :** (ಲಕ್ಷ್ಮೀನರಸಿಂಹ)

ಇವರು ನಾಟಕ ಕರ್ತೃ, ನಟರು ಹಾಗೂ ಚಲನಚಿತ್ರ ನಿರ್ದೇಶಕರು. ಇಂಗ್ಲೀಷಿನಲ್ಲಿ ನಾಟಕಗಳನ್ನು ರಚಿಸಲು ಪ್ರಾರಂಭಿಸಿ, ಕನ್ನಡದಲ್ಲಿ ಹಲವಾರು ನಾಟಕಗಳನ್ನು ರಚಿಸಿ ಯಶಸ್ಸು ಗಳಿಸಿದ್ದರು. ಚಲನಚಿತ್ರ ಕ್ಷೇತ್ರಕ್ಕೂ ಕಥಾ ಲೇಖಕರಾಗಿ ಗಣನೀಯ ಸೇವೆ ಸಲ್ಲಿಸಿದ್ದರು.

ಇವರ ಪ್ರಸಿದ್ಧ ಕೃತಿಗಳು: ಸಂಸಾರ ನೌಕೆ, ಅಬ್ಬಾ ಆ ಹುಡುಗಿ, ಗುಣಸಾಗರಿ ಮುಂತಾದವುಗಳು.

ಇಂಗ್ಲೀಷ್ ಕೃತಿಗಳು: ಡೆಸ್ಟಿನಿ ರೂಲ್ಸ್. ಹುಮ್ಯಾನಿಟಿ.

**ಪದ್ಮಶ್ರೀ ಜಿ. ಬಿ. ಜೋಶಿ[2] :** (ಗೋವಿಂದ ಭೀಮಾಚಾರ್ಯ ಜೋಶಿ)

ಇವರ ಕಾವ್ಯನಾಮಗಳು 'ಜಡಭರತ' ಹಾಗೂ 'ಅನಾಮಧೇಯ' ಬಹು ಹಳೆಯ ಪ್ರಕಾಶನ ಸಂಸ್ಥೆಯಾದ ಮನೋಹರ ಗ್ರಂಥಮಾಲೆಯ ಸಂಸ್ಥಾಪಕರು. ಹಲವಾರು ಲೇಖಕರನ್ನು ಪ್ರಸಿದ್ಧಿಗೆ ತಂದ ಹೆಗ್ಗಳಿಕೆ ಇವರದು.

ಇವರ ಪ್ರಸಿದ್ಧ ನಾಟಕಗಳಾದ 'ಸತ್ತವರನೆರಳು' 1974ರಲ್ಲೂ, 'ನಾನೇ ಬಿಜ್ಜಳ' 1977ರಲ್ಲೂ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿವೆ.

'ಜಡಭರತರ ಕನಸುಗಳು' ಕುರ್ತುಕೋಟಿಯವರ ಮಾತಿನಲ್ಲೇ ಹೇಳುವುದಾದರೆ 'ಇದೊಂದು ಅಲೌಕಿಕವಾದ ಅಂತಃಸತ್ವದಿಂದ ಕನ್ನಡದಲ್ಲಿಯೇ ಅನನ್ಯವಾದ ಕೃತಿ'.

ಇತರ ಕೃತಿಗಳು: 'ಮೂಕಬಲಿ', 'ಕದಡಿದ ನೀರು', 'ಆ ಊರು ಈ ಊರು', 'ಇನ್ನೊಂದು, ಇನ್ನೊಂದು, ಇನ್ನೊಂದು'.

'ಜೀವಫಲ' ಕವನ ಸಂಕಲನ: 'ಧರ್ಮಸೆರೆ' ಕಾದಂಬರಿ (ಇದು ಚಲನಚಿತ್ರವಾಗೂ ರೂಪುಗೊಂಡಿದೆ.)

**ಕ್ಷೀರಸಾಗರ[3] :** (ಬೆಳಗೆರೆ ಸೀತಾರಾಮಶಾಸ್ತ್ರಿ)

ಗಣಿತ ಶಾಸ್ತ್ರದ ಅಧ್ಯಾಪಕರಾಗಿ ಹಲವಾರು ವರ್ಷ ದುಡಿದು ಈಗ ನಿವೃತ್ತರಾಗಿದ್ದಾರೆ.

---

* ಜೀವಿತಕಾಲ: (1904-1972). ಜನ್ಮಸ್ಥಳ: ಮುಳವಳ್ಳಿ.

2 ಜನನ: ಜನವರಿ 1, 1905. ಧಾರವಾಡ ಜಿಲ್ಲೆಯ 'ಹೊಂಬಳ'. ತಂದೆ: ಭೀಮಾಚಾರ್ಯ ತಾಯಿ: ಭಾರತೀ ಬಾಯಿ. 1986ರಲ್ಲಿ ಇವರಿಗೆ 'ಪದ್ಮಶ್ರೀ' ಪ್ರಶಸ್ತಿ ಲಭಿಸಿದೆ. 1933ರಲ್ಲಿ ಮನೋಹರ ಗ್ರಂಥಮಾಲೆಯನ್ನು ಬೆಟಗೇರಿ ಕೃಷ್ಣಶರ್ಮ ಮತ್ತು ಚುಳಕಿ ಗೋವಿಂದರಾಯರ ಸಹಯೋಗದೊಂದಿಗೆ ಪ್ರಾರಂಭಿಸಿದರು.

3 ಜನನ: ಏಪ್ರಿಲ್ 30, 1906. ಚಿತ್ರದುರ್ಗ ಜಿಲ್ಲೆ 'ಬೆಳಗೆರೆ'. ತಂದೆ: ಚಂದ್ರಶೇಖರ ಶಾಸ್ತ್ರಿ, ತಾಯಿ: ಅನ್ನಪೂರ್ಣಮ್ಮ.

ಇವರ 'ಕ್ಷೀರ ಸಾಗರರ ನಾಟಕಗಳು' ಕೃತಿಗೆ 1968ರಲ್ಲಿ ರಾಜ್ಯ ಸಾಹಿತ್ಯ ಅಕಾಡಮಿಯ ಬಹುಮಾನ ಲಭಿಸಿದೆ. ದೇವರಾಜ ಬಹದ್ದೂರ್ ಬಹುಮಾನ ಲಭಿಸಿದೆ.

ಕೃತಿಗಳು: ಕ್ಷೀರ ಸಾಗರರ ನಾಟಕಗಳು ಭಾಗ 1, 2, ಆಶಾಭಂಗ, ಒಡೆದ ಕನ್ನಡಿ, ನಿಶ್ಚಿತಾರ್ಥ, ಕಲಹ ಕುತೂಹಲ, ಶಾಮಣ್ಣನ ಸಾಹಸ, ಲಾಯರ್ ಪ್ರಯಾಣ, ರೂಪಾಯಿ ಗಿಡ. ಪೀಳ್ಯ (ಕಾದಂಬರಿ/ಕಥಾಸಂಕಲನ) ನೆಪೋಲಿಯನ್ ಬೋನಪಾರ್ಟೆ (ಜೀವನ ಚರಿತ್ರೆ.)

**ಕೃಷ್ಣಕುಮಾರ ಕಲ್ಲೂರ**[1] **:** ಅಪ್ರತಿಮ ಕನ್ನಡಿಗ. ನಿಸ್ವಾರ್ಥ ರಾಷ್ಟ್ರ ಪ್ರೇಮಿ. ಕರ್ನಾಟಕ ರಾಜ್ಯ ಸ್ಥಾಪನೆಗಾಗಿ ಶ್ರಮಿಸಿದ ಕಟ್ಟಾಳು. ಇವರು ಹೆಸರಾಂತ ನಾಟಕಕಾರರಾಗಿದ್ದುದಲ್ಲದೆ ಒಳ್ಳೆಯ ಕತೆಗಾರರೂ ಆಗಿದ್ದರು. 'ನುಡಿ'. 'ಕರ್ಮವೀರ' ಮುಂತಾದ ಪತ್ರಿಕೆಗಳೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ಧಾರವಾಡದ ಸಾಮಾಜಿಕ ಹಿನ್ನಲೆಯಲ್ಲಿ ಬರೆದ ಮಿಸ್ ಚಾರುಗಾತಿ. ರಾಯರ ಮದುವೆ, ಮನೆಹೊಕ್ಕ ಮಾರವಾಡಿ, ದೆವ್ವಗಳ ದೆವ್ವ. ತಿರುಕನ ಪಿಡುಗು, ಮಿಂಚಿನಮುಡಿ, ಮುಂತಾದುವು ಗಳನ್ನು ರಚಿಸಿದ್ದಲ್ಲದೆ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ 'ಜಾಗೃತರಾಷ್ಟ್ರ' ಎಂಬ ನಾಟಕವನ್ನೂ ರಚಿಸಿದ್ದರು. ಇದು ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ಜಯಭೇರಿ ಹೊಡೆದಿತ್ತು. ಈ ನಾಟಕಕ್ಕೆ 1955ರಲ್ಲಿ ಮುಂಬಯಿ ಸರಕಾರ ಪ್ರಥಮ ಬಹುಮಾನ ನೀಡಿತ್ತು. ಅನೇಕ ಏಕಾಂಕಗಳನ್ನು ರಚಿಸಿ ತಾವೇ ಹಲವೆಡೆ ಪ್ರದರ್ಶಿಸಿದ್ದು ಇವರ ಇನ್ನೊಂದು ಹೆಗ್ಗಳಿಕೆ. ಮಂಗನ ಮೆರವಣಿಗೆ, ಬಿಸಿಲು ಗುದುರೆ ಮುಂತಾದ ಕಥಾ ಸಂಗ್ರಹಗಳು ಹೊರಬಂದು ಬಹಳ ಹೆಸರು ಗಳಿಸಿದ್ದವು.

ಇತರ ಕೃತಿಗಳು: ತಾಮ್ರದ ದುಡ್ಡು. ಒಂದು ನೆನಪು, ಜೀವನ, ಜನುಮದ ಜೋಡಿ, ಕಾವ್ಯ ಭಂಡಾರ.

**ಪರ್ವತವಾಣಿ**[2] **:** (ನರಸಿಂಗರಾವ್ ಪರ್ವತವಾಣಿ)

ನಟರಾಗಿ ನಾಟಕ ರಂಗ ಪ್ರವೇಶಮಾಡಿ ನಾಟಕಕಾರನಾಗಿ ಅಪೂರ್ವ ಯಶಸ್ಸು ಗಳಿಸಿದ ವ್ಯಕ್ತಿ ಪರ್ವತವಾಣಿ. ಸಂಗೀತದಲ್ಲಿದ್ದ ಆಸಕ್ತಿ ಇವರನ್ನು ನಾಟಕರಂಗಕ್ಕೆ ಆಕರ್ಷಿಸಿತು. ಕೈಲಾಸಂ, ಮೂರ್ತಿರಾವ್, ಎಂ. ಆರ್. ಶ್ರೀ. ಕುವೆಂಪು ಮೊದಲಾದ ವರುಗಳ ನಾಟಕಗಳನ್ನು ಅಭಿನಯಿಸಿ ಯಶಸ್ಸು ಗಳಿಸಿದರು. 'ಮಾಲತಿ' 1939 ರಲ್ಲಿ ಇವರು ರಚಿಸಿದ ಮೊದಲ ನಾಟಕ. ಇದು ಯಶಸ್ವಿಯಾಗಿ ಪ್ರದರ್ಶನಗೊಂಡ ಮೇಲೆ

---

1 ಜೀವಿತಕಾಲ: (1909-1982) ಹುಟ್ಟಿದ ಊರು: ಧಾರವಾಡ ಜಿಲ್ಲೆಯ ಕಲ್ಲೂರ. ತಂದೆ: ಅನಂತರಾಯ; ತಾಯಿ: ರಾಧಾಬಾಯಿ.

2 ಜನನ: ಸೆಪ್ಟೆಂಬರ್ 2, 1911. ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಪರ್ವತ ವಾಡಿಯಲ್ಲಿ.

ಹೊಸ ಹುರುಪಿನಿಂದ ನಾಟಕಗಳ ರಚನೆಗೆ ತೊಡಗಿದರು. ಇದುವರೆವಿಗೆ ಇವರು 75ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. ಕೆಲವು ಗೋಲ್ಡ್‌ಸ್ಮಿತ್, ಮೋಲೆಯಾರ್, ಚೆಕಾಫ್, ಗಾರ್ಕಿ, ವೈಲ್ಡ್ ಮುಂತಾದವರುಗಳ ಕೃತಿಗಳ ರೂಪಾಂತರವಾದರೂ ನಮ್ಮ ದೇಶದ ವಾತಾವರ್ಣಕ್ಕೆ ಚೆನ್ನಾಗಿ ಅಳವಡಿಸಿದ್ದಾರೆ. 'ಬಹದ್ದೂರ್ ಗಂಡ' ನೂರಾರು ಬಾರಿ ಪ್ರದರ್ಶನಗೊಂಡಿರುವ ಜನಪ್ರಿಯ ನಾಟಕ. ಇವರ ಇತರ ನಾಟಿಕಗಳು : ಉಂಡಾಡಿಗುಂಡ, ವಿಪರ್ಯಾಸ, ರಣಹದ್ದು, ಕಾಡ್ಮನ್ನ, ಮಿಸಾ ಮದುವೆ, ರೋಗಾಲಾಪನೆ, ನಾಯಿ ಬಾಲ, ರಿಟೈರ್ಮೆಂಟ್, ಪಾಚೋ ಪಾಪಚ್ಚಿ ಪಾಕೋ, ತಿನ್ನ ಬೇಕೆ ತಿಂದು ಕುಡಿಯಬೇಕೆ, ಬಾರೋ ಪ್ರಿಯಾ ಸುಕುಮಾರ, ಹಗ್ಗದ ಕೊನೆ, ಮುಕುತಿ ಮೂಗುತಿ ಮುಂತಾದವುಗಳು—ಇವರ 'ಕವಿಭಿಕ್ಷೆ' ನಾಟಕಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ. 1970 ರಲ್ಲಿ ಸಾಹಿತ್ಯ ಪರಿಷತ್ತು ತನ್ನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಇವರನ್ನು ಸನ್ಮಾನಿಸಿದೆ. ರಾಜ್ಯ ಸಾಹಿತ್ಯ ಅಕಾಡೆಮಿ 1974 ರಲ್ಲಿ ವಿಶೇಷ ಪ್ರಶಸ್ತಿ ನೀಡಿ ಗೌರವಿಸಿದೆ.

**ಕೈವಾರ ರಾಜಾರಾಯರು**[1] **:** ನಾಟಕ ರಚನೆಯಲ್ಲಿ ಚಿರಪರಿಚಿತ ಹೆಸರು. ಪೂರ್ಣಾವಧಿಯ ಸುಮಾರು ಹತ್ತು ನಾಟಕಗಳನ್ನೂ, ಐವತ್ತಕ್ಕೂ ಮೀರಿ ಏಕಾಂಕಗಳನ್ನೂ ರಚಿಸಿರುವ ಹೆಗ್ಗಳಿಕೆ ಇವರದು. ಇವರ ನಾಟಕಗಳು ದೇಶಾದ್ಯಂತ ಐದುನೂರಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿವೆ.

1960 ರಲ್ಲಿ ಭವಾನ್ಸ್ ಜರ್ನಲ್ ಏರ್ಪಡಿಸಿದ್ದ ಏಕಾಂಕ ನಾಟಕ ಸ್ಪರ್ಧೆಯಲ್ಲಿ ಇವರ 'ದಿ ಅಕ್ಯೂಸ್ಡ್' ನಾಟಕ ಪ್ರಥಮ ಬಹುಮಾನ ಗಳಿಸಿ ಅದೇ ಪತ್ರಿಕೆಯಲ್ಲಿ ಪ್ರಕಟಗೊಂಡು ಅಪಾರ ಜನಮೆಚ್ಚುಗೆ ಗಳಿಸಿತ್ತು.

ಇವರ ಹೆಸರಾಂತ ಕೃತಿಗಳು : ಬುಡುಬುಡಿಕೆ, ಅಪ್‌ಟು ಡೇಟ್ ಅಮ್ಮಯ್ಯ, ಸಂಸಾರ ಸತ್ಯಾಗ್ರಹ, ದಿಳ್ಳಿಯಿಂದ ಹಳ್ಳಿಗೆ, ಕಡೇ ದಿನ, ಬುದ್ಧಿವಂತಿಕೆ, ಮದುವೆ ಕರಾರು, ತಪ್ಪಾರದು. (ದೊಡ್ಡ ನಾಟಕಗಳು) ಗಂಡನ ಜುಲ್ಮಾನೆ, ಬೇಸ್ತು, ಪತ್ರ ಪ್ರಮಾದ ಮುಂತಾದವು ಏಕಾಂಕಗಳು.

ನವ ದಂಪತಿಗಳು, ಭಾರತರತ್ನ ಜವಾಹರ್ (ಇತರ ಕೃತಿಗಳು).

**ಎನ್ಕೆ**[2] (ಎನ್. ಕೆ. ಕುಲಕರ್ಣಿ—ನಾರಾಯಣ ಕೃಷ್ಣ ಕುಲಕರ್ಣಿ)

ಹೆಸರಾಂತ ನಾಟಕಕಾರ, ಶಿಕ್ಷಕ, ಸಂಪಾದಕ ಹಾಗೂ ಸಂಶೋಧಕ.

25 ವರ್ಷಕ್ಕೂ ಹೆಚ್ಚು ಕಾಲ ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿರುವ ಶ್ರೀಯುತರು ಒಂದು ನೂರಕ್ಕೂ ಹೆಚ್ಚು ಏಕಾಂಕ ನಾಟಕಗಳನ್ನು ರಚಿಸಿದ್ದಾರೆ. 'ಕವಿ ಹೃದಯ

---

1 ಜನನ : ಫೆಬ್ರುವರಿ 29, 1912. ಬಿ.ಎ. ಪದವೀಧರರು. ಕರ್ನಾಟಕದಲ್ಲಿ ಶೀಘ್ರಲಿಪಿ ಕಲಿಕೆ ಏರಡನೆಯವರು.

2 ಜನನ : ಆಗಸ್ಟ್ 29, 191?, ಗದಗದಲ್ಲಿ.

ಕಣ್ತೆರೆದಿತ್ತು' ಮತ್ತು 'ಪಲ್ಲವಿ' ರಾಷ್ಟ್ರೀಯ ನಾಟಕಗಳಾಗಿ ಎಲ್ಲ ಭಾರತೀಯ ಭಾಷೆಗಳಲ್ಲಿ ಪ್ರಸಾರಗೊಂಡಿವೆ. 'ದಲಿತ ದುಂದುಭಿ' ನಾಟಕ ಅಖಿಲ ಭಾರತ ಆಕಾಶವಾಣಿ ರಾಷ್ಟ್ರೀಯ ಪ್ರಶಸ್ತಿ ಗಳಿಸಿದೆ. 'ಮಂದಿರ ಪ್ರವೇಶ'ಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಬಹುಮಾನ ದೊರೆತಿದೆ.

ಮುಂಗಾಲ್‌ಪುಟಿಗೆ, ಮೊಡಕಾಬಜಾರ್, (ಪ್ರಬಂಧಗಳು) ಎರಡನೆಯ ಸಂಬಂಧ, ವೈಸಿ ಮುಂತಾದ 8 ಕಾದಂಬರಿಗಳನ್ನು ರಚಿಸಿದ್ದಾರೆ.

ಸವಾಯಿಗಂಧರ್ವರ ಮತ್ತು ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಜೀವನ ಚರಿತ್ರೆಯನ್ನು ರಚಿಸಿದ್ದಾರೆ. ಗದುಗಿನ ಗಂಡುಕವಿ ಕುಮಾರವ್ಯಾಸ, ಕುಮಾರವ್ಯಾಸ ಮತ್ತು ಕೃಷ್ಣಕತೆ, ಕುಮಾರವ್ಯಾಸ ಕೋಶ, ವ್ಯಾಸ ಭಾರತ (ಇತರ ಕೃತಿಗಳು).

**ಹುಣಸೂರು ಕೃಷ್ಣಮೂರ್ತಿ[1] :** ನಾಟಕ ರಂಗದಲ್ಲಿ ಹೆಸರಾಂತ ಹೆಸರು. ಒಳ್ಳೆಯ ನಟರಾಗಿ, ಲೇಖಕರಾಗಿ, ಚಲನಚಿತ್ರಗಳ ಸಾಹಿತಿಯಾಗಿ ಅತ್ಯಂತ ಜನಪ್ರಿಯರಾಗಿದ್ದಾರೆ. 'ಧರ್ಮ ರತ್ನಾಕರ' ನಾಟಕ ರಂಗಭೂಮಿಯಲ್ಲಿ ಯಶಸ್ಸಿನ ವಿಕ್ರಮ ಸಾಧಿಸಿದೆ.

'ರಾಜಾ ಗೋಪಿಚಂದ್' ನಾಟಕಕ್ಕೆ ಬರೆದ ಸಂಭಾಷಣೆ ರಾಜಮನ್ನಣೆ ಗಳಿಸಿತ್ತು.

ಇವರ ಅನೇಕ ಚಿತ್ರಗಳಿಗೆ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಗಳು ಲಭಿಸಿವೆ.

**ಸೋರಟ್ ಅಶ್ವಥ್[2] :** ಇವರೂ ನಟರಾಗಿ ರಂಗ ಪ್ರವೇಶಿಸಿ ಸಾಹಿತಿಯಾಗಿ ಅಪಾರ ಯಶಸ್ಸು ಗಳಿಸಿದರು. ಚಲನಚಿತ್ರ ಕ್ಷೇತ್ರ ಪ್ರವೇಶಿಸಿದ ನಂತರ ಮತ್ತಷ್ಟು ಪ್ರಖ್ಯಾತಿಗೆ ಬಂದರು. ಶ್ರೀಯುತರು 30ಕ್ಕೂ ಹೆಚ್ಚು ಚಲನಚಿತ್ರಗಳಿಗೆ ಸಾಹಿತ್ಯ ರಚಿಸಿದ್ದಾರೆ.

ಪ್ರಸಿದ್ಧ ನಾಟಕಗಳು : ನಂದಾದೀಪ, ನವಜೀವನ, ಜೇನುಗೂಡು ಮುಂತಾದವು.

**ಕೆ. ವಿ. ಶಂಕರೇಗೌಡ[3] :** ರಾಜಕಾರಣದಲ್ಲಿದ್ದು ಸಾಹಿತ್ಯದಲ್ಲಿ ಆಸಕ್ತಿ ಉಳಿಸಿಕೊಂಡಿರುವ ಸದಭಿರುಚಿಯ ಸುಸಂಸ್ಕೃತರು, ನಾಟಕಾಭಿಮಾನ. ನಾಟಕದಲ್ಲಿ ಆಸಕ್ತಿ ವಂಶಪಾರಂಪರ್ಯವಾಗಿ ಬಂದಿದ್ದ ಗುಣ. ಅಣ್ಣನೂ ಒಳ್ಳೆಯ ರಂಗ ಕಲಾವಿದ. ತಂದೆ ವೀರೇಗೌಡರು ಭಾರತ, ರಾಮಾಯಣ ಹಾಡುವುದರಲ್ಲಿ ನಿಷ್ಣಾತರು. ಈ ಉನ್ನತ ಸಂಸ್ಕಾರವೇ ಇವರ ಧಮನಿಯಲ್ಲೂ ಹರಿಯುತ್ತಿದೆ. ಸತ್ಯನಿಷ್ಠುರತೆಗೆ ಹೆಸರಾದವರು. ರಾಜಕೀಯ ಗಾದಿಗೆ ಎಂದೂ ಆಸೆಪಟ್ಟವರಲ್ಲ.

---

1 ಜನನ : ಫೆಬ್ರವರಿ 9, 1914. ಮೈಸೂರು ಜಿಲ್ಲೆಯ ಹುಣಸೂರಿನವರು. ಗುಬ್ಬಿ ಕಂಪನಿಯಲ್ಲಿ ನಟರಾಗಿ, ಸಾಹಿತಿಯಾಗಿ ಪ್ರಸಿದ್ಧಿಗೆ ಬಂದು ಚಲನಚಿತ್ರ ಕ್ಷೇತ್ರಕ್ಕೆ ಪ್ರವೇಶ.

2 ಜನನ : ಫೆಬ್ರವರಿ 20, 1915. ನಂಜನಗೂಡಿನಲ್ಲಿ. ತಂದೆ : ನರಸಿಂಹಶಾ[illegible]

3 ಜನನ : 1915. ಪಾರ್ಲಿಮೆಂಟ್ ಸದಸ್ಯರು. ಕರ್ನಾಟಕ [illegible] ಮಂತ್ರಿಗಳಾಗಿದ್ದರು.

ಕೃತಿಗಳು : ಪಾದುಕಾ ಕಿರೀಟ, ಶಿಷ್ಟಾಚಾರ, ಕೂಡಿ ಬಾಳೋಣ (ಚಲನಚಿತ್ರವಾಗಿದೆ.)

ಗಾಂಧೀಜಿಯ ಬಗ್ಗೆ ಪ್ಯಾರೇಲಾಲ್ ಬರೆದಿರುವ ಗ್ರಂಥವನ್ನು 'ಕೊನೆಯ ಹಂತ' ಹೆಸರಿನಲ್ಲಿ ಅನುವಾದಿಸಿದ್ದಾರೆ.

'ಜನಮನ' ಇವರು ಕೆಲಕಾಲ ನಡೆಸಿದ್ದ ಪತ್ರಿಕೆ.

**ಜಿ. ವಿ. ಅಯ್ಯರ್[1] :** ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಖ್ಯಾತಿ ಗಳಿಸಿರುವ ಪ್ರತಿಭಾವಂತ.

ಇವರು ಒಳ್ಳೆಯ ನಟರು. ಉತ್ತಮ ಸಂಭಾಷಣೆ-ಗೀತೆ ರಚನಕಾರರೂ ಹೌದು. 'ಆದಿಶಂಕರಾಚಾರ್ಯ'ದಂಥ ಉತ್ಕೃಷ್ಟ ಚಲನಚಿತ್ರವನ್ನು ನಿರ್ಮಿಸಿದ ಕೀರ್ತಿ ಇವರದು. ಸಂಸ್ಕೃತದಲ್ಲಿ ಹೊರಬಂದ ಪ್ರಥಮ ಚಲನಚಿತ್ರ ಇದು. ಇದಕ್ಕೆ ರಾಷ್ಟ್ರ ಪ್ರಶಸ್ತಿ ದೊರೆತಿದೆ. ಕರ್ನಾಟಕ ರಾಜ್ಯವೂ ಇವರ ಅಮೂಲ್ಯ ಸೇವೆಯನ್ನು ಗುರುತಿಸಿ 1985-86ರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

ಇವರು ಹಲವಾರು ಉತ್ತಮ ನಾಟಕಗಳನ್ನು ರಚಿಸಿದ್ದಾರೆ. ಮುಖ್ಯವಾದವುಗಳು : ಕಾಲಚಕ್ರ, ಅಡ್ಡದಾರಿ, ಸೀದರಕಣ್ಣಪ್ಪ.

**ಗರೂಡ ಶ್ರೀಪಾದರಾವ್[2] :** ತಂದೆ ಸದಾಶಿವರಾಯರಂತೆ ಮಗನೂ ರಂಗಭೂಮಿಯಲ್ಲಿ ಮೆರೆದ ಅವಿಸ್ಮರಣೀಯ ವ್ಯಕ್ತಿ. ತಮ್ಮ 6ನೇ ವಯಸ್ಸಿನಲ್ಲೇ ರಂಗಪ್ರವೇಶ ಮಾಡಿದವರು. ತಮ್ಮ ಇಳಿ ವಯಸ್ಸಿನಲ್ಲೂ ಇದರ ಉನ್ನತಿಗಾಗಿ ಶ್ರಮಿಸುತ್ತಿದ್ದಾರೆ. ಇವರ ರಂಗಭೂಮಿಯ ಸೇವೆಗಾಗಿ ಕರ್ನಾಟಕ ಸರ್ಕಾರ 1984-85ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ಇವರು ನಾಟಕ ಕರ್ತೃಗಳಲ್ಲದೆ ಒಳ್ಳೆಯ ದಿಗ್ದರ್ಶಕರು ಹಾಗೂ ನಟರು.

ಕೃತಿಗಳು : ಸತ್ಯ ಸಂಕಲ್ಪ, ಕನ್ನಡದ ಕಿಡಿ, ಉಗ್ರ ಕಲ್ಯಾಣ (ತಂದೆ ಅರ್ಧ ಬರೆದಿದ್ದ ಈ ನಾಟಕವನ್ನು ಇವರು ಪೂರ್ಣಗೊಳಿಸಿದರು) ; ಮೇಳ, ಶ್ರೀಗಿರಿರತ್ನ, ಸಾಮ್ರಾಜ್ಯದೇವಿ, ನಮ್ಮ ನಮ್ಮವರು ಮುಂತಾದವು.

**ದಾಶರಥಿ ದೀಕ್ಷಿತ್[3] :** ಹಿಂದೂಸ್ಥಾನ ವಿಮಾನ ಕಾರ್ಖಾನೆಯಲ್ಲಿ ಉದ್ಯೋಗದಲ್ಲಿದ್ದು ನಿವೃತ್ತರಾಗಿದ್ದಾರೆ. ಇದಕ್ಕೆ ಮುಂಚೆ ಸರ್ಕಾರದ ವಿದ್ಯುಚ್ಛಕ್ತಿ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದರು.

---

1 ಜನನ : ಅಕ್ಟೋಬರ್ 3, 1917.

2 ಜನನ : 1917, ಕುಂದಾಪುರದಲ್ಲಿ. ತಂದೆ : ಗರೂಡ ಸದಾಶಿವರಾಯರು, ತಾಯಿ : ಭೀಮವ್ವ.

3 ಜನನ : ಫೆಬ್ರವರಿ 6, 1921. ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯಲ್ಲಿ, ತಂದೆ : ಗಿರಿದೀಕ್ಷಿತ ಬಾಳಾಜಿ. ತಾಯಿ : ರಂಗೋಬಾಯಿ.

'ಕೊರವಂಜಿ' ಇದ್ದಷ್ಟು ಕಾಲವೂ ಅದರೊಡನೆ ನಿಕಟ ಸಂಪರ್ಕ ಇರಿಸಿ ಕೊಂಡಿದ್ದರು. ಪಕೋಡಪ್ಪಿಯ, ದಫೇದಾರ್ ದೇರಣ್ಣ, ಗಾಂಪರು ಇವರು ಸೃಷ್ಟಿಸಿದ ವೈಶಿಷ್ಟ್ಯಪೂರ್ಣ ಪಾತ್ರಗಳು.

ದೀಕ್ಷಿತರಿಗೆ ನಾಟಕ ರಚಿಸುವಲ್ಲಿ ಆಸಕ್ತಿ ಇದ್ದಂತೆ ನಾಟಕದಲ್ಲಿ ಪಾತ್ರವಹಿಸು ವುದರಲ್ಲೂ ಇದೆ. ಇವರು ಹಾರ್ಮೋನಿಯಂ ಪ್ರವೀಣರೂ ಹೌದು.

'ಅಜ್ಜಿ ಆಸ್ತಿ' ಮೊದಲ ನಾಟಕ. 'ಅಳಿಯ ದೇವರು' ಅತ್ಯಂತ ಜನಪ್ರಿಯ ನಾಟಕ. ದೇಶಾದ್ಯಂತ ಯಶಸ್ವಿಯಾಗಿ ಪ್ರದರ್ಶಿಸಲ್ಪಟ್ಟಿದೆ. ದೀಕ್ಷಿತರಿಗೆ ಸೂತ್ರದ ಬೊಂಬೆ ಆಟದಲ್ಲೂ ಆಸಕ್ತಿ ಇದೆ. ಒಂದು ಸಂಸ್ಥೆ ಕಟ್ಟಿ ಹಲವಾರು ಹಾಸ್ಯ ನಾಟಕ ಪ್ರದರ್ಶನ ನೀಡಿದ್ದಾರೆ.

ಇವರ ಕೃತಿಗಳು: ಗಾಂಪರ ಗುಂಪು, ದಸರಾ ಬೊಂಬೆ, ಬೆಡಗಿನ ಬಲೆ, ಉತ್ಸವ ಮೂರ್ತಿ, ಅನುರಾಗ ಸುಧಾ, ಲಂಬೋದರ, ಪ್ರೇತ ಸಂಹಾರ, ಕನ್ನಡದ ಗಾಡಿ, ಮಾವನ ಮನೆ, ಗಂಡಾಗಿ ಕಾಡಿದ್ದ ಗುಂಡು, ಮರಳಿ ಮಠಕ್ಕೆ, ಅಜ್ಜನ ಅವಾಂತರ, ಸಿಡ್ಲುಮರಿ, ಗಂಡನ ಪೂಜೆ, ಬೆದರುಗೊಂಬೆ - ಮುಂತಾದವು.

**ಆರ್. ಡಿ. ಕಾಮತ್**[1]**:** ಮರಾಠಿ, ಹಿಂದಿಯಲ್ಲೂ ಸಹ ಒಳ್ಳೆಯ ಪಾಂಡಿತ್ಯ ಗಳಿಸಿರುವ ಇವರು ಆ ಭಾಷೆಗಳಲ್ಲೂ ಕೃತಿ ರಚಿಸಿದ್ದಾರೆ. ಭಾರತೀಯ ವಿದ್ಯಾ ಭವನದಲ್ಲಿ ನಾಟ್ಯ ಶಿಕ್ಷಕರಾಗಿದ್ದರು.

ಇವರು ರಂಗನಾಟಕ ಹಾಗೂ ಏಕಾಂಕಗಳನ್ನೂ ರಚಿಸಿದ್ದಾರೆ. ಕೊಂಕಣಿ ಭಾಷೆಯಲ್ಲೂ ಕೃತಿ ರಚಿಸಿದ್ದಾರೆ. ಕೃತಿಗಳ ಸಂಖ್ಯೆ ಸುಮಾರು 60.

ಮುಖ್ಯ ಕೃತಿಗಳು: ಹೃದಯ ದೇಗುಲ, ದೇವರ ಕಣ್ಣು, ಟಿಪ್ಪುಸುಲ್ತಾನ್, ಜ್ವಾಲಾಮುಖಿ, ನಾರದ-ನಾರದಿ, (ದೊಡ್ಡ ನಾಟಕಗಳು); ಮಾನವತಿ, ಏಕಲವ್ಯ, ಇನ್ನಿಲ್ಲದವರು, ಸಾಕ್ರೆಟೀಸ್, ಕನ್ನಡಮ್ಮನ ಗುಡಿಯಲ್ಲಿ, ಪೋಸ್ಟ್ ಮಾಸ್ಟರ್, ಕನಕನ ಕಿಂಡಿ (ಏಕಾಂಕಗಳು).

**ಡಾ॥ ಹೆಚ್.ಕೆ. ರಂಗನಾಥ್**[2]**:** ನಟರು, ನಾಟಕಕಾರರು ಹಾಗೂ ಹೆಸರಾಂತ ನಿರ್ದೇಶಕರು. ರಂಗಭೂಮಿ ಕುರಿತೇ ಪ್ರೌಢ ಪ್ರಬಂಧ ಮಂಡಿಸಿ ಡಾಕ್ಟರೇಟ್ ಗಳಿಸಿದ್ದಾರೆ. ಸರಕಾರಿ ಉದ್ಯಮದಲ್ಲೂ ಸಹ ಇವರು ಹಲವಾರು ಪ್ರಮುಖ ಹುದ್ದೆ ಗಳನ್ನು ನಿರ್ವಹಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕಗಿರಿ, ಕೇಂದ್ರ ಸಂಗೀತ, ನಾಟಕ ವಿಭಾಗದ ಡೆಪ್ಯುಟಿ ಡೈರೆಕ್ಟರ್, ಜಂಟೀ ನಿರ್ದೇಶಕ ಹಾಗೂ ಆಕಾಶವಾಣಿಯಲ್ಲಿ ಹಲವು ಹುದ್ದೆಗಳು. ಈಗ ಭಾರತೀಯ ವಿದ್ಯಾಭವನ ಕಾರ್ಯ-ಕ್ರಮಗಳ ನಿರ್ದೇಶಕರಾಗಿದ್ದಾರೆ.

---

1 ಜನನ: ಜೂನ್ 6, 1923, ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ.

2 ಜನನ: ಆಗಸ್ಟ್ 8, 1924.

ಕೃತಿಗಳು: ಅಮೃತವರ್ಷ, ಮೂರು ಪ್ರಹಸನಗಳು, ಪಾಕಶಾಸ್ತ್ರ, ಕನ್ನಡ ನಾಟಕ ಕಲೆ, ಬಣ್ಣ-ಬೆಳಕು, ಕರ್ನಾಟಕ ರಂಗಭೂಮಿ.

'ವಿಷಕನ್ಯೆ' ನಾಟಕಕ್ಕೆ ಮೈಸೂರು ಸರಕಾರದ ಪ್ರಶಸ್ತಿ, 'ಜಾಗೃತ ಭಾರತಿ'ಗೆ ಮೋತಿಲಾಲ್ ಶತಮಾನೋತ್ಸವ ಪ್ರಶಸ್ತಿ ಲಭಿಸಿವೆ.

**ಕಣಗಾಲ್ ಪ್ರಭಾಕರಶಾಸ್ತ್ರಿ**[1]**:** ಕನ್ನಡ, ಸಂಸ್ಕೃತ, ಇಂಗ್ಲೀಷಿನಲ್ಲಿ ಪ್ರೌಢಿಮೆಗಳಿಸಿರುವ ಇವರು ನಾಟಕ ಕ್ಷೇತ್ರದಲ್ಲಿ ನಟರಾಗಿ, ಸಾಹಿತಿಯಾಗಿ, ಪ್ರಸಿದ್ಧಿಗೆ ಬಂದಿದ್ದಾರೆ. ಚಲನಚಿತ್ರ ಕ್ಷೇತ್ರಕ್ಕೂ ಇವರು ಲೇಖಕರಾಗಿ, ಗೀತರಚನಕಾರರಾಗಿ, ನಿರ್ದೇಶಕರಾಗಿ ಅಪಾರ ಕೊಡುಗೆ ನೀಡಿದ್ದಾರೆ.

ಕೃತಿಗಳು: ಸ್ವರ್ಣಸೀತಾ, (19ನೇ ವಯಸ್ಸಿನಲ್ಲೇ ರಚಿಸಿದ ಕೃತಿ). ಪ್ರತಿಕಾರ, ಪ್ರಚಂಡ ರಾವಣ ಮುಂತಾದವು.

**ವಿಜಯನಾರಸಿಂಹ:**[2] ಒಳ್ಳೆಯ ನಾಟಕಕಾರರು. ಜನಪ್ರಿಯ ಚಲನಚಿತ್ರ ಸಾಹಿತಿ.

ಕೃತಿಗಳು: ಒಲವಿನ ಬಲಿ, ಸ್ವಪ್ನಫಲ, ಬದುಕಿನ ಬೈರಾಗಿ, ತಬ್ಬಲಿ, ಭಾಗ್ಯನೌಕೆ.

**ಹೆಚ್. ಕೆ. ಯೋಗಾ ನರಸಿಂಹ**[3]**:** ಉತ್ತಮ ನಾಟಕಕಾರ, ಕವಿ, ಹಾಗೂ ಚಿತ್ರ ಸಾಹಿತಿ. ಕರ್ನಾಟಕ ನಾಟಕ ಅಕಾಡೆಮಿ 1983ರಲ್ಲಿ ಇವರಿಗೆ ಪ್ರಶಸ್ತಿ ನೀಡಿ ಸನ್ಮಾನಿಸಿದೆ. ಅನೇಕ ಚಲನಚಿತ್ರಗಳಿಗೆ ಚಿತ್ರಕಥೆ, ಸಂಭಾಷಣೆ ಬರೆದಿದ್ದಾರೆ. ಕೆಲವು ಚಿತ್ರಗಳನ್ನು ನಿರ್ದೇಶಿಸಿಯೂ ಇದ್ದಾರೆ. ಹಿರಣ್ಣಯ್ಯ ಮಿತ್ರ ಮಂಡಲಿಗೆ ಹೆಚ್ಚಿನ ಸೇವೆ ಸಲ್ಲಿಸಿದ್ದಾರೆ. ರಾಜಾವಿಕ್ರಮ, ಚಂದ್ರಹಾಸ, ಬಿಕನಾಸಿ, ಹೆಣ್ ಹರಾಜು, ಶ್ರೀಮದ್ರಾಮಾರಮಣಗೋವಿಂದ ಇವರು ಬರೆದು ನಿರ್ದೇಶಿಸಿದ ನಾಟಕಗಳು. 'ಸರ್ವೋದಯ ನಾಟಕ ಮಂಡಲಿ' ಇವರು ನಡೆಸಿ ಕೈ ಸುಟ್ಟುಕೊಂಡ ಸ್ವಂತ ನಾಟಕ ಮಂಡಲಿ. 'ಚಿ-ಕಳ್ಳಭಟ್ಟ' ಯೋಗಾರ ಅತ್ಯುತ್ತಮ ನಾಟಕ. 'ಶುಭಮಂಗಳ' ಚಿತ್ರಕ್ಕೆ ಸಂಭಾಷಣೆ ಬರೆದು ಚಿತ್ರರಂಗಕ್ಕೆ ಇವರು ಪದಾರ್ಪಣೆ ಮಾಡಿ, ಅನಂತರ ಹಲವಾರು ಚಿತ್ರಗಳ ಯಶಸ್ಸಿಗೆ ಕಾರಣರಾಗಿದ್ದಾರೆ. 'ರಂಗನಾಯಕಿ' ಗೂ ಸಂಭಾಷಣೆ ರಚಿಸಿದ ಯಶಸ್ಸು ಇವರದು.

---

1 ಜನನ: ನವೆಂಬರ್ 17, 1927, ಪಿರಿಯಾಪಟ್ಟಣ ತಾಲ್ಲೂಕಿನ ಕಣಗಾಲು ಬಳಿಯ ರಾಜನ ಬಿಲುಗುಲಿಯಲ್ಲಿ. ತಂದೆ: ಎಸ್. ವಿ. ರಾಮಸ್ವಾಮಯ್ಯ, ತಾಯಿ: ಸುಬ್ಬಮ್ಮ.

2 ಜನನ: ಜನವರಿ 16, 1927, ಮಂಡ್ಯಜಿಲ್ಲೆಯ ಹಳೇಬೀಡುವಿನಲ್ಲಿ. ತಂದೆ: ಕೃಷ್ಣಶಾಸ್ತ್ರಿ. ತಾಯಿ: ಸಾವಿತ್ರಮ್ಮ.

3 ಜನನ: ಸು 1927. ಜನ್ಮಸ್ಥಳ: ಹಳೇಬೀಡು. ತಂದೆ: ಕೃಷ್ಣಶಾಸ್ತ್ರಿ, ಪುರಾಣಗಳ ಪ್ರಸಿದ್ಧ ವ್ಯಾಖ್ಯಾನಕಾರರು.

**ಎ. ಎಸ್. ಮೂರ್ತಿ**[1]**:** ನಾಟಕ ರಂಗದಲ್ಲಿ ಅದಕ್ಕೂ ಮಿಗಿಲಾಗಿ ಆಕಾಶ ವಾಣಿಯ ಕಲಾವಿದರಾಗಿ ಇವರು ಕರ್ನಾಟಕಾದ್ಯಂತ ಬಹು ಜನಪ್ರಿಯರಾಗಿದ್ದಾರೆ. 'ಆಕಾಶವಾಣಿಯ ಈರಣ್ಣ' ಆಕಾಶವಾಣಿಯ ಶ್ರೋತೃಗಳಿಗೆ ಬಹಳ ಮೆಚ್ಚುಗೆಯಾಗಿದ್ದ ಹೆಸರು. ಇವರು ಆಕಾಶವಾಣಿಯಲ್ಲಿ ನಡೆಸುತ್ತಿದ್ದ ಅಂಕಣಗಳು: ಶುದ್ಧ ಶುಂಠಿ, ಮಿಸ್ಟರ್ ಎಕ್ಸ್, ಮನೆಮಾತು, ಒಂದು ಮಾತು ಚಿತ್ರಕಲಾವಿದರು, ಈರಣ್ಣ ಮಿತ್ರ ಮಂಡಲಿ, ಅಭಿನಯ ತರಂಗ, ಅವರು ಕಟ್ಟಿ ನಡೆಸುತ್ತಿರುವ ಸಂಸ್ಥೆಗಳು, 'ಪಪೆಟ್ ಲ್ಯಾಂಡ್' ಎಂಬ ಸೂತ್ರದ ಬೊಂಬೆ ತಂಡ ಕಟ್ಟಿ ಅನೇಕ ಪ್ರಯೋಗಗಳನ್ನು ಮಾಡುತ್ತಿದ್ದಾರೆ. ಬೀದಿ ನಾಟಕಗಳನ್ನು ಆಡಿಸಲು ಒಂದು ತಂಡ ಕಟ್ಟಿ ಬಹು ಯಶಸ್ವಿಯಾಗಿ ರಾಜ್ಯಾದಂತ ಆಡಿ ವಿಕ್ರಮ ಸಾಧಿಸಿದ್ದಾರೆ.

ಇವರ ಪ್ರಸಿದ್ಧ ಕೃತಿಗಳು: ಚೆಂದೊಳ್ಳಿ ಚೆಲುವೆ, ತಾಳಮೇಳ, ಲಗ್ನಪತ್ರಿಕೆ, ನಂಬಿ ಕೆಟ್ಟವರಿಲ್ಲವೋ, ತಲ್ಲಣಿಸದಿರು ಮನವೆ, ಪದ್ಮಶ್ರೀ, ಗಯ್ಯಾಳಿ ಗಂಡ, ಶುದ್ಧ ಪಿಟಿಪಿಟಿ, ಸಾಹಿತಿ ಸಂಬ, ಉಲ್ಟಾಪಲ್ಟಾ, ಗೆಜೆಟೆಡ್ ಆಫೀಸರ್, ಲೇಡೀಸ್ ಓನ್ಲಿ, ಮಂಕುಬೂದಿ, ಸುಳಿಯಲ್ಲಿ ಸಿಕ್ಕಾಗ, ಅರಿಶಿನದ ಕೊನೆ, ಫಲಹಾರ, ಶುದ್ಧ ಶುಂಠಿ, ಗಂಡಸ್ತನ, ತಾರಾಮಂಡಲ, ನಾಡಪ್ರೇಮಿ, ಅಮೆಜಾನ್, ಜೈಸೀತಾರಾವ್ ಮುಂತಾದವು.

ಇವರ 'ಹುಚ್ಚ', 'ಶ್ರೀರಾಮ ರಕ್ಷೆ' ನಾಟಕಗಳು ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿವೆ.

**ವಸಂತ ಕವಲಿ**[2]**:** ಸಂಗೀತಾಭಿಮಾನಿ, ಸಂಸ್ಕೃತ ವಿದ್ವಾಂಸ, ಒಳ್ಳೆಯ ರಂಗ ಕಲಾವಿದರೂ ಹೌದು. ನಾಟಕ ಕುರಿತು ಪ್ರೌಢ ಪ್ರಬಂಧ ರಚನೆ ಮಾಡಿದ್ದಾರೆ. ವಿದ್ಯಾರ್ಥಿಯಾಗಿದ್ದಾಗಲೇ ಪ್ರಕಟಗೊಂಡದ್ದು 'ಅಲಂಕಾರ' ಏಕಾಂಕ. ಮುಂಬಯಿಯಲ್ಲಿ ಯಶಸ್ವಿಯಾಗಿ ಪ್ರದರ್ಶಿಸಲ್ಪಟ್ಟಿತ್ತು.

ಇವರ ನಿರ್ದೇಶನದಲ್ಲಿ ಅನೇಕ ಸಂಗೀತ ಪ್ರಧಾನ ನಾಟಕಗಳು ಪ್ರದರ್ಶಿಸಲ್ಪಟ್ಟಿವೆ. ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ.

ಕೃತಿಗಳು: ಬೇರೆ ಕೊಂಚ ಮಧು ಪಾತ್ರಕ್ಕೆ ಹಾಕು, ಎನ್ನ ಮುದ್ದಿನ ಮುದ್ದಣ, ನಾದೋಪಾಸನೆ, ಘನ ಆನಂದ.

---

1 ಜನನ: ಆಗಸ್ಟ್ 16, 1929. 'ಚಿತ್ರಾಕಲಾವಿದರು' ಈರಣ್ಣ ಮಿತ್ರ ಮಂಡಳಿ, ಅಭಿನಯ ತರಂಗ, ಇವರು ಕಟ್ಟಿ ನಡೆಸುತ್ತಿರುವ ಸಂಸ್ಥೆಗಳು. 'ಪಪೆಟ್ ಲ್ಯಾಂಡ್' ಎಂಬ ಸೂತ್ರದಬೊಂಬೆ ತಂಡ ಕಟ್ಟಿ ಅನೇಕ ಪ್ರಯೋಗಗಳನ್ನು ಮಾಡುತ್ತಿದ್ದಾರೆ.

2 ಜನನ: ಅಕ್ಟೋಬರ್ 12, 1930. ಬ್ಯಾಡಗಿ ಬಳಿಯ 'ಕುಂದರಮುಂಡಲಿಗಿ' ಗ್ರಾಮ ಇವರ ಹುಟ್ಟೂರು. ಕಾವ್ಯನಾಮ: 'ಕುಮಾರ ಭಾಸ'. ಪ್ರಸ್ತುತ ಇವರು ಭದ್ರಾವತಿ ಆಕಾಶವಾಣಿ ಕೇಂದ್ರದಲ್ಲಿ ನಿರ್ದೇಶಕರಾಗಿದ್ದಾರೆ.

**ಬಿ. ಎ. ಅರಸುಕುಮಾರ್**[1] **:** ನಾಟಕ ರಂಗ ಹಾಗೂ ಚಲನಚಿತ್ರಗಳೆರಡರಲ್ಲೂ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಒಳ್ಳೆಯ ನಾಟಕಕಾರರು, ಚಲನಚಿತ್ರ ನಿರ್ದೇಶಕರು.

ಇವರ ಕೃತಿಗಳು : ರಾಜಾ ಕೆಂಪೇಗೌಡ, ಅನಿರೀಕ್ಷಿತ, ಮಾವು ಬೇವು, ಯಾರು ಹಿತವರು ನಿನಗೆ, ಹುಚ್ಚೋ ಹುಚ್ಚು, ಅಭಾಗಿನಿ, ಟಿಪ್ಪುಸುಲ್ತಾನ್, ಬಂಗಾರದ ಹೂವು, ಬೋರೇಗೌಡ ಬೆಂಗಳೂರಿಗೆ ಬಂದ, ಬೇತಾಳಗುಡ್ಡ, ಬೀಸಿದ ಬಲೆ. ಚಲನ ಚಿತ್ರಗಳಿಗೆ ಚಿತ್ರಕಥೆ ಬರೆದಿರುವುದಲ್ಲದೆ ಚಿತ್ರಗಳನ್ನು ನಿರ್ದೇಶಿಸಿದ್ದಾರೆ.

**ಚಂದ್ರಕಾಂತ ಕುಸನೂರ**[2] **:** ಎಂ. ಎ., ಬಿ. ಇಡಿ., ಪಾಸು ಮಾಡಿಕೊಂಡು ಗುಲ್ಬರ್ಗಾ ಹಿಂದೀ ಶಿಕ್ಷಣ ತರಬೇತಿ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಶ್ರೀಯುತರು ಒಳ್ಳೆಯ ನಾಟಕಕಾರರು. ಕಾದಂಬರಿಗಳನ್ನು ಸಹ ಬರೆದಿದ್ದಾರೆ.

ಇವರ ಕೃತಿ 'ನಾಲ್ಕು ಅಸಂಗತ ನಾಟಕಗಳು' 1972ರ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

ಇತರ ಕೃತಿಗಳು : ಹಳ್ಳಾ ಕೊಳ್ಳ ನೀರು, ಮೂರು ಅಸಂಗತ ನಾಟಕಗಳು : ನಂದಿಕೋಲು (ಕಾವ್ಯ) ; ಚರ್ಚ್‌ಗೇಟ್ (ಕಾದಂಬರಿ). ಹಿಂದಿಯಲ್ಲೂ ಸಹ ಗ್ರಂಥಗಳನ್ನು ರಚಿಸಿದ್ದಾರೆ.

**ಎಚ್. ಎನ್. ಹೂಗಾರ**[3] **:** ನಾಟಕ ಕ್ಷೇತ್ರದಲ್ಲಿ ಪ್ರಸಿದ್ಧ ಹೆಸರು. ಉತ್ತರ ಕರ್ನಾಟಕದ ಎಲ್ಲಾ ನಾಟಕ ಕಂಪನಿಗಳಲ್ಲೂ ಇವರ ನಾಟಕಗಳು ಪ್ರದರ್ಶಿತ ವಾಗುತ್ತಿವೆ. 'ಜ್ಯೂಬಿಲಿ ಕವಿ' ಎಂದು ಹೆಸರು ಗಳಿಸಿದ್ದಾರೆ. ಇವರು ಒಳ್ಳೆಯ ನಟರು ಹಾಗೂ ಸಿನಿಮಾ ಸಂಭಾಷಣಾಗಾರರು. ಇವರ 'ಬಸವೇಶ್ವರ ನಾಟ್ಯ ಸಂಘ' 1970 ರಿಂದ ಯಶಸ್ವಿಯಾಗಿ ನಾಟಕಗಳನ್ನು ಪ್ರದರ್ಶಿಸುತ್ತಾ ವಿಕ್ರಮ ಸಾಧಿಸಿದೆ. 1985ರಲ್ಲಿ ನಾಟಕ ಅಕಾಡೆಮಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

ಇವರ ಪ್ರಸಿದ್ಧ ಕೃತಿಗಳು : ಭಕ್ತಿಜ್ಯೋತಿ, ಕುಲಪುತ್ರ, ಕೊಂಡು ತಂದ ಗಂಡ, ಬೂದಿ ಮುಚ್ಚಿದ ಕೆಂಡ, ಸತಿಯೇ ಸೌಭಾಗ್ಯ, ಮನ ಗದ್ದ ಮಡದಿ, ಸಂಗೊಳ್ಳಿ ಬಂಗಾರದ ಗಂಡು, ವಾತ್ಸಲ್ಯ, ನಾಟ್ಯರಾಣಿ, ದಸರಾ, ಪುತ್ಥಳಿ, ಕಂಕಣ ಬಲ, ಸುನಂದಾ, ರಾಯಣ್ಣ, ಮಕ್ಕಳ ಮದುವೆ, ಸಂಸಾರ ಸಮರ.

---

1 ಜನನ : ಡಿಸೆಂಬರ್ 1930, ಬೆಂಗಳೂರು. ತಂದೆ ಅರಸಪ್ಪ, ತಾಯಿ ; ಚಿಕ್ಕಮ್ಮ. ಫಿಲ್ಮ್ ಡೆವಲಪ್‌ಮೆಂಟ್ ಕಾರ್ಪೊರೇಶನ್ ಅಧ್ಯಕ್ಷರು (1985 ರಿಂದ) ಹಾಗೂ ಆಗಸ್ಟ್ 87ರಿಂದ ಕಂಠೀರವ ಸ್ಟುಡಿಯೋದ ಅಧ್ಯಕ್ಷರು.

2 ಜನನ : 1931, ಗುಲ್ಬರ್ಗಾದಲ್ಲಿ.

3 ಜನನ : 1932, ಗದಗ್‌ನಲ್ಲಿ. ತಂದೆ : ನಾಗಪ್ಪ.

**ನವರತ್ನರಾಂ[1] :** ಕೃಷಿ ವಿಶ್ವವಿದ್ಯಾಲಯದ ಪದವಿ ಪಡೆದು ಪ್ಯಾರಿಸ ವಿಶ್ವವಿದ್ಯಾನಿಲಯದ ಡಿ.ಆರ್.ಇ., ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಕರ್ನಾಟಕ ಸರ್ಕಾರದ ಅನೇಕ ವಿಭಾಗಗಳಲ್ಲಿ ಉನ್ನತ ಹುದ್ದೆ ನಿರ್ವಹಿಸಿದ್ದಾರೆ.

ಚಿತ್ರರಂಗದಲ್ಲಿ ಇವರ ಹೆಸರು ಹೆಚ್ಚು ಪರಿಚಿತ. ಅತ್ಯುತ್ತಮ ಸಂಭಾಷಣೆಗಾಗಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ. ('ಗೆಜ್ಜೆ ಪೂಜೆ' ಮತ್ತು 'ಉಪಾಸನೆ' ಚಲನಚಿತ್ರಗಳು) 'ಅಬಚೂರಿನ ಪೋಸ್ಟ್ ಆಫೀಸ್' ಚಲನಚಿತ್ರಕ್ಕಾಗಿ ರಾಷ್ಟ್ರೀಯ ಪ್ರಶಸ್ತಿ ದೊರೆತಿದೆ.

ಇವರು ಸುಮಾರು 25 ಚಿತ್ರಗಳಿಗೆ ಸಂಭಾಷಣೆ ಬರೆದಿದ್ದಾರೆ.

300ಕ್ಕೂ ಮಿಗಿಲಾಗಿ ಹಾಸ್ಯ ಲೇಖನ, ಕಥೆ ಪ್ರಬಂಧಗಳನ್ನು ಪತ್ರಿಕೆಗಳಿಗೆ ನೀಡಿದ್ದಾರೆ.

ಕೃತಿಗಳು : 'ಅಕ್ಕಪಕ್ಕ', 'ತಾಯಿಕರುಳು', 'ಕನಸು ನನಸು', 'ಆತ್ಮ ಯಾವ ಕುಲ', 'ಜೀವ ಯಾವ ಕುಲ', ಸೌಂದರ್ಯ ಸಂಕೋಲೆ ಮುಂತಾದವುಗಳು : ಹೂವೊಂದು ದುಂಬಿ ನೂರೆಂಟು, ನೆರೆಯವಳಹೊರೆ ಮುಂತಾದ ನಾಲ್ಕು ಕಾದಂಬರಿಗಳು.

ರೇಡಿಯೋ ನಾಟಕಗಳು ಹಾಗೂ ರೂಪಕಗಳು ಸುಮಾರು 35, ಟಿ. ವಿ. ನಾಟಕಗಳು 4.

**ಪಿ. ಲಂಕೇಶ್[2] :** (ಪಾಳೇಗಾರ್ ಲಂಕೇಶ್)

ಶಿವಮೊಗ್ಗ, ಬೆಂಗಳೂರುಗಳಲ್ಲಿ ವಿದ್ಯಾಭ್ಯಾಸ. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿದ್ದು ಈಗ 'ಲಂಕೇಶ್' ಪತ್ರಿಕೆಯ ಸಂಪಾದಕರಾಗಿ ಪತ್ರಿಕೋದ್ಯಮ ಹಮ್ಮಿಕೊಂಡಿದ್ದಾರೆ. ಒಳ್ಳೆಯ ಕತೆಗಾರರು, ಕಾದಂಬರಿಕಾರರು ಹಾಗೂ ಅತ್ಯಂತ ಜನಪ್ರಿಯ ನಾಟಕಕಾರರು, ಒಳ್ಳೆಯ ನಟರು ಹಾಗೂ ನಿರ್ದೇಶಕರೂ ಸಹ.

'ಸಂಕ್ರಾಂತಿ' ನಾಟಕಕ್ಕೆ 1973ರ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ.

ಕೃತಿಗಳು : ಬಿಚ್ಚು, ತಲೆಮಾರು (ಕವನ ಸಂಗ್ರಹಗಳು) ; ನಾನಲ್ಲ, ಉಮಾಪತಿಯ ಸ್ಕಾಲರ್ ಷಿಪ್, ಯಾತ್ರೆ, ಕೆರೆಯ ನೀರನ್ನು ಕೆರೆಗೆ ಚೆಲ್ಲಿ (ಕಥಾ ಸಂಕಲನಗಳು); ಬಿರುಕು, ಮುಸ್ಸಂಜೆಯ ಕಥಾ ಪ್ರಸಂಗ (ಕಾದಂಬರಿಗಳು) ; ಬಿರುಕು, ಸಂಕ್ರಾಂತಿ, ತೆರೆಗಳು, ಟಿ. ಪ್ರಸನ್ನನ ಗೃಹಸ್ಥಾಶ್ರಮ, ಏಳು ನಾಟಕಗಳು (ನಾಟಕಗಳು), ದೊರೆ ಈಡಿಪಸ್, ಅಂತಿಗೊನೆ, ಪಾಪದ ಹೂಗಳು (ಅನುವಾದ) ; ಅಕ್ಷರ ಹೊಸ ಕಾವ್ಯ

---

1 ಜನನ: ಡಿಸೆಂಬರ್ 3, 1934. ಬೆಂಗಳೂರಿನಲ್ಲಿ. ತಂದೆ; ನವರತ್ನರಾಮರಾವ್; ತಾಯಿ : ಎನ್. ಪುಟ್ಟಮ್ಮ.

2 ಜನನ: ಮಾರ್ಚ್ 8, 1935. ಶಿವಮೊಗ್ಗ ಜಿಲ್ಲೆಯ ಕೊನಗಹಳ್ಳಿ. ತಂದೆ: ಪಾಳೇಗಾರ್ ನಂದಿ ಬಸಪ್ಪ. ತಾಯಿ : ದೇವಿರಮ್ಮ.

(ಸಂಪಾದನೆ), ಪ್ರಸ್ತುತ (ವಿಮರ್ಶೆ). ಪೋಲಿಸರಿದ್ದಾರೆ ಎಚ್ಚರಿಕೆ, ಗಿಳಿಯು ಪಂಜರದೊಳಿಲ್ಲ, ಸಿದ್ಧತೆ (ಏಕಾಂಕಗಳು)

'ಪಲ್ಲವಿ' ಚಲನಚಿತ್ರದ ನಿರ್ದೇಶಕರು. ಇದಕ್ಕೆ ಕೇಂದ್ರ ಸರ್ಕಾರದ ಬಹುಮಾನ ಬಂದಿದೆ.

'ಅನುರೂಪ', ಖಂಡವಿದೆಕೋ ಮಾಂಸವಿದೆಕೋ, ಎಲ್ಲಿಂದಲೋ ಬಂದವರು, ಚಲನಚಿತ್ರಗಳ ನಿರ್ದೇಶಕರು. ಕನ್ನಡ ನಾಟಕ ಅಕಾಡೆಮಿ ಇವರಿಗೆ 1984ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

**ಬಿ. ವಿ. ವೈಕುಂಠರಾಜು**[1] **:** (ಭಟ್ಟರಾಜು ವೆಂಕಟರಮಣಪ್ಪ ವೈಕುಂಠರಾಜು)

'ವಾರಪತ್ರಿಕೆ' ಹಾಗೂ 'ರಾಜು' ಪತ್ರಿಕೆಗಳ ಸಂಪಾದಕರು. ಒಳ್ಳೆಯ ಕಥೆಗಾರರು, ಕಾದಂಬರಿಕಾರರು ಹಾಗೂ ಅತ್ಯಂತ ಜನಪ್ರಿಯ ನಾಟಕಕಾರರು. ಕೆಲಕಾಲ 'ಪ್ರಜಾವಾಣಿ' ದಿನ ಪತ್ರಿಕೆಯಲ್ಲಿದ್ದು ಅಲ್ಲಿಂದ ಹೊರಬಂದು ತಮ್ಮದೇ ಪತ್ರಿಕೆಗಳನ್ನು ಪ್ರಾರಂಭಿಸಿ ಯಶಸ್ಸು ಗಳಿಸಿದ್ದಾರೆ. ಇವರು ರಾಜ್ಯ ಪತ್ರಕರ್ತರ ಸಂಘದ ಅಧ್ಯಕ್ಷರಾಗಿಯೂ ಕೆಲ ವರ್ಷ ಸೇವೆ ಸಲ್ಲಿಸಿದ್ದಾರೆ.

ಇವರ ನಾಟಕ 'ಸನ್ನಿವೇಶ' ಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ (1983) ಲಭಿಸಿದೆ.

ಕೃತಿಗಳು : ಅಂತ್ಯ, ಆಕ್ರಮಣ, ಸಪ್ತಶೃಂಗ, ನಾಟಕರತ್ನ ವೀರಣ್ಣ, ಉದ್ಭವ, ಮುದ್ದಣ್ಣ, ಕಾನನ್ ದೇವಿ. ಸಂದರ್ಭ ಹದಿನೈದು ಕಥೆಗಳು.

**ಡಾ॥ ಚಂದ್ರಶೇಖರ ಕಂಬಾರ**[2] **:** (ಬಸವಣ್ಣಪ್ಪ ಚಂದ್ರಶೇಖರ ಕಂಬಾರ)

ಗೋಕಾಕ, ಬೆಳಗಾವಿ, ಧಾರವಾಡಗಳಲ್ಲಿ ವಿದ್ಯಾಭ್ಯಾಸ ಮುಗಿಸಿ (ಎಂ.ಎ., ಪಿ.ಎಚ್.ಡಿ.,) ಬೆಳಗಾವಿ, ಸಾಗರ, ಉಡುಪಿ, ಶಿಕಾಗೋಗಳಲ್ಲಿ ಅಧ್ಯಾಪಕರಾಗಿದ್ದು ಈಗ ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ರಾಜ್ಯ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದರು.

ಬಹುಮುಖ ಪ್ರತಿಭೆಯ ಸಾಹಿತಿ. ಒಳ್ಳೆಯ ಕಾದಂಬರಿಕಾರರು, ಕತೆಗಾರರು, ಕವಿಗಳು. ಅತ್ಯಂತ ಜನಪ್ರಿಯ ನಾಟಕಕಾರರು 'ಜೋಕುಮಾರಸ್ವಾಮಿ, ಭಾರತದ ಭಾಷೆಗಳ ಶ್ರೇಷ್ಠ ನಾಟಕವೆಂದು 1974ರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ ಗಳಿಸಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (1973) ಸಹ ಸಂದಿದೆ. 'ಜೈಸಿದನಾಯ್ಕ'ಕ್ಕೆ 1975ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ.

---

1 ಜನನ : ಮೇ 15, 1937, ಚಿತ್ರದುರ್ಗ ಜಿಲ್ಲೆಯ ಗುಡ್ಡದ ರಂಗವ್ವನ ಹಳ್ಳಿಯಲ್ಲಿ. ತಂದೆ: ವೆಂಕಟರಮಣಪ್ಪ. ತಾಯಿ: ಚೌಡಮ್ಮ. 1987ರಲ್ಲಿ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದಾರೆ.

2 ಜನನ: ಜನವರಿ 2, 1937, ಬೆಳಗಾವಿ ಜಿಲ್ಲೆಯ ಘೋಡಗೇರಿ. ತಂದೆ: ಬಸವಣ್ಣೆಪ್ಪ ರಾಮಪ್ಪ ಕಂಬಾರಾ, ತಾಯಿ : ಚೆನ್ನವ್ವ.

**ಕೃತಿಗಳು :** ಮುಗುಳು, ಹೇಳತೇನೆ ಕೇಳ, ತಕರಾರಿನವರು, ಸಾವಿರದ ನೆರಳು (ಕವನಗಳು) ; ನಾರ್ಸಿಸಸ್, ಚಾಳೇಶ, ಋಷ್ಯಶೃಂಗ, ಕರಿಮಾಯಿ, ಸಂಗ್ಯಾಬಾಳ್ಯಾ, ನಾಯಿಕಥೆ, ಕಾಡುಕುದುರೆ, ಕಿಟ್ಟಯ ಕಥೆ, ಅಲಿಬಾಬ ಮತ್ತು 40 ಕಳ್ಳರು (ನಾಟಕಗಳು) ; ಉತ್ತರ ಕರ್ನಾಟಕ ಜಾನಪದ ರಂಗಭೂಮಿ (ಸಂಶೋಧನೆ). ಸಿರಿ ಸಂಪಿಗೆ (ಯಕ್ಷಗಾನ ಪ್ರಸಂಗ).

ಇವರ ಕಾದಂಬರಿ 'ಸಿಂಗಾರೆವ್ವ ಮತ್ತು ಅರಮನೆ' 1982ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ.

**ಗಿರೀಶ ಕಾರ್ನಾಡ[1] :** ಪದ್ಮಶ್ರೀ (1974) ಪ್ರಶಸ್ತಿ ಪಡೆದಿರುವ ಕಾರ್ನಾಡರು ಸುಪ್ರಸಿದ್ಧ ನಾಟಕ ರಚನಕಾರ, ಜನಪ್ರಿಯ ನಟ, ಹೆಸರಾಂತ ನಾಟಕ/ಚಲನಚಿತ್ರ ನಿರ್ದೇಶಕ.

ನಾಟಕ ಹಾಗೂ ಚಲನಚಿತ್ರಕ್ಕೆ ಇವರಿತ್ತಿರುವ ವಿಶೇಷ ಕೊಡುಗೆಗಳನ್ನು ಗಮನಿಸಿ ರಾಜ್ಯ ನಾಟಕ ಅಕಾಡೆಮಿ 1983ರಲ್ಲಿ ವಿಶೇಷ ಪ್ರಶಸ್ತಿ ನೀಡಿ ಗೌರವಿಸಿದೆ. ವರ್ಷದ ಶ್ರೇಷ್ಠ ನಾಟಕಕಾರರೆಂದು 1972ರಲ್ಲಿ ದೆಹಲಿಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿದೆ.

ಮನ್ನಣೆ/ಪ್ರಶಸ್ತಿ ಗಳಿಸಿರುವ ಇವರ ನಾಟಕಗಳು : 'ತುಘಲಕ್' (ಕನ್ನಡದ ಶ್ರೇಷ್ಠ ನಾಟಕ) ; 'ಹಯವದನ' (ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ ಹಾಗೂ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ : ಯಯಾತಿ (1962ರ ರಾಜ್ಯ ಪ್ರಶಸ್ತಿ ಹಾಗೂ ಕುಲಾಧಿಪತಿಗಳ ಸ್ವರ್ಣಪದಕ).

ಇತರ ಕೃತಿಗಳು : ಅಂಜು ಮಲ್ಲಿಗೆ, ಹಿಟ್ಟಿನ ಹುಂಜ, ಮಾನಿಷಾದ.

ಇವರ ನಿರ್ದೇಶನದ 'ಉತ್ಸವ್' ಅತ್ಯುತ್ತಮ ಚಿತ್ರವೆಂದು ಹೆಸರು ಗಳಿಸಿದೆ. ಇದು ಇಂಗ್ಲಿಷ್ ಭಾಷೆಯಲ್ಲೂ ಚಿತ್ರಿತಗೊಂಡಿದೆ.

**ಚಂದ್ರಶೇಖರ ಪಾಟೀಲ[2] :** ಇವರು ಕವಿಗಳಲ್ಲದೆ ಹೆಸರಾಂತ ನಾಟಕಕಾರರೂ ಹೌದು.

ಪ್ರಸಿದ್ಧ ಕೃತಿಗಳು : ಎರಡು ನಾಟಕಗಳು, ಮೂರು ನಾಟಕಗಳು, ಗೋಕರ್ಣದ ಗೌಡಶಾನಿ, ಜಗದಂಬೆಯ ಬೀದಿ ನಾಟಕ, ಕೊಡೆಗಳು, ಅಪ್ಪ, ಕತ್ತಲರಾತ್ರಿ, ಕುಂಟಾ ಕುಂಟಾ ಕುರವತ್ತಿ, ಟಿಂಗರ ಬಡ್ಡಣ್ಣ, ಗುರ್ತಿನವರು.

---

1 ಜನನ : ಮೇ 19, 1938, ಮಹಾರಾಷ್ಟ್ರದಲ್ಲಿ, ಇವರ ವಂಶಜರು ಉತ್ತರ ಕನ್ನಡ ಜಿಲ್ಲೆಗೆ ಸೇರಿದವರು. 1976–78ರವರೆಗೆ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಕೆಲಕಾಲ ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್ ನಿರ್ದೇಶಕರಾಗಿದ್ದರು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರ, ಅರ್ಥಶಾಸ್ತ್ರ ಹಾಗೂ ರಾಜಕೀಯ ಶಾಸ್ತ್ರಗಳಲ್ಲಿ ವಿಶೇಷ ಅಧ್ಯಯನ ಮಾಡಿದ್ದಾರೆ.

2 ಪುಟ 188 ನೋಡಿ.

'ಗೋಕರ್ಣದ ಗೌಡಶಾನಿ'ಗೆ 1974ರ ರಾಜ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

**ರಾಮದಾಸ್**[1] **:** ನಟ, ನಾಟಕಕಾರ ಹಾಗೂ ನಿರ್ದೇಶಕ. ಎಂ.ಎ., ನಂತರ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಬೇಂದ್ರೆ, ಕಾರ್ನಾಡ್, ಲಂಕೇಶ್, ಕಂಬಾರ, ಶಿವರಾಮಕಾರಂತ ಮುಂತಾದವರುಗಳ ನಾಟಕಗಳನ್ನು ಯಶಸ್ವಿಯಾಗಿ ದಿಗ್ದರ್ಶಿಸಿ ಹೆಸರು ಗಳಿಸಿದ್ದಾರೆ. ಇವರ 'ಇದು ಭಾರತ' ನಾಟಕಕ್ಕೆ 1966ರ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ. 'ಸಾಕ್ಷಾತ್ಕಾರ' ನಾಟಕ ಅಕಾಡೆಮಿಯ ಪ್ರಥಮ ಬಹುಮಾನ ಪಡೆದಿದೆ.

ನಾಟಕ ರಂಗದಲ್ಲಿ ಪ್ರಸಿದ್ಧ ಹೆಸರು 'ರಾಮದಾಸ್'.

**ಡಾ|| ಚೆನ್ನಣ್ಣ ವಾಲೀಕಾರ**[2] **:** ರಾಯಚೂರು ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರು. ಬಹುಮುಖ ಪ್ರತಿಭೆಯ ಶ್ರೀಯುತರು ಒಳ್ಳೆಯ ಕವಿಗಳು, ಕಥೆಗಾರರು, ಕಾದಂಬರಿಕಾರರು ಹಾಗೂ ನಾಟಕಕಾರರು.

ಇವರ ಹೆಸರಾಂತ ನಾಟಕಗಳು : ಟೊಂಕದ ಕೆಳಗಿನ ಜನ, ಅಗ್ನಿರಾಜ, ತಲೆ ಹಾಕುವವರು, ಸೋಮ್ಯಾಯ ಭೀಮ್ಯಾಯನ ಡಪ್ಪಿನಾಟ, ಅಯ್ಯ ಮಾಡಿದ್ದು ತಮ್ಮಯ್ಯತಿಂಬ ಮುಂತಾದವುಗಳು.

**ನಿಸರ್ಗಪ್ರಿಯ**[3] **:** (ನಿಜ ನಾಮ ಸಿದ್ಧಗಂಗಯ್ಯ)

ಕಾಲೇಜಿನಲ್ಲಿ ಅಧ್ಯಾಪಕರು. ರಂಗಭೂಮಿ ಇವರಿಗೆ ಪ್ರಿಯವಾದ ಮಾಧ್ಯಮ, ಒಳ್ಳೆಯ ನಟರು.

ಕೃತಿಗಳು : ಬೆಸಕನಕೆರೆ, ಸ್ವರ್ಗಸ್ಥ, ಶುನಶ್ಯೇಪ, ('ಸ್ವರ್ಗಸ್ಥ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.) ವ್ಯವಸ್ಥೆ, ಯಶೋಧರ, ತಿರುಕರಾಜ ರುದ್ರಸೇನ, ಚೋರಪುರಾಣ ಮುಂತಾದವು. (ಚೋರಪುರಾಣ' ಪ್ರಹಸನ ಕರ್ನಾಟಕ ನಾಟಕ ಅಕಾಡೆಮಿ ಏರ್ಪಡಿಸಿದ್ದ ನಾಟಕ ರಚನಾ ಸ್ಪರ್ಧೆಯಲ್ಲಿ ಬಹುಮಾನ ಪಡೆದಿದೆ).

**ಪ್ರಸನ್ನ**[4] **:** ಕಿರಿಯ ವಯಸ್ಸಿನಲ್ಲೇ ಯಶಸ್ವಿ ನಿರ್ದೇಶಕರೆಂದು ಹೆಸರು ಗಳಿಸಿರುವ ಪ್ರತಿಭಾನ್ವಿತ ವ್ಯಕ್ತಿ. 'ಸಮುದಾಯ' ನಾಟಕ ಸಂಸ್ಥೆಯ ಸ್ಥಾಪಕರು. ಇವರು ಒಳ್ಳೆಯ ಚಿತ್ರಕಲಾವಿದರೂ ಆಗಿದ್ದಾರೆ.

---

1 ಜನನ: 1940, ಉಡುಪಿ ತಾಲ್ಲೂಕಿನ ಉಚ್ಚಿಲ ಗ್ರಾಮದಲ್ಲಿ.

2 ಜನನ: ಏಪ್ರಿಲ್ 6, 1943, ಗುಲಬರ್ಗ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಶಂಕರವಾಡಿ ಗ್ರಾಮದಲ್ಲಿ. ತಂದೆ: ಧೂಳಪ್ಪ; ತಾಯಿ: ಸಾಬಮ್ಮ. ಪುಟ 192 ನೋಡಿ.

3 ಜನನ: ಮೇ 10, 1945.

4 ಜನನ: ಮಾರ್ಚ್ 22, 1951, [illegible]. ಎಂ.ಎಸ್.ಸಿ. ಪದವೀಧರರು. ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದ ಡಿಪ್ಲೊಮಾ ಪಡೆದಿದ್ದಾರೆ (ದೆಹಲಿ-1974).

ಇವರ ಕೃತಿಗಳು: ಒಂದು ಲೋಕಕಥೆ, ದಂಗೆಯ ಮುಂಚಿನ ದಿನಗಳು, ತದ್ರೂಪಿ, ಮಹಿಮಾಪುರ (ನಾಟಕಗಳು). 'ತದ್ರೂಪಿ' ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ.

ಸ್ವಯಂವರ, ನಾಶವಾಯ್ತು ಲಂಕಾದ್ರಿಪುರ (ಕಾದಂಬರಿಗಳು). 'ನಾಟಕ್ಕ ರಂಗ ಕೃತಿ' (ವಿಮರ್ಶೆ).

**ಕೆ. ವಿ. ಶ್ರೀನಿವಾಸ ಪ್ರಭು*:** ದೂರದರ್ಶನ ಕೇಂದ್ರದಲ್ಲಿ ನಾಟಕ ವಿಭಾಗದ ನಿರ್ಮಾಪಕರಾಗಿರುವ ಶ್ರೀಯುತರು ದೂರದರ್ಶನ ಪ್ರೇಕ್ಷಕರಿಗೆ ಸುಪರಿಚಿತರು. ಇವರು ನಿರ್ದೇಶಿಸಿರುವ ನಾಟಕಗಳು ಬಹು ಜನಪ್ರಿಯಗೊಂಡಿವೆ. ಒಳ್ಳೆಯ ಬರಹಗಾರರಾದ ಇವರು ಒಳ್ಳೆಯ ನಟರೂ ಹೌದು. ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಇವರು ದೆಹಲಿಯ ನಾಟಕ ಶಾಲೆಯಲ್ಲಿ ವಿಶೇಷ ತರಬೇತಿ ಪಡೆದು ಬಂದಿದ್ದಾರೆ.

ಕೃತಿಗಳು: ನೆರಳಿಲ್ಲದ ಜೀವಗಳು, ಬೆಳ್ಳಿಗುಂಡು, ಅಂತಿಮಯಾತ್ರೆ, ಗುಳ್ಳೇನರಿ (ಅನುವಾದಗಳು) ಉದ್ಭವ (ನಾಟಕ).

**ಕೆ. ವಿ. ಸುಬ್ಬಣ್ಣ:** (1932) ಬಹುಮುಖ ಪ್ರತಿಭೆಯ ಸುಬ್ಬಣ್ಣ ಒಳ್ಳೆಯ ಲೇಖಕರು, ನಾಟಕ ನಿರ್ದೇಶಕರು, ಸಂಪಾದಕರು, ಹಾಗೂ ವಿಮರ್ಶಕರು. ನಾಟಕಾಭಿನಯಕ್ಕೆ ಸಹಾಯವಾಗುವ ಹಲವಾರು ಆಕರ ಗ್ರಂಥಗಳನ್ನು ರಚಿಸಿದ್ದಾರೆ. 'ನೀನಾಸಂ' ಸಂಸ್ಥೆ ಸ್ಥಾಪಕರು. 1984ರ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತರು.

ಕೃತಿಗಳು: ಅಂಚೆಮನೆ, ಕಾಡಿನಲ್ಲಿ ಕಥೆ, ಜಯಂಟ್ ಮಾಮಾ ನಾಟಕಗಳು, ಬೆಟ್ಟಕ್ಕೆಚಳಿಯಾದರೆ, ನಾಟಕ ಮತ್ತು ಸಿನೆಮಾ, ಚಲನಚಿತ್ರದ ಮಹಾನೌಕೆ, ಅಭಿವೃದ್ಧಿಗೂ ಸಿನೆಮಾ, ಚಲನಚಿತ್ರದ ಸ್ವರೂಪ, ವಿಮರ್ಶೆ ಮುಂತಾದವುಗಳು.

ನಾಟಕ ವಿಭಾಗವನ್ನು ಸಂಪನ್ನಗೊಳಿಸಿರುವ ಸಾಹಿತಿಗಳು ಬಹಳ ಸಂಖ್ಯೆಯಲ್ಲಿದ್ದಾರೆ. ಸಧ್ಯಕ್ಕೆ ಅವರ ಹೆಸರು ಮತ್ತು ಕೃತಿಗಳನ್ನು ಹೆಸರಿಸುತ್ತೇನೆ. ಇನ್ನೊಮ್ಮೆ ಅವರ ವಿವರಗಳನ್ನು ಕೊಡುತ್ತೇನೆ." ಎಂದು ನುಡಿದ ಮಾಸ್ತರು ತಮ್ಮ ಟಿಪ್ಪಣಿ ಪುಸ್ತಕವನ್ನು ತೆರೆದು ಮುಂದಿರಿಸಿಕೊಂಡರು. ಓದಲು ಪ್ರಾರಂಭಿಸಿದರು.

**ರತ್ನ ನ.** (12/12/1934) ಎಲ್ಲಿಗೆ, ಬೊಂತೆ, ಗೋಡೆ ಬೇಕೆ ಗೋಡೆ, ನಿಮ್ಮ ಓಟು ಯಾರಿಗೆ (ಅಸಂಗತ ನಾಟಕಗಳು) ಆಕಾಶವಾಣಿಗೂ ಹಲವಾರು ನಾಟಕಗಳನ್ನು ಬರೆದಿದ್ದಾರೆ.

**ಶಿವಾನಂದ ಜಿ. ವಿ.** (16/3/1935) ಬೆಂಬಿಡದ ಭೂತ, ಯಾರಸಾಕ್ಷಿ, ಸರ್ವೇಜನಾಃ ಸುಖಿನೋಭವಂತು........

---

* ಜನನ: ಫೆಬ್ರವರಿ 5, 1954.

**ಶಿವಸ್ವಾಮಿ ಎಸ್. ಎನ್.:** (9/2/1926) 35 ವರ್ಷ ಆಕಾಶವಾಣಿ/ದೂರದರ್ಶನದಲ್ಲಿ ಸೇವೆ. ರೇಡಿಯೋ ನಾಟಕ ರಚನೆಯಲ್ಲಿ ಸಿದ್ಧಹಸ್ತರು. ಹೃದಯಾಂತರಾಳ. ಸಂಕಲನ, ಮಹಾ ಸಾಮ್ರಾಜ್ಯ. ಬೆಂಗಳೂರು ಹಾಸು ಹೊಕ್ಕು, ಶಬ್ದಬ್ರಹ್ಮನ ಶಿರಹೋಯಿತು (ಸಂಕಲನ) ರೇಡಿಯೋ ನಾಟಕಗಳು.

**ಬಿ. ಪುಟ್ಟಸ್ವಾಮಯ್ಯ**[1]: ಸಂಪೂರ್ಣ ರಾಮಾಯಣ. ಕುರುಕ್ಷೇತ್ರ, ರಾಣಿ, ಅಕ್ಕಮಹಾದೇವಿ. ಗೌತಮಬುದ್ಧ. ಸತೀ ತುಲಸಿ. ಬಬ್ರುವಾಹನ. ತಾರಕವಧೆ, ಪ್ರಚಂಡ ಚಾಣಕ್ಯ. ದಶಾವತಾರ. ಬಿಡುಗಡೆಯ ಬಿಚ್ಚುಗತ್ತಿ.

**ದ. ರಾ. ಬೇಂದ್ರೆ**[2]! ಮಂದಿಮನಿ. ಮಂದೀ ಮಕ್ಕಳು. ಶೋಭನಾ, ಆಥರಾ ಈಥರಾ. ನಗೆಯ ಹೊಗೆ. ದೆವ್ವದ ಮನೆ. ತಿರುಕರ ಪಿಡುಗು. ಉದ್ಧಾರ. ಗೋಲ್ ಜಾತ್ರೆ. ಸಾಯೋಆಟ.

**ನಾ. ಡಿಸೋಜ**[3]: ದೇವರಿಗೆ ದಿಕ್ಕು. ತಬ್ಬಲಿ. ಭೂತದ ಎದುರು ಬೇತಾಳ. ಮುಂದೇನು. ಭೂತ.

**ಮಹಂತೇಶ ಶಾಸ್ತ್ರಿ:** ಪೂರ್ಣಿಮಾ. ಕುಲಭಲ. ಹೆಣ್ಣಿನ ಹಂಬಲ. ಏರಿದ ನಂಜು. ಮನೆಮಗಳು. ವಂಶ ದೀಪ. ಆದರ್ಶ ಪುತ್ರ. ಕಲಿತ ಕತ್ತೆ. ವೀರ ಅಭಿಮನ್ಯು, ಮಾನವತಿ. ಕುಂಕುಮ. ರೂಪವತಿ. ಒಂದೇ ರಕ್ತ. ಧರ್ಮಜ್ಯೋತಿ ಬಸವೇಶ್ವರ, ಆತ್ಮಾಹುತಿ. ಅಣ್ಣತಮ್ಮ. ಸಂಗೊಳ್ಳಿರಾಯಣ್ಣ. ಮುನಿಸಿಪಾಲಿಟಿ. ಸತಿಪತಿ, ಮಹಾತಾಯಿ. ಪ್ರಜಾಸರಕಾರ. ರೂಪಾಯಿ. ಸಾಧ್ವೀಮಣಿ.

**ಕೆ. ಗುಂಡಣ್ಣ:** ಪುಟ್ಟ ನಾಟಕ ಹಾಗೂ ಏಕಾಂಕ ಕ್ಷೇತ್ರದಲ್ಲಿ ಬಹಳ ಹೆಸರು ಗಳಿಸಿದ್ದಾರೆ.

ಕೃತಿಗಳು: ಹರಿದ್ರಾ ಕುಂಕುಮ, ಬೇಡಾಂದ್ರೂ ಮದ್ವೆ, ಲಾಟರಿ ಟಿಕೆಟ್, ಯಾರಿಗುಂಟು ಯಾರಿಗಿಲ್ಲ, ತಾಳಿ ಕಟ್ಟೋಕ್ಕೆ ತಯಾರ್, ಕಣ್ಣಿಗೆ ಮಣ್ಣು, ಟ್ರಬ್ಬಲ್‌ತಾಳಿ, ಗಂಡ್ಸಲ್ವೇ ಗಂಡ್ಸು, ಭಲೇ ಹುಡುಗಿ, ಶಂಖವಾದ್ಯ, ಬಕಪಕ್ಷಿ. ಯಾರ ಹೆಂಡ್ತಿ, ಖೋಟಾ ಪೈಸಾ, ಅತಿವೃಷ್ಟಿ, ಅಶ್ವರೂಪ, ಸಕ್ಕರೆ ಬೊಂಬೆ ಮುಂತಾದವುಗಳು.

**ಪ್ರಭುಶಂಕರ:** ಆಮ್ರಪಾಲಿ, ಅಂಗುಲಿಮಾಲ.

**ಐ. ಮಾ. ಮುತ್ತಣ್ಣ:** ಇವರ 'ಕಾವೇರಿ' ನಾಟಕ 1967ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ. ಇತರ ಕೃತಿಗಳು; ಅಪ್ಪಚ್ಚ ಕವಿಯ ಮೂರು ನಾಟಕಗಳು.

---

1 ಪುಟ 149 ನೋಡಿ.

2 ಪುಟ 147 ನೋಡಿ.

3 ಪುಟ 238 ನೋಡಿ.

**ಬೇಲೂರು ಕೃಷ್ಣಮೂರ್ತಿ**: ಮಹಾತ್ಯಾಗಿ. ಕಂಬನಿ. 6ಲ್ಲ 9ತ್ತು. ಆಹುತಿ. ಘಟೀತಿ. ನಾರದ ವಿನೋದ. ಕುದುರೆ ಮೊಟ್ಟೆ. ಮುರಿದ ಮನೆ. ಸಾವಿತ್ರಿಯ ಸವಾಲು. ನೊಂದ ಜೀವಿ. ಪ್ರಾರಬ್ಧ ಕರ್ಮ. ಘಾಟಿ ಮುದುಕಿ. ಅಡ್ಡಾದಿಡ್ಡಿ. ಭಂಡ ಬಾಳು. ಬೇಸ್ತುಬಿದ್ದ ಭಾವ. ಅಸಲಿ–ನಕಲಿ. ಬಲಿದಾನ. ಬಿಚ್ಚುಗತ್ತಿ ಮುಂತಾದ ಸುಮಾರು 35 ನಾಟಕಗಳು.

**ಕೆ. ಸ್. ಸುಬ್ಬನರಸಿಂಹ**: ಸಮಯಕ್ಕೊಂದು ಸುಳ್ಳು. ಒಪ್ಪಿಗೆ. ಪಾತೀ ಸ್ವಯಂವರ. ಟೆಲಿಗ್ರಾಂ. ಒಂದು ರಾತ್ರಿ. ಪಿಕ್‌ಪಾಕೆಟ್ ಅಥವಾ ಫ್ಯಾನ್ಸಿಡ್ರೆಸ್.

**ರಘುಸುತ**: ವೀರನಾರಿ. ಫೋಟೋ ಗಲಾಟೆ. ಗಲಾಟೆ ಮದುವೆ. ಅಲಾಲ್ ಟೋಪಿ. ಸ್ವಾತಂತ್ರ್ಯ ಸಮರ. ಕೆಂಪು ಗುಲಾಬಿ. ಭಂಡರ ಬೇಸ್ತು. ಗಣೇಶ ಮಹಿಮಾ. ನಾಮಕರಣ. ಫೋನ್‌ಕಾಲ್. ಮನಶ್ಯಾಂತಿ. ಚೀಟಿಕಾಟ. ಎಡಬಿಡಂಗಿ.

**ಆರ್. ಡಿ. ಕಾಮತ್**: ಹೃದಯ ದೇಗುಲ ಮತ್ತು ತಾಯಿ. ಸೋಕ್ರಟೀಸ್. ಟೀಪು ಸುಲ್ತಾನ್. ಇನ್ನಿಲ್ಲದವರು. ಕಾಮನ ಬಿಲ್ಲು ಮತ್ತು ಸಹ್ಯಾದ್ರಿ ಸ್ವಾಭಿಮಾನ.

**ನಾ. ಕೃ. ಸತ್ಯನಾರಾಯಣ**: ಪತನ. ನೆತ್ತಮನಾಡಿ ಭಾನುಮತಿ ಸೋಲ್ತೊಡೆ. ವಿಪ್ಲವ ಮತ್ತು ಪ್ರತಿಮಾ, ಈ ಪರಿಯ ಮೋಜು. ಬೇಟೆ.

**ಅಚ್ಯುತರಾಯ**: ಸತ್ಯ ಸಂಕಲ್ಪ, ಅಕ್ಕ ಮಹಾದೇವಿ, ಮಹಾರಥಿ ಭೀಷ್ಮ, ನರಗುಂದ ಮುತ್ತಿಗೆ, ಉತ್ತರ ಭೂಪ. ಚಿತ್ರಕೇತುಮಹಾರಾಜನ ಕಥೆ, ಬಸವ ಜಯಂತಿ, ಗುಣಸಾಗರಿ, ಬೀದಿಯ ಬಸವಿ, ನಮ್ಮ ಭಾಗ್ಯೋದಯ, ವಿಷಮ ವಿವಾಹ, ಅನಾಥ ಕನ್ಯಾ, ಮಹಾರಥಿ ಕರ್ಣ.

**ಕವಿತಾ ಕೃಷ್ಣ**: ತ್ಯಾಗಮಯಿ, ಬಾಳೇ ಬಂಗಾರ, ಮಮತೆಯ ಮನೆ.

**ಗಂಗಾಧರ ಶಾಸ್ತ್ರಿ**: ತಂಗಿಯ ಮನೆ, ಗಂಗಾ ಗೌರಿ, ಹೊಸ ಬಾಳು, ಸೌಭಾಗ್ಯ ಲಕ್ಷ್ಮಿ, ಯೋಗಶಕ್ತಿ, ಗರತಿ ಜೀವನ, ಕಾರಸ್ಥಾನ, ಬಾಲಚಂದ್ರ. ಪ್ರೇಮ ಜ್ಯೋತಿ. ರಾಜಕುಮಾರಿ ಪದ್ಮಾ.

**ಕರ್ನಾಟಕದ ಶೇಕ್ಸ್‌ಪಿಯರ್ ಎಂದು ಪ್ರಸಿದ್ಧರಾಗಿರುವ ಕಂದಗಲ್ಲ ಹಣಮಂತರಾವ**: ಚಿತ್ರಾಂಗದ. ಮಾತಂಗಕನ್ಯಾ, ರಕ್ತರಾತ್ರಿ, ನೆತ್ತರದ ಔತಣ, ಆಗಸ್ಟ್ ಹದಿನೈದರ ನಂತರ. ಜಗನ್ಮಾಯಾ ಕೃಷ್ಣಗಾರುಡಿ. ಪಾಂಚಾಲಿ ದ್ರೌಪದಿ ಸ್ವಯಂವರ. ದೈವ ದುರಂತ ಕರ್ಣ, ಬಾಣಸಿಗ ಭೀಮ, ಕುರುಕ್ಷೇತ್ರ, ಮಾಯಾಮೃಗ, ಬೆಳ್ಳಿ ಚಿಕ್ಕಿ. ಪುಣ್ಯಪ್ರಭಾ, ಬಾಳಿನೊಳು ಬೆಳಕು, ವೀಣಾ. ನರವೀರ ಪಾರ್ಥ. ಅಗ್ನಿ ಕಮಲ, ವರಪ್ರಧಾನ.

**ಎಚ್. ಆರ್. ಭಸ್ಮೆ**: ರಕ್ತ ಕಣ್ಣೀರು, ಹೆಣ್ಣು ಪಡೆದವರು, ಸೇಡಿನ ಸಿಡಿಲು, ಹಿರಿಯರಿಲ್ಲದ ಮನೆ, ಆಶೀರ್ವಾದ, ಗೌಡ್ರ ಮಗಳ ಗದ್ಲ, ಪುಂಡುಗಂಡ,

ಪ್ರತಿಫಲ. ಹೆಜ್ಜೆ ತಪ್ಪಿದ ಹೆಣ್ಣು. ಭಾಗ್ಯ ತಂದ ಭಾರತಿ. ಶಿವದರ್ಶನ. ಇವಳೆಂಥ ಸೊಸೆ. ಯಾರ ವಿಶ್ವಾಸ ಯಾರಿಗೆ. ಬಾಸಿಂಗಬಲ ಮುಂತಾದ ಸುಮಾರು 50 ನಾಟಕಗಳು.

ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿರುವ ಈ ಕೆಳಕಂಡ ಸಾಹಿತಿಗಳು 'ನಾಟಕ' ವಿಭಾಗವನ್ನು ಸಂಪನ್ನಗೊಳಿಸಲು ಬಹಳ ಶ್ರಮಿಸಿದ್ದಾರೆ. ಇವರ ಕೊಡುಗೆಗಳು ಬಹಳ ಅಮೂಲ್ಯ.

ಕೆ. ಎನ್. ಭಟ್ಟ ('ವಿಕಾಸ'–1967). ರಾಮದಾಸ ('ಇದು ಭಾರತ'-1976). ಎಂ. ಎಸ್. ಕೆ. ಪ್ರಭು ('ಒಕ'–1977). ಶ್ರೀ ಭರತೇಶ ('ಮಹಾ ಸನ್ನಿಧಾನ'–1978). ಶ್ರೀಮತಿ ವಿಜಯಾ ('ಬಂದರೋ ಬಂದರು'–1980). ಗೋಪಾಲ ವಾಜಪೈ ('ದೊಡ್ಡಪ್ಪ'–1983). ವಿ. ಜಿ. ಕೃಷ್ಣಮೂರ್ತಿ ('ನೃಪ ಸೋಮೇಶ್ವರ'–1985). ಎಚ್. ಎಸ್. ಶಿವಪ್ರಕಾಶ್ ('ಮಹಾಚೈತ್ರ'–1986).

ವ್ಯಾಸರಾಯರು ಭಾಷಣ ನಿಲ್ಲಿಸಿ ಮೇಲೆದ್ದರು. "ನಾಳೆ ವಿಮರ್ಶೆ. ಸಂಪಾದನೆ. ಸಂಶೋಧನಾ ವಿಭಾಗ ಸಂಪನ್ನಗೊಳಿಸಿರುವವರನ್ನು ಪರಿಚಯಿಸುತ್ತೇನೆ" ಮತ್ತೆ ನುಡಿದು "ಪದ್ಮಮ್ಮಾ ಒಂದು ಲೋಟಾ ಕಾಫಿ ಕೊಡ್ತೀಯೇನಮ್ಮ?" ಎನ್ನುತ್ತಾ ಅಡಿಗೆ ಮನೆಯತ್ತ ನಡೆದರು.

—000—

## (ಈ) ವಿಮರ್ಶೆ / ಸಂಪಾದನೆ / ಸಂಶೋಧನೆ ನಿಪುಣರು

"ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ವಿಮರ್ಶಾರಂಗಕ್ಕೆ ಅಡಿ ಇರಿಸಿದ ಮೊದಲಿಗ ಸುಮಾರು 2300 ವರ್ಷಗಳ ಹಿಂದೆ ಪ್ರಾರಂಭವಾದ ವಿಮರ್ಶಾ ಸಾಹಿತ್ಯ ಈಗ ವಿಪುಲವಾಗಿ ಬೆಳೆದಿದೆ" ವ್ಯಾಸರಾಯರು ಮಾತನ್ನು ಮುಂದುವರಿಸಿದರು.

'ಒಂದು ಸಾಹಿತ್ಯ ಕೃತಿಯನ್ನು ವಿಭಜಿಸಿ, ವಿಶ್ಲೇಷಿಸಿ ಅಭ್ಯಸಿಸುವುದು ಮತ್ತು ಅದನ್ನು ಇತರ ಕೃತಿಗಳೊಂದಿಗೆ ಹೋಲಿಸುವುದು ಅಥವಾ ವಿಶ್ಲೇಷಣೆ ಮತ್ತು ತುಲನೆ ವಿಮರ್ಶಕನ ಎರಡು ಸಾಧನಗಳು' ಎಂದು ಆಂಗ್ಲ ಕವಿ ವಿಮರ್ಶಕ ಟಿ. ಎಸ್. ಎಲಿಯೆಟ್ ಒಂದೆಡೆ ಹೇಳಿದ್ದಾನೆ. ಆದ್ದರಿಂದ ವಿಮರ್ಶಕನಿಗೆ ಶಾಸ್ತ್ರೀಯ ಕಲೆ, ಸಾಹಿತ್ಯಗಳ ಪರಿಜ್ಞಾನ, ಸಮಕಾಲೀನ ಪ್ರಜ್ಞೆ, ಇತಿಹಾಸ ಹಾಗೂ ವಿಜ್ಞಾನದ ಬೆಳವಣಿಗೆಯ ಪರಿಚಯ ಇರುವುದು ಮಾತ್ರವಲ್ಲದೆ ಸಹೃದಯತೆಯೂ ಇರಬೇಕು. ಪೂರ್ವಾಗ್ರಹವಿಲ್ಲದ ವಿಶಾಲ ಮನೋಭಾವ ರಸಾನುಭವ ಪಡೆಯುವ ನಿರ್ಮಲಚಿತ್ತ, ಯಾವ ದಾಕ್ಷಿಣ್ಯಕ್ಕೂ ಕಟ್ಟು ಬೀಳದೆ ಸತ್ಯ ಹೇಳುವ ದಿಟ್ಟತನ, ಸ್ಪಷ್ಟವಾಗಿ ಹೇಳಬಲ್ಲ ಧೈರ್ಯ ಇವು ಸಮರ್ಥ ವಿಮರ್ಶಕನ ಅರ್ಹತೆಗಳು. ಈ ಗುಣಗಳುಳ್ಳ ವ್ಯಕ್ತಿ ಕವಿ-ಸಾಹಿತಿ ಆದಾಗ ಆತನ ಕೃತಿಗಳು ರಸಪೂರ್ಣ ಹಾಗೂ ಕಲಾ ಸಂಪನ್ನವಾಗಿರುವುದರಲ್ಲಿ ಸಂದೇಹವಿಲ್ಲ.

ಕವಿ ಚಕ್ರವರ್ತಿ ಕವಿ ರನ್ನನ ಜೀವನ ಚರಿತ್ರೆ ಗ್ರಂಥ ವಿಮರ್ಶೆ ಬರೆದ **ರಾಮಾನುಜಯ್ಯಂಗಾರ್**[1], 19ನೇ ಶತಮಾನದ ಪ್ರಸಿದ್ಧ ವಿಮರ್ಶಕರಾದರೆ 'ರಾಮಚಂದ್ರ ಚರಿತ ಪುರಾಣ ವಿಮರ್ಶೆ' ಬರೆದ **ಬಿ. ಕೃಷ್ಣಪ್ಪ**, 'ಶ್ರೀ ಕವಿ ಪಂಪ' ಬರೆದ **ಜಿ. ಪಿ. ರಾಜರತ್ನಂ**[2], 'ಕುಮಾರವ್ಯಾಸ' ಮತ್ತು 'ಶೈಲಿ' ಯನ್ನು ವಿಮರ್ಶಿಸಿದ **ಎಸ್. ವಿ. ರಂಗಣ್ಣ**[3], ರನ್ನನ ಕೃತಿ ರತ್ನ ಪ್ರಕಾಶಿಸುವಂತೆ ನಸುಬೆಳಕಿಗೆ ಹಿಡಿ

---

1 ಜೀವಿತ ಕಾಲ: ಕ್ರಿ.ಶ. 1862-1937. ಲೇಖಕರು; ಪತ್ರಿಕೋದ್ಯಮಿಗಳು. ಇವರು ರಚಿಸಿರುವ ವಿಮರ್ಶಾಗ್ರಂಥಗಳು: ಕವಿಕಾರ್ಯ ಪ್ರಶಂಸೆ, ಕವಿಸಮಯಂ, ಸುವೃತ್ತ ಅಥವಾ ಕರ್ಮವಿಲಾಸ. ಪರಿಷ್ಕರಿಸಿದ ಗ್ರಂಥಗಳು: ಪಂಪನ ಆದಿಪುರಾಣ, ಹರಿಹರನ ಪಂಪಾಶತಕಂ, ದುರ್ಗಸಿಂಹನ ಪಂಚತಂತ್ರ, ಭಾವಚಿಂತಾರತ್ನಂ, ಚಿಕ್ಕದೇವರಾಜ ವಿಜಯ, ಹದಿಬದೆಯ ಧರ್ಮ, ಮುದ್ದಣ್ಣನ ರಾಮಾಶ್ವಮೇಧ. ಜನ್ಮಸ್ಥಳ: ಮಂಡ್ಯ. ಪುಟ 35 ನೋಡಿ.

2 ಜೀವಿತಕಾಲ: ಕ್ರಿ ಶ. 1908-1979. ತಂದೆ: ಗೋಪಾಲಕೃಷ್ಣಯ್ಯಂಗಾರ್. ಹುಟ್ಟಿದೂರು: ಕ್ಲೋಸ್‌ಪೇಟೆ (ರಾಮನಗರ).

3 ಪುಟ 159 ನೋಡಿ. "ವಿಮರ್ಶೆ/ಸಂಪಾದನಾ ವಿಭಾಗದಲ್ಲಿನ ಕೃತಿಗಳು: ಕುಮಾರವ್ಯಾಸ ವಾಣಿ, ನಾಟುನುಡಿ, ರುಚಿ, ವಿಡಂಬನ, ಪಾಶ್ಚಾತ್ಯ ಗಂಭೀರ ನಾಟಕಗಳು ಮುಂತಾದವು.

ದಿರುವ ರಂ: ಶ್ರೀ ಮುಗಳಿ, 'ನಾಡೋಜ ಪಂಪ'ದ ಮುಳಿಯ ತಿಮ್ಮಪ್ಪಯ್ಯ[1], ಆದಿಕವಿ ವಾಲ್ಮೀಕಿಯನ್ನು ವಿಮರ್ಶಿಸಿರುವ ಮಾಸ್ತಿ[2], ಅಭಿಜ್ಞಾನ ಶಾಕುಂತಲದ ವಿ. ಸೀ.[3], ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು ಪರಿಚಯ ಮಾಡಿಸಿರುವ ವಿ. ಕೃ. ಗೋಕಾಕ್[4], 'ಭಾಸಕವಿ' ದರ್ಶನ ಮಾಡಿಸಿರುವ ಎ. ಆರ್. ಕೃಷ್ಣಶಾಸ್ತ್ರಿ[5], ಕಾವ್ಯ ಕುತೂಹಲ ಕೆರಳಿಸಿರುವ ಪು. ತಿ. ನ.[6], ಕಾವ್ಯ ವಿಹಾರದ ಕುವೆಂಪು[7], 'ನಂಜುಂಡ ಕವಿ' ದರ್ಶನ ಮಾಡಿಸಿರುವ ದೇಜಗೌ, ಕನ್ನಡ ಸಾಹಿತ್ಯ ದಲ್ಲಿ ನಾಲ್ಕು ನಾಟಕ ರತ್ನಗಳು' ಪರಿಚಯಿಸಿರುವ ಡಾ|| ಬೇಂದ್ರೆ[8], ನೂರಾರು ವಿಮರ್ಶಾ ಲೇಖನಗಳನ್ನು ಬರೆದಿರುವ ಕಾರಂತರು[9]. 'ಭಾರತೀಯ ಕಾವ್ಯ ಮೀಮಾಂಸೆ'ಯ ಲೇಖಕ ತೀ.ನಂ.ಶ್ರೀ[10]. 'ವಚನ ಧರ್ಮಸಾರ'ದ ಎಂ.ಆರ್.ಶ್ರೀ. ವಿಮರ್ಶಾಕ್ಷೇತ್ರದಲ್ಲಿ ಉಲ್ಲೇಖನೀಯರು.

ಕನ್ನಡದಲ್ಲಿ ಸಂಶೋಧನೆ ಪ್ರಾರಂಭವಾದದ್ದು ವಿದೇಶಿಯರ ಪ್ರೇರಣೆ ಮತ್ತು ಪ್ರೋತ್ಸಾಹದಿಂದಲೇ ಎಂದು ಹೇಳಬಹುದು. ಸಂಶೋಧನಾ ದೃಷ್ಟಿಯನ್ನು ಬೆಳೆಸಿ ದವರೂ ಸಹ ಪಾಶ್ಚಾತ್ಯರೇ. ಇವರಲ್ಲಿ ಮುಖ್ಯರು ರೆ|| ಎಫ್. ಕಿಟ್ಟಲ್[11], ಬಿ. ಎಲ್. ರೈಸ್. ಜೆ. ಎಫ್. ಫ್ಲೀಟ್[12] ಮುಂತಾದವರು. ಅನಂತರ ಈ ಪರಂಪರೆಯನ್ನು ಮುಂದುವರಿಸಿದವರೆಂದರೆ ಆರ್. ನರಸಿಂಹಾಚಾರ್. ಎ. ವೆಂಕಟಸುಬ್ಬಯ್ಯ, ಹೊಸ ಕೋಟೆ ಕೃಷ್ಣ ಶಾಸ್ತ್ರಿ. ಗೋವಿಂದ ಪೈ. ಕೆ. ಬಿ. ಪಾಠಕ್. ಎನ್. ಎಸ್. ರಾಜ

---

1 ಪುಟ 41, 142 ನೋಡಿ. 2 ಪುಟ 143, 144 ನೋಡಿ.

3 ಪುಟ 150 ನೋಡಿ. ವಿಮರ್ಶಾಕೃತಿಗಳು : ಕರ್ನಾಟಕ ಕಾದಂಬರಿ, ಕಲಾನುಭವ, ಕವಿ ಕಾವ್ಯ ದೃಷ್ಟಿ-ವಿಮರ್ಶೆ, ಮಹಾಕವಿ ಪಂಪ, ವಾಲ್ಮೀಕಿ ರಾಮಾಯಣ, ಸತ್ಯ ಮತ್ತು ಮೌಲ್ಯ, ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ, ಸಾಹಿತ್ಯಾಲೋಕನ.

4 ಪುಟ 164 ನೋಡಿ. 'ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು' ವಿಮರ್ಶಾ ವಿಭಾಗದಲ್ಲಿ ಪ್ರಸಿದ್ಧ ಕೃತಿ.

5 ಜೀವಿತ ಕಾಲ : ಕ್ರಿ.ಶ. 1890-1968. ಪುಟ 142-43 ನೋಡಿ. ಸಂಪಾದನೆ/ವಿಮರ್ಶೆ ಕೃತಿಗಳು : ಕನ್ನಡ ಕೈಪಿಡಿ, ಕಾವ್ಯಲಕ್ಷಣ ವಿಭಾಗ, ಹರಿಶ್ಚಂದ್ರ ಕಾವ್ಯ ಸಂಗ್ರಹ, ಭಾಸಕವಿ, ಸಂಸ್ಕೃತ ನಾಟಕ, ಸರ್ವಜ್ಞ ಕವಿ, ಕವಿಜಿಹ್ವಾಬಂಧನಂ, ನಿಬಂಧಮಾಲಾ ಮುಂತಾದವು.

6 ಪುಟ 162 ನೋಡಿ.

7 ಪುಟ 160 ನೋಡಿ.

ಸಂಪಾದನೆ/ವಿಮರ್ಶೆ ಕೃತಿಗಳು : ವಿಭೂತಿ ಪೂಜೆ, ಕಾವ್ಯವಿಹಾರ, ತಪೋನಂದನ ರಸೋ ವೈಸಃ, ಸಾಹಿತ್ಯ ವಿಮರ್ಶೆ – ಕಾವ್ಯಮೀಮಾಂಸೆ, ಸಾಹಿತ್ಯ ಪ್ರಚಾರ, ದ್ರೌಪದಿಯ ಶ್ರೀಮುಡಿ, ಷಷ್ಠಿ ನಮನ, ಸರೋವರದ ಸಿರಿಗನ್ನಡಿಯಲ್ಲಿ, ದರ್ಶನ ವಿಮರ್ಶೆ.

8 ಪುಟ 147 ನೋಡಿ. 9 ಪುಟ 200-201 ನೋಡಿ.

10 ಪುಟ 158 ನೋಡಿ. 11 ಪುಟ 110 ನೋಡಿ.

12 ಪುಟ 120 ನೋಡಿ.

ಪುರೋಹಿತ್, ಎಸ್. ಜಿ. ನರಸಿಂಹಾಚಾರ್ಯರು. ಬಿ. ಎಂ. ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಡಿ. ಕೆ. ಭೀಮಸೇನರಾವ್. ತೀ. ನಂ. ಶ್ರೀ., ಡಿ. ಎಲ್. ಎನ್., ಪಿ. ಬಿ. ದೇಸಾಯಿ, ಆರ್. ಎಸ್. ಪಂಚಮುಖಿ, ಜಿ. ಎಸ್. ಗಾಯಿ, ಫ. ಗು. ಹಳಕಟ್ಟಿ, ಗುರುರಾಜಭಟ್, ಹಾ. ಮಾ. ನಾಯಕ. ಎನ್. ಬಸವಾರಾಧ್ಯ, ಡಾ ಕೆ. ಕೃಷ್ಣಮೂರ್ತಿ. ಎಂ. ಹೆಚ್. ಕೃಷ್ಣ, ಎಂ. ಶೇಷಾದ್ರಿ ಮುಂತಾದವರು ಪ್ರಮುಖರು.

ಇವರಲ್ಲಿ ಬಹಳಷ್ಟು ಜನರ ಬಗ್ಗೆ ಆಗಲೇ ಹೇಳಿದ್ದೇನೆ. ಈಗ ಈ ವಿಭಾಗಗಳನ್ನು ಸಂಪನ್ನಗೊಳಿಸಿರುವ ಪ್ರಮುಖರನ್ನು ಒಬ್ಬೊಬ್ಬರನ್ನಾಗಿ ಪರಿಚಯ ಮಾಡಿಕೊಳ್ಳೋಣ.

**ಪ್ರೊ॥ ಕೆ. ಬಿ. ಪಾಠಕ್**[1] : (ಕಾಶಿನಾಥ ಬಾಪೂಜಿ ಪಾಠಕ್)

ಜೈನ ಸಾಹಿತ್ಯದ ಮೇಲೆ ಅಪಾರ ಸಂಶೋಧನೆ ಮಾಡಿ ಅನೇಕ ಪ್ರೌಢ ಲೇಖನಗಳನ್ನು ಬರೆದಿದ್ದಾರೆ.

ಲೂಯಿಸ್ ರೈಸ್ ಹಾಗೂ ಫ್ಲೀಟರಿಂದ ಸಂಶೋಧನೆ ಬಗ್ಗೆ ಬಹಳ ಮೆಚ್ಚುಗೆಗಳಿಸಿದ್ದ ಪ್ರತಿಭಾವಂತರು. ಇಂಡಿಯನ್ ಆಂಟಿಕ್ವೆರಿಗೆ ಅಪಾರ ಸಂಖ್ಯೆಯ ಲೇಖನಗಳನ್ನು ಬರೆದಿದ್ದಾರೆ.

'ಕವಿರಾಜಮಾರ್ಗ' ಸಂಪಾದಿತ ಕೃತಿ. ರೈಸ್ ಸಂಪಾದಿತ 'ವಿಕ್ರಮಾರ್ಜುನ ವಿಜಯ'. ಪರಿಷ್ಕರಿಸಿದ್ದಾರೆ.

**ಆರ್. ನರಸಿಂಹಾಚಾರ್**[2] : ಉದ್ದಾಮ ಪಂಡಿತರು.

ಸಂಪಾದನೆ/ಸಂಶೋಧನಾ ವಿಭಾಗದಲ್ಲಿ ಅತ್ಯಂತ ಮಹತ್ತರ ಸೇವೆ ಸಲ್ಲಿಸಿರುವ ಸಾಹಿತಿ. 'ರಾವ್‌ಬಹದ್ದೂರ್', 'ಪ್ರಾಕ್ತನ ವಿಮರ್ಶ ವಿಚಕ್ಷಣ', 'ಕರ್ನಾಟಕ ಪ್ರಾಚ್ಯ ವಿದ್ಯಾವೈಭವ' ಮೊದಲಾದ ಬಿರುದುಗಳನ್ನು ಲಭಿಸಿದ್ದವು. ದೇವರಾಜ ಬಹದ್ದೂರ್ ಪಾರಿತೋಷಕ ಸಹ ಲಭಿಸಿತ್ತು. ಸಾಹಿತ್ಯ ಪರಿಷತ್ತಿನ ನಾಲ್ಕನೇ ಅಧಿವೇಶನ ಧಾರವಾಡದಲ್ಲಿ ನಡೆದಾಗ ಅದರ ಅಧ್ಯಕ್ಷ ಪೀಠ ಅಲಂಕರಿಸಿದ್ದರು. ಅನೇಕ ವರ್ಷಗಳ ಅವ್ಯಾಹತ ಸಂಶೋಧನೆಯಿಂದ 1500 ಕವಿಗಳ ಚರಿತ್ರೆಯನ್ನು, ಕೃತಿ ಪರಿಚಯವನ್ನೂ 'ಕರ್ನಾಟಕ ಕವಿ ಚರಿತ್ರೆ'ಯಲ್ಲಿ ಮಾಡಿಕೊಟ್ಟಿದ್ದಾರೆ. (3 ಸಂಪುಟ).

ಇತರ ಕೃತಿಗಳು : 'ನೀತಿಮಂಜರಿ' (ತಮಿಳಿನ 'ಕುರುಳ್'ನ ಆಧಾರಿತ ಗ್ರಂಥ).

---

1 ಜೀವಿತ ಕಾಲ : ಕ್ರಿ.ಶ. 1850–1932. ತಂದೆ : ಬಾಪು ಶಾಸ್ತ್ರಿ, ಡೆಕ್ಕನ್ ಕಾಲೇಜಿನ ಪ್ರಾಚ್ಯ ಭಾಷೆಗಳ ಪ್ರೊಫೆಸರ್ ಆಗಿದ್ದರು.

2 ಪುಟ 130 ನೋಡಿ. ಜೀವಿತ ಕಾಲ : ಏಪ್ರಿಲ್ 1860–1936. 1906 ರಿಂದ 16 ವರ್ಷಕಾಲ ಪ್ರಾಚ್ಯ ಸಂಶೋಧನಾ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದರು. ಇಂಡಿಯನ್ ಆಂಟಿಕ್ವೆರಿಯಲ್ಲಿ ಹಲವಾರು ಸಂಶೋಧನಾ ಲೇಖನಗಳು ಪ್ರಕಟಗೊಂಡಿವೆ.

ಶಾಸನ ಪದ್ಯಮಂಜರಿ. ಕನ್ನಡ ಶಾಸನಪದ್ಯಸಂಗ್ರಹ, ನಗೆಗಡಲು, ಶಬ್ದಾನುಶಾಸನ, ಕನ್ನಡ ಭಾಷಾ ಚರಿತ್ರೆ (The History of Kannada Language).

2ನೇ ನಾಗವರ್ಮನ ಕರ್ನಾಟಕ 'ಭಾಷಾ ಭೂಷಣ' ಹಾಗೂ 'ಶಬ್ದಸ್ಮೃತಿ' ಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

**ಎಸ್. ಜಿ. ನರಸಿಂಹಾಚಾರ್**[1]**:** ಹಳೆಯ ಪೀಳಿಗೆಯ ವಿದ್ವಾಂಸರು. ಪಸರಾಂತ ಗ್ರಂಥ ಸಂಪಾದಕರು, ಭಾಷಾಂತರಕಾರರು, ಮಕ್ಕಳ ಸಾಹಿತ್ಯ ರಚನಕಾರರು.

ಸರ್ಕಾರದ ಪ್ರಾಚ್ಯ ಸಂಶೋಧನಾಲಯದಲ್ಲಿ ಪಂಡಿತರಾಗಿ, ಗ್ರಂಥಪಾಲರಾಗಿ ಕೆಲಸ ಮಾಡಿದ್ದಾರೆ. ಕೇವಲ 45ನೇ ವಯಸ್ಸಿನಲ್ಲಿ ಮರಣಿಸಿದುದು ಸಾಹಿತ್ಯಕ್ಕಾದ ಅಪಾರ ನಷ್ಟ.

ನರಸಿಂಹಾಚಾರ್‌ರವರು, ಎಂ. ಎ. ರಾಮಾನುಜಯ್ಯಂಗಾರ್[2] ಜೊತೆ ಸೇರಿ ಅನೇಕ ಕೃತಿಗಳನ್ನು ಸಂಪಾದಿಸಿದ್ದಾರೆ. ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ನರಸಿಂಹಾಚಾರ್ ಸಂಪಾದಿಸಿರುವ ಕೃತಿಗಳು: ಅಜನೃಪ ಚರಿತೆ, ದಿಲೀಪ ಚರಿತೆ (ಷಟ್ಪದಿಯಲ್ಲಿ) ಪದ್ಯಸಾರ, ಪದ್ಯ ಸಂಗ್ರಹ, ಆದಿ ಪುರಾಣ, ಜಗನ್ನಾಥ ವಿಜಯ, ಮುಂತಾದವು.

'ಬಾಲ ಬೋಧೆ' ಯಲ್ಲಿ ಇವರೇ ರಚಿಸಿದ್ದ ಅನೇಕ ಕವನಗಳು ಸೇರಿದ್ದವು. 'ಇಟ್ಟರೆ ಸೆಗಣಿಯಾದೆ ತಟ್ಟಿದರೆ ಕುರುಳಾದೆ'. 'ಬಾರೋ ನಾವಾಡುವ ಬಾರೋ ಇವರದೇ ಶಿಶು ಗೀತೆಗಳು.

'ಕರ್ನಾಟಕ ಕಾವ್ಯಮಂಜರಿ' ಮತ್ತು 'ಕರ್ನಾಟಕ ಕಾವ್ಯ ಕಲಾನಿಧಿ' ರಾಮಾನುಜಯ್ಯಂಗಾರ್ ಜೊತೆ ಸೇರಿ ನಡೆಸಿದ್ದ ಪತ್ರಿಕೆಗಳು.

**ಆರ್. ರಾಮಾಶಾಸ್ತ್ರಿ**[3]**:** ಪ್ರಸಿದ್ಧ ಸಂಸ್ಕೃತ ವಿದ್ವಾಂಸರು. ಕನ್ನಡ, ಸಂಸ್ಕೃತ ಹಾಗೂ ಇಂಗ್ಲೀಷಿನಲ್ಲಿ ಅಪಾರ ಪಾಂಡಿತ್ಯ ಗಳಿಸಿದ್ದ ಸಂಶೋಧಕರು, ಅನೇಕ ಒಳ್ಳೆಯ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಪರಿಷ್ಕರಿಸಿದ್ದಾರೆ.

'ಅರ್ಥಶಾಸ್ತ್ರ ವಿಶಾರದ' ನಾಲ್ವಡಿ ಕೃಷ್ಣರಾಯರು ನೀಡಿದ್ದ ಬಿರುದು. ಮೈಸೂರು ಸರ್ಕಾರ 'ಮಹಾಮಹೋಪಾಧ್ಯಾಯ' ಪ್ರಶಸ್ತಿ ನೀಡಿತ್ತು. 'ವಿದ್ಯಾಲಂಕಾರ' ವಾರಣಾಸಿಯ ಭಾರತೀ ಧರ್ಮ ಮಹಾಮಂಡಲಿ ನೀಡಿದ್ದ ಪ್ರಶಸ್ತಿ.

ವಿದ್ವಾನ್ ಶಾಸ್ತ್ರಿಗಳು ಮದರಾಸಿನ ಬಿ. ಎ. (1899) ರಲ್ಲಿ ಗಳಿಸಿದ ನಂತರ ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿ ಉದ್ಯೋಗ ಹಿಡಿದರು. ಅಲ್ಲಿ ಸಂಸ್ಕೃತ

---

1 ಜೀವಿತಕಾಲ: (1862–1907). ಶ್ರೀರಂಗಪಟ್ಟಣದಲ್ಲಿ ಜನನ.

2 ಪುಟ 35 ನೋಡಿ.

3 ಜೀವಿತ ಕಾಲ: 1868–1944. ಮೈಸೂರು ಜಿಲ್ಲೆ ರುದ್ರಪಟ್ಟಣದಲ್ಲಿ ಜನನ. ತಂದೆ: ವೆಂಕಟರಮಣಯ್ಯ. ತಾಯಿ: ಪುಟ್ಟಮ್ಮನವರು.

ಹಸ್ತ ಪ್ರತಿಗಳನ್ನು ನಿರೀಕ್ಷಿಸುತ್ತ ಸಂಶೋಧನೆಯಲ್ಲಿ ಆಸಕ್ತಿ ಮೂಡಿ 'ಕೌಟಿಲ್ಯನ ಅರ್ಥ ಶಾಸ್ತ್ರ' ಸಂಪಾದಿಸಿದರು. ಇತರ ಸಂಪಾದಿತ ಕೃತಿಗಳು: (ಸಂಸ್ಕೃತ) ಬೌಧಾಯನ ಗೃಹ್ಯಸೂತ್ರ, ಯೋಗಾನಂದನ 'ಆಯುರ್ವೇದ ಸೂತ್ರ', 'ಅಲಂಕಾರ ಮಣಿಹಾರ', 'ವಿದ್ಯಾ ಮಾಧವೀಯ'. 3ನೇ ಸೋಮೇಶ್ವರನ 'ಅಭಿಲಷಿತಾರ್ಥ ಚಿಂತಾಮಣಿ'–ಮೂರು ಪ್ರಕರಣಗಳು, ಪ್ರತಾಪರುದ್ರನ ಸರಸ್ವತಿ ವಿಲಾಸ, ವರಾಹ ಗೃಹ್ಯಸೂತ್ರ.

ಸಂಪಾದಿತ ಕನ್ನಡ ಗ್ರಂಥಗಳು: ಕುಮಾರವ್ಯಾಸ ಭಾರತ (ವಿರಾಟಪರ್ವ, ಲಿಂಗಣ್ಣ ಕವಿಯ 'ಕೆಳದಿ ನೃಪ ವಿಜಯ'. ಸೋಮರಾಜನ 'ಉದ್ಭಟ ಕಾವ್ಯ', ಕುಮಾರವ್ಯಾಸ ಭಾರತ (ಉದ್ಯೋಗ ಪರ್ವ), ರುದ್ರಭಟ್ಟನ 'ಜಗನ್ನಾಥ ವಿಜಯ' ಸೋಮನಾಥನ 'ಅಕ್ರೂರ ಚರಿತ್ರೆ', ನಯಸೇನನ 'ಧರ್ಮಾಮೃತ'. ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ' ಮುಂತಾದವು.

ಸ್ವಂತ ಕೃತಿಗಳು: ಗವಾಂ ಅಯನ, ದಿವೇದಿಕ್ ಇರಾ, ವೇದಾಂಗ ಜ್ಯೋತಿಷ, ದಿ ವೇದಿಕ್ ಸೈಕಲ್ ಆಫ್ ಎಕ್ಲಿಪ್ಸಸ್. ದಿ ಎವಲ್ಯೂಷನ್ ಆಫ್ ಇಂಡಿಯನ್ ಪಾಲಿಟಿ, ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ (2 ಸಂಪುಟ)

ವಾಷಿಂಗ್‌ಟನ್ ವಿಶ್ವವಿದ್ಯಾಲಯ ಹಾಗೂ ಕಲ್ಕತ್ತಾ ವಿಶ್ವ ವಿದ್ಯಾಲಯಗಳು ಇವರಿಗೆ ಡಾಕ್ಟರೇಟ್ ನೀಡಿದ್ದವು. ಬೆಂಗಳೂರಿನ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲ್ ಹಾಗೂ ಓರಿಯಂಟಲ್ ಲೈಬ್ರರಿಯ ಕ್ಯುರೇಟರ್ ಆಗಿದ್ದರು.

**ಹೆಮ್ಮಿಗೆ ದೇಶಿಕಾಚಾರ್ಯ**[1]**:** ಹಳೆಯ ಪೀಳಿಗೆಯ ವಿದ್ವಾಂಸರು ಗ್ರಂಥ ಸಂಪಾದಕರು, ಸಂಶೋಧಕರು. ಅಪಾರ ಸಂಖ್ಯೆಯಲ್ಲಿ ಕನ್ನಡನುಡಿ, ಪ್ರಬುದ್ಧ ಕರ್ಣಾಟಕ. ಜೀವನ ಮುಂತಾಗ ಪತ್ರಿಕೆಗಳಲ್ಲಿ ಲೇಖನ ಬರೆದಿದ್ದಾರೆ.

ಸಂಪಾದಿಸಿರುವ ಕೃತಿಗಳು: ಪ್ರಣಯ ತರಂಗಿಣಿ (ಕಂದ ವೃತ್ತದಲ್ಲಿ) ವರದ ಕರಕಮಲಸ್ತವಂ, ಶ್ರೀ ಯಾಮುನಾಚಾರ್ಯರ 'ಸ್ತೋತ್ರ ರತ್ನ', ಸಂಸ್ಕೃತ ಕೃತಿಯನ್ನೂ. 'ಮುಕುಂದ ಮಾಲಾ ಸ್ತೋತ್ರ' ವನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾರೆ.

'ಪುಷ್ಪಾಪಹರಣ ಗೀತ' (ಭಾಮಿನಿ ಷಟ್ಪದಿ ಕೃತಿ).

**ಫ. ಗು. ಹಳಕಟ್ಟಿ**[2]**:** ಕನ್ನಡ, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಪಾಂಡಿತ್ಯ

---

1 ತಂದೆ ವೇದಾಂತ ಕೃಷ್ಣ ಬುಧಪರ್ಯ.

2 ಜೀವಿತ ಕಾಲ: ಕ್ರಿ.ಶ. 2-7-1880 ರಿಂದ 27-8-1964. ಜನನ–ಧಾರವಾಡದಲ್ಲಿ. ಇವರ ಪೂರ್ಣ ಹೆಸರು: ಫಕೀರಪ್ಪ ಗುರುಬಸಪ್ಪ ಹಳಕಟ್ಟಿ. ಇವರ ತಂದೆ ಗುರುಬಸಪ್ಪ ಹಳಕಟ್ಟಿಯವರು (1854–1936). ಹೆಸರಾಂತ ಸಾಹಿತಿಯಾಗಿದ್ದರು. ಸಿಕಂದರ ಬಾದಶಹನ ಚರಿತ್ರೆ, ಫ್ರಾನ್ಸಿನ ಮಹಾಕ್ರಾಂತಿ ಮುಂತಾದ 9 ಕೃತಿಗಳನ್ನು ರಚಿಸಿದ್ದಾರೆ. ತಾಯಿ: ದಾನಾದೇವಿ.

ಗಳಿಸಿದ್ದ ಇವರು 'ಶಿವಾನುಭವ' ಮಾಸ ಪತ್ರಿಕೆಯನ್ನು ಹೊರಡಿಸುತ್ತಿದ್ದುದಲ್ಲದೆ ವಚನ ಶಾಸ್ತ್ರದ ಬಗ್ಗೆ ಬಹಳ ಸಂಶೋಧನೆ ಮಾಡಿ ಅಪಾರ ಸಂಖ್ಯೆಯಲ್ಲಿ ಕೃತಿಗಳನ್ನು ಸಂಪಾದಿಸಿ ಹೊರತಂದಿದ್ದರು. ವಿಮರ್ಶೆ ಮಾಡಿದ್ದಾರೆ. 'ನವ ಕರ್ನಾಟಕ' ಪತ್ರಿಕೆ ಪ್ರಾರಂಭಿಸಿ ನವ ಕರ್ನಾಟಕ ಕಟ್ಟಲು ಬಹಳ ಶ್ರಮಿಸಿದ್ದರು. ಮುಂಬಯಿ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದರು.

ಕರ್ನಾಟಕ ವಿಶ್ವವಿದ್ಯಾಲಯವು ಇವರ ಅಪಾರ ಸಾಹಿತ್ಯ ಸೇವೆಯನ್ನು ಗಮನಿಸಿ 'ಡಾಕ್ಟರೇಟ್' ನೀಡಿತ್ತು. ಭಾರತ ಸರ್ಕಾರ 'ರಾವ್ ಬಹದ್ದೂರ್' ಪ್ರಶಸ್ತಿ ನೀಡಿ ಗೌರವಿಸಿತ್ತು. ಬಳ್ಳಾರಿಯಲ್ಲಿ ನಡೆದ 12ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ಅಲಂಕರಿಸಿದ್ದರು.

ಪರಿಷ್ಕರಿಸಿ ಸಂಪಾದಿಸಿರುವ ಕೃತಿಗಳು: ಬಸವೇಶ್ವರ ವಚನಗಳು, ಪ್ರಭು ದೇವರ ವಚನಗಳು, ವಚನಶಾಸ್ತ್ರಸಾರ. ಶಿವಶರಣರ ಚರಿತ್ರೆ. ಶಿವಾನುಭವ ಶಬ್ದ ಕೋಶ. ಅಮರ ಗಣಾಧೀಶ್ವರ ಚರಿತ್ರೆಗಳು. 770 ಅಮರ ಗಣಾಧೀಶ್ವರರ ಚರಿತ್ರೆ ಗಳು, ಆದಯ್ಯನ ವಚನಗಳು. ಆದಿಶೆಟ್ಟಿ ಪುರಾಣ, ಸಂಗನ ಬಸವೇಶ್ವರನ ವಚನಗಳು, ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಮುಂತಾದ ಸುಮಾರು ಅರವತ್ತು ಕೃತಿಗಳು.

**ಪ್ರೊ|| ಕೆ. ಎ. ನೀಲಕಂಠಶಾಸ್ತ್ರಿ[1]:** ಕಲ್ಲಿಡೈಕುರುಚಿ ಅಯ್ಯ ಅಯ್ಯರ್ ನೀಲಕಂಠ ಶಾಸ್ತ್ರಿಗಳು ಆರು ದಶಕಕ್ಕೂ ಹೆಚ್ಚು ಕಾಲವನ್ನು ಇತಿಹಾಸ ಅಧ್ಯಯನ, ಸಂಶೋಧನೆ ಗಾಗಿಯೇ ವ್ಯಯಿಸಿದ ವಿದ್ವಾಂಸರು. ಮದರಾಸು ಹಾಗೂ ಬನಾರಸ್ ವಿಶ್ವವಿದ್ಯಾನಿಲಯಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ 1952 ರಲ್ಲಿ ಮದರಾಸು ವಿಶ್ವವಿದ್ಯಾನಿಲಯದಿಂದ ನಿವೃತ್ತರಾದ ನಂತರ ಮೈಸೂರು ವಿಶ್ವವಿದ್ಯಾಲಯ ಸೇರಿ 4 ವರ್ಷ ದುಡಿದು ಅದರಿಂದಲೂ ನಿವೃತ್ತಗೊಂಡು ತಮ್ಮ ಉಳಿದ ಜೀವನವನ್ನು ಇತಿಹಾಸ ಸಂಶೋಧನೆಗಾಗಿಯೇ ಶ್ರಮಿಸಿದರು.

ಇವರ ಪ್ರಸಿದ್ಧ ಕೃತಿಗಳು: ಪಾಂಡ್ಯನ್ ರಾಜ್ಯ, ಚೋಳರ ಇತಿಹಾಸ, ಭಾರತದ ಬಗ್ಗೆ ವಿದೇಶಿಯರ ಕಾಣ್ಕೆ, ದಕ್ಷಿಣ ಭಾರತದ ಇತಿಹಾಸ, ದಕ್ಷಿಣ ಭಾರತದ ತಮಿಳು ರಾಜ್ಯಗಳು, ದ್ರಾವಿಡ ಸಾಹಿತ್ಯಗಳು, ಭಾರತದ ಇತಿಹಾಸ ಮುಂತಾದವುಗಳು.

ಶ್ರೀಯುತರಿಗೆ 1958 ರಲ್ಲಿ ಭಾರತ ಸರ್ಕಾರ ಪದ್ಮಭೂಷಣ ಪ್ರಶಸ್ತಿ ನೀಡಿ ಗೌರವಿಸಿದೆ.

**ಕೆ. ಜಿ. ಕುಂದಣಗಾರ[2]:** ಸಂಶೋಧನೆ, ಗ್ರಂಥ ಸಂಪಾದನೆ ಹಾಗೂ ನಿಘಂಟಿನ ರಚನಾ ಕ್ಷೇತ್ರದಲ್ಲಿ ಹೆಸರಿಸಬೇಕಾದ ವ್ಯಕ್ತಿ. 1961 ರಲ್ಲಿ ಗದುಗಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಸಂದಿತ್ತು.

---

1 ಜನನ : ಕ್ರಿ.ಶ. 1892.

2 ಪುಟ 120, 152 ನೋಡಿ. 'ಕೇಶವ' ಕಾವ್ಯನಾಮ.

'ವಾಗ್ಭೂಷಣ' ಮತ್ತು 'ಜಿನವಿಜಯ' ಪತ್ರಿಕೆಗಳ ಸಂಪಾದಕತ್ವ ಸಹ ಕೆಲಕಾಲ ನಿರ್ವಹಿಸಿದ್ದರು.

ಬಹು ಭಾಷಾ ವಿಶಾರದರು, ಕನ್ನಡ, ಇಂಗ್ಲೀಷ್, ಪಾಳಿ, ಅರ್ಧಮಾಗಧಿ, ಮರಾಠಿಗಳಲ್ಲಿ ಪಾಂಡಿತ್ಯವಿತ್ತು. ಶಿಲಾಶಾಸನ, ತಾಮ್ರಶಾಸನ, ಪ್ರಾಚೀನ ಅವಶೇಷ ಗಳನ್ನು ಕುರಿತು ಸಂಶೋಧನೆ ಮಾಡಿ ಉಪಯುಕ್ತ ಕೃತಿಗಳನ್ನು ರಚಿಸಿದ್ದಾರೆ.

ಕೃತಿಗಳು : ನೋಟ್ಸ್ ಆನ್ ಮಹಾಲಕ್ಷ್ಮಿ ಟೆಂಪಲ್, ಇನ್ಸ್ಕ್ರಿಪ್ಷನ್ ಇನ್ ನಾರ್ದರ್ನ್ ಕರ್ನಾಟಕ ಅಂಡ್ ಕೊಲ್ಲಾಪುರ್ ಸ್ಟೇಟ್, ಆದಿಪುರಾಣ, ಪರಿಹರನ ಪ್ರಶಸ್ತಿ (ಸಂಪಾದನೆ) ಮಹಾದೇವಿಯಕ್ಕ (ವಿಮರ್ಶೆ)

**ಶಿಯಾಳಿ ರಾಮಾಮೃತ ರಂಗನಾಥನ್**[1] : ಗ್ರಂಥಾಲಯದ ವ್ಯವಹಾರ, ಪುಸ್ತಕಗಳ ವರ್ಗೀಕರಣವನ್ನು ವೈಜ್ಞಾನಿಕವಾಗಿ ಅಭ್ಯಸಿಸಿ ಪರಿಷ್ಕರಿಸಿ, 'ದ್ವಿಬಿಂದು ವರ್ಗೀಕರಣ ಪದ್ಧತಿ' ಯನ್ನು ಕಾರ್ಯಾಚರಣೆಗೆ ತಂದ ವಿಶ್ವವಿಖ್ಯಾತರಾದ ವ್ಯಕ್ತಿ. ಎಂ. ಎ., ಎಲ್. ಟಿ. ಡಿಗ್ರಿ ಗಳಿಸಿ 6 ವರ್ಷ ಅಧ್ಯಾಪಕರಾಗಿ ದುಡಿದು ಅನಂತರದ ಜೀವನವನ್ನೆಲ್ಲಾ ಪುಸ್ತಕ ಭಂಡಾರಕ್ಕೇ ಮೀಸಲಿರಿಸಿದ್ದರು. ಲಂಡನ್ನಿನ ಉದ್ದಾಮ ಪಂಡಿತರಾದ 'ಸೇಯರ್ಸ್' ಬಳಿ ವರ್ಗೀಕರಣ ಶಾಸ್ತ್ರ ವ್ಯಾಸಂಗ ಮಾಡಿ ಭಾರತಕ್ಕೆ ಹಿಂತಿರುಗಿ ಅನೇಕ ಸುಧಾರಣೆಗಳನ್ನು ಕೈಗೊಂಡು ಯಶಸ್ವಿಗಳಾದರು. ರಂಗನಾಥನ್ ರವರ ನಿಸ್ವಾರ್ಥ ಸೇವೆಯನ್ನು ಗೌರವಿಸಿ ಬ್ರಿಟೀಷ್ ಸರಕಾರ 1936 ರಲ್ಲಿ 'ರಾವ್‌ಸಾಹೇಬ' ಬಿರುದಿತ್ತು ಸನ್ಮಾನಿಸಿತ್ತು. ದೆಹಲಿ ವಿಶ್ವ ವಿದ್ಯಾನಿಲಯ ಇವರಿಗೆ ಡಾಕ್ಟರೇಟ್ ನೀಡಿ ಗೌರವ ಸೂಚಿಸಿತ್ತು. ಭಾರತ ಸರಕಾರದ 'ಪದ್ಮಶ್ರೀ', ಅಮೆರಿಕಾದ ಪಿಟ್‌ಬರ್ಗ್ ವಿಶ್ವ ವಿದ್ಯಾನಿಲಯಗಳ (ಡಿಲಿಟ್) ಇವರ ವಿದ್ವತ್ತಿಗೆ ಸಂದ ಮನ್ನಣೆಗಳು.

ಕೃತಿಗಳು: 40 ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಸಾವಿರಾರು ಲೇಖನ ಗಳು ಪ್ರಪಂಚದಲ್ಲಿನ ಎಲ್ಲ ಪ್ರಮುಖ ಪತ್ರಿಕೆಗಳಲ್ಲೂ ಮುದ್ರಿತಗೊಂಡಿವೆ.

**ಬಸವನಾಳ**[2] : (ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ) ವಿದ್ಯಾಕ್ಷೇತ್ರದಲ್ಲಿ ಹೆಸರಿಸಬೇಕಾದ ವ್ಯಕ್ತಿ. ಧಾರವಾಡದ ಆರ್. ಎಲ್. ಎಸ್. ಹೈಸ್ಕೂಲು, ಸೊಲ್ಲಾ ಪುರದ ಕಾಡಾದಿ ಹೈಸ್ಕೂಲು, ಬೆಳಗಾವಿಯ ಜಿ. ಎ. ಹೈಸ್ಕೂಲು, ಹಾಗೂ ಲಿಂಗರಾಜ ಕಾಲೇಜುಗಳ ಸ್ಥಾಪಕರು.

ಇಂಗ್ಲೀಷ್, ಕನ್ನಡ, ಮರಾಠಿಯಲ್ಲಿ ಮಾಹಿತಿಯಿದ್ದ ಶ್ರೀಯುತರು ಗ್ರಂಥಗಳ ಪರಿಶೋಧನೆ ಹಾಗೂ ಸಂಪಾದನೆಗಾಗಿ ಬಹಳ ಶ್ರಮಿಸಿದ್ದಾರೆ.

---

1 ಜೀವಿತ ಕಾಲ : ಆಗಸ್ಟ್ 9, 1892–ಸೆಪ್ಟೆಂಬರ್ 27, 1972. ಮದ್ರಾಸ್ ಪ್ರಾಂತ್ಯದ 'ಶಿಯಾಳಿ'ಯಲ್ಲಿ ಜನನ.

2 ಜನನ–ಧಾರವಾಡದಲ್ಲಿ., ಜೀವಿತ ಕಾಲ–1893–1951.

ಹೆಸರಾಂತ ಸಂಪಾದಿತ ಕೃತಿಗಳು : ಕರ್ನಾಟಕ ಕಾವ್ಯಾವಲೋಕನಂ, ಕೈವಲ್ಯ ಪದ್ಧತಿ, ಚನ್ನಬಸವ ಪುರಾಣ, ಬಸವಣ್ಣನ ವಚನಗಳು, ಮುಂತಾದವುಗಳು.

**ಶಂ. ಬಾ. ಜೋಶಿ**[1] **:** ಸಂಶೋಧನಾ ಕ್ಷೇತ್ರದಲ್ಲಿ ಹೆಸರಿಸಲೇ ಬೇಕಾದ ಹೆಸರಾಂತ ವ್ಯಕ್ತಿ: ಸಂಸ್ಕೃತ, ಇಂಗ್ಲೀಷ್. ಮರಾಠಿಗಳಲ್ಲೂ ಪಾಂಡಿತ್ಯ ಪಡೆದಿರುವ ಶ್ರೀಯುತರು ಸಮಾಜ ಶಾಸ್ತ್ರಜ್ಞರು. ವಿಚಾರ ಪ್ರವರ್ತಕರು, ದಾರ್ಶನೀಕರು. ಪತ್ರಿಕೋದ್ಯೋಗಿಗಳು. 'ಕರ್ನಾಟಕದ ಏಕೀಕರಣಕ್ಕಾಗಿ ಶ್ರಮಿಸಿದ ಶ್ರದ್ಧಾಳು ಹಾಗೂ ಉದ್ದಾಮ ಸಾಹಿತಿ.

'ಕಣ್ಮರೆಯಾದ ಕನ್ನಡ' ಪ್ರಸಿದ್ಧ ಸಂಶೋಧನಾತ್ಮಕ ಕೃತಿ. 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. 1967 ರಲ್ಲಿ ಇವರ ಬಹುಮುಖ ಪ್ರತಿಭೆಯನ್ನು ಗುರುತಿಸಿ ರಾಜ್ಯ ಸರ್ಕಾರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. ಮೈಸೂರು ವಿಶ್ವವಿದ್ಯಾಲಯ 1971 ರಲ್ಲಿ ಡಾಕ್ಟರೇಟ್. ನೀಡಿ ಗೌರವಿಸಿದೆ. ಮಡಿಕೇರಿಯಲ್ಲಿ ಜರುಗಿದ 54ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ರಾಗಿದ್ದ ಹಿರಿಮೆ ಇವರದು.

ಶಂಬಾರವರದು ಕೇವಲ ಸಂಶೋಧನೆಯಲ್ಲ; ಅದೊಂದು ಸತ್ಯ ಸಂಶೋಧನೆ. ವಿಚಾರಧಾರೆ ಸತ್ಯನಿಷ್ಠವಾದ್ದು.

ಇವರ ಕೃತಿಗಳು : ಟಿಳಕರ ನೆನಪುಗಳು, ಅರವಿಂದರ ಚರಿತ್ರೆ, ದಾರಿಯ ಬುತ್ತಿ, ಋಗ್ವೇದ ಸಾರ, ಮಕ್ಕಳ ಒಡಪುಗಳು, ಸೌಂದರ್ಯ ವಿಚಾರ. ಜೀವಾಳ, ಕರ್ಣನ ಮೂರು ಚಿತ್ರಗಳು, ನಾಗ ಪ್ರತಿಮಾ–ವಿಚಾರ, ಎದ್ದೇಳು ಕನ್ನಡಿಗಾ, ಯಕ್ಷಪ್ರಶ್ನೆ. ಸಮಾಜ ದರ್ಶನ. ಅಗ್ನಿವಿದ್ಯೆ, ಶಿವರಹಸ್ಯ.ದೇವತಾ ಸಾಕ್ಷಾತ್ಕಾರ, ಬೇಂದ್ರೆ ಮತ್ತು ದಿವಾಕರರೊಡನೆ, ಉಪನಿಷದ್ರಹಸ್ಯ, ಕಂನುಡಿಯ ಹುಟ್ಟು. ಮರಾಠಿಯಲ್ಲೂ ಇವರು ಕೃತಿ ರಚಿಸಿದ್ದಾರೆ.

**ನೆಲಮಂಗಲ ಲಕ್ಷ್ಮೀನಾರಾಯಣರಾಯರು**[2] **:** ಎಲೆಯ ಮರೆಯ ಕಾಯಿಯಂತೆ ಬಾಳಿ ಅದೇ ರೀತಿ ಹಣ್ಣಾಗಿ ಉದುರಿ ಹೋದ ಅಪೂರ್ವ ವಿದ್ವಾಂಸ. ಸಂಶೋಧಕ. ಸಾಹಿತ್ಯ ಲೋಕದಲ್ಲಿ ಹೆಚ್ಚು ಪ್ರಚಾರ ಗಳಿಸದೆ ಹೋದರೂ ಭಾರತದ ಶಾಸನ ಇಲಾಖೆಗೆ ಇವರು ಸಲ್ಲಿಸಿರುವ ಸೇವೆ ಅಮೋಘವಾದದ್ದು. ಸಂಶೋಧನಾ ವಿಭಾಗಕ್ಕೆ ಇತ್ತಿರುವ ಕೊಡುಗೆಗಳು ಅಪಾರ ಹಾಗೂ ಅಮೋಘ. ಭಾರತ ಶಾಸನಗಳ 9, 10, 11 ಮತ್ತು 18 ನೇ ಸಂಪುಟಗಳನ್ನು, ಎಪಿಗ್ರಾಫಿಯಾ ಇಂಡಿಯಾದ 27. 29 ಮತ್ತು 30 ನೇ ಸಂಪುಟಗಳನ್ನು ಸಂಪಾದಿಸಿದ್ದಾರೆ.

---

1 ಜನನ : ಜನವರಿ 4, 1896, ಸವದತ್ತಿ ತಾಲ್ಲೋಕಿನ ಗುರ್ಲಹೊಸೂರು. ತಂದೆ : ಬಾಳ ದೀಕ್ಷಿತ, ತಾಯಿ : ಉಮಾಬಾಯಿ

2 ಜೀವಿತ ಕಾಲ : ಮೇ 1898–ಜನವರಿ 1979.

ಕನ್ನಡದಲ್ಲಿ 'ಕರ್ನಾಟಕದ ಅರಸು ಮನೆತನಗಳು' ಎಂಬ ಪ್ರಸಿದ್ಧ ಗ್ರಂಥ ಸಹ ರಚಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಕಾರ್ಯದಲ್ಲಿ ಸಮಿತಿಯ ಸದಸ್ಯರಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ.

**ತೋಗರೆ ನಂಜುಂಡ ಶಾಸ್ತ್ರಿಗಳು :**—ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ಕನ್ನಡ ಸಾಹಿತ್ಯ ಪರಿಷತ್ತಿಗೆ ಅಪಾರ ಸೇವೆ ಸಲ್ಲಿಸಿರುವ ವ್ಯಕ್ತಿ. ಇವರು ಕನ್ನಡ ಲಿಪಿಯ ಚರಿತ್ರೆಯನ್ನು ಕುರಿತು ವಿದ್ವತ್ಪೂರ್ಣ ಪ್ರಬಂಧ ಬರೆದಿದ್ದಾರೆ. ಇದು ಸಾಹಿತ್ಯ ಪರಿಷ್ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಬ್ರಾಹ್ಮಿ ಲಿಪಿಯಿಂದ ಹೇಗೆ ನಮ್ಮ ಲಿಪಿ ಇಳಿದು ಬಂದಿದೆ ಎಂಬುದರ ಪೂರ್ವೋತ್ತರ ವಿವರಣೆಗಳನ್ನು ಇವರು ಶಾಸನಗಳಿಂದ ತೆಗೆದ ನಿದರ್ಶನಗಳೊಂದಿಗೆ ತೋರಿಸಿದ್ದಾರೆ.

**ಪ್ರೊ|| ಡಿ. ಕೆ. ಭೀಮಸೇನರಾವ್**[1] : ಬಹು ಭಾಷಾ ವಿಶಾರದರು. ಉಸ್ಮಾನಿಯಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ. ಹೈದರಾಬಾದಿನ ಕರ್ನಾಟಕ ಸಾಹಿತ್ಯ ಮಂದಿರ, ನೃಪತುಂಗ ಪಾಠಶಾಲೆ ಮುಂತಾದ ಅನೇಕ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಸಂಘಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿಯೂ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

ಕನ್ನಡ ವಿಶ್ವಕೋಶದ ಸಾಹಿತ್ಯ ವಿಭಾಗದ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಕೃತಿಗಳು : ಮಹಾರಾಷ್ಟ್ರೀಯ ಸಾಹಿತ್ಯಾವಲೋಕನ, ಶಬ್ದಮಣಿ ದರ್ಪಣದ ಪಾಠಾಂತರಗಳು, ಪಂಚತಂತ್ರ, ಕನ್ನಡದ ಹೂಮಾಲೆ ಮುಂತಾದವು.

**ಡಾ|| ಎಸ್. ಸಿ. ನಂದಿಮಠ**[2] **:** (ಶಿವಲಿಂಗಯ್ಯ ಚೆನ್ನಬಸವಯ್ಯ ನಂದಿಮಠ). ಮಹಾ ವಿದ್ವಾಂಸ, ಸಂಶೋಧಕ ಹಾಗೂ ಗ್ರಂಥ ಸಂಪಾದಕ. ಅಧ್ಯಾಪಕ, ಪ್ರಾಧ್ಯಾಪಕರಾಗಿದ್ದುದಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯ, ಕುಲಸಚಿವರಾಗಿ ಅನಂತರ ಕುಲಪತಿಯ ಪದವಿಯನ್ನು ಅಲಂಕರಿಸಿದ್ದು ಇವರ ಹೆಗ್ಗಳಿಕೆ. ಸಾಹಿತ್ಯ ಸಂಶೋಧನೆಯಲ್ಲಲ್ಲದೆ ಪತ್ರಿಕಾ ವೃತ್ತಿಯಲ್ಲೂ ಇವರಿಗೆ ಅಮಿತ ಆಸಕ್ತಿ. 'ವೀರಶೈವ', 'ಜ್ಞಾನ ಪ್ರಸಾರ' ಪತ್ರಿಕೆಗಳ ಸಂಪಾದಕರಾಗಿಯೂ ಶ್ರಮಿಸಿದ್ದಾರೆ. ಇವರು ಬೇಲೂರಿನಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿ (1966) ನೀಡಿ ಗೌರವಿಸಿದೆ. ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ 1975 ರಲ್ಲಿ ಡಿ.ಲಿಟ್. ನೀಡಿ ಸನ್ಮಾನಿಸಿದೆ.

---

1 ಜನನ: 1903, ರಾಯಚೂರು ಜಿಲ್ಲೆಯ 'ದಿಧಿಗಿ'ಯಲ್ಲಿ.

2 ಜನನ: ಡಿಸೆಂಬರ್ 12, 1903, ಗೋಕಾಕ ಜಿಲ್ಲೆ, ಚಿಕ್ಕನಂದಿ. ಕನ್ನಡ ಮತ್ತು ಸಂಸ್ಕೃತದಲ್ಲಿ ಎಂ.ಎ., ಪದವೀಧರರು. ಜೀವಿತ ಕಾಲ: 1903–1975 ತಂದೆ: ಚೆನ್ನಬಸವಯ್ಯ ಬಸವಲಿಂಗಯ್ಯ, ತಾಯಿ: ಪ್ರಭು.

ಕೃತಿಗಳು : ಕರ್ಣಾಟಕ ಧರ್ಮಗಳು, ಶೈವ ಸಿದ್ಧಾಂತ, ಶೂನ್ಯ ಸಂಪಾದನೆ, ಗಿರಿಜಾ ಕಲ್ಯಾಣ, ಕವಿಕರ್ಣ ರಸಾಯನ, ಕುವಲಯಾನಂದ, 'ಹ್ಯಾಂಡ್ ಬುಕ್ ಆಫ್ ವೀರಶೈವಿಸಂ' - ಇಂಗ್ಲೀಷ್ ಕೃತಿ.

• **ಡಾ|| ಎಸ್. ಶ್ರೀಕಂಠಶಾಸ್ತ್ರಿ**[1] : ಇವರದು ಬಹುಮುಖ ಪ್ರತಿಭೆ. ದೇಶಭಕ್ತರು, ಬಹು ಭಾಷಾ ಪಂಡಿತರು ಹಾಗೂ ಇತಿಹಾಸ ತಜ್ಞರು, ಕೆಚ್ಚೆದೆಯ ಸಾಹಿತಿ. ಬ್ರಿಟಿಷರ ದಬ್ಬಾಳಿಕೆ ಟೀಕಿಸಲು ಕಿಂಚಿತ್ತೂ ಹೆದರಲಿಲ್ಲ. ಮೈಸೂರು ಅರಸರಿಗೆ ರಾಜ್ಯದ ಮೇಲೆ ಅಧಿಕಾರವಿಲ್ಲವೆಂದು ಘೋಷಿಸಲು ಅಂಜಲಿಲ್ಲ, ಇತಿಹಾಸ ಕ್ಷೇತ್ರದಲ್ಲಿಯ ಎಲ್ಲವನ್ನು ಹರಿದು ಹಿಂಜಿ ಸತ್ಯ ಬಿಡಿಸುವ ಛಲ. ಸಂಶೋಧನೆಯಲ್ಲಂತೂ ಅತೀವ ಆಸಕ್ತಿ. ತಮ್ಮ ಮಾತಿನಿಂದಾಗುವ ಪರಿಣಾಮದ ಬಗ್ಗೆ ಎಂದೂ ಚಿಂತೆ ಮಾಡಿದವರಲ್ಲ. ಇವರ ಕೃತಿಗಳ ಸಂಖ್ಯೆ ಕೆಲವೇ ಆದರೂ ಪತ್ರಿಕೆಗಳಿಗೆ ಬರೆದ ಲೇಖನಗಳು ಅಪಾರ. 500ಕ್ಕೂ ಹೆಚ್ಚು ವಿಚಾರಪೂರ್ಣ ಸಂಶೋಧನಾತ್ಮಕ ಲೇಖನಗಳನ್ನು ವಿಶ್ವದ ಪ್ರಮುಖ ಪತ್ರಿಕೆಗಳಲ್ಲೆಲ್ಲಾ ಬರೆದಿದ್ದಾರೆ. ಭಾರತ ಸ್ವಾತಂತ್ರ್ಯ ಮತ್ತು ವಿಶ್ವ ವ್ಯವಸ್ಥೆಯೆಂಬ ಪುಸ್ತಕಕ್ಕೆ ಬರೆದ ಮುನ್ನುಡಿಯೇ ಎರಡನೆ ಮಹಾಯುದ್ಧ ಕಾಲದಲ್ಲಿ ಜರ್ಮನಿಯ ನೋಬಲ್ಸ್‌ನ ಗಮನ ಸೆಳೆದಿತ್ತು. ಬ್ರಿಟಿಷರ ದಬ್ಬಾಳಿಕೆಯನ್ನು ಖಂಡಿಸಲು, ಶಾಸ್ತ್ರಿಗಳ ವಾಣಿಯನ್ನು ಆತ ಉದಾಹರಿಸಿದ್ದ. 'ದಕ್ಷಿಣದಲ್ಲಿ ಶಿಲಾದಿತ್ಯರು' ಎಂಬ ಪ್ರಬಂಧ ರಾಯಲ್ ಏಷ್ಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ಪ್ರಕಟಗೊಂಡು ಇವರ ವಿದ್ವತ್ತು ಅಂತರ್ರಾಷ್ಟ್ರೀಯ ವ್ಯಾಪ್ತಿಗಳಿಸಿತ್ತು. ಇಮ್ಮಡಿ ದೇವರಾಯನನ್ನು ಕುರಿತ ಲೇಖನ 'ಇಂಡಿಯನ್ ಆಂಟಿಕ್ವರಿ' ಮಾಡರ್ನ್ ರಿವ್ಯೂ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಪ್ರಪಂಚ ಚರಿತ್ರೆ, ಪುರಾತತ್ವ ಶೋಧ, ಭಾರತೀಯ ಸಂಸ್ಕೃತಿ, ಹೊಯ್ಸಳ ವಾಸ್ತುಶಿಲ್ಪ, ರೋಮನ್ ಚಕ್ರಾಧಿಪತ್ಯದ ಚರಿತ್ರೆ ಮುಂತಾದ ವಿಷಯಗಳ ಮೇಲೆ ರಚಿಸಿರುವ ಅವರ ಗ್ರಂಥಗಳು ಚಾರಿತ್ರಿಕ ಸತ್ಯವನ್ನು ತಿಳಿಸುವ ಅಮೂಲ್ಯ ಕೃತಿಗಳೆಂದು ಪುರಸ್ಕೃತಗೊಂಡಿವೆ.

ಅರ್ಲಿ ಗಂಗಾಸ್ ಆಫ್ ತಲಕಾಡ್, ಸೋರ್ಸಸ್ ಆಫ್ ಕರ್ನಾಟಕ ಹಿಸ್ಟರಿ – ಇಂಗ್ಲೀಷ್ ಕೃತಿಗಳು.

**ಡಾ|| ಆ. ನೇ. ಉಪಾಧ್ಯೆ**[2] : (ಆದಿನಾಥ ನೇಮಿನಾಥ ಉಪಾಧ್ಯೆ) ಇವರು ಅಂತರ್ರಾಷ್ಟ್ರೀಯ ಖ್ಯಾತಿಗಳಿಸಿದ್ದ ಜೈನ ಶಾಸ್ತ್ರ ಪ್ರವೀಣರು. ಮೈಸೂರಿನ ಮಾನಸ ಗಂಗೋತ್ರಿಯ ಪ್ರಾಕೃತ ವಿಭಾಗದ ಮುಖ್ಯಸ್ಥರಾಗಿದ್ದು ಪ್ರಾಚೀನ ಪ್ರಾಕೃತ್‌ಗ್ರಂಥಗಳಾದ 'ಪಂಚಸೂತ್ರಂ', 'ವರಾಂಗ ಚರಿತಂ',

---

1 ಜೀವಿತ ಕಾಲ : ಕ್ರಿ.ಶ. 1904–1974. ಜನ್ಮಸ್ಥಳ : ಸೊಂಡೆಕೊಪ್ಪ.

4 ಜೀವಿತ ಕಾಲ : ಕ್ರಿ.ಶ. 1906–1975. ಬೆಳಗಾವಿ ಜಿಲ್ಲೆಯ 'ಸವಲಗಿ'– ಜನ್ಮಸ್ಥಳ.

'ಬೃಹತ್ಕಥಾ ಕೋಶ', 'ಕುವಲಯಮಾಲಾ' ಮುಂತಾದವುಗಳನ್ನು ಬೆಳಕಿಗೆ ತಂದ ಸಂಶೋಧಕರು. ಇವರನ್ನು ಪ್ರೊ॥ ಡಿ. ಎಲ್. ಎನ್. ಬಹಳ ಚೆನ್ನಾಗಿ ಪ್ರಶಂಸಿದ್ದಾರೆ: "ಸಜ್ಜನ, ಬಹುಶ್ರುತ ಮೇಧಾವಿ, ಪ್ರತಿಭಾಶಾಲಿ, ವಿನಯ ಭೂಷಣ, ಅವರ ಪಾಂಡಿತ್ಯ ಖಚಿತ, ವಿಮರ್ಶನ ಶಕ್ತಿ ನಿಶಿತ, ಸಂಶೋಧನೆ ತಲಸ್ಪರ್ಶಿ, ನಿರೂಪಣೆ ಅಸಂದಿಗ್ಧ, ಕಾವ್ಯಶಾಸ್ತ್ರ ಪರಿಚಯ ಅಪಾರ, ಪ್ರತಿಭಾ ವಿಹಾರ ಮನೋಜ್ಞ" ಇದಕ್ಕಿಂತ ಮಿಗಿಲಾದ ಪ್ರಶಂಸಾ ಪತ್ರ ಯಾರಿಗಾದರೂ ದೊರಕಲು ಸಾಧ್ಯವೇ ?

ಕೃತಿಗಳು : ಪ್ರವಚನ ಸಾರ, ಪರಮಾತ್ಮಪ್ರಕಾಶ, ಕಂಸ ವಧೆ, ಆತ್ಮಾನುಶಾಸನ, ಪಾಲಿ ಮತ್ತು ಪ್ರಾಕೃತ, ಕಾರ್ತಿಕೇಯಾನುಪ್ರೇಕ್ಷೆ, ದೇಶಕೋಶಗಳಲ್ಲಿನ ಕನ್ನಡ ಪದಗಳು, ಕವಿ ಪರಮೇಶ್ವರ ಅಥವಾ ಪರಮೇಷ್ಠಿ.

1967 ರಲ್ಲಿ ನಡೆದ ಶ್ರವಣಬೆಳಗೊಳದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಭಾರತ ಸರ್ಕಾರ 1975ರ ಸ್ವಾತಂತ್ರ್ಯ ದಿನದಂದು 'ಸಂಸ್ಕೃತ ವಿದ್ವಾಂಸ' ಪ್ರಶಸ್ತಿ ನೀಡಿ ಗೌರವಿಸಿದೆ.

**ಡಾ॥ ಎನ್. ಅನಂತರಂಗಾಚಾರ್*** : ಜನಪ್ರಿಯ ಕನ್ನಡ ಪಾಧ್ಯಾಪಕರು, ಗಣ್ಯ ಗ್ರಂಥ ಸಂಪಾದಕರು. ಇಂಗ್ಲೀಷ್, ಸಂಸ್ಕೃತ. ಕನ್ನಡ, ತಮಿಳು ಮುಂತಾಗಿ ಹಲವು ಭಾಷೆಗಳ ಉದ್ದಾಮ ಪಂಡಿತರು.
ಓರಿಯೆಂಟಲ್ ಲೈಬ್ರರಿಯಲ್ಲಿ ಪಂಡಿತರಾಗಿ ಸೇರಿ ಸೇವೆ ಮಾಡುತ್ತಿದ್ದ ಕಾಲದಲ್ಲಿ ನಾಡಿನ ಮೂಲೆ ಮೂಲೆಗಳನ್ನು ಸುತ್ತಿ ಓಲೆಗರಿ ಹಸ್ತ ಪ್ರತಿಗಳನ್ನು ಸಂಗ್ರಹಿಸಿದ್ದರು. 1970 ರ ಸುಮಾರಿನಲ್ಲಿ ಇವರು ರಚಿಸಿದ 'ಸಾಹಿತ್ಯ ಭಾರತಿ' ಎಂಬ ಮೌಲಿಕ ಗ್ರಂಥ ಇವರಿಗೆ ಡಿ.ಲಿಟ್. ಗಳಿಸಿಕೊಟ್ಟಿತ್ತು. 1975 ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಇವರ ಸಾಹಿತ್ಯ ಸೇವೆಗೆ ಮೆಚ್ಚುಗೆ ವ್ಯಕ್ತಪಡಿಸಿದೆ.

ಕೃತಿಗಳು : ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ', ಕುಮಾರ ವ್ಯಾಸ ಭಾರತ, ಭಾರತೀಯ ತೀರ್ಥ ಕಲಾ ಕ್ಷೇತ್ರ ಸಂದರ್ಶಿನೀ. ಶಲ್ಯ ಗದಾಪರ್ವಗಳು, ಕಾವ್ಯಸಾರಂ, ರಾ. ನರಸಿಂಹಾಚಾರ್ಯ, ಕನ್ನಡ ರತ್ನತ್ರಯ, ಕವಿ ಕುಲಾಗ್ರಣಿ ಪಂಪ, ಚಂಪೂ ಕಾವ್ಯಗಳ ಪದ್ಯಾನುಕ್ರಮಣಿ, ನೇಮಿಚಂದ್ರ. ಪಂಪ ಭಾರತಂ, ಪೊನ್ನ, ಇವರ ಕೃತಿಗಳಾದ ಸಾಹಿತ್ಯ ಭಾರತಿ (1970) ಮತ್ತು 'ಮಲ್ಲ ಕವಿ ಸಂಯೋಜಿತ ಕಾವ್ಯಸಾರಂ' (1973) ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿವೆ.

* ಜೀವಿತ ಕಾಲ: ಮೇ 23, 1906–ಆಗಸ್ಟ್ 7, 1986. ತಿರುಮಕೂಡಲು ನರಸೀಪುರ – ಜನ್ಮಸ್ಥಳ. ತಂದೆ: ನರಸಿಂಹಾಚಾರ್, ತಾಯಿ: ವೆಂಕಟಲಕ್ಷ್ಮಮ್ಮ. ಕಾವ್ಯನಾಮ: ಸ್ವಚ್ಛಂದ.

**ಪ್ರೊ॥ ಎಂ. ಮರಿಯಪ್ಪ ಭಟ್ಟ**[1] **:** 'ಅಭಿನವ ಕಿಟ್ಟೆಲ್' ಎಂದು ಪ್ರಸಿದ್ಧರಾಗಿದ್ದ ಪ್ರೊ॥ ಎಂ. ಮರಿಯಪ್ಪ ಭಟ್ಟರು ವಿಮರ್ಶೆ, ಸಂಶೋಧನೆ, ಸಂಪಾದನಾ ಕ್ಷೇತ್ರದಲ್ಲಿ ಅಮೋಘ ಸೇವೆ ಸಲ್ಲಿಸಿದ್ದಾರೆ. ಕಿಟ್ಟೆಲ್ ನಿಘಂಟಿನ ಪರಿಷ್ಕರಣ ಹಾಗೂ ವಿಸ್ತರಣೆ ಇವರ ಪ್ರಶಂಸನೀಯ ಕೆಲಸಗಳಲ್ಲಿ ಬಹು ಮುಖ್ಯವಾದುವು. 'ನಾಲ್‌ನುಡಿ ನಾಣ್ನುಡಿ' – ಒಂದು ಅಪರೂಪ ಗ್ರಂಥ, 'ಹಳಗನ್ನಡ-ನಡುಗನ್ನಡ ಕಾವ್ಯ ಸಂಗ್ರಹ' ಮತ್ತು ಹೊಸ ಕನ್ನಡ ಕಾವ್ಯ ಶ್ರೀ' ಕಾವ್ಯಾಭ್ಯಾಸಿಗಳಿಗೆ ಹೆಮ್ಮೆಯ ಕಾಣಿಕೆಗಳು. ಸಂಪಾದಿಸಿರುವ ಕೃತಿಗಳು ಸುಮಾರು 15. ತುಳು–ಇಂಗ್ಲೀಷ್ ಶಬ್ದಕೋಶ, ಹವ್ಯಕ ಕನ್ನಡ ಶಬ್ದಕೋಶ ಇವರ ವಿಶಿಷ್ಟ ಕೊಡುಗೆಗಳು.

1979 ರಲ್ಲಿ ಇವರಿಗೆ ಸೋವಿಯತ್ ಫೆಲೋಷಿಪ್ ಪ್ರಶಸ್ತಿ ಲಭಿಸಿತ್ತು.

**ಡಿ. ಎಲ್. ನರಸಿಂಹಾಚಾರ್**[2] **:** (ದೊಡ್ಡಬೆಲೆ ಲಕ್ಷ್ಮಿ ನರಸಿಂಹಾಚಾರ್ಯ). ಕನ್ನಡದ ಪ್ರಮುಖ ಸಾಹಿತ್ಯಾಚಾರ್ಯರಲ್ಲಿ ಒಬ್ಬರು. ಇವರನ್ನು 'ಚಲಿಸುವ ನಿಘಂಟು' ಎಂದು ಅವರ ಸ್ನೇಹಿತರು ಮೆಚ್ಚುಗೆಯಿಂದ ಕರೆಯುತ್ತಿದ್ದರು. 'ತಿರುಗುವ ಕಾವ್ಯ' ಎಂದೂ ಕರೆಯುತ್ತಿದ್ದುದುಂಟು. ಯಾರಿಗೇ ಆಗಲಿ, ಯಾವುದೇ ಪದದ ಉತ್ಪತ್ತಿ ಅಥವಾ ಅರ್ಥದ ಬಗ್ಗೆ ಅನುಮಾನ ಉಂಟಾದರೆ ಅದರ ನಿರ್ಣಯ ಕರಾರುವಾಕ್ಕಾಗಿ ಡಿ. ಎಲ್. ಎನ್. ಅವರಿಂದ ಆಗುತ್ತಿತ್ತು. ಅಂತಹ ಪ್ರಗಲ್ಭ ಪಾಂಡಿತ್ಯ ಅವರದು. ಪ್ರಥಮ ಕನ್ನಡ ಎಂ. ಎ. (1929) ಪದವಿ ಪಡೆದು ಚಿನ್ನದ ಪದಕ ಗಳಿಸಿದ ಹೆಗ್ಗಳಿಕೆ ಇವರದು. ಮಾನಸ ಗಂಗೋತ್ರಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತರಾದರು.

ಗ್ರಂಥ ಸಂಸ್ಕರಣೆ, ಸಂಪಾದನೆ, ಭಾಷಾ ಶಾಸ್ತ್ರ, ವಿಮರ್ಶೆ ಇವರ ಆಸಕ್ತಿಯ ವಿಶೇಷ ಕ್ಷೇತ್ರಗಳು.

ಕೃತಿಗಳು : ಶಬ್ದವಿಹಾರ, ಪಂಪಭಾರತದೀಪಿಕೆ, ಸಕಲವೇದ್ಯ ಕಾವ್ಯ ಸಂಹಿತಾರ್ಣವ, ಭೀಷ್ಮಪರ್ವ, ಗೋವಿನ ಹಾಡುಗಳು, ಕನ್ನಡ ಗ್ರಂಥ ಸಂಪಾದನೆ, ವಡ್ಡಾರಾಧನೆ, ಸಿದ್ಧರಾಮ ಚರಿತ್ರೆಯ ಸಂಗ್ರಹ, ಪೀಠಿಕೆಗಳು, ಲೇಖನಗಳು, ಭಾಷಣಗಳು, ಪಂಪೆಯ ಹರಿಹರ, ಪಂಪ ರಾಮಾಯಣ ಸಂಗ್ರಹ, ಕನ್ನಡ ಕಾವ್ಯಾಂಜಲಿ.

ಕನ್ನಡವಲ್ಲದೆ ಆಚಾರ್ಯರಿಗೆ ತಮಿಳು, ತೆಲುಗು, ಇಂಗ್ಲೀಷ್ ಮತ್ತು ಸಂಸ್ಕೃತದಲ್ಲಿ ಪಾಂಡಿತ್ಯವಿತ್ತು.

---

1 ಪುಟ 110 ನೋಡಿ. ಜೀವಿತಕಾಲ : 1906–1980.

2 ಜೀವಿತ ಕಾಲ : 1906–1971. ಚಿಕ್ಕನಾಯ್ಕನಹಳ್ಳಿಯಲ್ಲಿ, ಜನನ : ಅಕ್ಟೋಬರ್ 27, 1906, ಮರಣ : ಮೇ 7, 1971. ತಂದೆ : ಶಾಮಯ್ಯಂಗಾರ್, 'ಜಂಗಮ ಬೃಹತ್ಕೋಶ'ವೆಂದೂ ಅವರು ಕರೆಯಲ್ಪಡುತ್ತಿದ್ದರು.

(1960) ಬಿದರೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿ ಕನ್ನಡ ಜನತೆ ಅವರಿಗೆ ಗೌರವ ಸಲ್ಲಿಸಿದೆ. 1967 ರಲ್ಲಿ ಮೈಸೂರು ಸಾಹಿತ್ಯ ಅಕಾಡೆಮಿ ಇವರನ್ನು ಸನ್ಮಾನಿಸಿದೆ. 1970 ರಲ್ಲಿ ಮೈಸೂರು ವಿಶ್ವವಿದ್ಯಾಲಯ ಇವರಿಗೆ ಡಾಕ್ಟರೇಟ್ ಪ್ರಶಸ್ತಿ ನೀಡಿ ಸನ್ಮಾನಿಸಿದೆ. ಹೆಸರಿಗೆ ತಕ್ಕಂತೆಯೇ ಶ್ರೀಯುತರು ದೊಡ್ಡ ಬೆಲೆಯ ವ್ಯಕ್ತಿಯಾಗಿಯೇ ಬಾಳಿದರು.

**ತ. ಸು. ಶಾಮರಾಯರು**[1] **:** ಹಿರಿಯ ಸಾಹಿತಿ ಹಾಗೂ ಪ್ರಸಿದ್ಧ ವಿಮರ್ಶಕರು. ಇವರ ವಿದ್ಯಾಭ್ಯಾಸ ಅಷ್ಟು ಸುಗಮವಾಗಿರಲಿಲ್ಲ. ತಂದೆಯ ಸಾವಿನಿಂದ ವಿದ್ಯಾಭ್ಯಾಸವನ್ನು ಮುಂದುವರಿಸಲಾಗದೆ. ಪ್ರಾಥಮಿಕ ಶಾಲೆಯ ಉಪಾಧ್ಯಾಯರಾಗಿ ಕೆಲಕಾಲ ದುಡಿದು, ಅದನ್ನು ಬಿಟ್ಟು, ಕಷ್ಟಪಟ್ಟು ನ್ಯಾಷನಲ್ ಕಾಲೇಜು ಸೇರಿ ವಿದ್ಯಾಭ್ಯಾಸ ಮುಂದುವರಿಸಿ ಛಲದಿಂದ ಎಂ.ಎ. ಪದವಿ ಗಳಿಸಿದರೂ ಪುನಃ ಅಧ್ಯಾಪಕ ವೃತ್ತಿಯನ್ನೇ ಕೈಗೊಂಡರು. ನಿವೃತ್ತರಾದ ಮೇಲೆ ಮೈಸೂರಿನ ಪ್ರಸಾರಾಂಗದ ಡೈರೆಕ್ಟರಾಗಿ ಕೆಲಕಾಲ ಸೇವೆ ಸಲ್ಲಿಸಿದರು. 1972 ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪುರಸ್ಕಾರ ನೀಡಿ ಗೌರವಿಸಿದೆ.

ಕೃತಿಗಳು : ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ಅಜಿತ ಪುರಾಣ ಸಂಗ್ರಹ, ಶಿವಶರಣರ ಕಥಾಕೋಶ, ವರ್ಧಮಾನ ಪುರಾಣಂ, ರತ್ನಕೋಶ, ಕಥಾ ಪಲ್ಲವಿ. ಕನ್ನಡ ನಾಟಕ, ವಚನ ರಾಮಾಯಣ, ವಚನ ಭಾಗವತ, ಶ್ರೀ ಕೃಷ್ಣನ ಕಡೆಯ ಸಂದೇಶ. ಜೈನ ಪರಿಭಾಷಾ ರತ್ನ ಕೋಶ. ಗುರು ನಾನಕ್, ಕುಮಾರ ವ್ಯಾಸ ಭಾರತ. ಮುದ್ದಣ. ಭರತೇಶ ವೈಭವ ಸಂಗ್ರಹ. ಜೈನ ಪರಿಭಾಷಾ ರತ್ನಕೋಶ. ತ. ವೆಂ. ಸ್ಮಾರಕ ಗ್ರಂಥ ಮಾಲೆಯ ಸ್ಥಾಪಕರು.

**ಪ್ರೊ॥ ಕೆ. ವೆಂಕಟರಾಮಪ್ಪ**[2] **:** (ಕೋಟಬಂಡೆ ವೆಂಕಟರಾಮಪ್ಪ) ಹೆಸರಾಂತ ಕನ್ನಡ ಪ್ರಾಧ್ಯಾಪಕರು. ತೆಲುಗು, ಕನ್ನಡದ ವಿದ್ವಾಂಸರು. ಗಣ್ಯ ವಿಮರ್ಶಕರು ಹಾಗೂ ಗ್ರಂಥ ಸಂಪಾದಕರು.

ಕೃತಿಗಳು : ಶ್ರೀ ಕೃಷ್ಣ ದೇವರಾಯನ ಆಸ್ಥಾನದ ತೆಲುಗು ಮತ್ತು ಕನ್ನಡ ಕೃತಿಗಳ ಒಂದು ಸಮೀಕ್ಷೆ, ಪಂಪ—ನನ್ನಯ—ಒಂದು ಸಮೀಕ್ಷೆ, ಕನ್ನಡ ಸಾಹಿತ್ಯ ಚರಿತ್ರೆ, ಕೋಣನಮಂತ್ರ, ಆದರ್ಶರಾಜ್ಯ, ಶ್ರೀಕೃಷ್ಣಚರಿತ್ರೆ, ಕನ್ನಡಭಾಗವತ ಲೀಲಾವತಿ, ಕನ್ನಡ ಸಾಹಿತ್ಯ, ತೆಲುಗು ಚಾಟು ಪದ್ಯಗಳು, ವೇಮನ, ನಯಸೇನನ ಧರ್ಮಾಮೃತಂ, ಶ್ರೀನಾಥ.

---

1 ಪುಟ 20, 22, 109 ನೋಡಿ. ಜನನ: ಆಗಸ್ಟ್ 12, 1906. ಜನ್ಮಸ್ಥಳ: ಚಳ್ಳಕೆರೆ ತಾಲ್ಲೂಕಿನ ತಳುಕು. ತಂದೆ: ಸುಬ್ಬಣ್ಣ, ತಾಯಿ: ಲಕ್ಷ್ಮಿದೇವಮ್ಮ.

2 ಜನನ: ಮೇ 28, 1906, ತುಮಕೂರು ಜಿಲ್ಲೆಯ ಪಾವಗಡದಲ್ಲಿ. ತಂದೆ: ಕೆ. ಸುಬ್ಬಾಶಾಸ್ತ್ರಿ, ತಾಯಿ: ಸಾವಿತ್ರಮ್ಮ.

**ಡಾ|| ರಂ. ಶ್ರೀ. ಮುಗಳಿ**[1] : (ರಂಗನಾಥ ಶ್ರೀನಿವಾಸ ಮುಗಳಿ) ಸಾಂಗ್ಲಿಯ ವಿಲ್ಲಿಂಗ್ಡನ್ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದು ನಂತರ ಬೆಂಗಳೂರು ವಿಶ್ವವಿದ್ಯಾನಿಲಯ ಸೇರಿ ಕನ್ನಡ ಪ್ರಾಧ್ಯಾಪಕರಾಗಿ ಹಲವುಕಾಲ ದುಡಿದು ನಿವೃತ್ತರಾಗಿದ್ದಾರೆ. ಈಗಲೂ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದಾರೆ.

1964ರಲ್ಲಿ ಸಿದ್ದಗಂಗಾ ಕ್ಷೇತ್ರದಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷರಾಗಿದ್ದರು. 'ಕನ್ನಡ ಸಾಹಿತ್ಯ ಚರಿತ್ರೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರತಿದೆ. ಗಣ್ಯವಿಮರ್ಶಕರು, ಹೆಸರಾಂತ ಸಂಶೋಧಕರು ಹಾಗೂ ಗ್ರಂಥ ಸಂಪಾದಕರು.

ಒಟ್ಟು ಕೃತಿಗಳು ಸುಮಾರು 40.

ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯದ ಇತಿಹಾಸ, (ಸಾಹಿತ್ಯ ಚರಿತ್ರೆಗಳು) : ವಿಮರ್ಶೆಯವ್ರತ. ಸಾಹಿತ್ಯೋಪಾಸನೆ, ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ, (ವಿಮರ್ಶೆ) ಕನ್ನಡ ಕಾವ್ಯ ಸಂಚಯ, ಕಾವ್ಯಸಂಕಲನ, (ರನ್ನನ ಕೃತಿ ರತ್ನ) ಸಾಹಿತ್ಯ ಸಾನಿಧ್ಯದಲ್ಲಿ (ಸಂಪಾದನೆ) ; ಮಾತೆಂಬುದು ಜ್ಯೋತಿರ್ಲಿಂಗ, ಕನ್ನಡದ ಕಲೆ, (ಪ್ರಬಂಧಗಳು) ; ಎತ್ತಿದಕೈ, ಸೇವಾಪ್ರದೀಪ (ನಾಟಕಗಳು) ಕನಸಿನ ಕೆಳದಿ (ಕಥಾಸಂಕಲನ) ; ಬಾಳು, ಅನ್ನ, (ಕಾದಂಬರಿಗಳು) ಬಾಸಿಗ, ನವ ಮಾನವ (ಕವನ ಸಂಗ್ರಹ) ; ನಿತ್ಯನಿರಂತರ, ತವನಿಧಿ ಕಾರಣ ಪುರುಷ (ಇತರೆ). ಇಂಗ್ಲೀಷಿನಲ್ಲೂ ಕೃತಿ ರಚಿಸಿದ್ದಾರೆ.

**ಡಾ|| ಪಾಂಡುರಂಗರಾವ್ ಭೀಮಸೇನರಾವ್ ದೇಸಾಯಿ**[2] : ಹೈದರಾಬಾದ್ ಕರ್ನಾಟಕದಲ್ಲಿ ಹುಟ್ಟಿ, ಉತ್ತರ ಕರ್ನಾಟಕದಲ್ಲಿ ಶಿಕ್ಷಣ ಪಡೆದು ಭಾರತ ಸರ್ಕಾರದ ಪುರಾತತ್ವ ಶಾಖೆಯಲ್ಲಿ ಶಾಸನ ಪರಿಶೋಧಕ ಅಧಿಕಾರಿಯಾಗಿ ಕೆಲ ಕಾಲ ಸೇವೆಸಲ್ಲಿಸಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇತಿಹಾಸ–ಪುರಾತನ ಶಾಸ್ತ್ರಗಳ ಪ್ರಾಧ್ಯಾಪಕರಾಗಿದ್ದರು. ಇದೇ ವಿಶ್ವ ವಿದ್ಯಾಲಯದ ಡಿ.ಲಿಟ್. ಪ್ರಶಸ್ತಿಗಳಿಸಿದ್ದರು.

ಕೃತಿಗಳು ಸುಮಾರು 30 ; 9 ಇತಿಹಾಸ, 7 ಸಂಶೋಧನೆ, 7 ಸಾಹಿತ್ಯಸಂಬಂಧ ಪಟ್ಟವುಗಳು. 2 ಐತಿಹಾಸಿಕ ಕಾದಂಬರಿಗಳು, 3 ಐತಿಹಾಸಿಕ ಕಥಾ ಸಂಕಲನಗಳು,

ಪ್ರಮುಖ ಕೃತಿಗಳು : ಬಸವೇಶ್ವರ ಅಂಡ್ ಹಿಸ್ ಟೈಮ್ಸ್, ಹಿಸ್ಟರಿ ಆಫ್ ಕರ್ನಾಟಕ, ಮಿಂಚಿದ ಮಹಿಳೆಯರು, ಕುಂತಲೇಶ್ವರ, ಕನ್ನಡ ನಾಡಿನ ಶಾಸನಗಳು, ಕರ್ನಾಟಕದ ಕಲಚುರಿಗಳು ಮುಂತಾದವು.

---

1 ಜನನ : ಜುಲೈ 15, 1906, ಧಾರವಾಡ ಜಿಲ್ಲೆಯ ಹೊಳೆ ಆಲೂರು ಗ್ರಾಮದಲ್ಲಿ. ತಂದೆ : ಶ್ರೀನಿವಾಸ, ತಾಯಿ : ಕಷ್ಣುಲ.

2 ಜೀವಿತ ಕಾಲ : 1910–1976.

**ಪ್ರೊ॥ ಸ. ಸ. ಮಾಳವಾಡ**[1] : (ಸಂಗಪ್ಪ ಸಂಗನಬಸಪ್ಪ ಮಾಳವಾಡ) ಪ್ರಸಿದ್ಧ ಸಂಶೋಧಕರು, ಹೆಸರಾಂತ ವಿದ್ವಾಂಸರು, ವಿದ್ಯಾರ್ಥಿಗ ಮೆಚ್ಚುಗೆಗಳಿಸಿದ ಪ್ರಾಧ್ಯಾಪಕರು. ಮುಂಬಯಿ ವಿಶ್ವವಿದ್ಯಾನಿಲಯ ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ಸೆನೆಟ್‌ಗಳ ಸದಸ್ಯರಾಗಿದ್ದರು. ಕೆಲಕಾಲ ಕರ್ನಾಟಕ ವಿಶ್ವವಿದ್ಯಾಲಯ ಪತ್ರ ಪುಸ್ತಕ ನಿರ್ದೇಶನಾಲಯದ ನಿರ್ದೇಶಕರಾಗಿದ್ದರು. ಬಿಜಾಪುರ ಸಾಹಿತ್ಯ ಸಮ್ಮೇಳನ ಅಧ್ಯಕ್ಷರಾಗಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿ 1972ರಲ್ಲಿ ಇವರಿಗೆ ಪುರಸ್ಕಾರ ನೀಡಿ ಗೌರವಿಸಿತ್ತು.

ಪ್ರೊ॥ ಮಾಳವಾಡರಿಗೆ ಉಪನ್ಯಾಸಕರಾಗಿದ್ದಾಗಲೇ ಸಂಶೋಧನಾ ಪ್ರವೃತ್ತಿ ಮೈಗೂಡಿತ್ತು. ಕುಂದಣಗಾರರ ಸಹಕಾರ ಈ ಪ್ರವೃತ್ತಿ ವೃದ್ಧಿಸಲು ಬಹು ಇಂಬು ನೀಡಿತ್ತು.

ಕೃತಿಗಳು : ಕನ್ನಡಸಾಹಿತ್ಯ ಸಂಸ್ಕೃತಿದರ್ಶನ, ಸಾಹಿತ್ಯ ಸಮಾಲೋಚನೆ, ಕಾವ್ಯ ಮತ್ತು ಜೀವನಚಿಂತನ, ಕಾಲವಾಹಿನಿ, ಸಾಹಿತ್ಯ ಸಂಗಮ. (ವಿಮರ್ಶೆ/ ಸಂಶೋಧನಾ ಕೃತಿಗಳು)

ಹರಿಹರನ ಮೂರು ರಗಳೆಗಳು, ರಾಘವಾಂಕ ಚರಿತೆ (ಸಂಪಾದನೆ) ; ಅರವಿಂದ ಸ್ಮರಣೆ, ಉತ್ತಂಗಿ ಚೆನ್ನಪ್ಪ, ಶಿಶುನಾಳ ಶರೀಫರು, ಬಸವಣ್ಣನವರು, ಸ್ವಾದಿ ಅರಸು ಮನೆತನ. ಪುಸ್ತಕ ಪ್ರಪಂಚ. (ಇತರ ಕೃತಿಗಳು.)

**ಪ್ರೊ॥ ಎಸ್. ಎಸ್. ಭೂಸನೂರಮಠ**[2] : (ಸಂಗಯ್ಯ ಶಿವಮೂರ್ತಯ್ಯ ಭೂಸನೂರ ಮಠ) ಸಂಶೋಧನೆ ಹಾಗೂ ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ವಿಶೇಷ ಸೇವೆ ಮಾಡಿರುವ ಸಾಹಿತಿ. ಇವರು ಸಂಪಾದಿಸಿರುವ 'ವಚನ ಸಾಹಿತ್ಯ ಸಂಗ್ರಹ' ಒಂದು ಅಮೋಘ ಕೃತಿ. ಇದಲ್ಲದೆ ಇನ್ನೂ ಹಲವಾರು ಗ್ರಂಥಗಳನ್ನು ಸಂಪಾದಿಸಿದ್ದಾರೆ. ಮುಖ್ಯವಾದವುಗಳು : ಗುರುರಾಜ ಚರಿತ್ರ, ಮೋಳಿಗೆಯ್ಯನ ಪುರಾಣ. ಲಿಂಗಲೀಲಾ ವಿಲಾಸ ಚರಿತ್ರ. ಪ್ರೌಢರಾಯನ ಕಾವ್ಯ, ಶೂನ್ಯ ಸಂಪಾದನೆ ಮುಂತಾದವು. ಶೂನ್ಯ ಸಂಪಾದನೆಯ ಆಂಗ್ಲ ಭಾಷಾಂತರವನ್ನು 9 ಸಂಪುಟಗಳಲ್ಲಿ ಹೊರತರುವ ಕಾರ್ಯದಲ್ಲಿ ನಿರತರಾಗಿದ್ದಾರೆ.

ಕರ್ನಾಟಕ ಕಾಲೇಜು, ಬೆಳಗಾವಿಯ ಲಿಂಗರಾಜ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠಗಳಲ್ಲಿ ಉಪನ್ಯಾಸಕರು, ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿದನಂತರ ಯು. ಜಿ. ಸಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. 1969 ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. 'ಶೂನ್ಯ ಸಂಪಾದನೆ ಪರಾಮರ್ಶೆ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

---

1 ಜೀವಿತ ಕಾಲ : ನವೆಂಬರ್ 14, 1910 ರಿಂದ ಆಗಸ್ಟ್ 30, 1987. ಧಾರವಾಡ ಜಿಲ್ಲೆಯ 'ಮೆಣಸಗಿ' ಗ್ರಾಮ ಹುಟ್ಟೂರು.

2 ಜನನ : 1911, ಧಾರವಾಡ ಜಿಲ್ಲೆಯ ನಿಡಗುಂದಿಗ್ರಾಮ.

ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯಮ್ಮನವರ ವಚನಗಳು. ಮಹಾಲಿಂಗ ದೇವರ ಏಕೋತ್ತರ ಶತಸ್ಥಲ, ಲಿಂಗಲೀಲಾ ವಿಕಾಸ ಚಾರಿತ್ರ. ಶೂನ್ಯ ಸಂಪಾದನೆಯ ಪರಾಮರ್ಶೆ, ಕಲ್ಯಾಣದಿಂದ ಕಾಶ್ಮೀರಕ್ಕೆ (ಇತರ ಕೃತಿಗಳು), ಇತ್ತೀಚೆಗೆ ಪ್ರಕಟಗೊಂಡ ಅವರ 'ಭವ್ಯ ಮಾನವ' ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅತ್ಯಮೂಲ್ಯ ಕೊಡುಗೆಯಾಗಿದೆ.

**ಪ್ರೊ|| ಹೆಚ್. ಎಂ. ಶಂಕರನಾರಾಯಣ ರಾಯರು**[1] : ಹೆಸರಾಂತ ಉಪನ್ಯಾಸಕರು, ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದರು. ಸಂಪಾದನೆ, ವಿಮರ್ಶೆ ಹಾಗೂ ಸಂಶೋಧನಾ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಇವರನ್ನು 1978 ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

ಕೃತಿಗಳು : ನಳಚರಿತ್ರೆ, ಭೀಮ ದುರ್ಯೋಧನೀಯ, ಯಶೋಧರ ಚರಿತ್ರೆ, ಕರ್ಣಾಟಕ ಶಾಕುಂತಳ ನಾಟಕ (ಸಂಪಾದಿತ ಕೃತಿಗಳು), ಕವಿ ರಾಘವಾಂಕ– ವ್ಯಕ್ತಿ ಮತ್ತು ವಿಚಾರ, ಮೃಚ್ಛಕಟಿಕ. ಮಧ್ಯಮವ್ಯಾಯೋಗ, (ವಿಮರ್ಶಾ ಗ್ರಂಥಗಳು), ಕೆಂಪು ನಾರಾಯಣಿ, ಕವಿ ರಾಘವಾಂಕ – ವ್ಯಕ್ತಿ ಮತ್ತು ವಿಚಾರ (ಗದ್ಯ ಗ್ರಂಥಗಳು), ಮೃಚ್ಛಕಟಿಕ, ಮತ್ತು ಮಧ್ಯಮವ್ಯಾಯೋಗ ಕುರಿತು ದೀರ್ಘ ವಿಮರ್ಶಾ ಲೇಖನಗಳನ್ನು ಬರೆದಿದ್ದಾರೆ. ಮಕ್ಕಳ ಸಾಹಿತ್ಯ ವಿಭಾಗದಲ್ಲೂ ನಾಲ್ಕಾರು ಕೃತಿಗಳನ್ನು ರಚಿಸಿದ್ದಾರೆ. ಜನಪದ ಮುಕ್ತಕಗಳು. ಸಂಚಿಯ ಹೊನ್ನಮ್ಮ, 'ಸ್ನೇಹಾಂಜಲಿ' ಇವರಿಗೆ ಅರ್ಪಿತವಾಗಿರುವ ಸಂಭಾವನಾ ಗ್ರಂಥ (1974).

ಶ್ರೀಯುತರು ಕನ್ನಡಕ್ಕೆ ಸಂಸ್ಕೃತ ಅಲಂಕಾರಿಕರಾದ ಭಾಮಹ, ದಂಡಿ, ವಾಮನ, ರಾಜಶೇಖರ, ಆನಂದವರ್ಧನ ಮಮ್ಮಟ, ಕ್ಷೇಮೇಂದ್ರ ಮುಂತಾದವರ ಮೂಲ ಗ್ರಂಥವನ್ನು ಡಾ|| ಕೆ. ಕೃಷ್ಣಮೂರ್ತಿಗಳ ಅನುವಾದದೊಡನೆ ಪ್ರಕಟಿಸಿದ್ದಾರೆ.

**ಜಿ. ವೆಂಕಟಸುಬ್ಬಯ್ಯ**[2] : (ಗಂಜಾಂ ವೆಂಕಟಸುಬ್ಬಯ್ಯ) ಜನಪ್ರಿಯ ಪ್ರಾಧ್ಯಾಪಕರು, ವಿಜಯ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದು ನಿವೃತ್ತರಾಗಿದ್ದಾರೆ. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು (1964-1969), ಕಾರ್ಯದರ್ಶಿಗಳಾಗಿಯೂ 2 ವರ್ಷ ಸೇವೆ ಮಾಡಿದ್ದಾರೆ.

ಇವರು ಗಣ್ಯ ಗ್ರಂಥ ಸಂಪಾದಕರು, ನುರಿತ ವಿಮರ್ಶಕರು ಹಾಗೂ ಸಂಶೋಧಕರು, ಪ್ರಬಂಧ, ಜೀವನ ಚರಿತ್ರೆಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರದಲ್ಲಿ ಬಹುಮುಖ ಪ್ರತಿಭೆಯನ್ನು ತೋರಿದ್ದಾರೆ. ನಿಘಂಟು ಸಮಿತಿಯ ಉಪಾಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು.

---

1 ಜನನ : 1913, ಚಿತ್ರದುರ್ಗ ಜಿಲ್ಲೆಯ ಹರಿಹರ. ತಂದೆ : ಹರಿಹರೇಶ್ವರ ಅರ್ಚಕರು.

2 ಜನನ ಆಗಸ್ಟ್ 23, 1913, ಮಂಡ್ಯ ಜಿಲ್ಲೆಯ ಕ್ಯಾತನಹಳ್ಳಿಯಲ್ಲಿ. ತಂದೆ : ಗಂಜಾಂ ತಿಮ್ಮಣ್ಣಯ್ಯ, ತಾಯಿ : ಸುಬ್ಬಮ್ಮ.

ಇವರು ರಚಿಸಿರುವ ಕೃತಿಗಳ ಸಂಖ್ಯೆ ಸುಮಾರು 20. ನಯುಸೇನ, ಭಾಷಾಂತರ ಪಾಠ (1, 2, 3) ಅನುಕಲ್ಪನೆ, ವಿಕಾಸ (ವಿಮರ್ಶೆ), ಅಕ್ರೂರ ಚರಿತ್ರೆಯ ಸಂಗ್ರಹ, ನಳ ಚಂಪು ಸಂಗ್ರಹ, ಕರ್ಣಕರ್ಣಾಮೃತ (ಸಂಗ್ರಹ), ರಾಬಿನ್‌ಸನ್ ಕ್ರೂಸೋ, ಕವಿ ಜನ್ನ, ಕನ್ನಡ ಶಾಸನ ಪರಿಚಯ, ಕಾವ್ಯಲಹರಿ, ಶಂಕರಾಚಾರ್ಯ, ಕಬೀರ್, ಸಂಕ್ಷಿಪ್ತನಿಘಂಟು, ಸಂಯುಕ್ತ ಸಂಸ್ಥಾನಗಳನ್ನು ಪರಿಚಯ ಮಾಡಿಕೊಳ್ಳಿ, ಮುಂತಾದವು.

**ಅಮೃತ ಮಹಾದೇವ ಅಣ್ಣಿಗೇರಿ**[1] **:** ವಸ್ತು ಸಂಗ್ರಹಾಲಯದ ಮುಖ್ಯಾಧಿಕಾರಿಯಾಗಿದ್ದು, ಸಾಹಿತ್ಯ ಹಾಗೂ ಪ್ರಾಚೀನ ಶಿಲ್ಪಶಾಸ್ತ್ರದ ಬಗ್ಗೆ ಅಪಾರ ಸಂಶೋಧನೆ ನಡೆಸಿ ಅನೇಕ ಉತ್ಕೃಷ್ಟ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ವಸ್ತು ಸಂಗ್ರಹಾಲಯದ ವ್ಯವಸ್ಥಾಪಕರಾಗಿದ್ದರು.

ಮುಖ್ಯ ಕೃತಿಗಳು: ಹರಿದಾಸ ಬೋಧೆ, ಕರ್ನಾಟಕದ ಸಾಂಸ್ಕೃತಿಕ ಸ್ಥಳಗಳು, ಬಾದಾಮಿ ಕೈಪಿಡಿ, ಪಟ್ಟದಕಲ್ಲು ಗುಡಿಗಳು, ಶಾಸನ ಸಂಗ್ರಹ.

**ಎಂ. ಜಿ. ನಂಜುಂಡಾರಾಧ್ಯ**[2] **:** (ಮಠದ ಗಂಗಾಧರಯ್ಯ ನಂಜುಂಡಾರಾಧ್ಯ). ಕನ್ನಡ, ಸಂಸ್ಕೃತದ ವಿದ್ವಾನ್, ರಾಷ್ಟ್ರಭಾಷಾ ವಿಶಾರದ (ಹಿಂದಿ), ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದಾರೆ. ಅರಮನೆಯ ಆಸ್ಥಾನ ವಿದ್ವಾನ್ ಆಗಿದ್ದರು. 1979 ರಲ್ಲಿ ರಾಜ್ಯ ಪ್ರಶಸ್ತಿ, 1970 ರಲ್ಲಿ ರಾಷ್ಟ್ರ ಪ್ರಶಸ್ತಿ ಗಳಿಸಿದ್ದರು. 'ವಿದ್ಯಾ ವಿಭೂಷಣ', ವಿದ್ಯಾ ವಾರಿಧಿ', ಬಿರುದು ಗಳಿಸಿದ್ದ ಹೆಗ್ಗಳಿಕೆ ಇವರದು., ಇವರು ಕವಿ, ನಾಟಕಕಾರ, ವಿಮರ್ಶಕ ಹಾಗೂ ಗಣ್ಯ ಗ್ರಂಥ ಸಂಪಾದಕರಾಗಿದ್ದರು. ಒಟ್ಟು ಕೃತಿಗಳ ಸಂಖ್ಯೆ ಸುಮಾರು ಒಂದುನೂರು.

ಪ್ರಮುಖ ಕೃತಿಗಳು: ಶ್ರೀ ಶೈಲ ಪಂಡಿತಾರಾಧ್ಯ ಸುಪ್ರಭಾತಂ, ಮಗೆ ಮಾಯಿದೇವರು ಮತ್ತು ಅವರ ಕೃತಿಗಳು, ಹಿಂದೂ ಧರ್ಮ ಮತ್ತು ವೀರಶೈವ ಸಂಸ್ಕೃತಿ, ವಿಭೂತಿ, ಅರ್ಜುನ ವಿಜಯ. ಬಸವ ವಚನಾಮೃತಂ, ವೈದಿಕ ಷಟ್‌ಸ್ಥಲ ಲಿಂಗ ಪೂಜಾವಿಧಿ, ಭಟ್ಟ ನಾರಾಯಣ, ಜೀವಜ್ಯೋತಿ, ಮಾದರ ಚೆನ್ನ (ನಾಟಕ). ವಿಜಯನಾದ, ಪದ್ಮಲಾಕ್ಷಿ (ಕವಿತೆ).

---

1 ಜೀವಿತ ಕಾಲ: ಜೂನ್ 6, 1914–ಜೂನ್ 27, 1987. ನವಲಗುಂದ ತಾಲ್ಲೂಕಿನ ಅಣ್ಣಿಗೇರಿ ಹುಟ್ಟಿದ ಸ್ಥಳ. ತಂದೆ: ಮಹಾದೇವ ಅಮೃತ ಅಣ್ಣಿಗೇರಿ, ತಾಯಿ: ಅಂಬಾಬಾಯಿ.

2 ಜನನ: ಆಗಸ್ಟ್ 1, 1914. ಕೋಲಾರ ಜಿಲ್ಲೆ, ಗುಂಡ್ಲಹಳ್ಳಿಯಲ್ಲಿ. ತಂದೆ: ಗಂಗಾಧರಯ್ಯ ತಾಯಿ: ವೀರಮ್ಮ. ಇವರ ಕಾವ್ಯನಾಮ 'ಅಮರವಾಣಿ'.

**ಪ್ರೊ॥ ಬಿ. ಎಚ್. ಶ್ರೀಧರ**[1] : ಇವರು ಎಂ. ಎ. ಪದವಿ ಗಳಿಸಿದ ನಂತರ ಜೀವನ ಪ್ರಾರಂಭಿಸಿದ್ದು ಡಿಫೆನ್ಸ್ ಅಕೌಂಟ್ಸ್ ವಿಭಾಗದಲ್ಲಿ. ನಿರ್ಜೀವ ಅಂಕಿ. ಅಂಶಗಳಲ್ಲಿ ಬೇಸರ ಬಂದು ತಮಗೆ ಇಷ್ಟವಾಗಿದ್ದ ಉಪಾಧ್ಯಾಯ ವೃತ್ತಿ ಸ್ವೀಕರಿಸಿದರು. ಭಟ್ಕಳದ ಹೈಸ್ಕೂಲು. ಕುಮುಟದ ಕೆನರಾ ಕಾಲೇಜು, ಶಿರಸಿಯ ಆರ್ಟ್ಸ ಮತ್ತು ಸೈನ್ಸ್ ಕಾಲೇಜು, ಸಿದ್ಧಾಪುರದ ಗಾಂಧಿ ಶತಾಬ್ಧಿ ಕಾಲೇಜಿನಲ್ಲಿ ಉಪಾಧ್ಯಾಯರಾಗಿ. ಉಪನ್ಯಾಸಕರಾಗಿ. ಪ್ರಾಧ್ಯಾಪಕರಾಗಿ ದುಡಿದಿದ್ದಾರೆ. ಕೆಲಕಾಲ 'ಕರ್ಮವೀರ' ಪತ್ರಿಕೆಯೊಡನೆಯೂ ಉಪಸಂಪಾದಕರಾಗಿ ಸಂಪರ್ಕ ಇರಿಸಿಕೊಂಡಿದ್ದರು. ಇವರದು ಬಹುಮುಖ ಪ್ರತಿಭೆ. ಕವಿಯಾಗಿ, ನಾಟಕಕಾರರಾಗಿ, ವಿಡಂಬನಾಕಾರರಾಗಿ, ಸಂಪಾದಕರಾಗಿ ಸಾಹಿತ್ಯ ಸಂಪನ್ನಗೊಳಿಸಿದ್ದಾರೆ. ಇವರ ಕಾವ್ಯ ಸೂತ್ರ ಒಂದು ಅಮೂಲ್ಯ ಕೃತಿ. ಇದಕ್ಕೆ ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ತೀ.ನಂ.ಶ್ರೀ ಸ್ಮಾರಕ ಬಹುಮಾನಗಳು ಸಂದಿವೆ. ಇದು ವಿಮರ್ಶೆಯ ಸಿದ್ಧಾಂತಗಳ ಕಿರಿಯ ವಿಶ್ವಕೋಶವೆಂದು ಪ್ರಸಿದ್ಧವಾಗಿದೆ. ಶ್ರೀಧರರು ಎಲ್ಲ ದೇಶಗಳ, ಎಲ್ಲ ಪ್ರಚಂಡ ವಿಮರ್ಶಕರ ಥಾಟಿ. ವಿಮರ್ಶಾ ಚಾತುರ್ಯಗಳನ್ನು ಆರಿಸಿಕೊಂಡು ತಮ್ಮದೇ ಆದ ಶೈಲಿಯಲ್ಲಿ ವಿದ್ವತ್ಪೂರ್ಣವಾಗಿ ವಿಮರ್ಶಾ ತತ್ವಗಳನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. ಇವರ ಕೃತಿಗಳ ಸಂಖ್ಯೆ ಸುಮಾರು 35.

ಇತರ ಪ್ರಸಿದ್ಧ ಕೃತಿಗಳು : 'ರಸಯಜ್ಞ', 'ಜ್ಞಾನಸೂತ್ರ'. 'ರಾಷ್ಟ್ರ ಸೂತ್ರ', 'ಪಸರಿಪ ಕನ್ನಡಕ್ಕೊಡೆಯನೀಗದರಾಂಕಿತ ಬೇಂದ್ರೆ'.

**ಡಾ॥ ದೇವೇಗೌಡ ಜವರೇಗೌಡ**[2] : ಇವರ ವಿದ್ಯಾಭ್ಯಾಸ ಚಕ್ಕೆರೆ, ಚನ್ನಪಟ್ಟಣ. ಮೈಸೂರು ಹಾಗೂ ಬೆಂಗಳೂರುಗಳಲ್ಲಿ ನಡೆಯಿತು. ಎಂ. ಎ. ನಂತರ ವೃತ್ತಿ ಹಿಡಿದದ್ದು ಸರ್ಕಾರಿ ಸೆಕ್ರೆಟರಿಯೇಟ್‌ನಲ್ಲಿ. ಆದರೆ ಅದು ಸರಿಬೀಳದೆ ಮೈಸೂರಿನ ವಿಶ್ವವಿದ್ಯಾಲಯದಲ್ಲಿ ತಮಗೆ ಇಷ್ಟವಾದ ಅಧ್ಯಾಪಕ ವೃತ್ತಿ ಸ್ವೀಕರಿಸಿದರು. ಅದೇ ಜೀವನದ ಪ್ರಗತಿಯ ಪ್ರಾರಂಭ. ಔನ್ನತ್ಯದ ಏಣಿ ಏರಲು ಶುಭಾರಂಭ. ಅಧ್ಯಾಪಕ. ಉಪ ಪ್ರಾಧ್ಯಾಪಕ, ಪರೀಕ್ಷಾಧಿಕಾರಿ, ಶಿವಮೊಗ್ಗ ಸಹ್ಯಾದ್ರಿ ಕಾಲೇಜಿನ ಪ್ರಾಂಶುಪಾಲರು, ಕಲಾವಿಭಾಗದ ಡೀನ್, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ, ಕೊನೆಗೆ ಅತ್ಯುಚ್ಚ ಪದವಿಯಾದ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿ ಹುದ್ದೆ.

ರಷ್ಯ, ಜರ್ಮನಿ, ಆಸ್ಟ್ರಿಯ, ಇಟಲಿ, ಇಸ್ರೇಲ್, ಇರಾನ್, ಇಂಗ್ಲೆಂಡ್, ಘಾನಾ. ಕೆನ್ಯಾ. ನೈಜೀರಿಯ ಮುಂತಾದ ದೇಶಗಳತ್ತ ಪ್ರವಾಸ ಕೈಗೊಂಡು ಲಭಿಸಿದ ತಮ್ಮ ಅನುಭವವನ್ನು 'ವಿದೇಶದಲ್ಲಿ ನಾಲ್ಕುವಾರ' ಕೃತಿಯಲ್ಲಿ ರಮ್ಯವಾಗಿ ಮೂಡಿಸಿದ್ದಾರೆ.

---

1 ಜನನ : ಮಾರ್ಚ್ 3, 1918, ದಕ್ಷಿಣ ಕನ್ನಡ ಜಿಲ್ಲೆಯ ಭಾವಳಾಡಿಯಲ್ಲಿ.

2 ಜನನ : ಜುಲೈ 6, 1918, ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ತಾಲ್ಲೂಕಿನ ಚಕ್ಕೆರೆ ಗ್ರಾಮದಲ್ಲಿ. ತಂದೆ : ದೇವೇಗೌಡ, ತಾಯಿ : ಚಿನ್ನಮ್ಮ.

ಇವರ ಮೇಧಾಶಕ್ತಿ ಹಾಗೂ ಪ್ರಗಲ್ಭ ವಿದ್ವತ್ತಿನ ಫಲಶೃತಿಯಾಗಿ ಸೋವಿಯತ್ ಲ್ಯಾಂಡ್ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ('ತೆನೆ' ಕೃತಿಗೆ), ಹಾಗೂ 1984ರ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ದೊರೆತಿವೆ. ಕರ್ನಾಟಕ ವಿಶ್ವ ವಿದ್ಯಾಲಯ 1975ರಲ್ಲಿ ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿದೆ: ಕನ್ನಡ ಕುಲಕೋಟಿ 1970ರಲ್ಲಿ ಶ್ರೀಯುತರನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠಕ್ಕೆ ಆರಿಸಿ ಗೌರವಿಸಿದೆ. ತಿರುವಾಂಕೂರಿನ ದ್ರಾವಿಡ ಭಾಷಾ ಸಂಸ್ಥೆ 1979ರಲ್ಲಿ ಫೆಲೋಷಿಪ್ ನೀಡಿದೆ.

ಬಹುಮುಖ ಪ್ರತಿಭೆಯ ಶ್ರೀಯುತರು ವಿಮರ್ಶೆ, ಸಂಪಾದನೆ, ಸಂಶೋಧನಾ ಕ್ಷೇತ್ರಗಳಲ್ಲದೆ ಇತರ ಕ್ಷೇತ್ರಗಳನ್ನು ಸಂಪನ್ನಗೊಳಿಸಿದ್ದಾರೆ. ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 120. ಇಂಗ್ಲೀಷಿನಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

ಇವರದು ಅಪಾರ ಜನಪ್ರಿಯತೆ. ಇದಕ್ಕೆ ಅವರಿಗೆ ಸಂದಿರುವ ಅಭಿನಂದನಾ ಗ್ರಂಥಗಳೇ ಸಾಕ್ಷಿ. 1968 ರಲ್ಲಿ ದೇಜಗೌ ವ್ಯಕ್ತಿ ಮತ್ತು ಸಾಹಿತ್ಯ ; 1972 ರಲ್ಲಿ ಅಂತಃಕರಣ, 1980 ರಲ್ಲಿ 'ರಸಷಷ್ಟಿ', 1987 ರಲ್ಲಿ; ದೇಜಗೌ–ಎಪ್ಪತ್ತರ ಹೊಸ್ತಿಲಲ್ಲಿ'

ಮುಖ್ಯ ಕೃತಿಗಳು : ಗದ್ಯಶೈಲಿ, ಗದುಗಿನ ಭಾರತ, ನಂಜುಂಡಕವಿ, ಕುವೆಂಪು-ಕೆಲವು ಅಧ್ಯಯನಗಳು, ನೂರೆಂಟು ಪುಸ್ತಕಗಳು, ಬೆರಕೆಸೊಪ್ಪು, ಮುನ್ನುಡಿಗಳು. ಶರಣಪಥ, ಷಡಕ್ಷರದೇವ, ಸಾಹಿತ್ಯಮಾರ್ಗ ಮುಂತಾದ 18 ಕೃತಿಗಳು (ವಿಮರ್ಶೆಗಳು) : ಅಜಿತ ತೀರ್ಥಂಕರ ಪುರಾಣತಿಲಕಂ, ಕಬ್ಬಿಗರ ಕಾವಂ, ಕುವೆಂಪು ಕವನಗಳು, ಗಿರಿಜಾ ಕಲ್ಯಾಣ, ಮಹಾಪ್ರಬಂಧಂ, ಜೈಮಿನಿ ಭಾರತ ಸಂಗ್ರಹ, ಧರ್ಮಾಮೃತ ಸಂಗ್ರಹ, ನಳ ಚರಿತ್ರೆ, ಬಸವಸಂಹಿತೆ, ಲೀಲಾವತಿ ಪ್ರಬಂಧಂ, ಸಾಹಿತ್ಯರಾಧನೆ, ಸುವರ್ಣಸಂಚಯ ಮುಂತಾದ 25 ಕೃತಿಗಳು (ಸಂಪಾದನೆ). ನಮ್ಮ ನೆಹರು, ಮಕ್ಕಳ ಶೂದ್ರತಪಸ್ವಿ, ಮಕ್ಕಳ ಏಕಲವ್ಯ ಮುಂತಾದ 12 ಮಕ್ಕಳ ಸಾಹಿತ್ಯ ಕೃತಿಗಳು. ಜನಪದ ಸಾಹಿತ್ಯ 4 ; ಜೀವನ ಚರಿತ್ರೆಗಳು 17 ; ಪ್ರವಾಸ ಸಾಹಿತ್ಯ 4 ; ಇತರೆ 35.

**ಜಿ. ವರದರಾಜರಾವ್*** : (ಗುಂಡಮರಾಜು ವರದರಾಜರಾವ್) ಪ್ರಸಿದ್ಧ ವಿದ್ವಾಂಸರು ಕವನ, ಕಥೆ, ಕಾದಂಬರಿ, ವಿಮರ್ಶೆ, ಗ್ರಂಥ ಸಂಪಾದನಾ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆಗಳನ್ನು ನೀಡಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತಿಗೊಂಡಿದ್ದಾರೆ. ಸತ್ವಪೂರ್ಣ ಸಾಹಿತ್ಯ ಕೊಡುಗೆಗಳಿಗಾಗಿ ಕೇಣಿ ಸಿದ್ದಪ್ಪ ಚಿನ್ನಪ್ಪ ಪದಕ. ಹೊನ್ನಶೆಟ್ಟಿ ಬಹುಮಾನ, ಹರಿದಾಸ ಸೇವಾ ಪ್ರಶಸ್ತಿ, ರಜತೋತ್ಸವ ಸ್ವರ್ಣ ಪದಕ ಮೊದಲಾದವು ಲಭಿಸಿವೆ. ವಿಮರ್ಶಾ/ಸಂಪಾದನಾ ಕ್ಷೇತ್ರದಲ್ಲಿನ ಇವರ ಕೃತಿಗಳು : ಪಡಿನುಡಿ, ಸಾಹಿತ್ಯ

---

* ಪುಟ 179 ನೋಡಿ. ಜೀವಿತ ಕಾಲ : (ಜನವರಿ 3, 1918 ರಿಂದ ನವೆಂಬರ್ 13, 1987).

ಸಾನಿಧ್ಯ, ಕುಮಾರ ರಾಮನ ಸಾಂಗತ್ಯಗಳು, ಶ್ರೀ ಪುರಂದರದಾಸರು ಮತ್ತು ಅವರ ಕೀರ್ತನೆಗಳು (ವಿಮರ್ಶೆ), ಶ್ರೀ ಪಾದರಾಜರ ಕೃತಿಗಳು. ಅಪ್ರತಿಮ ವೀರಚರಿತೆ– (ಸಂಪಾದನೆ) ; ಶ್ರೀಮಹಿಪತಿರಾಯರ ಕೃತಿಗಳು, ಹರಿದಾಸ ಸಾಹಿತ್ಯ ಸಮೀಕ್ಷೆ.

• ಒಟ್ಟು ಕೃತಿಗಳ ಸಂಖ್ಯೆ ಸುಮಾರು 25.

**ಜಿ. ವಿಷ್ಣುಮೂರ್ತಿ ಭಟ್ಟ[1] :** ಸಂಸ್ಕೃತ ಸಾಹಿತ್ಯದ ಅನರ್ಘ್ಯ ರತ್ನಗಳ ದರ್ಶನವನ್ನು ಕನ್ನಡಿಗರಿಗೆ ಮಾಡಿಸಿದ ಹೆಗ್ಗಳಿಕೆ ಇವರದು. ಇವರು ತ್ರಿಭಾಷಾ ವಿಶಾರದರು. (ಸಂಸ್ಕೃತ. ಕನ್ನಡ, ಹಿಂದಿ). ವ್ಯಾಕರಣ. ತರ್ಕ, ಸಾಹಿತ್ಯ. ಅಲಂಕಾರ, ವೇದಾಂತ ಶಾಸ್ತ್ರಗಳಲ್ಲಿ ಅಪಾರ ಪ್ರೌಢಿಮೆ ಗಳಿಸಿದ್ದವರು.

ಕೃತಿಗಳು : ಪಾಣಿನೀಯ ಪ್ರವೇಶಿಕಾ. ಚಂದ್ರಾಲೋಕ, ಅಮರಕೋಶ, ತರ್ಕ ಸಂಗ್ರಹ, ವ್ಯಾಕರಣ ಸಿದ್ಧಾಂತ. ಕೌಮುದಿ ನ್ಯಾಯ ಸಿದ್ಧಾಂತ, ಮುಕ್ತಾವಲಿ. ನೀತಿಶತಕ, ರಘುವಂಶ (ಸಂಪಾದಿತ ಕೃತಿಗಳು). ಸಾಂಖ್ಯಕಾರಿಕಾ. ವೈಯಾಕರಣ ಸಿದ್ಧಾಂತ· (ಅನುವಾದಗಳು).

ಏಕೈಕ ಸಂಸ್ಕೃತ ದಿನ ಪತ್ರಿಕೆಯಾದ 'ಸುಧರ್ಮ' ದ ಓದುಗರಿಗೆ ಇವರು ಸುಪರಿಚಿತರು. 'ಸರ್ವದರ್ಶನ ಸಂಗ್ರಹ' (ಇತ್ತೀಚಿನ ಗ್ರಂಥ).

**ಡಾ|| ಆರ್. ಸಿ. ಹಿರೇಮಠ[2] :** (ರುದ್ರಯ್ಯ ಚಂದ್ರಯ್ಯ ಹಿರೇಮಠ) ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಚಾರ್ಯರೂ, ಮುಖ್ಯರೂ ಆಗಿದ್ದ ಇವರು ಭಾಷಾ ವಿಜ್ಞಾನ. ಪ್ರಾಚೀನ ಮಹಾಕಾವ್ಯಗಳ ಪರಿಷ್ಕರಣದಲ್ಲಿ ಪರಿಣಿತರು. ಸುಮಾರು 65 ಕೃತಿಗಳನ್ನು ರಚಿಸಿರುವುದಲ್ಲದೆ ಹಲವಾರು ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು (1970)

ಕೃತಿಗಳು : ಚನ್ನಬಸವಣ್ಣನವರ ವಚನಗಳು, ಮಹಾದೇವಿಯಕ್ಕನ ವಚನಗಳು, ಷಟ್‌ಸ್ಥಲ ಪ್ರಭೆ, ಶ್ರೀ ಸಿದ್ಧರಾಮೇಶ್ವರ ವಚನಗಳು, ಶಿವಶರಣರ ವಚನಗಳು, ಬಸವಣ್ಣನವರ ವಚನಗಳು, ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ.

ತ್ರಿಷಷ್ಠಿ ಪುರಾತನ ಚರಿತ್ರೆ, ಬಸವರಾಜ ವಿಜಯಂ, ಹರಿಹರನ ಪುರಾತನ ಅರು ರಗಳೆಗಳು, ರಾಜಶೇಖರ ವಿಳಾಸಂ. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ, ರತ್ನಾಕರ, ಸೋಮನಾಥ ಚರಿತ್ರೆ, ಮಹಾಲಿಂಗ ಲೀಲೆ, ಬಸವಣ್ಣನವರ ವಚನಗಳು. ಮಹಾಕವಿ ರಾಘವಾಂಕ, ಸಾಹಿತ್ಯ ಸಮದೃಷ್ಟಿ (ಸಂಪಾದಿತ ಕೃತಿಗಳು).

'ಷಟ್‌ಸ್ಥಳ ಪಥ' 1966 ರ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ.

---

1 ಜನನ: 1918. ದಕ್ಷಿಣ ಕನ್ನಡ ಜಿಲ್ಲೆಯ ಗುಂಡ್ಯಡ್ಕ.

2 ಜನನ: ಜನವರಿ 15, 1920, ಧಾರವಾಡ ಜಿಲ್ಲೆಯ 'ಕುರುಹಿನ' ಗ್ರಾಮದಲ್ಲಿ. ತಂದೆ: ಚಂದ್ರಯ್ಯ. ತಾಯಿ: ವೀರಮ್ಮ.

ಮೌನಸ್ಪಂದನ. ಸಮರ ದುಂದುಭಿ (ಕವನ ಸಂಗ್ರಹಗಳು) ರಾಜಶೇಖರ ವಿಲಾಸ, ಜ್ಯೋತಿ ಬೆಳಗುತ್ತಿದೆ (ಸಂಗ್ರಹ): ಅಸಾಮಿ ಸಾಹಿತ್ಯ ಚರಿತ್ರೆ (ಇತರೆ). ಇವರು ಇಂಗ್ಲೀಷಿನಲ್ಲೂ ಕೃತಿ ರಚಿಸಿದ್ದಾರೆ.

**ಡಾ|| ಎಚ್. ನರಸಿಂಹಯ್ಯ**[1] **:** ಭಾರಿ ಭಾರಿ ಪುಟ ಸಂಖ್ಯೆಯ ಗ್ರಂಥಗಳನ್ನು ಬರೆಯದೆ ಇದ್ದರೂ ಸಾವಿರಾರು ಪುಟಗಳಷ್ಟು ವಿಮರ್ಶಾತ್ಮಕ ಲೇಖನಗಳನ್ನು ಬರೆದು ಶಿಕ್ಷಣ ಕ್ಷೇತ್ರದಲ್ಲಿ ಸ್ವಶಕ್ತಿ, ಸ್ವಸಾಮರ್ಥ್ಯದಿಂದ ಪ್ರಸಿದ್ಧಿಗೆ ಬಂದವರು. ಗೊಡ್ಡು ನಂಬಿಕೆಗಳನ್ನು ತುಳಿದು ವೈಜ್ಞಾನಿಕ ತಳಹದಿಯ ಸಮಾಜ ನಿರ್ಮಾಣ ಬೇಕೆನ್ನುವ ಕ್ರಾಂತಿಕಾರಿ ವಿಮರ್ಶಕ.

ನ್ಯಾಷನಲ್ ಕಾಲೇಜಿನ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಯಶಸ್ಸು ಇವರದು. ರಾಜ್ಯ ಸರ್ಕಾರ ಇವರಿಗೆ ರಾಜ್ಯ ಪ್ರಶಸ್ತಿ ಹಾಗೂ ವಿಧಾನ ಪರಿಷತ್ತಿನ ಸದಸ್ಯತ್ವ ನೀಡಿ ಇವರ ಅಪಾರ, ನಿಷ್ಕಾಮ ಸೇವೆಯನ್ನು ಗೌರವಿಸಿದೆ.

ಇವರದು ಆದರ್ಶ ಜೀವನ. ಅನುಕರಣೀಯ ತತ್ವನಿಷ್ಠೆ.

**ಡಾ|| ಎಂ. ಎಸ್. ಸುಂಕಾಪುರ**[2] **:** ಪ್ರಸಿದ್ಧ ಸಂಶೋಧಕರು, ಹಾಸ್ಯ, ವಿಡಂಬನ ಸಾಹಿತ್ಯ ಕ್ಷೇತ್ರಗಳಲ್ಲಿ ಶ್ಲಾಘನೀಯ ಸೇವೆ ಸಲ್ಲಿಸಿರುವ ಪ್ರತಿಭಾವಂತರು.

ಮುಂಬಯಿ ವಿಶ್ವವಿದ್ಯಾನಿಲಯದ ಎಂ.ಎ., ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಗಳಿಸಿರುವ ಶ್ರೀಯುತರು ಲಿಂಗರಾಜ ಕಾಲೇಜು, ಬಸವೇಶ್ವರ ಕಾಲೇಜು, ಕನ್ನಡ ಅಧ್ಯಯನ ಪೀಠ ಮುಂತಾದೆಡೆ ಸೇವೆ ಸಲ್ಲಿಸಿದ್ದಾರೆ. ಅಧ್ಯಯನ ಪೀಠದ ಮುಖ್ಯಸ್ಥರಾಗಿ 1981 ರಲ್ಲಿ ನಿವೃತ್ತಿ.

ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಇವರಿಗೆ 1982 ರಲ್ಲಿ ಪ್ರಶಸ್ತಿ ನೀಡಿದೆ.

ಕೃತಿಗಳು : ಪ್ರಭುಲಿಂಗಲೀಲೆ, ಶಬರ ಶಂಕರ ವಿಲಾಸ, ಪ್ರಸನ್ನ ಶಂಕರಲಿಂಗ ರಗಳೆಗಳು, ಹರಿಹರ ದೇವಕೃತ ನೂತನ ಪುರಾತನ ರಗಳೆಗಳು, ಮೈಲಾರ ಬಸವಲಿಂಗ ಶರಣರ ಗುರು ಕರುಣತ್ರಿವಿಧಿ, ಗಿರಿಜಾಕಲ್ಯಾಣ, ಹರಳಯ್ಯನ ಚರಿತ್ರೆ, ರೇವಣಸಿದ್ಧೇಶ್ವರ ಕಾವ್ಯ, ವಿಶೇಷಾನುಭವ ಷಟ್‌ಸ್ಥಳ, ಅಲ್ಲಮ ಪ್ರಭುದೇವರ ವಚನಗಳು, ಪ್ರಸಾದಿ ಸ್ಥಳದ ವಚನಗಳು, ಸಕಲ ಪುರಾತನರ ವಚನಗಳು, ಮುಂತಾದವುಗಳನ್ನು ಸಂಪಾದಿಸಿರುವುದಲ್ಲದೆ ಶತಕ ಸಾಹಿತ್ಯ—7 ; ಜನಪದ ಸಾಹಿತ್ಯ—10 ; ಯಕ್ಷಗಾನ ಬಯಲಾಟ—6 ಕೃತಿಗಳನ್ನು ಸಂಪಾದಿಸಿದ್ದಾರೆ.

---

1 ಜನನ : ಜೂನ್ 1920, ಗೌರಿಬಿದನೂರು ತಾಲ್ಲೂಕಿನ ಹೊಸೂರು ಜನ್ಮಸ್ಥಳ.

2 ಜನನ : ಜನವರಿ 10, 1921, ಧಾರವಾಡ ಜಿಲ್ಲೆಯ 'ಮುಳಗುಂದ' ದಲ್ಲಿ. ತಂದೆ : ಸಣಬಸಪ್ಪ, ತಾಯಿ : ಸಿದ್ದಮ್ಮ. ಶ್ರೀ ಎಂ. ಎಸ್. ಸುಂಕಾಪುರರ ಪೂರ್ಣ ಹೆಸರು : ಮುರಿಬಸಪ್ಪ ಸಣ್ಣಬಸಪ್ಪ ಸುಂಕಾಪುರ. ಪುಟ 49 ನೋಡಿ.

ಇತರ ಕೃತಿಗಳು: ನಗೆ ಹೊಗೆ (ನಾಟಕ ಸಂಗ್ರಹ) ಗಪ್‌ಚಿಪ್ (ಹರಟೆ) ತಲೆಹರಟೆಗಳು. ಕನ್ನಡ ಸಾಹಿತ್ಯದಲ್ಲಿ ಹಾಸ್ಯ. ನಗೆಗಾರ ನಯಸೇನ, ಜೀವನದಲ್ಲಿ ಹಾಸ್ಯ. ರೇಡಿಯೋ ನಾಟಕಗಳು. ನವ್ಯ ನಾಟಕಗಳು. ಗ್ರಾಮೀಣ ಸಂಪದ (ಜನಪದ ವಿಮರ್ಶಾ ಲೇಖನಗಳು).

**ಡಾ|| ಹಿರೇಮಲ್ಲೂರು ಈಶ್ವರನ್**[1] **:** ಅಂತರರಾಷ್ಟ್ರೀಯ ಖ್ಯಾತಿ ಗಳಿಸಿರುವ ಸಾಹಿತಿ. ಸಮಾಜ ವಿಜ್ಞಾನಿ.

ಲಿಂಗರಾಜ ಮಹಾವಿದ್ಯಾಲಯದಿಂದ ಎಂ.ಎ. ಗಳಿಸಿ ಕೆಲಕಾಲ ಸೊಲ್ಲಾಪುರದಲ್ಲಿ ಕನ್ನಡ ಅಧ್ಯಾಪಕರಾಗಿದ್ದು 'ಹರಿಹರ ಕವಿಯ ಕೃತಿಗಳು—ಒಂದು ಸಂಖ್ಯಾನಿರ್ಣಯ' ಎಂಬ ವಿಷಯದಲ್ಲಿ ಡಾಕ್ಟರೇಟ್ ಸಂಪಾದಿಸಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಡಿ.ಲಿಟ್. ಪದವಿ ಪಡೆದಿರುವ ಈ ಪ್ರತಿಭಾವಂತ ಕೆನಡಾದ ಯಾರ್ಕ್ ವಿಶ್ವವಿದ್ಯಾನಿಲಯದಲ್ಲಿ ಸಮಾಜವಿಜ್ಞಾನ ಶಾಸ್ತ್ರದ ಬೋಧಕರಾಗಿದ್ದಾರೆ.

ಈಶ್ವರನ್ ಮನುಸ್ಮೃತಿಯನ್ನು ಮತ್ತು ಪಾಶ್ಚಾತ್ಯ ಕುಟುಂಬ ಜೀವನ ಕುರಿತು ಸಂಶೋಧನೆ ನಡೆಸಿ ಇಂಗ್ಲೀಷ್‌ನಲ್ಲಿ ಗ್ರಂಥ ರಚಿಸಿದ್ದಾರೆ. ತಾವೇ ರಚಿಸಿದ 8 ಗ್ರಂಥಗಳ ಜೊತೆಗೆ 50ಕ್ಕೂ ಹೆಚ್ಚು ಗ್ರಂಥಗಳನ್ನು ಸಂಪಾದಿಸಿದ್ದಾರೆ. ಸುಮಾರು ಎರಡು ದಶಕಗಳಿಂದ ಮೂರು ಅಂತರರಾಷ್ಟ್ರೀಯ ತ್ರೈಮಾಸಿಕಗಳನ್ನು ನಡೆಸುತ್ತಿದ್ದಾರೆ. ಇವು ಪ್ರಪಂಚದಾದ್ಯಂತ ವಿದ್ವತ್ ಜನಗಳ ಗಮನ ಸೆಳೆದಿವೆ.

ಇತರ ಕೃತಿಗಳು: ವಿಷನಿರ್ವಿಷಗಳು. ಹಾಲಾಹಲ. ರಾಜರಾಣಿ ದೇಖೋ. ಶಿವನ ಬುಟ್ಟಿ, ಕನ್ನಡ ತಾಯ್ ನೋಟ. ಕವಿ ಕಂಡ ನಾಡು, ವಲಸೆ ಹೋದ ಕನ್ನಡಿಗನ ಕತೆ. ಹರಿಹರನ ಕೃತಿಗಳು. ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ. ಭಾರತದ ಹಳ್ಳಿಗಳು ಮುಂತಾದವು.

**ಸು. ರಂ. ಎಕ್ಕುಂಡಿ**[2] **:** (ಸುಬ್ಬಣ್ಣ ರಂಗನಾಥ ಎಕ್ಕುಂಡಿ)

ವಿದ್ಯಾರ್ಥಿಪ್ರಿಯ ಉಪಾಧ್ಯಾಯರು. ಹೆಸರಾಂತ ಲೇಖಕರು. ಕಥೆ. ಕಾದಂಬರಿ. ಕವನ. ವಿಮರ್ಶೆ ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಒಳ್ಳೆಯ ಕೃಷಿ ಮಾಡಿದ್ದಾರೆ.

ರಾಜ್ಯ ಶಿಕ್ಷಕ ಪ್ರಶಸ್ತಿ ಗಳಿಸಿರುವುದಲ್ಲದೆ ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿಯನ್ನೂ ಗಳಿಸಿದ್ದಾರೆ.

ಕೃತಿಗಳು: ಕಾವ್ಯ ವಿಮರ್ಶೆ. ನವ್ಯ ಕವಿತೆ, ಮರುಣಕುಂಜ. ತಾಳ ತಂಬೂರಿ. ಪು. ತಿ. ನ.. ಮಧ್ವ ಮುನಿ. ನೆರಳು. ಪ್ರತಿಬಿಂಬಗಳು. ಸಂತಾನ. ಹಾವಾಡಿಗರ-ಹುಡುಗ. ಆನಂದ ತೀರ್ಥರು. ಮತ್ಸಗಂಧಿ. ಲೆನಿನ್ನನ ನೆನಪಿಗಾಗಿ.

---

1 ಜನನ: ನವೆಂಬರ್ 1, 1922, ಧಾರವಾಡ ಜಿಲ್ಲೆಯ ಶಿಗ್ಗಾವಿ ತಾಲ್ಲೂಕಿನ 'ಹಿರೇಮಲ್ಲೂರು' ಹುಟ್ಟಿದೂರು.

2 ಜನನ: ಜನವರಿ 20, 1923, ಧಾರವಾಡ ಜಿಲ್ಲೆಯ ರಾಣೆಬೆನ್ನೂರು. ತಂದೆ: ರಂಗನಾಥ, ತಾಯಿ: ರಾಜಕ್ಕ. ಪುಟ 174 ನೋಡಿ.

**ಪ್ರೊ|| ಕು. ಶಿ. ಹರಿದಾಸ ಭಟ್ಟ**[1] :

ಮದರಾಸು, ಮಣಿಪಾಲದ ಕಾಲೇಜುಗಳಲ್ಲಿ ಶಿಕ್ಷಕರಾಗಿ, ಪ್ರಿನ್ಸಿಪಾಲರಾಗಿ ದುಡಿದ ಶ್ರೀಯುತರಿಗೆ ಸಾಹಿತ್ಯವೆಂದರೆ ಬಹು ಅಚ್ಚುಮೆಚ್ಚು. ಅವರ 'ಅರ್ಥ ಶಾಸ್ತ್ರ' (1950) ಈ ಕ್ಷೇತ್ರದಲ್ಲಿ ಬಂದ ಮೊತ್ತ ಮೊದಲ ಶಾಸ್ತ್ರೀಯ ಗ್ರಂಥ.

ಕಾದಂಬರಿ, ಕತೆ, ಕವನ, ಇತಿಹಾಸ, ಸಂಶೋಧನೆ, ಈ ಎಲ್ಲಾ ಪ್ರಕಾರಗಳಲ್ಲೂ ಕೃತಿ ರಚಿಸಿದ್ದಾರೆ. ಉದಯವಾಣಿಯ 'ಲೋಕಾಭಿರಾಮ' ಅಂಕಣದ ಲೇಖಕರೂ ಇವರೇ.

ಕೃತಿಗಳು : ಸಮಗ್ರ ಯಕ್ಷಗಾನ : ಪರಂಪರೆ ಮತ್ತು ಪ್ರಯೋಗ ;

ಅಭಿವಂದನ (ಶಿವರಾಮ ಕಾರಂತ ಅಭಿನಂದನ ಉತ್ಸವದ ಸ್ಮೃತಿ ಸಂಚಯ) (ಸಂಪಾದನೆ).

**ಡಾ|| ಪಿ. ಗುರುರಾಜ ಭಟ್**[2] : (ಪಾದೂರು ಗುರುರಾಜ ಭಟ್) ಕರ್ನಾಟಕದ ಖ್ಯಾತ ಇತಿಹಾಸ ಸಂಶೋಧಕ, ತುಳುನಾಡ ಇತಿಹಾಸ, ಸಂಸ್ಕೃತಿ ಸಂಶೋಧನೆಗಳ ಸೀಮಾಪುರುಷ, ಕೀರ್ತಿಯ ಉತ್ತುಂಗಶಿಖರ ಏರಿದ್ದಾಗಲೇ ಮಾನಸಿಕ ವ್ಯಾಕುಲತೆಗಳಿಂದ ಆತ್ಮಹತ್ಯೆ ಮಾಡಿಕೊಂಡದ್ದು ಬಹು ದುಃಖದ ವಿಷಯ. ಕಾರ್ಕಳದ ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿ ನಡೆಸುತ್ತಲೇ ಸ್ವಪ್ರಯತ್ನದಿಂದ, ಬಾಹ್ಯ ಶಿಕ್ಷಣದ ಮೂಲಕವೇ ಹಿಂದೂ ವಿಶ್ವವಿದ್ಯಾನಿಲಯದಿಂದ ಎಂ. ಎ. ಪಡೆದಿದ್ದರು. ತುಳುನಾಡಿನ ಸಂಸ್ಕೃತಿಯ ಬಗ್ಗೆ ಸಂಶೋಧನೆ ನಡೆಸಿ ಮೈಸೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಸಹ ಗಳಿಸಿದ್ದರು. ಅವರ 'ತುಳುನಾಡು' ಗ್ರಂಥ 1965 ರಲ್ಲಿ ದೇವರಾಜ ಬಹದ್ದೂರ್ ಪ್ರಶಸ್ತಿ ಗಳಿಸಿತ್ತು. ದಕ್ಷಿಣ ಕನ್ನಡ ನಾಡನ್ನು ಕುರಿತು ಇವರು ನಡೆಸಿದ ಅಧ್ಯಯನಕ್ಕೂ, ಪ್ರಕಟಿಸಿದ ಲೇಖನಗಳಿಗೂ ಎಣೆಯಿಲ್ಲ. ಪ್ರತಿಯೊಂದು ದೇವಾಲಯದ ವೈಶಿಷ್ಟ್ಯ, ದೇವತಾ ಮೂರ್ತಿಗಳ ಸ್ವರೂಪ ಮುಂತಾದ ವಿವರಗಳ ಬಗ್ಗೆ ಸಚಿತ್ರ ಲೇಖನಗಳು ದೇಶದ ಬಹಳಷ್ಟು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಇಂಗ್ಲೀಷಿನಲ್ಲೂ ಲೇಖನಗಳನ್ನು ಬರೆದಿದ್ದಾರೆ. ಗ್ರಂಥ ಪ್ರಕಟಿಸಿದ್ದಾರೆ. 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್' ಒಂದು ಅಪೂರ್ವ ಗ್ರಂಥ.

ದಕ್ಷಿಣ ಕನ್ನಡ ನಾಡಿನಲ್ಲಿ ಕಬ್ಬಿಣ ಯುಗದ ಅವಶೇಷ, ಆಳುಪರಸರ ಕಾಲದ ಬೆಳ್ಳಿ ಣ್ಣ, ತಾಮ್ರಪಟಗಳನ್ನು ಬೆಳಕಿಗೆ ತಂದ ಕೀರ್ತಿ ಡಾ|| ಭಟ್ಟರದು. ಅಂಬಲ ಪಾಡಿಯ ಇತಿಹಾಸ, ದಕ್ಷಿಣ ಕನ್ನಡದ ತುಳುವರು, ತುಳು ಸಂಸ್ಕೃತಿಯೂ, ಉಡುಪಿಯ ಇತಿಹಾಸ, ಬಾರಕೂರು ಮೊದಲಾದವು ಸಂಶೋಧನಾ ಕೃತಿಗಳು.

---

1 ಜನನ : ಮಾರ್ಚ್, 1924.

2 ಜೀವಿತ ಕಾಲ : ಜೂನ್ 1924–ಆಗಸ್ಟ್ 1978.

**ಪ್ರೊ|| ಎಲ್. ಎಸ್. ಶೇಷಗಿರಿರಾವ್[1] :** ಇಂದಿನ ವಿಮರ್ಶಕರಲ್ಲಿ ಅಗ್ರಗಣ್ಯರು. ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಪ್ರಾಧ್ಯಾಪಕ (ಇಂಗ್ಲೀಷ್) ರಾಗಿದ್ದ ಶ್ರೀಯುತರು ನಿವೃತ್ತಿಗೊಂಡು ಈಗ ಪೂರ್ಣ ರೂಪದಲ್ಲಿ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದಾರೆ. ಇಂಗ್ಲೀಷ್ ವಿಭಾಗದಲ್ಲಿ ಉನ್ನತ ಮಟ್ಟದ ಎಂ. ಎ., ಗಳಿಸಿ ಭಾಷಾ ವಿಜ್ಞಾನದಲ್ಲಿ ಪ್ರೌಢಿಮೆ ಸಾಧಿಸಿರುವ ಶೇಷಗಿರಿರಾಯರು ಕನ್ನಡ ಸಾಹಿತ್ಯದ ಮೇಲೆ ಸಂಪೂರ್ಣ ಪ್ರಭುತ್ವ ಹೊಂದಿದ್ದಾರೆ. ಇಂಗ್ಲೀಷಿನ ಮೇಲೆ ಇವರಿಗೆ ವೃತ್ತಿ ಬಾಂಧವ್ಯವಾದರೆ ಕನ್ನಡದ ಮೇಲೆ ಇವರಿಗೆ ಮಾತೃವಾತ್ಸಲ್ಯ. ಔನ್ನತ್ಯದ ಶಿಖರ ಏರಿ ಕುಳಿತಿರುವ ಸತ್ವಪೂರ್ಣ ಇಂಗ್ಲೀಷ್ ಸಾಹಿತ್ಯವನ್ನು ಗೌರವದಿಂದ ಆದರಿಸುವ ಶೇಷಗಿರಿರಾಯರು ಕನ್ನಡ ಕಂಪನ್ನು ವಿಶ್ವವ್ಯಾಪ್ತಿಗೊಳಿಸುವ ಹಂಬಿಕೆಯಲ್ಲಿದ್ದಾರೆ. 'ಭಾರತ-ಭಾರತಿ' ಪುಸ್ತಕ ಸಂಪದ ಈ ದಿಸೆಯಲ್ಲಿಟ್ಟ ಹೆಮ್ಮೆಯ ಹೆಜ್ಜೆ. ರಾಷ್ಟ್ರೋತ್ಥಾನ ಪರಿಷತ್ತಿನ ಈ ಯೋಜನೆಗೆ ಇವರು ಪ್ರಧಾನ ಸಂಪಾದಕರಾಗಿದ್ದರು. ಜ್ಞಾನಗಂಗೋತ್ರಿ-ಕಿರಿಯರ ವಿಶ್ವಕೋಶ ಸಂಪಾದನೆಯಲ್ಲಿ ಇವರ ಶ್ರಮ ಮಹತ್ವದ್ದು. ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿ ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ (1984), ಗೌರವಿಸಿದೆ. 'ಇಂಗ್ಲೀಷ್ ಭಾಷೆಯಲ್ಲಿ ಆಧುನಿಕ ಸಾಹಿತ್ಯ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ. 'ಇಲಿಯಡ್' ಕೃತಿ ದೇವರಾಜ್ ಬಹದ್ದೂರ್ ಪ್ರಶಸ್ತಿ ಗಳಿಸಿದೆ. ಇವರದು ಬಹುಮುಖಿ ಪ್ರತಿಭೆ. ಕಥೆ. ಕಾದಂಬರಿ. ಪ್ರಬಂಧ ರಚಿಸಿದ್ದಾರೆ.

ಇವರ ಇತರ ಕೃತಿಗಳು :– ಇದು ಜೀವನ (ಕಾದಂಬರಿ) : 'ಮುಯ್ಯಿ' ಕಥೆಯು ಪಸ್ತ್ರಿ ಚಲನಚಿತ್ರವಾಗಿದೆ. ವಿಲಿಯಂ ಷೇಕ್ಸ್‌ಪಿಯರ್, ಗ್ರೀಕ್ ರಂಗಭೂಮಿ ನಾಟಕ. (ಸಂಪಾದನೆ) ಎಂ. ವಿಶ್ವೇಶ್ವರಯ್ಯ. ಮಿರ್ಜಾ ಇಸ್ಮಾಯಿಲ್. ರೆಡ್‌ಕ್ರಾಸಿನ ಕಥೆ. ಎಂ. ಹಿರಿಯಣ್ಣ: ಬೆಳಕಿನ ಪೂತರು, (ಶಿಶು ಸಾಹಿತ್ಯ): ಮಾಸ್ತಿ ವೆಂಕಟೇಶ ಐಯ್ಯಂಗಾರ್. ಆ್ಯನ್ ಇಂಟ್ರೊಡಕ್ಷನ್ ಟು ಮಾಡರನ್ ಲಿಟರೇಚರ್. ಎ ಹಿಸ್ಟರಿ ಆಫ್ ಕನ್ನಡ ಲಿಟರೇಚರ್. ಕಂಪಾರೇಟಿವ್ ಲಿಟರೇಚರ್. (ಇಂಗ್ಲೀಷಿನಲ್ಲಿ ರಚಿಸಿರುವ ಕೃತಿಗಳು).

**ಪ್ರೊ|| ಜಿ. ಎಸ್. ಆಮೂರ[2] :** (ಗುರುರಾಜ ಶಾಮಾಚಾರ್ಯ ಆಮೂರ) ಕರ್ನಾಟಕ ವಿಶ್ವವಿದ್ಯಾಲಯದ ಡಾಕ್ಟರೇಟ್ ಪಡೆದು ಕ್ಯಾಲಿಫೋರ್ನಿಯಾ ಹಾಗೂ ಯೇಲ್ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆದು ಬಂದಿದ್ದಾರೆ.

1 ಜನನ: ಫೆಬ್ರವರಿ 16, 1925. ಬೆಂಗಳೂರಿನಲ್ಲಿ. ತಂದೆ: ಸ್ವಾಮಿರಾವ್, ತಾಯಿ: ಕಮಲಾಬಾಯಿ.

2 ಜನನ: ಮೇ 8, 1925, ಬೊಮ್ಮನಹಳ್ಳಿಯಲ್ಲಿ. ತಂದೆ: ಶಾಗು ಆಮೂರ, ತಾಯಿ: ಗಂಗಾದೇವಿ.

ಮರಾಠಾವಾಡಾ ವಿಶ್ವವಿದ್ಯಾಲಯ ಔರಂಗಾಬಾದ್‌ನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದಾರೆ. ವಿಮರ್ಶೆ ಹಾಗೂ ಗ್ರಂಥ ಸಂಪಾದನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ.

ಕೃತಿಗಳು : ಕೃತಿ ಪರೀಕ್ಷೆ, ಮಹಾಕವಿ ವಿಲ್ಟನ್, ಸಮಕಾಲೀನ ಕಥೆ ಕಾದಂಬರಿ ಮತ್ತು ಹೊಸ ಪ್ರಯೋಗಗಳು (ವಿಮರ್ಶೆ).

**ಪ್ರೊ॥ ಟಿ. ಕೇಶವ ಭಟ್ಟ**[1] **:** ಆಚಾರ್ಯ ಪಾಠಶಾಲೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ. ರಾಜ್ಯ ಬಹುಮಾನಿತ ಚಂಪೂ ಕವಿ. ವಿಶ್ವವಿದ್ಯಾಲಯ ಪುರಸ್ಕೃತ ಸಂಶೋಧನ ಗ್ರಂಥಕಾರ. ಯಕ್ಷಗಾನ-ಗಮಕ-ಜಾನಪದ ಜ್ಞಾನಪಟು, ಲಾಕ್ಷಣಿಕ ವಿಮರ್ಶಕ, ಯು.ಜಿ.ಸಿ. ಸಂಶೋಧಕ.

ಕೃತಿಗಳು : ಭಾಷಾದೀಪಿಕೆ, ಸತ್ತ್ವಾವಲೋಕನಂ, ತೂಗುದೀವಿಗೆ, ಪಂಚವಟಿ, ರಾಮಾಯಣ, ಸಂಶೋಧನ ರತ್ನಮಾಲಿಕೆ, ಹಾಡಿನ ಚೂಡಾಮಣಿ, ಹವ್ಯಕರ ಶೋಭಾನೆಗಳು (ಬೃಹತ್ ಸಂಗ್ರಹ).

**ಎನ್. ಬಸವಾರಾಧ್ಯ**[2] : (ನಂಜುಂಡಾರಾಧ್ಯ ಬಸವಾರಾಧ್ಯ) ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗದಲ್ಲಿ ನಿರ್ದೇಶಕರಾಗಿದ್ದಾರೆ.

ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ದೇವರಾಜ ಬಹದ್ದೂರ್ ಬಹುಮಾನ ಗಳಿಸಿದ್ದಾರೆ.

ಗಣ್ಯಗ್ರಂಥಸಂಪಾದಕರು, ಸಂಶೋಧಕರು, ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸದಭಿರುಚಿ ಹೊಂದಿರುವ ಸಾಹಿತಿಗಳು. ಇಂಗ್ಲೀಷ್-ಕನ್ನಡ ನಿಘಂಟಿನ ಸಂಪಾದಕ ಮಂಡಲಿಯ ಸದಸ್ಯರು. ಕೃತಿಗಳ ಸಂಖ್ಯೆ ಸುಮಾರು 30.

ಮುಖ್ಯ ಕೃತಿಗಳು : ತೊರವೆ ರಾಮಾಯಣ, ತ್ರಿಪುರದಹನಸಾಂಗತ್ಯ, ಚಂದ್ರಹಾಸನ ಕಥೆ, ಕನ್ನಡ ಗದ್ಯ ವಿಕಾಸ, ಅಬ್ಬಯಾರು ಚರಿತ್ರೆ, ಉದ್ಯೋಗ ಸಾರ.

**ಶಾಂತರಸ**[3] **:** ಎಂ. ಎ., ಬಿ. ಎಡ್. ಪದವಿ ಗಳಿಸಿದನಂತರ ಹೈಸ್ಕೂಲಿನಲ್ಲಿ ಕನ್ನಡ ಶಿಕ್ಷಕರಾಗಿ ಜೀವನ ಪ್ರಾರಂಭಿಸಿ ಈಗ ರಾಯಚೂರಿನ ಹಮ್ದರ್ದ್ ಕಾಲೇಜಿನಲ್ಲಿ ಪ್ರಾಚಾರ್ಯರಾಗಿದ್ದಾರೆ.

ಇವರದು ಬಹುಮುಖ ಪ್ರತಿಭೆ. ಐದು ಸಂಶೋಧನಾ ಕೃತಿಗಳನ್ನು ರಚಿಸಿರುವುದಲ್ಲದೆ ಎಂಟು ಕೃತಿಗಳನ್ನು ಸಂಪಾದಿಸಿದ್ದಾರೆ. ಮೂರು ನಾಟಕಗಳನ್ನೂ,

---

1 ಜನನ : 1925

2 ಜನನ : ಫೆಬ್ರವರಿ 1926, ಕೋಲಾರ ಜಿಲ್ಲೆ, ನಾರಸಿಂಹನಹಳ್ಳಿಯಲ್ಲಿ. ತಂದೆ : ನಂಜುಂಡಾರಾಧ್ಯ, ತಾಯಿ : ಗಿರಿಜಮ್ಮ.

3 ಜನನ : ಏಪ್ರಿಲ್ 7, 1926, ರಾಯಚೂರು ಜಿಲ್ಲೆಯ ಹೆಂಬೇರಾಳುವಿನಲ್ಲಿ.

ಮೂರು ಕಥಾ ಸಂಕಲನಗಳನ್ನು, ಎರಡು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಸಾಹಿತ್ಯ ಸೇವೆಯನ್ನು ಗುರುತಿಸಿ ರಾಜ್ಯ ಸಾಹಿತ್ಯ ಅಕಾಡೆಮಿ 1985 ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

ಮುಖ್ಯ ಕೃತಿಗಳು : ಮಾನಸಗಳ್ಳಿ (ಕವನ) ; ಬಡೇಸಾಬು ಪುರಾಣ (ಕಥೆ), ಸತ್ಯಸ್ನೇಹಿ (ನಾಟಕ-ಇದಕ್ಕೆ ರಾಜ್ಯಸರ್ಕಾರದ ಪುರಸ್ಕಾರ ದೊರಕಿದೆ) ; ಬಸವ ಧರ್ಮಯುಗದ ಶರಣರು, ಬಳ್ಳಾರಿ ಜಿಲ್ಲೆಯ ಶಿವಶರಣರು (ಸಂಶೋಧನೆ) : ರಸಿಕಚಕ್ರಿ ಹರಿಹರದೇವ, ಬಂಡಾಯ ವಚನಗಳು (ಸಂಪಾದನೆ) ; ಸಿದ್ಧರಾಮ (ಜೀವನ ಚರಿತ್ರೆ).

**ಡಾ|| ಹೆಚ್. ತಿಪ್ಪೇರುದ್ರ ಸ್ವಾಮಿ * :** ಇವರು ಪ್ರಸಿದ್ಧ ವಿಮರ್ಶಕರು ಹಾಗೂ ಹೆಸರಾಂತ ಸಂಶೋಧಕರು.

'ಕನ್ನಡ ನಾಡಿನ ಸಂಸ್ಕೃತಿ' ಇವರ ಹೆಸರಾಂತ ಕೃತಿ. ಮೈಸೂರು ವಿಶ್ವವಿದ್ಯಾಲಯದಿಂದ ಎಂ. ಎ., ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಗಳಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ನಿರ್ದೇಶಕ ಮತ್ತು ಪ್ರಾಧ್ಯಾಪಕರಾಗಿದ್ದರು. 'ಶರಣರ ಅನುಭವ ಸಾಹಿತ್ಯ' ಡಾಕ್ಟರೇಟ್ ದೊರಕಿಸಿ ಕೊಟ್ಟ ಕೃತಿ. ಬಹುಮುಖ ಪ್ರತಿಭೆಯ ಶ್ರೀಯುತರು ಕಥೆ. ಕಾದಂಬರಿ, ನಾಟಕ, ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ 'ಪರಿಪೂರ್ಣದೆಡೆಗೆ' ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ. 'ಕರ್ನಾಟಕ ಸಂಸ್ಕೃತಿ ಸಮೀಕ್ಷೆಗೆ' ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ. (1969)

ಇತರ ಕೃತಿಗಳು : ಕರ್ತಾರನ ಕಮ್ಮಟ, (ಮೂರು ಸಂಪುಟಗಳ ಬೃಹತ್ ಕೃತಿ) ಅನುಭವ ಸಾಹಿತ್ಯ (ವಿಮರ್ಶೆ), ವಚನಗಳಲ್ಲಿ ವೀರಶೈವ ಧರ್ಮ, ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು. ಶರಣರ ಅನುಭವ ಸಾಹಿತ್ಯ, ಶ್ರೀಶರಣ ಚರಿತಮಾನಸ, ಜ್ಯೋತಿ ಬೆಳಗುತಿದೆ, ಸಾಹಿತ್ಯ ಚಿತ್ರಗಳು. ಕದಳಿ–ಕರ್ಪೂರ, ಸತ್ಯಾಶ್ರಯ ಸಾಮ್ರಾಜ್ಯ ಚಂದ್ರಿಕೆ, ವಿಜಯ ಕಲ್ಯಾಣ. ಸರ್ವಜ್ಞನ ವಚನಗಳು. ಋಷಿಕವಿ ರಾಘವಾಂಕ. ವಚನ–ವಿರೂಪಾಕ್ಷ ಮುಂತಾದವು.

'ಶೂನ್ಯ ತತ್ವ ವಿಕಾಸ.' ಮತ್ತು 'ಶೂನ್ಯ ಸಂಪಾದನೆ' ಉತ್ತಮ ಸಂಶೋಧನಾ ಕೃತಿಗಳು. ಮೋಳಿಗೆ ಮಾರಯ್ಯ. ಸಕಲೇಶ ಮಾದರಸ. ನಿಜಗುಣ ಶಿವಯೋಗಿ. ವಿಧಿ ಪಂಜರ (ನಾಟಕಗಳು), ತಪ್ತೋರಂಗ (ಕವನ ಸಂಕಲನ), ಸಾಹಿತ್ಯ ಚಿತ್ರಗಳು (ಕಥಾ ಸಂಕಲನ). ಶಿಸ್ತಿಗಾರ ಶಿವಪ್ಪನಾಯಕ. ಎ.ಆರ್.ಕೃ. – ಜೀವನ ಮತ್ತು ಸಾಧನೆ, ಸಿದ್ಧರಾಮ ಚರಿತೆ (ಸಂಪಾದಿತ ಕೃತಿಗಳು), ಮಹಾತ್ಮ ಸಂಪುಟ (1, 2). ಗಾಂಧಿ ವಿಚಾರ ಮಾರ್ಗ, ಶಿಕ್ಷಣ ಕ್ರಾಂತಿ ಮುಂತಾದವು.

---

* ಜನನ: 1928, ಶಿವಮೊಗ್ಗ ಜಿಲ್ಲೆಯ 'ಹೊನ್ನಾಳಿ'. ಪುಟ 251 ನೋಡಿ.

**ಡಾ|| ಕೀರ್ತಿನಾಥ ಕುರ್ತಕೋಟಿ**[1] **:** ವಿಮರ್ಶಾ ಕ್ಷೇತ್ರದಲ್ಲಿ ಹೆಸರಿಸಲೇ ಬೇಕಾದ ವ್ಯಕ್ತಿ. ಗುಜರಾತಿನ ವಲ್ಲಭ ವಿದ್ಯಾ ಪೀಠದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದಾರೆ. ಇವರು ಒಳ್ಳೆಯ ನಾಟಕಕಾರರೂ ಹೌದು.

ಕೃತಿಗಳು : ನವ್ಯ ಕಾವ್ಯ ಪ್ರಯೋಗ, ನಡೆದು ಬಂದ ದಾರಿ (ವಿಮರ್ಶೆ). ಆವಾನಿ. ಸ್ವಪ್ನದರ್ಶಿ (ನಾಟಕ), ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಮನ್ವಂತರ ಇವರು ಸಂಪಾದಿಸುತ್ತಿರುವ ಪತ್ರಿಕೆ. ಮನೋಹರ ಗ್ರಂಥ ಮಾಲೆಯ ಸಲಹಾಗಾರರು.

ವಾಸುದೇವ ಪ್ರಶಸ್ತಿ (ಸಂಪಾದಿಸಿರುವ ಕೃತಿ)

ಕರ್ನಾಟಕ ಸಾಹಿತ್ಯ ಅಕಾಡೆಮಿ 1972 ರಲ್ಲಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

**ಡಾ|| ಶ್ರೀನಿವಾಸ ಹಾವನೂರ**[2] **:** ಬಹುಮುಖ ಪ್ರತಿಭಾವಂತರು 'ಹೊಸಗನ್ನಡದ ಅರುಣೋದಯ' ವಿಷಯ ಕುರಿತು ಪ್ರಬಂಧ ಮಂಡಿಸಿ ಡಾಕ್ಟರೇಟ್ ಗಳಿಸಿದ್ದಾರೆ. ಸಂಶೋಧನೆ, ಸಂಪಾದನೆ, ಇವರ ಅಚ್ಚು ಮೆಚ್ಚಿನ ಕಾರ್ಯಕ್ಷೇತ್ರ. ವಿಮರ್ಶಾ ವಿಭಾಗವನ್ನು ಸಂಪನ್ನಗೊಳಿಸಿದ್ದಾರೆ. ಕಥೆ, ಕಾದಂಬರಿ. ಪ್ರಬಂಧ ಕ್ಷೇತ್ರಗಳನ್ನು ಕೃಷಿಮಾಡಿ ಉತ್ಕೃಷ್ಟ ಬೆಳೆ ತೆಗೆದಿದ್ದಾರೆ. 'ಕಾಗೆಗೆ ಹೇಳಿದ ಕಥೆ'ಗೆ ಮೈಸೂರು ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿದೆ.

ಶ್ರೀಯುತರು ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದು, ಅದನ್ನು ಬಿಟ್ಟು ಈಗ ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾರೆ.

**ಕೃತಿಗಳು :** ಅವರು ಮತ್ತು ದೇವಕ್ಕ (ಕಾದಂಬರಿದ್ವಯ), ಕುಚೋದ್ಯದ ಕಥೆಗಳು (ಕಥಾಸಂಕಲನ), ಲೂಯಿಸ್ ರೈಸ್, ರೆವರೆಂಡ್ ಕಿಟ್ಟೆಲ್. ಎನ್. ಎಸ್. ರಾಜ ಪುರೋಹಿತ, ಗಳಗನಾಥ (ಜೀವನ ಚರಿತ್ರೆಗಳು). ಗ್ರಂಥಾಲಯ ತಂತ್ರ, ಅವಿವಾಹಿತೆ, ಗೋವಿಂದ ಪೈ ವಾಙ್ಮಯ ದರ್ಶನ, (ವೈಚಾರಿಕ ಗ್ರಂಥಗಳು).

ಕನ್ನಡ ಸಾಹಿತ್ಯ ಸಂಶೋಧನೆಗಾಗಿ ಗಣಕ ಯಂತ್ರಗಳ ಉಪಯೋಗ ಹಾಗೂ ಮುದ್ರಣದ ಕೃತಿಗಳ ಮೇಲೆ ಸಂಶೋಧನೆ ನಡೆಸುತ್ತಿದ್ದಾರೆ.

**ಡಾ|| ಬಿ. ಆರ್. ಗೋಪಾಲ್**[3] **:** (ಬಾಲಕೃಷ್ಣನ್ ರಾಜಗೋಪಾಲ್) ಇತಿಹಾಸದಲ್ಲಿ ಎಂ.ಎ. ಮಾಡಿರುವ ಶ್ರೀಯುತರು ಮೈಸೂರು ವಿಶ್ವವಿದ್ಯಾಲಯದ

---

1 ಜನನ : ಅಕ್ಟೋಬರ್ 13, 1928, ಗದಗ್‌ನಲ್ಲಿ. ತಂದೆ : ದತ್ತಾತ್ರೇಯ ಕೀರ್ತಿನಾಥ, ತಾಯಿ : ಪದ್ಮಾವತಿಬಾಯಿ.

2 ಜನನ : ಜನವರಿ 12, 1929, ಧಾರವಾಡ ಜಿಲ್ಲೆಯ ಹಾವನೂರಿನಲ್ಲಿ. ತಂದೆ : ನರಸಿಂಹಾಚಾರ್ಯ ಗಲಗಲಿ, ತಾಯಿ : ರಮಾಬಾಯಿ. ಕಾವ್ಯನಾಮಗಳು : ಹಾವನೂರ, ಐಸಿರಿ, ಶ್ರೀನಿವಾಸಕೃಷ್ಣ, ದುಷ್ಯಂತ.

3 ಜನನ : ಅಕ್ಟೋಬರ್ 21, 1930, ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ, ತಂದೆ : ಬಾಲಕೃಷ್ಣನ್, ತಾಯಿ : ಜಾನಕಿ.

ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಶಾಸನ ತಜ್ಞರಾಗಿದ್ದಾರೆ. ಉದಕಮಂಡಲದ ಪುರಾತತ್ತ್ವ ಇಲಾಖೆಯಲ್ಲಿ ವೃತ್ತಿ ಪ್ರಾರಂಭಿಸಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲೂ ಕೆಲಕಾಲ ದುಡಿದಿದ್ದಾರೆ.

'ಕಲ್ಯಾಣದ ಚಾಲುಕ್ಯರ ಒಂದು ಶತಮಾನದ ಇತಿಹಾಸ' ಡಾಕ್ಟರೇಟ್ ಸಂಪಾದಿಸಿ ಕೊಟ್ಟ ಪ್ರಬಂಧ.

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಸನ್ಮಾನಿತರಾಗಿದ್ದಾರೆ.

ಗಣ್ಯ ಸಂಪಾದಕರು, ಹಾಗೂ ವಿಮರ್ಶಕರು. ಹಲವಾರು ಉತ್ಕೃಷ್ಟ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಪ್ರಮುಖ ಕೃತಿಗಳು : ಕನ್ನಡ ನಾಡಿನ ಐತಿಹಾಸಿಕ ಮಹಾಪುರುಷರು. ಪ್ರಾಚೀನ ಭಾರತದ ಚರಿತ್ರೆ. ಕಲ್ಯಾಣದ ಚಾಲುಕ್ಯರು, ವಿಜಯ ನಗರದ ವಾಸ್ತುಶಿಲ್ಪ, ಬಾದಾಮಿ ಚಾಲುಕ್ಯರು.

**ಡಾ॥ ಹಾ. ಮಾ. ನಾಯಕರು * :** (ಹಾರೋಗದ್ದೆ ಮಾನಪ್ಪ ನಾಯಕ) ಇವರು ಖ್ಯಾತ ಲೇಖಕರು, ವಿಮರ್ಶಕರು. ಗ್ರಂಥ ಸಂಪಾದಕರು, ಹಾಗೂ ದಕ್ಷ ಆಡಳಿತಗಾರರು. ಸಣ್ಣಕಥೆ, ಪ್ರಬಂಧ ಕ್ಷೇತ್ರಗಳನ್ನು ಸಂಪನ್ನಗೊಳಿಸಿರುವುದಲ್ಲದೆ "ಅಂಕಣಕಾರರಾಗಿ" ಬಹಳ ಯಶಸ್ಸು ಸಂಪಾದಿಸಿದ್ದಾರೆ. ಡಾ॥ ದೇ.ಜ.ಗೌ.ರವರ ಮಾತಿನಂತೆ ಇವರು 'ಪ್ರತಿಭಾವಂತರು, ಜಾಣರು, ಕುಶಲರು, ಕಾರ್ಯದಕ್ಷರು, ತರುಣರು, ಸಾಹಸಿಗಳು. ವಿದ್ವಾಂಸರು. ಕನ್ನಡ ಭಾಷಾವಿಜ್ಞಾನಗಳೆರಡರಲ್ಲೂ ತಜ್ಞರು'.

ಕನ್ನಡ ಆನರ್ಸ್ ಮುಗಿಸಿ ಉಪನ್ಯಾಸಕರಾಗಿ ವಿಶ್ವವಿದ್ಯಾಲಯ ಪ್ರವೇಶಿಸಿದ ಶ್ರೀಯುತರು ತಮ್ಮ ಪ್ರತಿಭೆಯಿಂದಾಗಿ ರಾಕೆಟ್ ವೇಗದಲ್ಲಿ ಉದ್ಯೋಗದಲ್ಲಿ ಔನ್ನತ್ಯ ಸಾಧಿಸಿದವರು. ಕಲ್ಕತ್ತಾ ವಿಶ್ವವಿದ್ಯಾಲಯದ ಎಂ.ಎ.. ಅಮೇರಿಕಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಗಳಿಸಿದ ಶ್ರೀಯುತರು ವಿದ್ಯಾಕ್ಷೇತ್ರದಲ್ಲಿ ಪ್ರತಿಷ್ಠಿತ ಹುದ್ದೆಗಳನ್ನು ನಿರ್ವಹಿಸಿದ್ದಾರೆ. ಅಧ್ಯಯನ ಸಂಸ್ಥೆಯ ನಿರ್ದೇಶಕ ಪಟ್ಟ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷತೆ (ಎರಡು ಅವಧಿ), ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಜ್ಞಾನ ಪೀಠದ ಕನ್ನಡ ಸಲಹಾ ಸಮಿತಿಯ ಸದಸ್ಯತ್ವ, ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ಸದಸ್ಯತ್ವ, ಗುಲ್ಬರ್ಗಾ ವಿಶ್ವವಿದ್ಯಾಲಯದ ಉಪಕುಲಪತಿ ಸ್ಥಾನ ಮುಂತಾದವುಗಳು.

ಪ್ರಮುಖ ಕೃತಿಗಳು : ವಿನಾಯಕ ವಾಙ್ಮಯ, ಸಂಚಯ, ದೇ.ಜ.ಗೌ. ವ್ಯಕ್ತಿ ಮತ್ತು ಸಾಹಿತ್ಯ, ಇಂಡಿಯಾ ದೇಶದ ಸಾರ್ವಜನಿಕ ಆಯವ್ಯಯ, ಗೊರೂರು ಗೌರವ ಗ್ರಂಥ. ಎ. ಆರ್. ಕೃ. ಜೀವನ ಸಾಧನೆ. ಹಾವು ಮತ್ತು ಹೆಣ್ಣು. ನಮ್ಮ ಮನೆಯ ದೀಪ. ಸಲ್ಲಾಪ. ಅಕ್ಕಮಹಾದೇವಿ, ರವೀಂದ್ರನಾಥ ಠಾಕೂರರು. ಗೋರೂರು

* ಜನನ : ಸೆಪ್ಟೆಂಬರ್ 26, 1931, ತೀರ್ಥಹಳ್ಳಿ ತಾಲ್ಲೂಕಿನ 'ಹಾರೋಗದ್ದೆ. ತಂದೆ : ಶ್ರೀನಿವಾಸ ನಾಯಕ, ತಾಯಿ : ರುಕ್ಮಿಣಿಯಮ್ಮ.

ಗೌರವ ಗ್ರಂಥ. ಇವರು ನಡೆಸಿರುವ ಅಂಕಣಗಳು 'ಸಾಹಿತ್ಯ ಸಲ್ಲಾಪ', 'ಹಾ. ಮಾ. ನಾಯಕರು ಬರೆಯುತ್ತಾರೆ', 'ಸಂಪ್ರತಿ', ಮುಂತಾದವು. ಕನ್ನಡ ಅಧ್ಯಯನ ಸಂಸ್ಥೆಗಾಗಿ ಸಂಪಾದಿಸಿರುವ ಕೃತಿಗಳು. ಮುಮ್ಮಡಿ ಕೃಷ್ಣರಾಜ ಒಡೆಯರು, ಗಳಗನಾಥ, ಮುದ್ದಣ, ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ, ಕಥೇಂ ಕೈಪಿಡಿ. ಕನ್ನಡ ಸಾಹಿತ್ಯ ಚರಿತ್ರೆ (5 ಸಂಪುಟಗಳು), ಬಸವಪುರುಷ, ಚಿನ್ನದ ಗರಿ, ಜಾನಪದ ಗ್ರಂಥಸೂಚಿ, ಬಿಡುಗಡೆ ಬಳ್ಳಿ, ಗದ್ಯ ವಿಹಾರ (1, 2). ವಿಜ್ಞಾನ ಸಾಹಿತ್ಯ ನಿರ್ಮಾಣ, ಕಾವ್ಯಸಂಚಯ, ಶಾಸ್ತ್ರಸಾಹಿತ್ಯ ನಿರ್ಮಾಣ ಮುಂತಾಗಿ ಸುಮಾರು 50 ಕೃತಿಗಳನ್ನು ರಚಿಸಿದ್ದಾರೆ.

1982ರಲ್ಲಿ ರಾಜ್ಯ ಸರ್ಕಾರ ಇವರಿಗೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ.

**ಡಾ|| ಎಂ. ಚಿದಾನಂದಮೂರ್ತಿ**[1] **:** ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಶೂನ್ಯ ಸಂಪಾದನೆಯನ್ನು ಕುರಿತ, 'ಸಂಶೋಧನ ತರಂಗ' 'ಪೂರ್ಣ ಸೂರ್ಯಗ್ರಹಣ' ಕೃತಿಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ, 'ಭಾಷಾ ವಿಜ್ಞಾನದ ಮೂಲ ತತ್ವಗಳು' ಕೃತಿಗೆ ದೇವರಾಜ ಬಹದ್ದೂರ್ ಪ್ರಶಸ್ತಿ ದೊರೆತಿದೆ. 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಇವರಿಗೆ ಡಾಕ್ಟರೇಟ್ ದೊರಕಿಸಿ ಕೊಟ್ಟ ಕೃತಿ. ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಭಾಷಾ ವಿಜ್ಞಾನದಲ್ಲಿ ಪೋಸ್ಟ್ ಡಾಕ್ಟರೇಟ್ ಅಧ್ಯಯನ ಪ್ರಾರಂಭಿಸಿದ ಹಾಗೂ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದ 4ನೇ ಅಂತರರಾಷ್ಟ್ರೀಯ ಐತಿಹಾಸಿಕ ಭಾಷಾ ವಿಜ್ಞಾನ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಹೆಗ್ಗಳಿಕೆ ಇವರದು. 1983-84ರಲ್ಲಿ ತಿರುವನಂತಪುರದ ದ್ರಾವಿಡ ಭಾಷಾ ವಿಜ್ಞಾನ ಸಂಸ್ಥೆಯ ಅಧ್ಯಕ್ಷರಾಗಿದ್ದರು.

ಸಂಶೋಧನಾ ಕ್ಷೇತ್ರ ಇವರ ಕೊಡುಗೆಯಿಂದ ಶ್ರೀಮಂತವಾಗಿದೆ. 200 ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಪ್ರಕಟಗೊಂಡಿವೆ.

ಇವರ ಕೃತಿಗಳು : ಗ್ರಾಮೀಣ, ವಾಗರ್ಥ, ವೀರಗಲ್ಲುಗಳು. ಮತ್ತು ಮಾಸ್ತಿಗಲ್ಲುಗಳು, ಬಸವಣ್ಣನವರು ಕನ್ನಡ ಪಾಠಗಳು ಮುಂತಾದವು.

ರಾಜ್ಯ ಸಾಹಿತ್ಯ ಅಕಾಡೆಮಿಯು ಇವರಿಗೆ 1984 ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

**ಬಿ. ಸಿ. ಜವಳಿ**[2] **:** ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕರು. ಸಂಶೋಧನೆ ಹಾಗೂ ಸಂಪಾದನೆಯಲ್ಲಿ ಬಹಳ ಆಸಕ್ತಿ.

ಮುಖ್ಯ ಕೃತಿಗಳು : ಹಂಪೆಯ ಹರಿಹರದೇವ ಮಹಾಕವಿಯ ಗಿರಿಜಾ

---

1 ಜನನ : ಮೇ 10. 1931, ಶಿವಮೊಗ್ಗ ಜಿಲ್ಲೆ, ಹಿರೇಕೋಗಲೂರಿನಲ್ಲಿ. ತಂದೆ : ಕೊಟ್ಟೀರಯ್ಯ. ತಾಯಿ : ಪಾರ್ವತಮ್ಮ.

2 ಜನನ : 1932

ಕಲ್ಯಾಣವು, ಮಹಾಕವಿಹಂಪೆಯ ಹರಿಹರದೇವನ ರಗಳೆಗಳು, ಉಡುತಡಿಯ ಮಹಾದೇವಿ ಅಕ್ಕನವರ ಸಾಹಿತ್ಯ, ಚಾಮರಸ ಕವಿಯ ಪ್ರಭುಲಿಂಗಲೀಲೆ ಇತ್ಯಾದಿ.

**ಪಂಚಾಕ್ಷರಿ ಹಿರೇಮಠ**[1]: ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕರಾಗಿರುವ ಶ್ರೀಯುತರು ವಿಮರ್ಶಕರು ಹಾಗೂ ನುರಿತ ಗ್ರಂಥ ಸಂಪಾದಕರು. ಕಥೆ, ಕಾದಂಬರಿ, ಕವನ, ಶಿಶುಸಾಹಿತ್ಯ ಸಹ ಸಂಪನ್ನಗೊಳಿಸಿದ್ದಾರೆ.

ಕೃತಿಗಳು : ಕವಿಕಾವ್ಯ ಚಿಂತನ, ಕವೀಂದ್ರ ರವೀಂದ್ರರು, (ವಿಮರ್ಶೆ) : ಶಿವಯೋಗಮಣಿಮುಕುರಪ್ರಭೆ (ಸಂಪಾದನೆ) ಚೈತ್ಯಾಕ್ಷಿ, ಗಾಳಿಗಂಧ, (ಕವನ ಸಂಗ್ರಹಗಳು)

ಹಾನಗಲ್ಲ ಕುಮಾರ ಸ್ವಾಮಿಗಳು, ವಿಜಯ ಮಹಾಂತ ಸ್ವಾಮಿಗಳು (ಜೀವನ ಚಿತ್ರಣ) ; ಚಾಕ್ಲೆಟ್ ಮತ್ತು ಇತರ ಕಥೆಗಳು (ಶಿಶು ಸಾಹಿತ್ಯ) ; ಭಾರತದ ದರ್ಶನ (ಪ್ರವಾಸ ಸಾಹಿತ್ಯ) ; ಕಾಶ್ಮೀರದ ಹೂ, ಕತ್ತಲೆ ಬೆಳಕು, ಬದುಕು ಬಂಗಾರ (ಇತರೆ).

ಸಮಾಜ ಬಂಧು, ನುಡಿಕಲಾಕುಶಲ ಪ್ರಶಸ್ತಿಗಳು ಲಭಿಸಿವೆ. 'ತಾರಾ ಗ್ರಂಥ ಪ್ರಕಾಶನ' ದ ಸಂಪಾದಕರು.

ಒಟ್ಟು ಕೃತಿಗಳ ಸಂಖ್ಯೆ ಸುಮಾರು 45.

**ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ**[2]: (ತೋಗರೆ ವೆಂಕಟಸುಬ್ಬ ಶಾಸ್ತ್ರಿ ವೆಂಕಟಾಚಲ ಶಾಸ್ತ್ರಿ) ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಹೆಸರಾಂತ ಗ್ರಂಥ ಸಂಪಾದಕರು, ವಿಮರ್ಶಕರು, ಸಂಶೋಧಕರು ಹಾಗೂ ಪ್ರಬಂಧಕಾರರು. ನಾಟಕಗಳನ್ನು ಸಹ ರಚಿಸಿದ್ದಾರೆ.

'ಕನ್ನಡ ಛಂದಸ್ಸು' ಕೃತಿಗೆ ರಾಜ್ಯ ಅಕಾಡೆಮಿ ಬಹುಮಾನ, 'ಸಾಹಿತ್ಯ ಮಂಥನ' ಕೃತಿಗೆ ದೇವರಾಜ ಬಹದ್ದೂರ್ ಬಹುಮಾನ ಲಭಿಸಿವೆ. 'ವಿಷಯ ವಿಶ್ವಕೋಶ' ದ ಉಪಸಮಿತಿಯ ಸದಸ್ಯರು.

ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 40.

ಮುಖ್ಯ ಕೃತಿಗಳು: ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ, ಮಹಾಕಾವ್ಯ ಲಕ್ಷಣ, ಸಾಹಿತ್ಯಮಂಥನ, ಶಬ್ದಾರ್ಥ ವಿಹಾರ, ಕಂಸ, ಕನ್ನಡಛಂದಸ್ಸು, ಕನ್ನಡಛಂದಃ ಸ್ವರೂಪ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಶ್ರೀವತ್ಸ ನಿಘಂಟು, ಪ್ರಾಚೀನ ಕನ್ನಡ ಸಾಹಿತ್ಯ (ಕೆಲವು ನೋಟಗಳು) ಚಾಮುಂಡರಾಯ.

ಇಂಗ್ಲೀಷಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಚಂದನ, ಗ್ರಂಥ ಲೋಕ, ಲೋಚನ ಪ್ರಬುದ್ಧ ಕರ್ನಾಟಕ ಮುಂತಾದ ಪತ್ರಿಕೆಗಳಲ್ಲಿ

---

1 ಜನನ: ಜನವರಿ 6, 1933, ರಾಯಚೂರು ಜಿಲ್ಲೆ 'ಬಿಸರಹಳ್ಳಿ'. ತಂದೆ : ಮಲಕಯ್ಯ, ತಾಯಿ : ಬಸವಮ್ಮ.

2 ಜನನ: ಆಗಸ್ಟ್ 26, 1933, ಬೆಂಗಳೂರು ಜಿಲ್ಲೆ, ಕನಕಪುರದಲ್ಲಿ. ತಂದೆ : ವೆಂಕಟಸುಬ್ಬಶಾಸ್ತ್ರಿ, ತಾಯಿ : ಸುಬ್ಬಮ್ಮ.

ಇವರ ವಿದ್ವತ್ಪೂರಿತ ಲೇಖನಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟಗೊಂಡಿವೆ, ಪ್ರಕಟಗೊಳ್ಳುತ್ತಿವೆ.

**ಎ. ವಿ. ನರಸಿಂಹಮೂರ್ತಿ**[1] **:** ಇಂಡಾಲಜಿಯಲ್ಲಿ ಎಂ.ಎ. ಹಾಗೂ ಪಿ.ಹೆಚ್.ಡಿ. ಪಡೆದು ಮೈಸೂರು ವಿಶ್ವವಿದ್ಯಾನಿಲಯದ ಮಾನಸ ಗಂಗೋತ್ರಿಯಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಒಳ್ಳೆಯ ಲೇಖಕರು. ಇಂಗ್ಲೀಷ್ ಹಾಗೂ ಕನ್ನಡದಲ್ಲಿ ಕೃತಿಗಳನ್ನು ರಚಿಸಿದ್ದಾರೆ.

ಮುಖ್ಯ ಕೃತಿಗಳು : ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಕರ್ನಾಟಕದ ಸೇವುಣರ ಇತಿಹಾಸ (ಕನ್ನಡ ಮತ್ತು ಇಂಗ್ಲೀಷಿನಲ್ಲಿ), ಸಾಂಸ್ಕೃತಿಕ ಬೃಹದ್ಭಾರತ ಇತ್ಯಾದಿ.

**ಡಾ|| ಸುಮತೀಂದ್ರ ನಾಡಿಗ**[2] **:** ಇಂದಿನ ಪೀಳಿಗೆಗೆ ಸೇರಿದ ನವ್ಯಕವಿ ಹಾಗು ನುರಿತ ವಿಮರ್ಶಕ. ಇವರು ಬರೆದ ಸಾಹಿತ್ಯ ವಿಮರ್ಶೆಗಳು ನಾಡಿನ ಎಲ್ಲ ಪತ್ರಿಕೆಗಳಲ್ಲೂ ಕಾಣಸಿಗುತ್ತದೆ.

**ಡಾ|| ಹಂಪಸಾಗರಾಜಯ್ಯ**[3] **:** ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ದುಡಿದಿರುವ ಮೇಧಾವಂಥ ಸಾಹಿತಿ.

ಇವರು ರಚಿಸಿರುವ ಕೃತಿಗಳ ಒಟ್ಟು ಸಂಖ್ಯೆ ಸುಮಾರು 45 :, ಗ್ರಂಥ ಸಂಪಾದನೆ –10 : ವಿಮರ್ಶೆ –2 : ಸಂಶೋಧನೆ –4 ಪ್ರಬಂಧ -1 ; ಜೀವನ ಚರಿತ್ರೆ – 5, ಕಾದಂಬರಿ –2 : ಭಾಷಾವಿಜ್ಞಾನ –6 ; ಇತರೇ 15.

ಈ ವಿಭಾಗದಲ್ಲಿ ಹೆಸರಿಸ ಬೇಕಾದ ಕೃತಿಗಳು: ಪಂಪ ಭಾರತ ಸಂಗ್ರಹ, ಭರತೇಶ ವೈಭವ, ಸಾಳ್ವಭಾರತ, ಶಾಂತಿ ಪುರಾಣ, ಯಕ್ಷ ಯಕ್ಷಿಯರು, ನೋಂಪಿಯ ಕಥೆಗಳು, ಗೊಮ್ಮಟ ಬಾಹುಬಲಿ, ಕಮ್ಮಟದ ಕಿಡಿಗಳು. ಧನ್ಯ ಕುಮಾರ ಚರಿತ್ರೆ. ರತ್ನಾಕರನ ಹಾಡುಗಳು, ಪೈಯವರ ಮೂರು ನಾಟಕಗಳು. ಘಣಿಕುಮಾರ ಕಥಾಸಾಹಿತ್ಯ, ಅಪ್ರತಿಮ ಕವಿಗಳು ಮುಂತಾದವು.

**ಪ್ರೊ|| ಕಮಲಾ ಹಂಪನಾ**[4] **:** ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಇವರು ಕಥೆ, ಕವನ, ಸಂಶೋಧನೆ, ಮಕ್ಕಳ ಸಾಹಿತ್ಯ, ವಿಚಾರ ಸಾಹಿತ್ಯ ಮುಂತಾಗಿ ಸಾಹಿತ್ಯದ ಎಲ್ಲಾ ವಿಭಾಗಗಳನ್ನು ಸಂಪನ್ನಗೊಳಿಸಿದ್ದಾರೆ. ಈ ಸಾಹಿತ್ಯ ಸೇವೆಯನ್ನು ಗುರುತಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿ 1985 ರಲ್ಲಿ ವಿಶೇಷ

---

1 ಜನನ : 1935.

2 ಪುಟ 184 ನೋಡಿ.

3 ಪುಟ 71 ನೋಡಿ.

4 ಜನನ : ಅಕ್ಟೋಬರ್ 1935, ತುಮಕೂರು ಜಿಲ್ಲೆಯ ಕ್ಯಾತಸಂದ್ರ. ತಂದೆ : ರಂಗಧಾಮ ನಾಯಕ. ತಾಯಿ : ರಂಗಮ್ಮ, ಪತಿ : ಡಾ|| ಹಂಪ ನಾಗರಾಜಯ್ಯ ಪುಟ 72 ನೋಡಿ.

ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ. ವಿಮರ್ಶೆ, ಸಂಪಾದನಾ ಕ್ಷೇತ್ರದಲ್ಲೂ ಇವರು ಸಾಕಷ್ಟು ಕೊಡುಗೆಗಳನ್ನು ನೀಡಿದ್ದಾರೆ.

ಕೃತಿಗಳು: ಚಿಕ್ಕವರಿಗೆ ಚಿತ್ರದುರ್ಗ, ಅಕ್ಕಮಹಾದೇವಿ, ಪೆಳವೆಸಕಟ್ಟೆ ಗಿರಿಯಮ್ಮ, ವೀರವನಿತೆ ಓಬವ್ವ, ಮುಳುಬಾಗಿಲು, ಜನ್ನ, ಡಾ॥ ಬಿ. ಆರ್. ಅಂಬೇಡ್ಕರ್ (ಶಿಶು ಸಾಹಿತ್ಯ); ಭರತೇಶ ವೈಭವ, ಶ್ರೀ ಪಟ್ಟೆ, ಡಾ॥ ಡಿ. ಎಲ್. ನರಸಿಂಹಾಚಾರ್ಯರ ಆಯ್ದ ಲೇಖನಗಳು (ಸಂಪಾದನೆ); ಜೈನ ಸಾಹಿತ್ಯ ಪರಿಸರ, ನಾಡು-ನುಡಿ-ನಾವು (ಸಂಶೋಧನೆ); ಮುಡಿಮಲ್ಲಿಗೆ, ಆ ಮುಖ, ಬಿಂದಲಿ, ಬಾಸಿಂಗ, ಬೀಜಾಕ್ಷರ ಮಾಲೆ (ಇತರ ಕೃತಿಗಳು).

**ಡಾ॥ ಸೂರ್ಯನಾಥಕಾಮತ್*:** ಗ್ರಂಥ ಸಂಪಾದನೆ ಹಾಗೂ ಸಂಶೋಧನಾ ಕ್ಷೇತ್ರದಲ್ಲಿ ಪ್ರಖ್ಯಾತರು. ಗಣನೀಯ ಮಟ್ಟದಲ್ಲಿ ಕೊಡುಗೆಗಳನ್ನು ನೀಡಿದ್ದಾರೆ.

ಬಹು ಮುಖ ಪ್ರತಿಭೆಯ ಶ್ರೀಯುತರು ಕಥೆ, ಕಾದಂಬರಿ, ಪ್ರಬಂಧ, ಶಿಶು ಸಾಹಿತ್ಯ ಕ್ಷೇತ್ರಗಳನ್ನು ಸಂಪನ್ನಗೊಳಿಸಿದ್ದಾರೆ. ಮಿಥಿಕ್ ಸೊಸೈಟಿ ಕಾರ್ಯಕಾರಿ ಸಮಿತಿ ಸದಸ್ಯರು. ಐತಿಹಾಸಿಕ ವಿಷಯಗಳ ಬಗ್ಗೆ ಇವರಷ್ಟು ಅಧಿಕಾರಯುತವಾಗಿ ಮಾತನಾಡುವವರು ದುರ್ಲಭ ಎಂದರೆ ಅತಿಶಯೋಕ್ತಿಯಾಗಲಾರದು. ದೂರದರ್ಶನ ದಲ್ಲಿ ಪ್ರಸಾರಗೊಳ್ಳುತ್ತಿರುವ 'ಒಂದಿಷ್ಟು ಇತಿಹಾಸ' ಇದಕ್ಕೆ ಜ್ವಲಂತ ನಿದರ್ಶನ.

ಬೆಂಗಳೂರಿನ ವಿಶ್ವವಿದ್ಯಾಲಯವನ್ನು ಚರಿತ್ರೆ ಉಪನ್ಯಾಸಕರಾಗಿ ಸೇರಿದ ಶ್ರೀಯುತರು ಸಂಶೋಧನಾ ವಿಭಾಗದಲ್ಲಿ ನಿರಂತರವಾಗಿ ಅಮೋಘ ಸೇವೆ ಸಲ್ಲಿಸು ತ್ತಿದ್ದಾರೆ. ಪ್ರಸ್ತುತ ಇವರು ಕರ್ನಾಟಕ ಗಜೆಟಿಯರ್‌ನ ಮುಖ್ಯ ಸಂಪಾದಕರಾಗಿದ್ದಾರೆ. ಆರ್ಕೀವ್ಸ್ ಇಲಾಖೆಯ ನಿರ್ದೇಶಕರಾಗಿಯೂ ಕೆಲಕಾಲ ಕೆಲಸ ನಿರ್ವಹಿಸಿದ್ದಾರೆ. ಇವರ ಕೃತಿ 'ಕರ್ನಾಟಕ ಸಾಂಸ್ಕೃತಿಕ ಇತಿಹಾಸ' 1975 ಸಾಹಿತ್ಯ ಅಕಾಡೆಮಿ ಬಹು ಮಾನ ಗಳಿಸಿದೆ. 'ಜೀವನ ಮತ್ತು ಕಾವ್ಯ'ಕ್ಕೆ ಬೆಂಗಳೂರು ವಿಶ್ವವಿದ್ಯಾನಿಲಯದ ಸಂಶೋಧನಾ ಪ್ರಶಸ್ತಿ (1976) ದೊರೆತಿದೆ. 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' (ಮೂರು ಸಂಪುಟ) ಇವರು ಸಂಪಾದಿಸಿರುವ ಬೃಹತ್ ಕೃತಿ. ಕರ್ನಾಟಕ ಇತಿಹಾಸ ಮಂಜರಿ, ಪಚಡಿ. ಇತರ ಕೃತಿಗಳು; ಕರ್ನಾಟಕ: ನಾಡು, ನುಡಿ, ಸಂಸ್ಕೃತಿ: ಕರ್ನಾಟಕತ್ವದ ಜಾಗೃತಿ, ಭಾರತೀಯ ಸಂಸ್ಕೃತಿಯ ಸಮೀಕ್ಷೆ, ವಿಜಯನಗರ ಸಾಮ್ರಾಜ್ಯ, ತುಳುನಾಡಿನ ಧಾರ್ಮಿಕ ಪರಂಪರೆ, ಕರ್ನಾಟಕ ಗಾಂಧಿ ತಿಮ್ಮಪ್ಪನಾಯಕ, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಗೊಮ್ಮಟ.

ಥೇಮ್ಸ್‌ನಿಂದ ಗಂಗೆಗೆ, ಕೃಷ್ಣದೇವರಾಯ, ಮುಳ್ಳಿನಹಾದಿ, ಈಸಿ ಜಯಿಸಿ ದವರು (ಕಾದಂಬರಿಗಳು) ಬೆಳಗಿದ ತಾರೆಗಳು, ಕರ್ನಾಟಕ ಇತಿಹಾಸ ಕಥಾಮಂಜರಿ,

---

* ಜನನ: ಏಪ್ರಿಲ್ 21, 1937, ಬೆಳ್ತಂಗಡಿಯಲ್ಲಿ. ತಂದೆ: ಉಪೇಂದ್ರ, ತಾಯಿ: ಭಾಗೀರಥಿ.

ಕರ್ನಾಟಕ ವೀರರಾಣಿಯರು, ವಿಜಯನಗರದ ಕತೆಗಳು, ವೀರರಾಣಿ ಅಬ್ಬಕ್ಕ, ಕೆಳದಿಯ ಚನ್ನಮ್ಮಾಜಿ (ಕಥೆಗಳು).

**ಆರ್. ಎಲ್. ಅನಂತರಾಮಯ್ಯ**[1]: (ರುದ್ರಪಟ್ಟಣ ಲಕ್ಷ್ಮೀಕಾಂತಯ್ಯ ಅನಂತರಾಮಯ್ಯ) ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಉಪನಿರ್ದೇಶಕರು 'ಗ್ರಂಥಲೋಕ'ದ ಸಂಪಾದಕರು. ವಿಮರ್ಶಕರು, ಬಾಲಸಾಹಿತ್ಯ ರಚಿಸಿರುವುದಲ್ಲದೆ ಹಲವಾರು ಕೃತಿಗಳನ್ನು ಅನುವಾದ ಮಾಡಿದ್ದಾರೆ.

'ಟಾಲ್‌ಸ್ಟಾಯ್ ಸಂಕ್ಷಿಪ್ತ ಜೀವನ'ಕ್ಕೆ 1978ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

ಕೃತಿಗಳು (1) ಕೀರ್ತನದರ್ಪಣ (ಭಾಗ 1) (ಪ್ರಯೋಗಿಕ ಸಂಗೀತ ಶಾಸ್ತ್ರ) (2) ಕೀರ್ತನದರ್ಪಣ (ಭಾಗ–2) ಇವೆರಡನ್ನು ಇತರರೊಡನೆ ಸಂಪಾದಿಸಿದ್ದಾರೆ ; ಶಿಕ್ಷಣದ ಸಾಹಸ ಕಥೆ, ಭಾರತೀಯ ಸಂಸ್ಕೃತಿ ಪರಂಪರೆ, ನಕ್ಷಾ ಶಾಸ್ತ್ರದ ಮೂಲತತ್ವಗಳು, ಪ್ರಾಕೃತಿಕಭೂಗೋಳ ವಿಜ್ಞಾನ, ಭಾರತದಲ್ಲಿ ಸಂವಿಧಾನಾತ್ಮಕ ಸರ್ಕಾರ ಮುಂತಾದವು.

**ಕೆ. ಶಿವರಾಮ ಐತಾಳ**[2]: ಮೈಸೂರಿನ ಶಾರದಾ ವಿಲಾಸ ಕಾಲೇಜಿನಲ್ಲಿ ಪ್ರಾಧ್ಯಾಪಕರು. ಬಹುಮುಖ ಪ್ರತಿಭೆಯ ಸಾಹಿತಿಗಳು, ವಿಮರ್ಶೆ, ಸಂಪಾದನೆ, ಸಂಶೋಧನೆ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ್ದಾರೆ.

ಕೃತಿಗಳು : ಭಗ್ನ ಪ್ರತಿಮೆ, ಕನ್ನಡ ಛಂದಸ್ಸಿನ ಪರಿಚಯ, ಛಂದಸ್ಸಿನ ವೈಚಿತ್ರ್ಯ, ದಕ್ಷಿಣ ಕನ್ನಡದ ಜನಪದ ಸಾಹಿತ್ಯ, ಹೊಸ ಬೆಳಕು (ಸಂಪಾದನೆ).

**ಪ್ರಧಾನ ಗುರುದತ್**[3]: ಪ್ರಸಿದ್ಧ ವಿಮರ್ಶಕರು, ಪ್ರಬಂಧಕಾರರು, ಸಂಪಾದಕರು. ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಇವರ 'ಊರ್ಮಿಳಾ' ವಿಮರ್ಶಾಗ್ರಂಥಕ್ಕೆ ಲೋಕ ಶಿಕ್ಷಣ ಟ್ರಸ್ಟ್‌ನ ಬಹುಮಾನ ಬಂದಿದೆ.

ಒಟ್ಟು ಕೃತಿಗಳ ಸಂಖ್ಯೆ ಸುಮಾರು 15.

ಜಯಪ್ರಕಾಶ ನಾರಾಯಣ, ಡಾ॥ ನಾಗೇಂದ್ರರ ಶ್ರೇಷ್ಠಪ್ರಬಂಧಗಳು, ಗಾಂಧೀಜಿ ನಾನು ಕಂಡಂತೆ, ದಿವ್ಯಾ, ಸ್ನೇಹಾಂಜಲಿ, ನಾಗವಲ್ಲಿ, (ಸಂಪಾದನೆ) ವರ್ಧಾ ಯೋಜನೆ, ಆರ್ಥಿಕ ಭೂಗೋಳ ಶಾಸ್ತ್ರ, ಆಡಳಿತ ಭಾಷೆ ಕೆಲವು ವಿಚಾರಗಳು ಮುಂತಾದವು.

---

1 ಜನನ : ಮೇ 10, 1937, ಹಾಸನ ಜಿಲ್ಲೆಯ ರುದ್ರಪಟ್ಟಣದಲ್ಲಿ. ತಂದೆ : ಲಕ್ಷ್ಮೀಕಾಂತಯ್ಯ, ತಾಯಿ : ಸುಬ್ಬಲಕ್ಷ್ಮಮ್ಮ.

2 ಜನನ : 1937, 'ಕಾರ್ಕಡ'ದಲ್ಲಿ.

3 ಜನನ : ಮೇ 10, 1938, ಚಿಕ್ಕಬಳ್ಳಾಪುರದಲ್ಲಿ. ತಂದೆ : ತಿಮ್ಮಪ್ಪಯ್ಯ, ತಾಯಿ : ಲಲಿತಮ್ಮ. ಕನ್ನಡ ಮತ್ತು ಹಿಂದಿಯಲ್ಲಿ ಎಂ.ಎ., ಭಾಷಾಂತರ ವಿಭಾಗದಲ್ಲಿ ಎಂ.ಫಿಲ್. ಗಳಿಸಿದ್ದಾರೆ.

ಹಿಂದಿಯಲ್ಲೂ ಸಹ ಗ್ರಂಥ ರಚನೆ ಮಾಡಿದ್ದಾರೆ. ಭಾರತೇಂದು ಹರಿಶ್ಚಂದ್ರ (ಅನುವಾದ).

**ಡಾ॥ ಎಂ. ಎಂ. ಕಲಬುರ್ಗಿ**[1] : ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಹೆಸರಾಂತ ವಿಮರ್ಶಕರು, ಸಂಶೋಧಕರು ಹಾಗೂ ಗ್ರಂಥ ಸಂಪಾದಕರು. ಇವರ ಕೃತಿಗಳಾದ 'ಶಾಸನಗಳಲ್ಲಿ ಶಿವಶರಣರು' (1970), 'ಶಾಸನ ವ್ಯಾಸಂಗ' (1974) ಮತ್ತು ಸಮಾಧಿ-ಬಲಿದಾನ, ವೀರ ಮರಣ-ಸ್ಮಾರಕಗಳು (1980) ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿವೆ.

ಇತರ ಕೃತಿಗಳು : ಶಾಸನ ಸಂಪದ, ಕವಿರಾಜಮಾರ್ಗ, ಪರಿಸರದ ಕನ್ನಡ ಸಾಹಿತ್ಯ, ಮಲ್ಲಿನಾಥ ಪುರಾಣ ಸಂಗ್ರಹ, ಶಬ್ದಮಣಿ ದರ್ಪಣ ಸಂಗ್ರಹ ಇತ್ಯಾದಿ ಸುಮಾರು ಹನ್ನೆರಡು ಕೃತಿಗಳು.

**ಪ್ರೊ॥ ಗಿರಡ್ಡಿ ಗೋವಿಂದರಾಜ**[2] : ಇಂದಿನ ವಿಮರ್ಶಕರಲ್ಲಿ ಹೆಚ್ಚು ಪ್ರಖ್ಯಾತರು. ನರೆಗಲ್ಲು, ಧಾರವಾಡ, ಹೈದರಾಬಾದುಗಳಲ್ಲಿ ಇಂಗ್ಲೀಷ್ ಸ್ಟಡೀಸ್‌ನಲ್ಲಿ ಡಿಪ್ಲಮೊ ಪಡೆದು ಕಲಬುರ್ಗಿಯ ಸ್ನಾತಕೋತ್ತರ ಕೇಂದ್ರದಲ್ಲಿ ಕೆಲವರ್ಷ ಪ್ರಾಧ್ಯಾಪಕ ವೃತ್ತಿ ನಡೆಸಿ, ಬ್ರಿಟಿಷ್ ಕೌನ್ಸಿಲ್ ವ್ಯಾಸಂಗ ವೇತನ ಪಡೆದು ಒಂದು ವರ್ಷ ಇಂಗ್ಲೆಂಡಿನಲ್ಲಿದ್ದು ಭಾಷಾ ವಿಜ್ಞಾನದಲ್ಲಿ ವಿಶೇಷ ಮಾಹಿತಿ ಗಳಿಸಿದ್ದಾರೆ.

ವಿಮರ್ಶೆಯಲ್ಲಿ ಪಳಗಿದ ಕೈ, ನಿರ್ಭೀತಿಯಿಂದ ಕೃತಿಯ ಮೌಲ್ಯಮಾಪನ ಮಾಡುವುದರಲ್ಲಿ ಹೆಸರು ಗಳಿಸಿದ್ದಾರೆ. ಇವರು ಒಳ್ಳೆಯ ನಟರಾಗಿರುವುದಲ್ಲದೆ ಪ್ರಸಿದ್ಧ ನಾಟಕಕಾರರೂ ಆಗಿದ್ದಾರೆ.

ಕೃತಿಗಳು : ಆ ಮುಖ–ಈ ಮುಖ, ಶಾರದಾಲಹರಿ, ರಸವಂತಿ, ಜನಪದ ಕಾವ್ಯ, ಸಣ್ಣಕತೆಯ ಹೊಸ ಒಲವುಗಳು. 'ಸಂಕ್ರಮಣ' ದ್ವೈಮಾಸಿಕದ ಸಂಪಾದಕರು. ಕಲಬುರ್ಗಿಯ 'ರಂಗಮಾಧ್ಯಮ' ನಾಟಕ ಸಂಸ್ಥೆಯ ಸ್ಥಾಪಕರು.

**ಡಾ॥ ಸಿ. ಪಿ. ಕೃಷ್ಣಕುಮಾರ್**[3] : ಒಂದು ನೂರಕ್ಕೂ ಮಿಗಿಲಾಗಿ ವಿಮರ್ಶೆ, ಸಂಶೋಧನೆ, ಚಿಂತನ, ಭಾಷಾಂತರ ಸಂಗ್ರಹ ಮುಂತಾಗಿ ಕೃತಿ ರಚಿಸಿ ಸಾಹಿತ್ಯದ ಸರ್ವತೋಮುಖ ಕೃಷಿ ಮಾಡಿರುವ ಪ್ರತಿಭಾವಂತರು. ಮೈಸೂರಿನ ಮಾನಸ ಗಂಗೋತ್ರಿಯ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಪ್ರಬುದ್ಧ

---

1 ಜನನ: ನವೆಂಬರ್ 28, 1938, 'ಗುಬ್ಬೇವಾಡದಲ್ಲಿ, ತಂದೆ: ಸಂಗಪ್ಪ, ತಾಯಿ : ಗುರಮ್ಮ.

2 ಜನನ : ಜನವರಿ 8, 1939, ಧಾರವಾಡ ಜಿಲ್ಲೆಯ 'ಅಬ್ಬಿಗೇರಿ'ಯಲ್ಲಿ. ಕನ್ನಡ ಮತ್ತು ಇಂಗ್ಲೀಷ್ ಎರಡರಲ್ಲೂ ಎಂ.ಎ. ಪದವಿ ಗಳಿಸಿದ್ದಾರೆ. ಇಂಗ್ಲೆಂಡ್, ಬೆಲ್ಜಿಯಂ, ಫ್ರಾನ್ಸ್, ಸ್ವಿಟ್ಜರ್ಲೆಂಡ್, ಇಟಲಿಗಳಲ್ಲಿ ಪ್ರವಾಸ ಮಾಡಿ ಉಪನ್ಯಾಸಗಳನ್ನು ನೀಡಿದ್ದಾರೆ.

3 ಜನನ : ಏಪ್ರಿಲ್ 8, 1939, ಕೃಷ್ಣರಾಜನಗರ ತಾಲ್ಲೂಕಿನ, ಚಿಕ್ಕನಾಯ್ಕನಹಳ್ಳಿಯಲ್ಲಿ. ತಂದೆ : ಪುಟ್ಟೇಗೌಡರು.

ಕರ್ನಾಟಕದ ಸಂಪಾದನಾ ಕಾರ್ಯವನ್ನೂ ಮಾಡಿದ್ದಾರೆ. ಭಾಷಾ - ವಿಜ್ಞಾನದಲ್ಲಿ ಪರಿಣಿತರು ಯಶಸ್ವಿ ಕವಿಗಳೂ ಹೌದು.

ಕೃತಿಗಳು : ಅನಂತ–ಪೃಥ್ವಿ, ತಾರಾಸಖಿ. ಪ್ರಕೃತಿ. ಬೊಗಸೆ. ವರ್ತಮಾನ (ಕವನ ಸಂಗ್ರಹಗಳು) ಪಾಶ್ಚಾತ್ಯ ಕಾವ್ಯಚಿಂತನೆ, ಸಾಹಿತ್ಯ ಪ್ರವೇಶ. ಸಾಹಿತ್ಯಾರಾಧನೆ, ಜನಪದ ಪ್ರತಿಭೆ. ಸಾಹಿತ್ಯ ಮತ್ತು ಮನೋವಿಜ್ಞಾನ. ಕಲಾಪ. ವರ್ತಮಾನ, ಜಾನಪದ ಸರಸ್ವತಿ, ಭಾಸನ ಎರಡು ನಾಟಕಗಳು, ಕನ್ನಡ ನಾಗಾನಂದ, ಭಾರತೀಯ ಶಾಸನ ಶಾಸ್ತ್ರ ಪರಿಚಯ. ಜನ್ನ. ನಾಗಚಂದ್ರ. ನಾಗವರ್ಮನ ಕರ್ನಾಟಕ ಕಾದಂಬರಿ ಒಂದು ತೌಲನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ. ಅರಣ್ಯಪರ್ವ, ಕನ್ನಡ ನಾಗಾನಂದ (ನಾಟಕ) ಆಯ್ದ ಕುವೆಂಪು ಕವನಗಳು (ಸಂಪಾದನೆ) ಮುಂತಾಗಿ ನೂರಕ್ಕೂ ಹೆಚ್ಚು ಕೃತಿಗಳು.

ಇವರ ಕೃತಿ 'ತಾರಾಸಖಿ'. ಮೈಸೂರು ಸರಕಾರದ ಬಹುಮಾನ ಗಳಿಸಿದೆ. 'ಪಾಶ್ಚಾತ್ಯ ಚಿಂತನ'. (1970), ಕುಮಾರವ್ಯಾಸ ವಿರಚಿತ 'ಅರಣ್ಯಪರ್ವ' (1976), 'ಕಾವ್ಯ ವಿವೇಕ' (1977) ಕೃತಿಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿವೆ. ಸಂಗ್ರಹ ಮಹಾಭಾರತ ಇವರ ನೂರನೇ ಕೃತಿ.

**ಡಾ॥ ಪಿ. ಎಸ್. ರಾಮಾನುಜಂ* :** ಪೋಲೀಸ್ ಇಲಾಖೆಯಲ್ಲಿದ್ದು ಸಾಹಿತ್ಯದಲ್ಲಿ ಸಂಶೋಧನೆ ಮಾಡಿ. ಡಾಕ್ಟರೇಟ್‌ಗಳಿಸಿರುವ ವೈಶಿಷ್ಟ್ಯ ಪೂರ್ಣ ವ್ಯಕ್ತಿತ್ವದ ಸಾಹಿತಿ. ಸಾಹಸಿ ಅಧಿಕಾರಿ, ಸಂಸ್ಕೃತ ವಿದ್ವಾಂಸ. ಕನ್ನಡ ಪಂಡಿತ, ನವ್ಯ ಪ್ರಜ್ಞೆಯ ಕವಿ. ಅಷ್ಟೇ ಅಲ್ಲ. ಒಳ್ಳೆಯ ಪಿಟೀಲು ವಾದಕ ಸಹ. ವೈಶೇಷಿಕ ದರ್ಶನದಲ್ಲಿ ವಿಸ್ತಾರವಾದ ಸಂಶೋಧನೆ, ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಆಳವಾದ ಅಧ್ಯಯನ (ವೇಣೀ ಸಂಹಾರ). ಇವರ ಆಸಕ್ತಿಕ ಪ್ರಕಾರಗಳು.

ಇವರು ನಿರ್ವಹಿಸಿರುವ ಗುರುತರ ಹುದ್ದೆಗಳು : ಪೋಲೀಸ್ ತರಬೇತಿ ಕಾಲೇಜಿನ ಪ್ರಾಚಾರ್ಯರು. ಮೈಸೂರು ವಿಶ್ವವಿದ್ಯಾಲಯದ ಕುಲಸಚಿವರು. ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರು. ವಾರ್ತಾ ಪ್ರಚಾರ ಇಲಾಖೆಯ ನಿರ್ದೇಶಕರು ಮುಂತಾದವುಗಳು.

ಕೃತಿಗಳು : ಇವರು ಈ ಜನರು, ದುಕೂಲ (ಕವನ ಸಂಕಲನಗಳು). ಇತ್ತೀಚೆಗೆ ಇವರ ಎರಡು ಹಾಸ್ಯ ಪ್ರಧಾನ ನಾಟಕ (ರೇಡಿಯೊ ನಾಟಕಗಳು) ಬಿಡುಗಡೆಗೊಂಡು ಅಪಾರ ಯಶಸ್ಸು ಗಳಿಸಿವೆ.

---

* ಜನನ : 1941, ಚಾಮರಾಜನಗರ ತಾಲ್ಲೂಕಿನ 'ಬೇಡಮೂಡಲಿ' ಗ್ರಾಮದಲ್ಲಿ. ತಂದೆ : ಸಂಪತ್ಕುಮಾರಾಚಾರ್ಯ.

ಈ ವಿಭಾಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದಿರುವ ಈ ಕೆಳಕಂಡ ಸಾಹಿತಿಗಳು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸಲು ಬಹಳ ಶ್ರಮಿಸಿದ್ದಾರೆ. ಇವರಲ್ಲಿ ಬಹಳಷ್ಟು ಮಂದಿ ಸಾಹಿತ್ಯದ ಇತರ ವಿಭಾಗಗಳಲ್ಲೂ ಗಣನೀಯ ಸೇವೆಯನ್ನು ಮಾಡಿದ್ದಾರೆ', ನುಡಿದ ಮಾಸ್ತರು ತಮ್ಮ ಪುಟ್ಟ ಟಿಪ್ಪಣಿ ಪುಸ್ತಕ ಹೊರತೆಗೆದು ಓದಲು ಪ್ರಾರಂಭಿಸಿದರು.

**ಶ್ರೀ ಸುಜನಾ** – ಪೂರ್ಣ ಹೆಸರು ಎಸ್. ನಾರಾಯಣ ಶೆಟ್ಟರು (ಹೃದಯ ಸಂವಾದ–1963) ; **ಡಾ॥ ಕೆ. ಜಿ. ಹಿರೇಮಠ** (ದ್ರವ್ಯಗುಣ ವಿಜ್ಞಾನ–1965) ; **ಕೆ. ವೆಂಕಟರಾಯಾಚಾರ್ಯ** (ಆದಿತ್ಯ ಪುರಾಣ–1966) ; **ಸಿ. ಕೆ. ವೆಂಕಟರಾಮಯ್ಯ** (ಕಾಳಿದಾಸ ಮಹಾಕವಿ–1966) ; **ಡಿ. ಕೃಷ್ಣ ಅಯ್ಯಂಗಾರ್** (ವೇದಾಂತ ದೇಶಿಕರು–1967) ; **ಬಿ. ಎನ್. ಚಂದ್ರಯ್ಯ** (ಬಸವ ಪವಾಡ–1967) ; **ಟಿ. ವಿ. ತಿಮ್ಮೇಗೌಡ** (ಓದು ಶಕ್ತಿಯ ಸ್ವರೂಪ ಮತ್ತು ಬೆಳವಣಿಗೆ–1967) ; **ಡಿ. ಪದ್ಮನಾಭ ಶರ್ಮ** (ಕರ್ನಾಟಕ ಶಬ್ದಾನು ಶಾಸನಂ–1967) ; **ಪಿ. ಜಿ. ಕುಲಕರ್ಣಿ** (ಕನ್ನಡ ಭಾಷಾ ಚರಿತ್ರೆ–1968) ; **ಜಿ. ಎಂ. ಉಮಾಪತಿಶಾಸ್ತ್ರಿ** (ವಿವೇಕ ಚಿಂತಾಮಣಿ–1968) ; **ಸಿ. ಕೆ. ನಾಗರಾಜರಾವ್** (ಮಹಾಕವಿ ಲಕ್ಷ್ಮೀಶನ ಸ್ಥಳ ಮತ್ತು ಕಾಲ-1969) : **ಎಸ್. ಎನ್. ಕೃಷ್ಣ ಜೋಯಿಸ್** (ಸೂಪಶಾಸ್ತ್ರ-1970) ; **ಬಿ. ಎನ್. ಚಂದ್ರಯ್ಯ** (ಶಾಂತೇಶನ ಸಿದ್ಧೇಶ್ವರ ಪುರಾಣ–1971) ; **ಡಾ॥ ಕೆ. ಜಿ. ಶಾಸ್ತ್ರಿ** (ಪೌಲೋಮ ಆಸ್ತಿಕ ಪರ್ವಗಳು–1971) ; **ಭೀಮರಾವ್ ಚಿಟಗುಪ್ಪಿ** (ಕವಿರಾಜಮಾರ್ಗ ಪ್ರಶಸ್ತಿ–1972, ಸಂಶೋಧನ ಪಂಚದಶಿ–1974, ಇಮ್ಮಡಿ ನಾಗವರ್ಮ–1982) ; **ಎಸ್. ಕೆ. ರಾಮಚಂದ್ರ ರಾವ್** (ವೋಲ್ಟೆಯರ್–1973, ಮೂರ್ತಶಿಲ್ಪ - ನೆಲೆಹಿನ್ನೆಲೆ–1975) ; **ಡಾ॥ ಡಿ. ಎಸ್. ಶಿವಪ್ಪ** (ಇಂಗ್ಲೀಷ್ - ಕನ್ನಡ ವೈದ್ಯ ಪದಕೋಶ–1973) : **ಎಸ್. ಆರ್. ಗುಂಜಾಳ** (ಬಸವಣ್ಣನವರ ಪದ ಪ್ರಯೋಗಕೋಶ–1973) ; **ಡಾ॥ ಬಿ. ಡಿ. ಹೆಂಡಿ** (ದೀಕ್ಷಾ ಬೋಧೆ-1973) ; **ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ** (ಹೊರಳು ದಾರಿಯಲ್ಲಿ ಕಾವ್ಯ-1974) ; **ರಾಗೌ** (ಜಾನಪದ ಸಂಕೀರ್ಣ–1974) : **ಬಿ. ಎಸ್. ಸಣ್ಣಯ್ಯ** (ವರ್ಧಮಾನ ಪುರಾಣಂ-1974) ; **ಡಾ॥ ಎಸ್. ವಿದ್ಯಾಶಂಕರ** (ದೀಪದಕಲಿಯರ ಕಾವ್ಯ-1974) ; **ಎನ್. ಬಸವಾರಾಧ್ಯ** (ಧರ್ಮನಾಥ ಪುರಾಣಂ-1975) ; **ಡಾ॥ ಬುದ್ದಣ್ಣ ಹಿಂಗಮಿರೆ** (ಹೊಸ ಕಾವ್ಯ, ಹೊಸ ದಿಕ್ಕು–1976) ; **ಎಚ್. ಆರ್. ರಘುನಾಥ ಭಟ್ಟ** (ಕರ್ನಾಟಕ ಶಾಸನ ಕಲೆ–1977) : **ಜಿ. ಜಿ. ಮಂಜುನಾಥನ್** (ನನ್ನಯ್ಯಗಳ ಚಾರಿತ್ರ-1978) : **ಡಾ॥ ಡಿ. ಎನ್. ಶಂಕರ ಭಟ್ಟ** (ಕನ್ನಡ ವಾಕ್ಯಗಳು-1978) ; **ಸುರೇಂದ್ರನಾಥ ಬಿ. ಮಿಣಜಿಗಿ** (ಟಿ. ಎಸ್. ಎಲಿಯೆಟ್–1978) ; **ಟಿ. ಎನ್. ನಾಗರತ್ನ** (ಶ್ರೀ ವಾದಿರಾಜರ ಕೃತಿಗಳು-1980); **ಕೆ. ಎಸ್. ನಿಸಾರ್ ಅಹಮದ್** (ಇದು ಬರಿಬೆಡಗಲ್ಲೊ ಅಣ್ಣ-1980) ;

**ವಿ. ಎಸ್. ಕೌಶಿಕ್** (ಭರತನ ನಾಟ್ಯ ದಿಗ್ದರ್ಶನ-1981) : **ಡಾ|| ಶಿವಾನಂದ ಗುಬ್ಬಣ್ಣ** (ಬರಕೋ ಪದಾ ಬರಕೋ-1981) ; **ಎಚ್. ಎಸ್. ರಾಘವೇಂದ್ರ ರಾವ್** (ವಿಶ್ಲೇಷಣೆ-1981) ; **ಎಸ್. ಅನಂತನಾರಾಯಣ*** (ಕಾವ್ಯಾಂತರಂಗ-1982) ; **ಎಸ್. ವೆಂಕಟರಾವ್** (ದುಡಿಯುವವರ ದನಿ ಮತ್ತು ಇತರ ಲೇಖನಗಳು-1982) ; **ಓ. ಎಲ್. ನಾಗಭೂಷಣ ಸ್ವಾಮಿ** (ವಿಮರ್ಶೆಯ ಪರಿಭಾಷೆ-1982) ; **ಡಾ|| ಕೆ. ಕುಶಾಲಪ್ಪ ಗೌಡ ಮತ್ತು ಕೆ. ಚನ್ನಪ್ಪ ಗೌಡ** (ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು-1983) : **ಪ್ರೊ|| ಕೆ. ಜಿ. ನಾಗರಾಜಪ್ಪನವರು** ('ಮರು ಚಿಂತನೆ'-1984) ; **ಎಸ್. ಕೃಷ್ಣಭಟ್ಟರು** (ಛಂದೋಗತಿ-1984) ; **ಸಣ್ಣಯ್ಯ ಮತ್ತು ರಾಮೇಗೌಡರು** (ಭೀಮ ವಿಜಯಂ-1984) : **ಟಿ. ಪಿ. ಅಶೋಕ** (ಸಾಹಿತ್ಯ ಸಂಪರ್ಕ-1985) ; **ಪ್ರೊ|| ಎಂ. ವಿ. ಸೀತಾರಾಮಯ್ಯ** (ಶ್ರೀ ಕೃಷ್ಣ ಬಾಲಲೀಲೆ-1985) : **ಉಪ್ಪಂಗಳ ರಾಮಭಟ್ಟ** (ಭಟ್ಟಾಕಲಂಕ-1985).

---

* ಜನನ : 1925. ಕಾವ್ಯನಾಮ : 'ಉಪಾಧ್ಯಾಯ'. ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಅಧ್ಯಾಪಕರು. ಇತರ ಕೃತಿಗಳು : ಆಧುನಿಕ ಚೈನ, ಬಾಡಿದ ಹೂ, ಕಾರಂತರ ಕಾದಂಬರಿಗಳು, ಪಯಣದ ಹಾದಿಯಲ್ಲಿ, ಬಾಬುರಾಜೇಂದ್ರಪ್ರಸಾದ್ ಮತ್ತು ಹವಳ ಇತ್ಯಾದಿ.

—000—

## (ಉ) ಪತ್ರಿಕೋದ್ಯಮಿಗಳು

ಅಂದು ಭಾನುವಾರ, ಬೆಳಗಿನ ಜಾವವೇ ಎದ್ದ ವ್ಯಾಸರಾಯರು ಸ್ನಾನ ಮಾಡಿ, ಆಹ್ನಿಕ ಪೂರೈಸಿ ಪದ್ಮಮ್ಮ ತಂದಿರಿಸಿದ ಉಪಹಾರ ತಿಂದು, ಕಾಫಿ ಕುಡಿಯುವ ಹೊತ್ತಿಗೆ ಮುಕುಂದ, ದಿನೇಶ ಹಾಗೂ ಆತನ ಇತರ ನಾಲ್ಕು ಸ್ನೇಹಿತರು ಚಾಪೆಯ ಮುಂದೆ ಆಸೀನರಾಗಿದ್ದರು. ವಾಸುದೇವರಾಯರೂ ಕುರ್ಚಿಯೊಂದನ್ನು ಎಳೆದುಕೊಂಡು ವ್ಯಾಸರಾಯರ ಬಲಬದಿಯಲ್ಲಿ ಗೋಡೆಗೊರಗಿ ಕುಳಿತರು.

ವ್ಯಾಸರಾಯರು ಆಸಕ್ತಿಯಿಂದ ಎದುರಿಗೆ ಕುಳಿತಿದ್ದ ಸಾಹಿತ್ಯಾಸಕ್ತರನ್ನು ಕಂಡು ಸಂತೋಷದಿಂದ ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು.

"ಇಂದು ಪತ್ರಿಕೋದ್ಯಮದ ಬಗ್ಗೆ ಕೊಂಚ ವಿಷಯ ಹೇಳ್ತೀನಿ. ಮೊದಲು ಅದರ ಉಗಮ ಕರ್ನಾಟಕದಲ್ಲಿ ಯಾವಾಗ ಹೇಗೆ ಆಯ್ತು ಅಂತ ಸೂಕ್ಷ್ಮವಾಗಿ ಹೇಳಿ, ಅನಂತರ ಸಾಹಿತಿ-ಪತ್ರಿಕೋದ್ಯಮಿಗಳ ಬಗ್ಗೆ ಸ್ವಲ್ಪ ವಿವರವಾಗೇ ಹೇಳ್ತೀನಿ.

ಕರ್ನಾಟಕದಲ್ಲಿ ಪತ್ರಿಕೋದ್ಯಮ ಕ್ರಿ.ಶ. 1840ರ ಸುಮಾರಿನಲ್ಲಿ ಪ್ರಾರಂಭವಾಯಿತು ಎಂದು ಹೇಳಬಹುದು. ಬ್ರಿಟನ್‌ನ ಪಾದ್ರಿ **'ಹರ್ಮನ್ ಮೋಗ್ಲಿಂಗ್'**ನೇ (ಕ್ರಿ.ಶ. 1811–1881) ಇದನ್ನು ಪ್ರಾರಂಭಿಸಿದ ಮೊದಲಿಗ. ಸುಮಾರು 1843ರಲ್ಲಿ ಮಂಗಳೂರಿನಿಂದ 'ಮಂಗಳೂರು ಸಮಾಚಾರ'. ಬಳ್ಳಾರಿಯಿಂದ 1844ರಲ್ಲಿ 'ಕನ್ನಡ ಸಮಾಚಾರ' ಪತ್ರಿಕೆಗಳನ್ನು ಪ್ರಾರಂಭಿಸಿದ. ಆಗ ಇವುಗಳ ಮುದ್ರಣಕ್ಕೆ ಶಿಲಾಯಂತ್ರಗಳನ್ನು ಉಪಯೋಗಿಸುತ್ತಿದ್ದರು. ಮೈಸೂರು ಸಂಸ್ಥಾನದಲ್ಲಿ **ಭಾಷ್ಯಂ ಭಾಷ್ಯಾಚಾರ್ಯರು** * 1850ರ ಸುಮಾರಿನಲ್ಲಿ 'ಮೈಸೂರು ವೃತ್ತಾಂತ ಬೋಧಿನಿ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು.

ಕ್ರಿ.ಶ. 1855ರ ಸುಮಾರಿನಲ್ಲಿ 'ಸುಬುದ್ಧಿ ಪ್ರಕಾಶ' ಮತ್ತು 'ಜ್ಞಾನಪ್ರಕಾಶ' ಪತ್ರಿಕೆಗಳು ಉತ್ತರ ಕರ್ನಾಟಕದಿಂದ ಪ್ರಕಟವಾಗುತ್ತಿದ್ದವು. 1861ರಲ್ಲಿ ಮುಂಬಯಿಯಿಂದ 'ಕಂನಡ ಜ್ಞಾನ ಬೋಧಕ' ಎಂಬ ಪತ್ರಿಕೆ ಪ್ರಕಟಗೊಂಡಿತು.

ವೆಸ್ಲಿಯನ್ ಮಿಷನ್‌ರವರು 1865–66ರ ಸುಮಾರಿನಲ್ಲಿ ಮೈಸೂರಿನಿಂದ ಹೊರಡಿಸಿದ 'ಕರ್ನಾಟಕ ಪ್ರಕಾಶಿಕಾ', 'ದೇಶಾಭಿಮಾನಿ' ಮಹತ್ವದ ಪತ್ರಿಕೆಗಳು. ಇದೇ ಕಾಲದಲ್ಲಿ ಮೈಸೂರು ಸರ್ಕಾರ ತನ್ನ 'ಗೆಜೆಟ್' ಪ್ರಕಟಿಸಲು ಪ್ರಾರಂಭಿಸಿತ್ತು.

---

* ಜೀವಿತಕಾಲ: (1833–1884)

ಅನಂತರ ಹೊರಬಂದ ಪ್ರಮುಖ ಪತ್ರಿಕೆಗಳು ಇವು." ವ್ಯಾಸರಾಯರು ತಮ್ಮ ಪುಟ್ಟ ಟಿಪ್ಪಣಿ ಪುಸ್ತಕ ತೆಗೆದು ಓದಲು ಪ್ರಾರಂಭಿಸಿದರು.

"ಎಂ. **ವೆಂಕಟಕೃಷ್ಣಯ್ಯನವರ** 'ವೃತ್ತಾಂತ ಚಿಂತಾಮಣಿ' (1855) : **ವೆಂಕಟರಂಗೋ ಕಟ್ಟಿಯವರ** 'ಲೋಕ ಶಿಕ್ಷಣ' (1888) ; **ಶ್ರೀನಿವಾಸ ಭೀಮಾಜಿ** ಯವರ 'ಸತ್ಯವೃತ' (1889) ; **ಗುರುರಾವ ಮಮದಾಪುರ**ರವರ 'ಲೋಕಬಂಧು' (1889) ; ಕರ್ಕಿಯ **ಸೂರಿ ವೆಂಕಟರಮಣ ಶಾಸ್ತ್ರಿಗಳ** 'ಹಿತೋಪದೇಶ' (1890 ಮುಂಬಯಿಯಿಂದ) ; **ಚ. ಫಕೀರಪ್ಪ** ಅವರ 'ಕರ್ನಾಟಕ ವೃತ್ತ' (1891) : **ಜಿ. ಎಂ. ದೇಶಪಾಂಡೆ**ಯವರ 'ಕರ್ನಾಟಕ ವೈಭವ' (1892) ; **ಮುದವೀಡು ಕೃಷ್ಣರಾಯರ**[1] 'ಧನಂಜಯ' (1896) : **ಗ. ಹು. ಹೊನ್ನಾಪುರಮಠ**ರವರ 'ವಾಗ್ಭೂಷಣ' (1896) ಮತ್ತು 'ವಾಗ್ದೇವಿ' (1907) ; **ಯಜಮಾನ್ ವೀರ ಬಸಪ್ಪ**ನವರ 'ಮೈಸೂರ್ ಸ್ಟಾರ್' (1908) ; **ಕಾವ್ಯಾನಂದ ಪುಣೇಕರ** ಅವರ 'ಕ್ಷೇಮ ಸಮಾಚಾರ' (1912) : **ಕೆರೂರ ವಾಸುದೇವಾಚಾರ್ಯ**ರ[2] 'ಶುಭೋದಯ' ಹಾಗೂ 'ಸಚಿತ್ರ ಭಾರತ' (1917) : **ಯಲಗುರ್ದರಾವ್ ಧಾರವಾಡಕರ** ಅವರ 'ನವೀನ ಭಾರತ' : **ಬೆನಗಲ್ ರಾಮರಾಯರ**[3] 'ಸುವಾಸಿನಿ' ಮತ್ತು 'ಸಾಹಿತ್ಯ ಪತ್ರಿಕೆ' (1900) : **ತಿರುಮಲಾಂಬಾ**ರವರ 'ಕರ್ನಾಟಕ ನಂದಿನಿ' (1916) : ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ' (1915) ; **ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳು**[4] ಪ್ರಾರಂಭಿಸಿದ 'ಪ್ರಬುದ್ಧ ಕರ್ನಾಟಕ' (1918) : ಡಿ. ವಿ. ಜಿ ರವರ[5] 'ಕರ್ನಾಟಕ ಜನಜೀವನ' ಮತ್ತು 'ಸುಮತಿ' (ಸು. 1924) ; **ಆರ್. ಕಲ್ಯಾಣಮ್ಮ**ನವರ 'ಸರಸ್ವತಿ' (1925) : **ದೇವುಡು**ರವರ[6] 'ನಮ್ಮ ಪುಸ್ತಕ' (1925) ; **ಕಡೆಂಗೋಡ್ಲು ಶಂಕರಭಟ್ಟ**ರ[7] 'ರಾಷ್ಟ್ರ ಬಂಧು' (1928) ; **ಸುಬೋಧ ರಾಮರಾಯರ** 'ಸುಬೋಧ' (1925) ; **ನೈ. ನಾಗೇಶ ಶಾಸ್ತ್ರಿಗಳ**[8] 'ಕರ್ನಾಟಕ ಬಂಧು' (1925) : **ಫ. ಗು. ಹಳಕಟ್ಟಿ**ಯವರ[9] 'ಶಿವಾನುಭವ' (1926) : **ಪಿ. ಆರ್. ರಾಮಯ್ಯ**ನವರ 'ತಾಯಿನಾಡು' (1927) : ಬಿ. ಎನ್. **ಗುಪ್ತ**ರವರ 'ಪ್ರಜಾಮತ' (1929) ಮತ್ತು 'ಜನವಾಣಿ' (1931) : **ಹಳಕಟ್ಟಿ** ಯವರ 'ನವಕರ್ನಾಟಕ' (1928) : **ಮೊಹರೆ ಹಣಮಂತರಾಯರ** 'ಸಂಯುಕ್ತ ಕರ್ನಾಟಕ' (1929) : **ಬಸವನಾಳ**ರ[10] 'ಪ್ರಬೋಧ' ಮತ್ತು 'ಜಯಕರ್ನಾಟಕ' ;

---

1 ಪುಟ 132 ನೋಡಿ.
2 ಪುಟ 126 ನೋಡಿ.
3 ಪುಟ 134 ನೋಡಿ.
4 ಪುಟ 142 ನೋಡಿ.
5 ಪುಟ 137 ನೋಡಿ.
6 ಪುಟ 197 ನೋಡಿ.
7 ಪುಟ 156 ನೋಡಿ.
8 ಪುಟ 75 ನೋಡಿ.
9 ಪುಟ 90 ನೋಡಿ.
10 ಪುಟ 292 ನೋಡಿ. 1944ರಲ್ಲಿ 'ರಬಕವಿ'ಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಹೆಗ್ಗಳಿಕೆ ಇವರದು.

**ವೀರಕೇಸರಿ ಸೀತಾರಾಮ ಶಾಸ್ತ್ರಿ**ಗಳ[1] 'ವೀರಕೇಸರಿ' (1929); **ಹರ್ಡೇಕರ್ ಮಂಜಪ್ಪ**ನವರ 'ಶರಣ ಸಂದೇಶ' (1930); **ಬಿ. ಚಂದ್ರಶೇಖರ ಶರ್ಮ**ರವರ 'ಪ್ರಬೋಧಕ' (1930): **ತಿ. ತಾ. ಶರ್ಮ**ರವರ[2] 'ವಿಶ್ವಕರ್ನಾಟಕ' (1934); ಬಿ. **ಪುಟ್ಟಸ್ವಾಮಯ್ಯ**ನವರ[3] 'ಒಕ್ಕಲಿಗರ ಪತ್ರಿಕೆ'; **ಆಲೂರ ವೆಂಕಟರಾಯ**ರ[4] 'ಜಯಕರ್ನಾಟಕ' (ಸು. 1935); ಬಿ. ಎಂ. ಶ್ರೀ**ರವರು[5] ಸಂಪಾದಿಸುತ್ತಿದ್ದ 'ಕನ್ನಡ ಬಾವುಟ' (1938) ಮತ್ತು 'ಕನ್ನಡ ನುಡಿ' (1938); ಬಿ. **ಶಿವಮೂರ್ತಿ ಶಾಸ್ತ್ರಿ**ಗಳ 'ಶರಣ ಸಾಹಿತ್ಯ' (1938); ಎಂ. **ಆರ್. ಲಕ್ಷ್ಮಮ್ಮ**ನವರ 'ಸೋದರಿ'; **ಪಾಟೀಲ ಪುಟ್ಟಪ್ಪ**ನವರ 'ವಿಶ್ವವಾಣಿ' (ದೈನಿಕ), 'ಪ್ರಪಂಚ' (ವಾರಪತ್ರಿಕೆ): ಕೆ. **ಎನ್. ಗುರುಸ್ವಾಮಿ**ಗಳು[6] ಸ್ಥಾಪಿಸಿದ 'ಪ್ರಜಾವಾಣಿ' (1948); **ಜಿ. ನಾರಾಯಣ**ರವರ ಹಾಸ್ಯ ಪತ್ರಿಕೆ 'ವಿನೋದ' (1951): **ರಾ ಶಿ.**ರವರ 'ಕೊರವಂಜಿ' (1942) ಮತ್ತು ಅನಂತರ ಬಂದ ವಿಶೇಷ ರೀತಿಯ ನವ್ಯ ಸಾಹಿತ್ಯ ಪತ್ರಿಕೆಗಳಾದ 'ಸಾಕ್ಷಿ', 'ಸಂಕ್ರಮಣ'' 'ಸಮೀಕ್ಷಕ', 'ಮನ್ವಂತರ', 'ಸಮನ್ವಯ', 'ಸಂಕೀರ್ಣ' ಮುಂತಾದವುಗಳು ಹೆಸರಾಂತ ಸಾಹಿತಿ, ವಿಮರ್ಶಕರುಗಳಾದ **ಗಿರಡ್ಡಿ ಗೋವಿಂದರಾಜ, ಚಂದ್ರಶೇಖರ ಪಾಟೀಲ, ಸಿದ್ಧಲಿಂಗಪಟ್ಟಣ ಶೆಟ್ಟಿ, ಗೋಪಾಲಕೃಷ್ಣ ಅಡಿಗ, ಡಾ|| ಗೋಕಾಕ್, ಡಾ|| ಜಿ. ಎಸ್. ಶಿವರುದ್ರಪ್ಪ** ಮುಂತಾದ ಗಣ್ಯರಿಂದ ನಡೆಸಲ್ಪಡುತ್ತಿವೆ. ಈಗ ಸಾಹಿತಿ–ಪತ್ರಿಕೋದ್ಯಮಿಗಳನ್ನು ಒಬ್ಬೊಬ್ಬರನ್ನಾಗಿ ಪರಿಚಯ ಮಾಡಿಕೊಳ್ಳೋಣ. ಸಾಹಿತಿಗಳ ವಿಭಾಗದಲ್ಲಿ ಆಗಲೇ ಕೆಲವರು ಬಂದುಹೋಗಿದ್ದಾರೆ. ಅವರ ವಿಷಯವನ್ನು ಈಗ ಬಿಟ್ಟುಬಿಡುತ್ತೇನೆ.

**ಎಂ. ವೆಂಕಟಕೃಷ್ಣಯ್ಯ**[7] **:** ಪತ್ರಿಕೋದ್ಯಮಕ್ಷೇತ್ರದಲ್ಲಿ ಮರೆಯಲಾಗದ ಹೆಸರು. 'ಮೈಸೂರು ತಾತಯ್ಯ' ಎಂದೇ ಪ್ರಸಿದ್ಧರು.

ಒಳ್ಳೆಯ ಗ್ರಂಥಕರ್ತರು. ಹೆಸರಾಂತ ಪತ್ರಿಕಾಕರ್ತರು. ಜನಪ್ರಿಯ ಸಮಾಜ ಸೇವಕರು.

ಪತ್ರಿಕಾ ಪ್ರಪಂಚದ ಭೀಷ್ಮಾಚಾರ್ಯರೆಂದು ಖ್ಯಾತರಾಗಿದ್ದರು. ಉಪಾಧ್ಯಾಯ ವೃತ್ತಿ ಅವಲಂಬಿಸಿದ್ದರೂ ಪತ್ರಿಕಾಕ್ಷೇತ್ರದೊಡನೆ ಅವರನಂಟು ಅಭೇದ್ಯವಾಗಿತ್ತು.

1922ರಲ್ಲಿ ದಾವಣಗೆರೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಹಿರಿಮೆ ಇವರದ್ದು. ಇವರು 1911 ರಲ್ಲಿ ಪ್ರಾರಂಭಿಸಿದ 'ಸಾಧ್ವಿ' ಇಂದೂ

---

1 ಪುಟ 145 ನೋಡಿ.
2 ಪುಟ 149 ನೋಡಿ.
3 ಪುಟ 149 ನೋಡಿ.
4 ಪುಟ 128 ನೋಡಿ.
5 ಪುಟ 138 ನೋಡಿ.
6 ಜನನ: 1901. ಪ್ರಿಂಟರ್ಸ್ ಮೈಸೂರು (ಲಿ.) ಸಂಸ್ಥೆ ಸ್ಥಾಪಿಸಿ, ಅದರಡಿ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಸುಧಾ, ಮಯೂರ ಪತ್ರಿಕೆಗಳನ್ನು ಪ್ರಾರಂಭಿಸಿದರು.
7 ಜೀವಿತಕಾಲ: (1844-1933) ಹೆಗ್ಗಡದೇವನಕೋಟೆ ತಾಲ್ಲೂಕಿನ 'ಮಗ್ಗೆ' ಜನ್ಮಸ್ಥಳ.

ನಡೆದುಕೊಂಡು ಬರುತ್ತಿರುವುದು ನಿಜಕ್ಕೂ ಹೆಮ್ಮೆಯ ವಿಷಯ.

ವೃತ್ತಾಂತ ಚಿಂತಾಮಣಿ, ಹಿತಬೋಧಿನಿ, ವಿದ್ಯಾದಾಯಿನಿ, ಸಾಧ್ವಿ, ಸಂಪದಭ್ಯುದಯ, ಗ್ರಾಮ ಜೀವನ, ಪೌರ ಸಾಮಾಜಿಕ ಪತ್ರಿಕೆ ಮುಂತಾದ ಕನ್ನಡ ಪತ್ರಿಕೆಗಳನ್ನಲ್ಲದೆ ವೆಲ್ತ್ ಆಫ್ ಮೈಸೂರ್, ಮೈಸೂರ್ ಪೇಟ್ರಿಯೆಟ್, ಸ್ಟೀವರ್ ಕ್ಯೂರ್ ಮುಂತಾದ ಇಂಗ್ಲೀಷ್ ಪತ್ರಿಕೆಗಳನ್ನು ಹಲವು ವರ್ಷ ನಡೆಸುತ್ತಿದ್ದರು.

ಇತರ ಕೃತಿಗಳು : ಚೋರಗ್ರಹಣ ತಂತ್ರ, ಪರಂತಪ ವಿಜಯ (ಕಾದಂಬರಿಗಳು), 'ಆರೋಗ್ಯ ಸಾಧನ ಪ್ರಕಾಶಿಕೆ', 'ಟೆಲಿಮಾಕ್ಸ್‌ನ ಸಾಹಸ ಚರಿತ್ರೆ', 'ಹರಿಶ್ಚಂದ್ರ ಚರಿತ್ರೆ' (ಇತರ ಗ್ರಂಥಗಳು), 'ಬೂಕರ್ ಟಿ. ವಾಷಿಂಗ್‌ಟನ್ ಚರಿತ್ರೆ' (ನೀಗ್ರೋ ನಾಯಕನನ್ನು ಕುರಿತ ಗ್ರಂಥ.)

ಇವರಿಗೆ ಪತ್ರಿಕೋದ್ಯಮದಲ್ಲಿ ಅತೀವ ಆಸಕ್ತಿ ಇದ್ದು ವಿಶ್ವವಿದ್ಯಾಲಯದಲ್ಲಿ ಪಠ್ಯ ವಿಷಯವಾಗಲೆಂಬ ಅಭಿಲಾಷೆಯಿಂದಲೇ 2,000 ರೂ.ಗಳ ದತ್ತಿ ಇತ್ತು, ಪತ್ರಿಕೋದ್ಯಮದ ಶ್ರೇಷ್ಠ ವಿದ್ಯಾರ್ಥಿಗೆ ಬಹುಮಾನ ಕೊಡಬೇಕೆಂದು ಸೂಚಿಸಿದ್ದರು. ಈ ದತ್ತಿ ಬಹುಮಾನ ಯೋಜನ ಇಂದೂ ನಡೆದುಕೊಂಡು ಬರುತ್ತಿದೆ.

**ಎನ್. ಆರ್. ಕರಿಬಸವ ಶಾಸ್ತ್ರಿ**[1] **:** ಕನ್ನಡ, ಸಂಸ್ಕೃತ ವಿದ್ವಾಂಸರು. 'ಮೈಸೂರು ಸ್ಟಾರ್' (1888) ಪತ್ರಿಕೆಯ ಉಪಸಂಪಾದಕರಾಗಿದ್ದರು. 'ವೀರಶೈವ ಗ್ರಂಥ ಪ್ರಕಾಶಿಕೆ' ಮಾಸ ಪತ್ರಿಕೆ ಸ್ವತಃ ಇವರೇ ಸ್ಥಾಪಿಸಿ ನಡೆಸುತ್ತಿದ್ದರು.

ಇವರು ಒಳ್ಳೆಯ ಗ್ರಂಥ ಸಂಪಾದಕರೂ, ವಿಮರ್ಶಕರು ಆಗಿದ್ದರು.

ಸಂಪಾದಿಸಿರುವ ಕೃತಿಗಳು : ಸಿದ್ಧಾಂತ ಶಿಖಾಮಣಿ, ಪಂಡಿತಾರಾಧ್ಯ ಚರಿತ್ರೆ, ಸೌಂದರಪುರಾಣ, ರೇವಣಸಿದ್ಧೇಶ್ವರಪುರಾಣ, ಶಿವಯೋಗ ಪ್ರದೀಪಿಕಾ ಮುಂತಾದವು.

**ಹುರುಳಿ ಭೀಮರಾವ್**[2] **:** ಪ್ರಸಿದ್ಧ ಪತ್ರಿಕೋದ್ಯಮಿ ಹಾಗೂ ಒಳ್ಳೆಯ ಸಾಹಿತಿ.

'ಕಂಠೀರವ' ಪತ್ರಿಕೆಯ ಸಂಪಾದಕರಾಗಿ 35 ವರ್ಷಗಳಷ್ಟು ದೀರ್ಘಕಾಲ ನಡೆಸಿದ ಹೆಗ್ಗಳಿಕೆ ಇವರದು.

ಕೃತಿಗಳು : ತಾರಾ (ಐತಿಹಾಸಿಕ ಕಾದಂಬರಿ), ಪಾಪ ಪುಣ್ಯ. ರಜಿಯಾ ಬೇಗಂ, ಹಾಸನ ಟೋಪಿ, ಗುಬ್ಬಿ ಪಾಯಸ, ಗಡ್ಡದ ಅಜ್ಜಯ್ಯ, ಆಧುನಿಕ ಭಾರತ (ನಾಟಕಗಳು). ಸ್ವಲ್ಪ ನಗಬಂದೆ (ತುಣುಕು ಹಾಸ್ಯ).

---

1 ಜೀವಿತಕಾಲ : (1872-1923)

2 ಜೀವಿತಕಾಲ : (1889-1970) ಶಿವಮೊಗ್ಗ ಜಿಲ್ಲೆಯ 'ಹುರುಳಿ' ಜನ್ಮಸ್ಥಳ. ತಂದೆ : ಶಾಮರಾಯ ; ತಾಯಿ : ಭಿಷ್ಟಮ್ಮ. ಪುಟ 152 ನೋಡಿ.

**ಪಿ. ಆರ್. ರಾಮಯ್ಯ**[1] **:** ವಿದ್ಯಾಭ್ಯಾಸ ಮೈಸೂರು ಹಾಗೂ ಕಾಶಿಯಲ್ಲಿ, ಧೀಮಂತ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಬೆಂಗಳೂರು ಪುರಸಭೆಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು.

ಇವರ ಸಂಪರ್ಕ ಇದ್ದ ಪತ್ರಿಕೆಗಳು 'ಸ್ವರಾಜ್ಯ' (ಮದರಾಸು), ಸಾಧ್ವಿ, ಸಂಪದಭ್ಯುದಯ, ವೆಲ್ತ್ಆಫ್ಮೈಸೂರು, ಡೈಲಿ ನ್ಯೂಸ್, (ಇಂಗ್ಲೀಷ್ ಪತ್ರಿಕೆ) ಮುಂತಾದವು. 'ದಿನವಾಣಿ' ಇವರು ಪ್ರಾರಂಭಿಸಿದ್ದ ಕೈ ಬರಹದ ಪತ್ರಿಕೆ.

ಇವರು ಒಳ್ಳೆಯ ಸಾಹಿತಿಗಳು ಆಗಿದ್ದರು. 'ತಾಯಿನಾಡು' ಪತ್ರಿಕೆಯನ್ನು 1927ರಲ್ಲಿ ಪ್ರಾರಂಭಿಸಿ, ಅದರ ಸ್ಥಾಪಕ ಸಂಪಾದಕರಾಗಿ, ಅದರ ಅಭಿವೃದ್ಧಿಗೆ ಅವಿರತ ಶ್ರಮಿಸಿದ್ದಾರೆ.

ಇವರ ಬಹುಮುಖ ಸೇವೆಯನ್ನು ಗುರುತಿಸಿದ ರಾಜ್ಯ ಸರ್ಕಾರ 1969ರಲ್ಲಿ ಪ್ರಶಸ್ತಿನೀಡಿ ಗೌರವಿಸಿತ್ತು.

**ಕೃತಿಗಳು:** ಫ್ರಾನ್ಸಿನ ಮಹಾಕ್ರಾಂತಿ, ಆಧುನಿಕ ರಷ್ಯಾ, ಪೊಲಿಟಿಕಲ್ ಎವಲ್ಯೂಷನ್ ಆಫ್ ಮೈಸೂರು, ದಯಾಸಾಗರ, ಎಂ. ವೆಂಕಟಕೃಷ್ಣಯ್ಯನವರ ಜೀವನ ಚರಿತ್ರೆ ಮುಂತಾದವು.

ರಾಮಯ್ಯನವರು 1952 ರಿಂದ 1957ರ ವರೆಗೆ ವಿಧಾನ ಸಭೆಯ ಸದಸ್ಯರಾಗಿದ್ದರು.

**ರಂಗನಾಥ ದಿವಾಕರ**[2] **:** ರಾಜಕೀಯ ವ್ಯಕ್ತಿಯಾದರೂ ಸಾಹಿತ್ಯಕ್ಕಾಗಿ ಅಪಾರವಾಗಿ ಸೇವೆ ಸಲ್ಲಿಸುತ್ತಿರುವ ಬಹುಮುಖ ಪ್ರತಿಭೆಯ ಪತ್ರಿಕೋದ್ಯಮಿ, ಲೋಕ ಶಿಕ್ಷಣ ಟ್ರಸ್ಟ್ ಸ್ಥಾಪಕರು. 'ಸಂಯುಕ್ತ ಕರ್ನಾಟಕ' (ದಿನಪತ್ರಿಕೆ), ಕರ್ಮವೀರ (ವಾರಪತ್ರಿಕೆ), 'ಕಸ್ತೂರಿ' (ಮಾಸಪತ್ರಿಕೆ), ಐವತ್ತು ವರ್ಷಕಾಲ ನಡೆಸಿದ ಶ್ರೇಯಸ್ಸು ಇವರದು. 'ಕರ್ನಾಟಕದ ಪರಂಪರೆ' ಬೃಹತ್ ಕೃತಿಯ ಮೂಲ ಗ್ರಂಥ, 'ಕರ್ನಾಟಕ ಥ್ರೂ ದಿ ಏಜಿಸ್' ಸಂಪಾದಿಸಿದ ಯಶಸ್ಸು ಇವರದು. 1938ರಲ್ಲಿ ಬಳ್ಳಾರಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಬೆಳಗಾವಿ, ಹುಬ್ಬಳ್ಳಿ, ಪುಣೆ, ಮುಂಬಯಿಗಳಲ್ಲಿ ವಿದ್ಯಾಭ್ಯಾಸ ಪೂರೈಸಿ ನ್ಯಾಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಗಳಿಸಿ ಉಪಾಧ್ಯಾಯರಾಗಿ ಧಾರವಾಡ, ಕೊಲ್ಲಾಪುರಗಳಲ್ಲಿ ಸೇವೆ ಸಲ್ಲಿಸಿ, ಗಾಂಧೀಜಿಯವರಿಂದ ಪ್ರಭಾವಿತರಾಗಿ ರಾಜಕೀಯ ಪ್ರವೇಶಿಸಿದರು. ತ್ರಿಕರಣ ಪೂರ್ವಕವಾಗಿ ದುಡಿದರು. ರಾಜ್ಯಾಂಗ ಸಭೆಯ ಸದಸ್ಯ

---

1 ಜೀವಿತಕಾಲ: (1894–1970) ಪಾಲಹಳ್ಳಿಯಲ್ಲಿ ಜನನ.
ತಂದೆ: ರಾಮಸ್ವಾಮಯ್ಯ.

2 ಜನನ: ಸೆಪ್ಟೆಂಬರ್ 1894, ಧಾರವಾಡದಲ್ಲಿ.

ರಾಗಿ, ರಾಜ್ಯ ಸಚಿವರಾಗಿ, ಬಿಹಾರಿನ ರಾಜ್ಯಪಾಲರಾಗಿ, ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಕೃತಿಗಳು : ಉಪನಿಷತ್ತು, ವಚನ ಶಾಸ್ತ್ರಗಳ ಮೇಲೆ ಗ್ರಂಥಗಳನ್ನು ರಚಿಸಿರುವು ದಲ್ಲದೆ ಹರಿದಾಸರು, ಭಗವಾನ್ ಬುದ್ಧ, ರಾಮಕೃಷ್ಣ ಪರಮಹಂಸ, ಗಾಂಧೀಜಿ ಯವರ ತತ್ವಗಳನ್ನು ಕುರಿತು ಬರೆದಿದ್ದಾರೆ.

**ಬಿ. ಶಿವಮೂರ್ತಿಶಾಸ್ತ್ರಿ[1] :** ವಿದ್ವಾಂಸರು, ಕೀರ್ತನಕಾರರು ಹಾಗೂ ಪತ್ರಿಕೋದ್ಯಮಿಗಳು. ನಾಡು, ನುಡಿಗಾಗಿ ಅಪಾರ ಸೇವೆ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. (1956–64)

ಇವರ ಬಹುಮುಖ ಸೇವೆಯನ್ನು ಗುರುತಿಸಿ ಕರ್ನಾಟಕ ವಿಶ್ವವಿದ್ಯಾಲಯ 1975ರಲ್ಲಿ ಗೌರವ ಡಾಕ್ಟರೇಟ್ ನೀಡಿ ಗೌರವಿಸಿತ್ತು.

'ಶರಣ ಸಾಹಿತ್ಯ' ಇವರು ಪ್ರಾರಂಭಿಸಿ (1938) ದೀರ್ಘಕಾಲ ನಡೆಸಿಕೊಂಡು ಬಂದ ಪತ್ರಿಕೆ (1972 ರವರೆಗೆ).

'ಸ್ವತಂತ್ರ ಕರ್ನಾಟಕ' ವಾರ ಪತ್ರಿಕೆಯನ್ನು 5 ವರ್ಷಕಾಲ ನಡೆಸಿದರು.

ಇವರ ಪ್ರೌಢ ಕೃತಿಗಳು : ನಿಜಗುಣದ ಪುರಾತನರ ತ್ರಿವಿಧಿ, ರಾಘವಾಂಕನ ವೀರೇಶ ಚರಿತೆ, ಕೊಂಡಗುಳಿ ಕೇಶಿರಾಜನ ಷಡಕ್ಷರ ಮಂತ್ರ ಮಹಿಮೆ. ಗುರು ಸಿದ್ಧನ ಮಾದೇಶ್ವರ ಸಾಂಗತ್ಯ ಮುಂತಾದವು.

ಇವರು ಸಂಪಾದಕರಾಗಿದ್ದ ಇತರ ಪತ್ರಿಕೆಗಳು 'ಕನ್ನಡನುಡಿ' ಹಾಗೂ 'ಪರಿಷತ್ಪತ್ರಿಕೆ.

**ಸಿದ್ಧವನಹಳ್ಳಿ ಕೃಷ್ಣಶರ್ಮ[2] :** ಪ್ರಸಿದ್ಧ ಸಾಹಿತಿ, ಸಾಹಸಿ ಪತ್ರಿಕೋದ್ಯಮಿ, ಪ್ರಚಂಡ ಸ್ವಾತಂತ್ರ್ಯ ಹೋರಾಟಗಾರ.

ಗಾಂಧೀಜಿ ಹಾಗೂ ನೆಹರೂರವರ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ರಾಜ್ಯ ಪುನರ್ವಿಂಗಡನಾ ಆಯೋಗದ ಅಧ್ಯಕ್ಷರಾಗಿ ಕರ್ನಾಟಕ ರಾಜ್ಯ ಸ್ಥಾಪನೆಗಾಗಿ ಬಹು ಶ್ರಮಿಸಿದ್ದಾರೆ. ಗಾಂಧಿ ಭಕ್ತರಾಗಿದ್ದ ಶರ್ಮರು ಕನ್ನಡದಲ್ಲಿ 'ಹರಿಜನ' ಪತ್ರಿಕೆಯನ್ನು ಹೊರತಂದ ಸಾಹಸಿಗರು.

ಪತ್ರಿಕೆಗಳೊಡನೆ ಇವರ ಸಂಪರ್ಕ ಬಹು ಹೆಚ್ಚಿನದು.

ಇವರು ಸಂಪಾದಕರಾಗಿದ್ದ ಪತ್ರಿಕೆಗಳು : ವಿಶ್ವಕರ್ನಾಟಕ, ವಾಹಿನಿ, ಜಯಕರ್ನಾಟಕ, ನವೋದಯ, ಭೂದಾನ, ಕನ್ನಡನುಡಿ ಮುಂತಾದವು.

---

1 ಜೀವಿತಕಾಲ : (1903–1976) ಜನನ ತುಮಕೂರು. ತಂದೆ : ಬಸವಯ್ಯಸ್ವಾಮಿ, ತಾಯಿ : ನೀಲಮ್ಮ.

2 ಜೀವಿತಕಾಲ : (1904–1973) ಚಿತ್ರದುರ್ಗ ಜಿಲ್ಲೆಯ ಸಿದ್ಧವನಹಳ್ಳಿಯಲ್ಲಿ ಜನನ. ತಂದೆ : ರಂಗಾಚಾರ್ಯ, ತಾಯಿ : ಶೇಷಮ್ಮ.

ಇವರು ಕನ್ನಡ ಸಾರಸ್ವತ ಲೋಕಕ್ಕೆ ನೀಡಿರುವ ಕೃತಿಗಳು: ಯತಿರಾಜ ರಾಮಾನುಜ, ಪರ್ಣಕುಟಿ, ವಾರ್ಧಾಯಾತ್ರೆ, ನವೋದಯ ಯಾತ್ರೆ, ರಾಮನಾಮ, ಆಶ್ರಯ ಚೇತನ, ಬೆಂಗಳೂರಿನಲ್ಲಿ ವಿನೋಬಾ, ಭೂದಾನ ದೀಪಮಾಲೆ, ಕುಲದೀಪಕರು, ರಾಜೇಂದ್ರ ಪ್ರಸಾದ್, ಮೋತಿಲಾಲ್ ನೆಹರು, ಕಸ್ತೂರಿ ಬಾ, ಕೆ. ಎಂ. ಮುನ್ಷಿಯವರ 'ಕೃಷ್ಣಾವತಾರ' ಕನ್ನಡಕ್ಕೆ ಅನುವಾದಿಸಿದ್ದಾರೆ.

**ಡಾ|| ಎಂ. ಶಿವರಾಂ[1]:** ವೃತ್ತಿಯಿಂದ ಡಾಕ್ಟರಾದರೂ ಪ್ರವೃತ್ತಿಯಲ್ಲಿ ಲೇಖಕರು. ಹಾಸ್ಯ, ವಿಡಂಬನ ಕ್ಷೇತ್ರದಲ್ಲಿ ಮರೆಯಲಾಗದ ಹೆಸರು.

'ಕೊರವಂಜಿ' ಕನ್ನಡ ಪತ್ರಿಕಾಕ್ಷೇತ್ರದಲ್ಲಿ ಎಂದೂ ಹಸಿರಾಗುಳಿಯುವ ಪತ್ರಿಕೆ. ಇದನ್ನು 25 ವರ್ಷಗಳಷ್ಟು ದೀರ್ಘಕಾಲ ನಡೆಸಿದ ಶ್ರೇಯಸ್ಸು ಇವರದು (1942 ರಿಂದ 1967).

ಇವರು ಕನ್ನಡ ಸಾರಸ್ವತ ಲೋಕಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಾರೆ. ರಾಜ್ಯ ಸರಕಾರ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ನೀಡಿ ಗೌರವಿಸಿವೆ.

ಮುಖ್ಯ ಕೃತಿಗಳು: ತುಂಜಿ ಮೀರಿದುದು (ಹಾಸ್ಯ ಬರಹಗಳ ಸಂಕಲನ), ಇಂದಾನೊಂದು ಕಾಲದಲ್ಲಿ (ವಿಡಂಬನ), ಕಾರ್ತೀಕಸೋಮವಾರ (ಕಾದಂಬರಿ), ಬುದ್ಧೋಜಿಯ ಕಥೆಗಳು, 'ಮನೋನಂದನ' ವೈದ್ಯಕೀಯ ಹಿನ್ನೆಲೆಯ ಕೃತಿ, 'ಮನಮಂಥನ' ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿರುವ ಕೃತಿ. (1976) ; 'ಉಲಿಗಾಳು', 'ಥಳಕು-ತೆಣಕು', 'ಪಂಪಾಪತಿಯ ಕೃಪೆ', 'ಮಧುವನದಲ್ಲಿ ಮೇಳ' (ಐತಿಹಾಸಿಕ ಕಾದಂಬರಿಗಳು).

**ಕೆ. ಗೋಪಾಲಕೃಷ್ಣ ರಾವ್[2]:** ಪ್ರಸಿದ್ಧ ಪತ್ರಿಕೆಗಳಲ್ಲಿ ಒಂದಾಗಿದ್ದ 'ಜೀವನ'ದ ಸಂಪಾದಕತ್ವವನ್ನು ಹಲವು ವರ್ಷ ಯಶಸ್ವಿಯಾಗಿ ನಿರ್ವಹಿಸಿದ ಯಶಸ್ಸು ಇವರದು. ಇವರು ಒಳ್ಳೆಯ ಸಾಹಿತಿಗಳೂ ಹೌದು.

ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಪೂರೈಸಿ ಡಿಗ್ರಿ ಪಡೆದುಕೊಂಡನಂತರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದುಡಿದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ 1956 ರಿಂದ 1961 ರ ತನಕ ಸೇವೆ ಸಲ್ಲಿಸಿದ್ದಾರೆ.

ಇವರ ಕೃತಿಗಳು: ಬಂಗಾರದ ಡಾಬು, ನಟಿ, ಉಡುಗೊರೆ, ಅಯ್ಯೊ ಹತ್ತು ಕತೆಗಳು (ಕಥಾ ಸಂಕಲನಗಳು), ಅಪರಾಧಿ, ರುಗ್ಣಶಯ್ಯೆ, ಚಿರಸಮಸ್ಯೆ. ಕನ್ಯಾರ್ಥಿ. ಸಾಕುಕೂಸು,

---

1 ಜೀವಿತಕಾಲ: (1905-1984) ಬೆಂಗಳೂರು ಮೆಡಿಕಲ್ ಕಾಲೇಜನ್ನು ಸ್ಥಾಪಿಸುವಲ್ಲಿ, ವಾಣಿವಿಲಾಸ ಆಸ್ಪತ್ರೆಯ ಅಭಿವೃದ್ಧಿ ಕಾರ್ಯದಲ್ಲಿ, ಕರ್ನಾಟಕ ಅಂಗವಿಕಲರ ಸಂಘದ ಅಭಿವೃದ್ಧಿ ಕಾರ್ಯದಲ್ಲಿ ಅನುಪಮ ಸೇವೆಗೈದಿದ್ದಾರೆ.

2 ಜೀವಿತಕಾಲ: (1906-1967)

ಆಶೆ–ನಿರಾಶೆ (ನಾಟಕಗಳು) ; ಕುಮಾರಕೃಪ (ಕವನ ಸಂಗ್ರಹ) ; ಆಧುನಿಕ ಗದ್ಯ ಸಾಹಿತ್ಯ (ವಿಮರ್ಶೆ) ; 'sisters' ಇದು 'ಆಶೆ–ನಿರಾಶೆ'ಯ ಇಂಗ್ಲೀಷ್ ಅನುವಾದ.

**ಮಾ. ಸ. ಚೌಡಪ್ಪ**[1] : (ಮಾಯಸಂದ್ರ ಸಾರಸೀದೇಶೀರಯ್ಯ ಚೌಡಪ್ಪ) ಪ್ರಜಾಮತ, ಕಥಾಂಜಲಿ ಪತ್ರಿಕೆಗಳ ಸಂಪಾದಕರಾಗಿ ಹಲವು ವರ್ಷಕಾಲ ಅಘೋಘ ಸೇವೆಸಲ್ಲಿಸಿದ್ದ ಚೌಡಪ್ಪನವರು ಆಕಾಶವಾಣಿಯಲ್ಲಿ ನಾಟಕ ನಿರ್ದೇಶಕರಾಗಿಯೂ ದುಡಿದಿದ್ದಾರೆ. ನಾಟಕಕಾರರಾಗಿ, ನಿರ್ದೇಶಕರಾಗಿ, ನಟರಾಗಿ ನಾಟಕರಂಗಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಕಿರಿಯರ ವಿಶ್ವಕೋಶ 'ಜ್ಞಾನಗಂಗೋತ್ರಿ'ಯ ರಚನೆಯಲ್ಲಿ ಅದಕ್ಕೆ ಒಂದು ಪರಿಪೂರ್ಣರೂಪ ಕೊಡಲು ಬಹಳ ಶ್ರಮಿಸಿದ್ದಾರೆ.

ಇವರ ಕೃತಿಗಳು : ಚಂದ್ರಗುಪ್ತ, ಕುಂತೀ, ಶ್ರೀಕೃಷ್ಣಭೂಪಾಲ, ಕುಮಾರ ಸಂಭವ ಮುಂತಾದವು.

'ಶ್ರೀಕೃಷ್ಣಭೂಪಾಲ'ಕ್ಕೆ ರಾಜ್ಯ ಸರ್ಕಾರದ ಪ್ರಶಸ್ತಿ ಲಭಿಸಿವೆ.

**ಗೌರೀಶ ಕಾಯ್ಕಿಣಿ**[2] : ಅಧ್ಯಾಪಕ ವೃತ್ತಿಯಲ್ಲಿದ್ದು ಸಾಹಿತಿಯಾಗಿ ಪತ್ರಕರ್ತರಾಗಿ ಕನ್ನಡ ನುಡಿಗೆ ಅಪಾರ ಸೇವೆ ಮಾಡಿದ್ದಾರೆ.

ಇವರು ಸಂಪಾದಕರಾಗಿದ್ದ ಪತ್ರಿಕೆಗಳು : 'ಬೆಳಕು', 'ನಾಗರಿಕ'.

ಇವರದು ಬಹುಮುಖ ಪ್ರತಿಭೆ. ಕಥೆ, ಕಾದಂಬರಿ, ಕವನ, ಶಿಶು ಸಾಹಿತ್ಯ, ಜೀವನ ಚರಿತ್ರೆ ಹಾಗೂ ವೈಜ್ಞಾನಿಕ ಸಂಬಂಧ ಕೃತಿಗಳನ್ನೂ ರಚಿಸಿದ್ದಾರೆ.

ಮುಖ್ಯ ಕೃತಿಗಳು : ಮಾರ್ಕ್ಸವಾದ, ಬಾಳಿನ ಗುಟ್ಟು, ಭಾರತೀಯ ವಿಜ್ಞಾನಿಗಳು, ಗೋಕರ್ಣ, ಪಶ್ಚಿಮದ ಪ್ರತಿಭೆ, ಡಾ|| ಹೋಮಿ ಬಾಬ, ಸರ್ ಜಗದೀಶ ಚಂದ್ರಬೋಸ್, ಕ್ರೌಂಚಧ್ವನಿ, ಯಶೋಧರಾ, ಮಣ್ಣಿನ ಮನುಷ್ಯ, ಮನೋವಿಜ್ಞಾನದ ರೂಪರೇಖೆಗಳು, ಬಿಳಿ ಕೊಕ್ಕರೆ, ವಿಶ್ವದ ಆಖ್ಯಾಯಿಕೆಗಳು, ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ ಮುಂತಾದವು.

**ಎಂ. ಆರ್. ಲಕ್ಷಮ್ಮ**[3] : ಇವರದು ಬಹುಮುಖ ಸೇವೆ. ಸಮಾಜ ಸೇವಕಿ. ಸ್ವಾತಂತ್ರ್ಯ ಹೋರಾಟಗಾರ್ತಿ. ಪತ್ರಕರ್ತೆ, ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ಇವರು ಬಹಳ ದುಡಿದಿದ್ದಾರೆ. ಇದೇ ಸಮಿತಿಯ 'ಬೆಳಕು' ಪತ್ರಿಕೆಯ ಪ್ರಥಮ ಸಂಪಾದಕಿಯಾಗಿದ್ದ ಹೆಗ್ಗಳಿಕೆ ಇವರದು. 1945 ರಲ್ಲಿ ಕಾಂಗ್ರೆಸ್ ಪ್ರತಿನಿಧಿಯಾಗಿ ಪ್ರತಿನಿಧಿ ಸಭೆಗೆ ಆಯ್ಕೆಗೊಂಡಿದ್ದರು.

ಅಮೇರಿಕ, ಇಂಗ್ಲೆಂಡ್, ಇಟಲಿ, ಫ್ರಾನ್ಸ್, ಸ್ವಿಟ್ಜರ್ಲೆಂಡ್ ಮುಂತಾದ ದೇಶಗಳನ್ನು ಮೂರು ದಶಕಕ್ಕೂ ಹಿಂದೆ ಸುತ್ತಿ ಬಂದು ಮಹಿಳೆಯರ ಪ್ರಗತಿಗಾಗಿ ಶ್ರದ್ಧಾ

---

1 ಜೀವಿತಕಾಲ : ಜುಲೈ 1909–ಫೆಬ್ರವರಿ 1985.

2 ಜನನ : ಸೆಪ್ಟೆಂಬರ್ 13, 1913, 'ಗೋಕರ್ಣ'ದಲ್ಲಿ.

3 ಜೀವಿತಕಾಲ : (1913–1984) ತಂದೆ : ಆರ್. ರಾಮರಾವ್ ಪತಿ : ನಾರಾಯಣಮೂರ್ತಿ.

ಪೂರ್ವಕವಾಗಿ ದುಡಿಯುತ್ತಿದ್ದರು.

ಆರ್. ಕಲ್ಯಾಣಮ್ಮನವರ 'ಸರಸ್ವತಿ' ನಿಂತ ಮೇಲೆ ಮಹಿಳೆಯರಿಗಾಗಿಯೇ ಇವರು 'ಸೋದರಿ' ವಾರ ಪತ್ರಿಕೆಯನ್ನು ಪ್ರಾರಂಭಿಸಿ ಬಹು ಕಷ್ಟಪಟ್ಟು 5 ವರ್ಷ ನಡೆಸಿದರು. ಅನಂತರ ಒಂದು ವರ್ಷ ಇದನ್ನು ಮಾಸ ಪತ್ರಿಕೆಯಾಗಿ ನಡೆಸಿದ್ದರು. ಮಕ್ಕಳ ಶಿಕ್ಷಾಭ್ಯಾಸಕ್ಕೂ ಈಕೆ ಬಹಳ ಆಸ್ಥೆ ವಹಿಸಿದ್ದರು. ಸಾಹಿತ್ಯದಲ್ಲೂ ಆಸಕ್ತಿ ಇದ್ದ ಈಕೆ ಹಲವಾರು ಕಥೆಗಳನ್ನು ರಚಿಸಿದ್ದಾರೆ. ಗಂಡನ ಜೊತೆಯಲ್ಲಿ ಊರೂರು ಸುತ್ತಿ ಜನಪದ ಸಾಹಿತ್ಯ ಸಂಗ್ರಹಿಸಿದ್ದರು.

**ಎಂ. ಜೀವನ :** ಹಳೆಯ ತಲೆಮಾರಿನ ಪತ್ರಕರ್ತರು ಹಾಗೂ ಜನಪ್ರಿಯ ಸಾಹಿತಿಗಳು. ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಹಲವಾರು ಪತ್ರಿಕಾಲಯಗಳಲ್ಲಿ ವಿವಿಧ ಕಾರ್ಯಗಳನ್ನು ನಿರ್ವಹಿಸಿದ್ದಾರೆ.

ಇವರು ದುಡಿದಿರುವ ಪತ್ರಿಕೆಗಳು : 'ತಾರಕ' (ಮರಾಠಿ ಚಲನಚಿತ್ರ ಪತ್ರಿಕೆ), 'ತರಂಗ' (ಚಲನಚಿತ್ರ ಮಾಸಿಕ), ವಿಜಯ (ದಿನಪತ್ರಿಕೆ), 'ಹುಬ್ಬಳ್ಳಿ ಸಮಾಚಾರ' (ದಿನಪತ್ರಿಕೆ) 'ಮಹಾನಗರ ವಾರ್ತೆ' (ವಾರಪತ್ರಿಕೆ), 'ಪ್ರಪಂಚ' ಪತ್ರಿಕೆಯಲ್ಲಿ ಪ್ರಸ್ತುತ ಇವರು ದುಡಿಯುತ್ತಿದ್ದಾರೆ.

ಇವರ ಕಾದಂಬರಿ 'ಹುತಾತ್ಮನ ಹೆಂಡತಿ' ರಾಜಕೀಯ ಕ್ಷೇತ್ರದಲ್ಲಿ ಕೋಲಾಹಲ ವೆಬ್ಬಿಸಿದೆ.

ಇವರಿಗೆ ರಾಜ್ಯ ಪತ್ರಿಕಾ ಅಕಾಡೆಮಿ 1987ರ ಪ್ರಶಸ್ತಿ ನೀಡಿ ಗೌರವಿಸಿದೆ.

**ಪಾಡಿಗಾರು ವೆಂಕಟರಮಣಾಚಾರ್ಯ (ಪಾವೆಂ)* :** ಇವರು ಲಾಂಗೂಲಾಚಾರ್ಯರೆಂದೇ ಹೆಚ್ಚು ಜನಪ್ರಿಯರಾಗಿದ್ದಾರೆ. ಪತ್ರಿಕೋದ್ಯಮದೊಡನೆ ಇವರದು ಆತ್ಮೀಯ ನಂಟು. 'ಸಂಯುಕ್ತ ಕರ್ನಾಟಕ', 'ಅಂತರಂಗ', 'ಕರ್ಮವೀರ', 'ಕಸ್ತೂರಿ' ಗಳಲ್ಲಿ ಬಹುಕಾಲ ದುಡಿದು ಇದೀಗ ನಿವೃತ್ತರಾಗಿದ್ದಾರೆ. ಆದರೂ ಪತ್ರಿಕೋದ್ಯಮದಿಂದ ಸಂಬಂಧವನ್ನು ಕಳೆದುಕೊಂಡಿಲ್ಲ. ಇಂದೂ ವಿವಿಧ ರೀತಿಯ ಲೇಖನಗಳನ್ನು ಪತ್ರಿಕೆಗಳಿಗೆ ಬರೆಯುತ್ತಲೇ ಇದ್ದಾರೆ. ಪತ್ರಿಕೆಗಳಿಗೆ 1,500ಕ್ಕೂ ಹೆಚ್ಚು ಹಾಸ್ಯ ಲೇಖನಗಳನ್ನು ಬರೆದಿರುವ ಹಿರಿಮೆ ಇವರದು. ಒಳ್ಳೆಯ ಲೇಖಕರಾಗಿದ್ದ ಇವರು ಸಾರಸ್ವತ ಕ್ಷೇತ್ರವನ್ನು ಸಂಪನ್ನಗೊಳಿಸಿದ್ದಾರೆ.

ಕೃತಿಗಳು : ರಶಿಯಾದ ರಾಜ್ಯ ಕ್ರಾಂತಿ, ಸ್ವತಂತ್ರ ಭಾರತ : 25 ವರ್ಷಗಳು, (ರಾಜಕೀಯ ಪುಸ್ತಕಗಳು), ಪ್ರಹಾರ, ಲೋಕದ ಡೊಂಕು, ವಿಪರೀತ (ನಗೆ ಬರಹಗಳು).

ಹಲವಾರು ಕವನಗಳನ್ನು ಬರೆದಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ 1981ರಲ್ಲಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---

* ಜನನ : 1915, ಉಡುಪಿ.

**ಖಾದ್ರಿ ಶಾಮಣ್ಣ :** ಖಾರವಾದ 'ಸಂಪಾದಕೀಯ'ಕ್ಕೆ ಹೆಸರಾದ ಖಾದ್ರಿ ಶಾಮಣ್ಣ ನುರಿತ ಪತ್ರಿಕಾಕರ್ತರು.

ಪ್ರಜಾವಾಣಿಯಲ್ಲಿ ಸುದ್ದಿ ಸಂಪಾದಕರಾಗಿದ್ದು ಅನಂತರ 'ಸಂಯುಕ್ತ ಕರ್ನಾಟಕ' ದಲ್ಲಿ ಸಂಪಾದಕರಾಗಿ ಕೆಲವರ್ಷ ಕಾರ್ಯ ನಿರ್ವಹಿಸಿ ಈಗ 'ಕನ್ನಡ ಪ್ರಭ'ದ ಸಂಪಾದಕ ರಾಗಿ ಅದರ ಪ್ರವರ್ಧಮಾನಕ್ಕೆ ಕಾರಣರಾಗಿದ್ದಾರೆ. ಪ್ರಸ್ತುತ ಶ್ರೀಯುತರು ವಿಧಾನ ಪರಿಷತ್ತಿನ ಸದಸ್ಯರು. ಕರ್ನಾಟಕ ಪತ್ರಿಕಾ ಅಕಾಡೆಮಿಯ ಅಧ್ಯಕ್ಷರಾಗಿದ್ದರು.

ಇವರು ಒಳ್ಳೆಯ ಲೇಖಕರೂ ಹೌದು.

ಪತ್ರಿಕಾ ಸಂಘದಲ್ಲಿ ಇವರು ನಿರ್ವಹಿಸಿರುವ ಹುದ್ದೆಗಳು : ಮೈಸೂರು ಪತ್ರಕರ್ತರ ಸಂಘದ ಅಧ್ಯಕ್ಷ, ಭಾರತೀಯ ಪತ್ರಕರ್ತರ ಸಂಘದ ಕಾರ್ಯದರ್ಶಿ, ಮುಂತಾದವು. ಇವರು ರಾಷ್ಟ್ರೀಯ ನಾಗರಿಕ ಸ್ವಾತಂತ್ರ್ಯ ಸಂಘದ ರಾಜ್ಯಶಾಖೆಯ ಅಧ್ಯಕ್ಷರೂ ಹೌದು.

ಬ್ರಿಟನ್ನಿನ ಕಾರ್ಡಿಫ್‌ನಲ್ಲಿ ಪ್ರಾಯೋಗಿಕ ಪತ್ರಿಕಾ ವೃತ್ತಿ ತರಬೇತಿ ಪಡೆದು ಪಶ್ಚಿಮ ಜರ್ಮನಿ, ರಷ್ಯ, ಅಮೇರಿಕಾ' ಜಪಾನ್‌ಗಳಲ್ಲಿ ಸಂಚರಿಸಿದ ವಿರಳ ಪತ್ರಕರ್ತರಲ್ಲಿ ಶಾಮಣ್ಣನವರು ಅಗ್ರಗಣ್ಯರು.

ಪತ್ರಿಕಾ ರಂಗದಲ್ಲಿ ಇವರ ಸೇವೆ ನಾಲ್ಕು ದಶಕಕ್ಕೂ ಹೆಚ್ಚಿನದು.

ಇವರು ಉಗ್ರ ಸಂಪಾದಕೀಯಕ್ಕೆ ಪ್ರಸಿದ್ಧರಾಗಿರುವಂತೆಯೇ ಕಟ್ಟಾ ದೇಶಾಭಿಮಾನ ಅಭಿವ್ಯಕ್ತಿಗೂ ಹೆಸರಾಂತರು.

ಕೃತಿಗಳು : ಮಹಾತ್ಮರ ಅರ್ಥವಿಚಾರ ; ರಾಜನೀತಿ, ಆಚಾರ್ಯ ಭಾವೆಯವರ ಭೂದಾನಯಜ್ಞ ಸಮಗ್ರದರ್ಶನ (ಅನುವಾದಗಳು) ; ಜಾನ್‌ಕೆನಡಿಯನ್ನು ಕುರಿತ ವ್ಯಕ್ತಿ ಚಿತ್ರ ; ಅಮೇರಿಕಾದ ಕಾರ್ಮಿಕ ವರ್ಗದ ಕಥೆ, ವಿನೋಬಾ ಕಂಡ ಗಾಂಧಿ, ಬರೋಡ ಡೈನಮೆಂಟ್ ಸಂಚು, ರಾಮಮನೋಹರ ಲೋಹಿಯ (ಇತರ ಕೃತಿಗಳು).

**ಅರ್ಚಿಕ ವೆಂಕಟೇಶ* :** ಪ್ರಸಿದ್ಧ ಪತ್ರಿಕೋದ್ಯಮಿ, ಹೆಸರಾಂತ ಶಿಶು ಸಾಹಿತ್ಯ ರಚನಕಾರ, ಒಳ್ಳೆಯ ಕವಿ, ಜನಪ್ರಿಯ ಕಾದಂಬರಿಕಾರ.

ಪತ್ರಿಕೋದ್ಯಮದ ಮೇಲೆ ಇವರಿಗೆ ಚಿಕ್ಕವಯಸ್ಸಿನಿಂದಲೂ ಆಸಕ್ತಿ. ವಿದ್ಯಾರ್ಥಿ ಯಾಗಿದ್ದಾಗಲೇ ಇವರು ಪ್ರಾರಂಭಿಸಿದ ಕೈಬರಹದ ಪತ್ರಿಕೆ 'ನನ್ನ ನುಡಿ'.

ಅನಂತರ ಸಂಪರ್ಕ ಬೆಳೆಸಿಕೊಂಡು ಕೆಲಕಾಲ ದುಡಿದ ಪತ್ರಿಕೆಗಳು 'ಸ್ವತಂತ್ರ ಕರ್ನಾಟಕ' ಮತ್ತು ಶರಣ ಸಾಹಿತ್ಯ. ಎಚ್.ಎ.ಎಲ್.ನಲ್ಲಿ ಕೆಲಕಾಲ ದುಡಿದು ಅನಂತರ ಮತ್ತೆ ಪತ್ರಿಕಾವೃತ್ತಿಗೇ ಮರಳಿದರು. ಸಿದ್ದವನಹಳ್ಳಿ ಕೃಷ್ಣಶರ್ಮರ 'ವಿಶ್ವ ಕರ್ನಾಟಕ' ಪತ್ರಿಕಾಲಯ ಸೇರಿ ಅಲ್ಲಿನ ಸಂಪಾದಕ ಮಂಡಲಿಯಲ್ಲಿ 15 ವರ್ಷಕ್ಕೂ ಹೆಚ್ಚು ಕಾಲ ದುಡಿದು, ಕೊನೆಯ ಒಂದೆರಡುವರ್ಷ ಅದರ ಸಂಪಾದಕರೂ ಆಗಿದ್ದರು.

---

* ಜೀವಿತಕಾಲ : (1916-1977) ಧಾರವಾಡದಲ್ಲಿ ಜನನ. ತಂದೆ : ಗೋಪಾಲಕೃಷ್ಣಾಚಾರ್ಯ, ತಾಯಿ : ರಾಧಾಬಾಯಿ.

ಪತ್ರಿಕೆ ನಿಂತ ಮೇಲೆ 'ಸಂಯುಕ್ತ ಕರ್ನಾಟಕ' ಕಾರ್ಯಾಲಯ ಸೇರಿ ನಿವೃತ್ತಿಯ ತನಕ ಅಲ್ಲೇ ಸೇವೆಗೈದರು.

ಜೀವನಕ್ಕೆ ಪತ್ರಿಕಾವೃತ್ತಿ ಕೈಗೊಂಡಿದ್ದರೂ ಸಾಹಿತ್ಯಾಸಕ್ತಿ, ಬರೆಯುವ ಹುಮ್ಮಸ್ಸು ಅವರ ಜೀವನದುದ್ದಕ್ಕೂ ಜಾಗೃತವಾಗಿಯೇ ಇತ್ತು. ಸಾರಸ್ವತ ಕ್ಷೇತ್ರವನ್ನು ತಮ್ಮ ಬಹುಮುಖ ಪ್ರತಿಭೆಯಿಂದ ಸಂಪನ್ನಗೊಳಿಸಿದ್ದಾರೆ.

ಕೃತಿಗಳು : ಚಲೋದಿಲ್ಲಿ, ರವಿಶಂಕರ, ಅಸ್ಥಿಪಂಜರ (ಕಾದಂಬರಿ) ; ಧ್ರುವನಕ್ಷತ್ರ, ಜೀವನ ಸಂಗ್ರಾಮ (ಕಥಾ ಸಂಕಲನಗಳು) ; ಪೂರ್ಣಚಂದ್ರ, ಶಬ್ದ ಶಿಲ್ಪ, ಶಿಲಾಪಕ್ಷ (ಕವನ ಸಂಕಲನಗಳು) ; ವೀರ್ ಸಾದಿಕ್, ಪಂಗನಾಮ. ಬ್ಲಾಕ್ ಮಾರ್ಕೆಟ್ (ರಂಗ ನಾಟಕಗಳು) ; ಭಾತೃ ಪ್ರೇಮ, ಪಾನಕ ಕೊಸಂಬರಿ, ಹರಿದ ಚಂದ್ರ, ಪ್ರಹ್ಲಾದನ ಪ್ರಾಣಿ ಪತ್ತು, ಸಾವನದುರ್ಗ, ಜಯ–ವಿಜಯ (ಮಕ್ಕಳ ನಾಟಕಗಳು) ; ಸ್ವಾಮಿ ವಿವೇಕಾ ನಂದ, ಸುಭಾಷ್‌ಚಂದ್ರ ಬೋಸ್, ಮದನಮೋಹನ ಮಾಳವೀಯ, ರಮಣಮಹರ್ಷಿ, ರಾಮನ ಕಥೆ (ಶಿಶು ಸಾಹಿತ್ಯ).

'ಭಕ್ತಿ ಗೀತಾಮೃತ', 'ರ್‍ಯಾಂಡಮ್ ಥಾಟ್ಸ್' ಇಂಗ್ಲೀಷ್ ಕೃತಿಗಳು.

**ಕುಮಾರ ವೆಂಕಣ್ಣ**[1] **:** ಅಪಾರ ಸಂಖ್ಯೆಯಲ್ಲಿ ಶಿಶುಸಾಹಿತ್ಯ ರಚಿಸಿರುವ ಕುಮಾರ ವೆಂಕಣ್ಣನವರು ಸ್ವೀಕರಿಸಿರುವ ವೃತ್ತಿ ಪತ್ರಿಕೋದ್ಯಮ. ದುಡಿದಿರುವ ಪತ್ರಿಕೆಗಳು 'ಕಂಠೀರವ', 'ವಿಶ್ವಕರ್ನಾಟಕ', 'ತಾಯಿನಾಡು', 'ಕಾಂಗ್ರೆಸ್ ಸಂದೇಶ', ಈಗ ಸಂಪಾದಕರಾಗಿರುವ ಪತ್ರಿಕೆ 'ಪಾಪಚ್ಚಿ' (ಮಕ್ಕಳ ಪತ್ರಿಕೆ).

ಇವರು ಒಳ್ಳೆಯ ಕವಿಗಳು, ನಾಟಕಕಾರರು ಹಾಗೂ ಕಥೆಗಾರರು, ಇದಲ್ಲದೆ ಒಳ್ಳೆಯ ನೃತ್ಯ ಕಲಾವಿದ, ಸ್ವಾತಂತ್ರ್ಯ ಹೋರಾಟಗಾರ, ಕಾರ್ಮಿಕ ಸಂಘಟಕ ಹಾಗೂ ಕಲಾ ವಿಮರ್ಶಕ.

ಬಹುಮುಖ ಪ್ರತಿಭೆಯ ಶ್ರೀಯುತರು ಕನ್ನಡ ಸಾರಸ್ವತ ಲೋಕಕ್ಕೆ ಅಪಾರ ಸಂಖ್ಯೆಯ ಕೊಡುಗೆಗಳನ್ನು ನೀಡಿದ್ದಾರೆ. ಕಾದಂಬರಿಗಳು 12, ಮಕ್ಕಳ ಪುಸ್ತಕಗಳು 20, ಇತರ ಗ್ರಂಥಗಳು 40, ಭಾರತೀಯ ಜಾನಪದ ನೃತ್ಯಗಳು, ಕರ್ನಾಟಕ ಜಾನಪದ ನೃತ್ಯಗಳು, ಕರ್ನಾಟಕ ಚಲನಚಿತ್ರ ಇತಿಹಾಸ—ವಿಶೇಷ ಪುಸ್ತಕಗಳು.

ಮಕ್ಕಳಿಗಾಗಿ ಒಂದು ಸಾವಿರಕ್ಕೂ ಹೆಚ್ಚು ಕಥೆಗಳನ್ನು ರಚಿಸಿದ್ದಾರೆಂದರೆ ಅವರು ಶಿಶು ಸಾಹಿತ್ಯಕ್ಕೆ ನೀಡಿರುವ ಬೃಹತ್ ಸೇವೆಯ ದರ್ಶನವಾಗುತ್ತದೆ.

**ಡಾ॥ ನಾಡಿಗ ಕೃಷ್ಣಮೂರ್ತಿ**[2] **:** ಪತ್ರಿಕಾ ಕ್ಷೇತ್ರದಲ್ಲಿ ಹೆಸರಿಸ ಬೇಕಾದ

---

1 ಜನನ : ನವೆಂಬರ್ 4, 1916, ದಕ್ಷಿಣ ಕನ್ನಡ ಜಿಲ್ಲೆಯ 'ಕ್ಯಾಲ' ಎಂಬಲ್ಲಿ. ತಂದೆ : ವಾಸುದೇವಯ್ಯ.

2 ಜೀವಿತಕಾಲ : (1921–1983) ಶಿವಮೊಗ್ಗ ಜಿಲ್ಲೆಯ 'ಅನವಟ್ಟಿ' ಗ್ರಾಮ ದಲ್ಲಿ ಜನನ. 'ಪತ್ರಿಕೋದ್ಯಮದ ಹುಟ್ಟು, ಬೆಳವಣಿಗೆ ಮತ್ತು ಅಭಿವೃದ್ಧಿ' ಪ್ರೌಢ ಪ್ರಬಂಧ ಡಾಕ್ಟರೇಟ್ ಗಳಿಸಿಕೊಟ್ಟಿದೆ (1964). 'ಅಮೇರಿಕನ್ ರಿಪೋರ್ಟರ್' ಪತ್ರಿಕೆಯ ವಿಶೇಷ ಲೇಖಕರಾಗಿದ್ದರು.

ವ್ಯಕ್ತಿ. ಇವರು ಈ ಕ್ಷೇತ್ರದ ದ್ರೋಣಾಚಾರ್ಯರು. ನಾಲ್ಕು ದಶಕಕ್ಕೂ ಹೆಚ್ಚು ಕಾಲ ನೂರಾರು ತರುಣರನ್ನು ಪತ್ರಿಕಾಕರ್ತರನ್ನಾಗಿ ನಿರ್ಮಾಣ ಮಾಡಿದ ಕೀರ್ತಿ ಇವರದು. ಅಮೇರಿಕಾದ ಮಿಸ್ಸೋರಿಯಲ್ಲಿ ಪತ್ರಿಕೋದ್ಯಮದ ಬಗ್ಗೆ ವಿಶೇಷ ಶಿಕ್ಷಣ ಪಡೆದು ಭಾರತಕ್ಕೆ ಹಿಂತಿರುಗಿದ ಶ್ರೀಯುತರು ಮಹಾರಾಜ ಕಾಲೇಜಿನಲ್ಲಿ ಪತ್ರಿಕೋದ್ಯಮ ವಿಭಾಗದ ಪ್ರವಚಕರಾದರು. ಪತ್ರಿಕೋದ್ಯಮದ ಮೇಲೇ ಅಧ್ಯಯನ ನಡೆಸಿ ಡಾಕ್ಟರೇಟ್ ಗಳಿಸಿದರು. ಸಂದರ್ಶನ ಪ್ರಾಧ್ಯಾಪಕರಾಗಿ ವಿಶ್ವಾದ್ಯಂತ ಸುತ್ತಿದ್ದಾರೆ. ಮೈಸೂರು ಸರಕಾರ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

ಇವರು ಒಳ್ಳೆಯ ಸಾಹಿತಿಗಳೂ ಹೌದು.

ಕೃತಿಗಳು : 'ಮಹಾತ್ಮಾ ಗಾಂಧಿ ಅ್ಯಂಡ್ ಅದರ್ ಮಾರ್ಟೈರ್ಸ್' ಅಮೇರಿಕಾ ದಿಂದ ಪ್ರಕಟಗೊಂಡಿದೆ. ಫ್ರಾಂಕ್ ಲ್ಯೂಥರ್ ಮಾಟ್ ಬರೆದ 'ಅಮೇರಿಕನ್ ಜರ್ನಲಿಸಮ್' ಕನ್ನಡಕ್ಕೆ ಅನುವಾದಿಸಿದ್ದಾರೆ.

'ಮಾನಸ ಗಂಗೋತ್ರಿ' ಇವರು ನಡೆಸಿದ ಪ್ರಾಯೋಗಿಕ ಪತ್ರಿಕೆ. ಕರ್ನಾಟಕದಲ್ಲಿ ಪ್ರಾರಂಭವಾದ ಪತ್ರಿಕಾ ಅಕಾಡೆಮಿಗೆ ಪ್ರಥಮ ಅಧ್ಯಕ್ಷರಾಗಿದ್ದ ಹೆಗ್ಗಳಿಕೆ ಇವರದು.

**ಪಾಟೀಲ ಪುಟ್ಟಪ್ಪ**[1] : 'ಪಾಪು' ಕಾವ್ಯನಾಮ.

ಹಿರಿಯ ಪತ್ರಿಕಾಕರ್ತರು ಅಮೇರಿಕಾಕ್ಕೆ ಹೋಗಿ ಪತ್ರಿಕೋದ್ಯಮದಲ್ಲಿ ಹೆಚ್ಚಿನ ಮಾಹಿತಿ ಗಳಿಸಿ ಬಂದಿದ್ದಾರೆ. 'ವಿಶ್ವವಾಣಿ' (ದೈನಿಕ) ಮತ್ತು 'ಪ್ರಪಂಚ' ವಾರಪತ್ರಿಕೆ ಹಾಗೂ 'ವಿಶಾಲ ಕರ್ನಾಟಕ'ದ ಸಂಪಾದಕರಾಗಿದ್ದರು.

ಇವರು ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿ ಕನ್ನಡ ನಾಡು ಮತ್ತು ನುಡಿಯ ಏಳಿಗೆಗಾಗಿ ಬಹಳವಾಗಿ ಶ್ರಮಿಸುತ್ತಿದ್ದಾರೆ. ಇವರ ಬರವಣಿಗೆ ತೀರ ತೀಕ್ಷ್ಣ. ಮುಟ್ಟಿದರೆ ಬೆರಳು ಕುಯ್ಯುವಂಥ ಕ್ಷೌರದ ಅಲಗಿನ ಹರಿತ. ಇವರ ಕೃತಿಗಳ ಸಂಖ್ಯೆ ಸುಮಾರು 20.

ಕರ್ನಾಟಕ ರಾಜ್ಯದ ರಾಜ್ಯೋತ್ಸವ ಪ್ರಶಸ್ತಿ ವಿಜೇತರು.

ಮುಖ್ಯ ಕೃತಿಗಳು : ಪ್ರಪಂಚ ಪರಿಚಯ, ಧರ್ಮದೃಷ್ಟಿ, ನಮ್ಮ ದೇಶ. ನಮ್ಮ ಜನ, ಗವಾಕ್ಷತೆರೆಯಿತು, ಶಿಲಾಬಾಲಿಕೆ, ಸಾವಿನ ಮೇಜವಾನಿ, ನೆಲದ ನಕ್ಷತ್ರಗಳು (ಜೀವನ ಚಿತ್ರ).

**ಮ. ಶ್ರೀಧರಮೂರ್ತಿ**[2] : (ಮಂಡಿಹಳ್ಳಿ ಶ್ರೀಧರಮೂರ್ತಿ) ಹಿರಿಯ ಪತ್ರಕರ್ತ ಹಾಗೂ ಖ್ಯಾತ ಲೇಖಕ, ಪ್ರಜಾವಾಣಿ ದಿನಪತ್ರಿಕೆಯಲ್ಲಿ ಸುಮಾರು

---

1 ಜನನ : ಜನವರಿ 14, 1921, ರಾಣೆಬೆನ್ನೂರು ತಾಲ್ಲೂಕಿನ ಹಂಗೇರಿಯಲ್ಲಿ. ನ್ಯಾಯ ಪದವಿ ನಂತರ ವಕೀಲರಾಗಿದ್ದರು. 'ಬಾಂಬೇ ಕ್ರಾನಿಕಲ್' ಮತ್ತು 'ಫ್ರೀ ಪ್ರೆಸ್'ಗಾಗಿ ಲೇಖನ ಬರೆಯುತ್ತಿದ್ದರು.

2 ಜೀವಿತಕಾಲ : ಜೂನ್ 1921 ರಿಂದ ನವೆಂಬರ್ 1979.

23 ವರ್ಷ ಸೇವೆ ಸಲ್ಲಿಸಿದ್ದಾರೆ, ಹಲವಾರು ಒಳ್ಳೆಯ ಕೃತಿಗಳನ್ನು ರಚಿಸಿದ್ದಾರೆ. ಕೆಲಕಾಲ 'ಸರ್ವೋದಯ' ಪತ್ರಿಕೆಯ ಸಂಪಾದಕರಾಗಿದ್ದರು.

ಮುಖ್ಯ ಕೃತಿಗಳು: ಗಣಪತಿ, 64 ಕಲೆಗಳು, ನೆರೆಹೊರೆಯವರು, ವಾತ್ಸ್ಯಾಯನ ಕಾಮಸೂತ್ರ, ಕೊಕ್ಕೋಕನ ರತಿ ರಹಸ್ಯ, ಗಾಣಗಾಪುರ, ಚಿತ್ರದುರ್ಗ, ಹೊಯ್ಸಳೇಶ್ವರ ವಿಷ್ಣುವರ್ಧನ, ಹನುಮಂತ ಮುಂತಾದವು.

**ಟಿ. ಎಸ್. ರಾಮಚಂದ್ರರಾವ್**[1]: (ತೀರ್ಥಹಳ್ಳಿ ಸೂರ್ಯನಾರಾಯಣ ರಾಮಚಂದ್ರರಾವ್) ಪ್ರಸಿದ್ಧ ಪತ್ರಿಕೋದ್ಯಮಿ 'ಕೊರವಂಜಿ' ಗೆ ಲೇಖನ ಬರೆಯಲು ಪ್ರಾರಂಭಿಸಿ 'ಪ್ರಜಾವಾಣಿ' ಪತ್ರಿಕೆ ಸೇರಿ (1948), ಉಪ ಸಂಪಾದಕರಾಗಿ ಅನಂತರ ಸಂಪಾದಕ ಹುದ್ದೆಗೇರಿ ಪತ್ರಿಕೆಯನ್ನು ಜನಪ್ರಿಯತೆಯ ಉತ್ತುಂಗ ಶಿಖರಕ್ಕೇರಿಸಿದರು. ಇವರು ಬರೆಯುತ್ತಿದ್ದ 'ಛೂ ಬಾಣ' ಅತ್ಯಂತ ಜನಪ್ರಿಯ 'ಅಂಕಣ'ವಾಗಿತ್ತು.

ಚಿಕ್ಕವಯಸ್ಸಿನಲ್ಲೇ ಇವರು ನಡೆಸಿದ ಪತ್ರಿಕೆಗಳು 'ಮಧುವನ', 'ಮೂನ್‌ಲೈಟ್'.

ಪತ್ರಕರ್ತರಾಗಿ ಶ್ರೀಯುತರು ಪಶ್ಚಿಮ ಜರ್ಮನಿ, ಡೆನ್ಮಾರ್ಕ್, ಬ್ರಿಟನ್, ಮಲಯ, ಇಂಡೋನೇಷ್ಯ, ಅಮೆರಿಕ, ಜಪಾನ್, ರಷ್ಯಾ ಮುಂತಾಗಿ ವಿಶ್ವಾದ್ಯಂತ ಸಂಚರಿಸಿ, ಅವರು ಬರೆದಿರುವ ವರದಿಗಳು ಪತ್ರಿಕೋದ್ಯಮದ ವಿದ್ಯಾರ್ಥಿಗಳಿಗೆ ಅಭ್ಯಾಸದ ಮಾದರಿಗಳಾಗಿವೆ.

ಇವರ ಕೃತಿ 'ಲೇಡಿ ಡಾಕ್ಟರ್ (ಪ್ರಹಸನ) ಬಹು ಜನಪ್ರಿಯಗೊಂಡಿದೆ.

**ಜಿ. ನಾರಾಯಣ**[2]: (ದೇಶಹಳ್ಳಿ ಜಿ. ನಾರಾಯಣ) ರಾಜಕೀಯ ಕ್ಷೇತ್ರದಿಂದ ಸಾಹಿತ್ಯ ರಂಗಕ್ಕಿಳಿದು ಯಶಸ್ಸು ಗಳಿಸಿದ ವೈಶಿಷ್ಟ್ಯ ಇವರದು. 'ವಿನೋದ' ಮುದ್ರಣಾಲಯ (1951) ಹಾಗೂ 'ವಿನೋದ' ಪತ್ರಿಕೆ ಸ್ಥಾಪಿಸಿ ಹಾಸ್ಯ ಸಾಹಿತ್ಯದ ವಿಕಾಸಕ್ಕೆ ಅವಿರತ ಶ್ರಮಿಸುತ್ತಿದ್ದಾರೆ. ಇದಕ್ಕೆ ಮುಂಚೆ ಸಂಪರ್ಕ ಇರಿಸಿಕೊಂಡಿದ್ದ ಪತ್ರಿಕೆಗಳು 'ವಾರ್ತಾ' ಮತ್ತು 'ಚಿತ್ರಗುಪ್ತ'.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಗೋಕಾಕ್ ಸಮಿತಿಯ ಸದಸ್ಯರಾಗಿ ಇವರು ಕನ್ನಡ ನಾಡುನುಡಿಗೆ ಸಲ್ಲಿಸಿರುವ ಸೇವೆ ಅಪಾರ ಹಾಗೂ ಅಮೂಲ್ಯ. 'ಕನ್ನಡವೇ ಕಾಯಕ' ಶ್ರೀ ನಾರಾಯಣರವರಿಗೆ. ಕಾರ್ಯಕುಶಲ ಕನ್ನಡ ಈ ಸೇನಾನಿಯನ್ನು

---

1 ಜೀವಿತಕಾಲ: (1922-1977) ಮಲೆನಾಡಿನ 'ತೀರ್ಥಹಳ್ಳಿ'ಯಲ್ಲಿ ಜನನ. ತಂದೆ: ಸೂರ್ಯನಾರಾಯಣ ರಾಯರು, ತಾಯಿ: ಬನಶಂಕರಮ್ಮ. 'ಟೀಯೆಸ್ಸಾರ್' ಎಂದೇ ಇವರು ಜನಪ್ರಿಯರು. ಇವರ ಪತ್ನಿ 'ಲಲಿತಾ' ಸುಸ್ಕೃತ ಪ್ರಾಧ್ಯಾಪಕಿ, ಒಳ್ಳೆಯ ಲೇಖಕಿ ಸಹ. ಎಂ. ಕೆ. ಇಂದಿರಾ ರಾಮಚಂದ್ರರಾಯರ ಸಹೋದರಿ.

2 ಜನನ: 1923, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ದೇಶಹಳ್ಳಿಯಲ್ಲಿ. ತಂದೆ: ಗಿರಿಗೌಡ, ತಾಯಿ: ಸಣ್ಣಮ್ಮ. ಪ್ರಸ್ತುತ ಶ್ರೀಯುತರು ಕರ್ನಾಟಕ ಪತ್ರಿಕಾ ಅಕಾಡೆಮಿಯ ಅಧ್ಯಕ್ಷರು.

ಅವರ ಮಿತ್ರರು ವಿಶ್ವಾಸದಿಂದ 'ಅಜಾತಶತ್ರು', 'ಕನ್ನಡದ ಉಸಿರು', ಅದ್ಭುತ ಕಾರ್ಯಶಕ್ತಿಯ ಅಪರೂಪದ ವ್ಯಕ್ತಿ', 'ಸೌಜನ್ಯಮೂರ್ತಿ', 'ಸಾತ್ವಿಕ ಶಕ್ತಿಯ ಪ್ರತೀಕ', 'ನಿಷ್ಕಾಮ ಕರ್ಮಯೋಗಿ' ಎಂದೆಲ್ಲಾ ಹೆಸರಿಸಿರುವುದು ಅರ್ಥಪೂರ್ಣವಾಗಿವೆ.

ಇವರು ಬೆಂಗಳೂರು ನಗರ ಕಾರ್ಪೊರೇಷನ್‌ನ ಮೇಯರ್ ಆಗಿ ಆಡಳಿತ ನಡೆಸುವಲ್ಲಿ ಗಳಿಸಿದ ಅನುಭವ, ಸಾಹಿತ್ಯ ಪರಿಷತ್ತಿನ ಆಡಳಿತ ನಿರ್ವಹಣೆಯಲ್ಲಿ ಬಹು ನೆರವು ನೀಡಿತು. ಯಶಸ್ಸುಗಳಿಸಲು ಸಾರ್ಥಕವಾಯಿತು.

ಇವರು ರಚಿಸಿರುವ ಕೃತಿಗಳು: ಅಕ್ಷರವ ನೀವ್ ಕಲಿಯಿರಿ (ಶತಕ), ಮಲೇರಿಯಾ ಹಾವಳಿ, ಕಬ್ಬಿನ ಕಥಾಂತರ, ರಾಷ್ಟ್ರೀಯ ಪದಗಳು, ಹೆಚ್ಚು ಬೆಳೆಯನ್ನು ಬೆಳೆಯಿರಿ (ಕಿರುಹೊತ್ತಿಗೆಗಳು).

**ಕೆ. ಎಸ್. ರಾಮಕೃಷ್ಣಮೂರ್ತಿ[1]:** ಪ್ರಸಿದ್ಧ ಪತ್ರಕರ್ತ ಹಾಗೂ ಜನಪ್ರಿಯ ಸಾಹಿತಿ. 'ಕನ್ನಡಪ್ರಭ'ದಲ್ಲಿ ಹಲವು ವರ್ಷ ದುಡಿದು ಕೊನೆಗೆ ಅದರ ಸಂಪಾದಕ ಹುದ್ದೆಗೇರಿದುದು, ಇವರ ಕರ್ತೃತ್ವ ಶಕ್ತಿಯ ದ್ಯೋತಕ.

ಕೃತಿಗಳು: ಪ್ರತಿಮೆ, ತೀರದಸಾಲ (ಕಾದಂಬರಿಗಳು); ಅದ್ಭುತ ಸಾಧನೆಗಳು, ಪೀಟರ್ ಜಂಗರ್, ಶಬ್ದ (ಇತರ ಕೃತಿಗಳು).

**ಹ. ವೆಂ. ನಾಗರಾಜರಾವ್[2]:** (ಹರವೆ ವೆಂಕಟರಾವ್ ನಾಗರಾಜರಾವ್) ಸುಮಾರು 3 ದಶಕಕ್ಕಿಂತಲೂ ಹೆಚ್ಚು ಕಾಲದಿಂದ ಪತ್ರಿಕಾರಂಗದಲ್ಲಿ ನಿಷ್ಠೆಯಿಂದ ಸೇವೆ ಸಲ್ಲಿಸಿರುವ ಹ.ವೆಂ.ನಾ. ಸಾಹಿತ್ಯರಂಗದಲ್ಲೂ ಅತ್ಯಂತ ಜನಪ್ರಿಯರಾಗಿರುವ 'ಕವಿ'. ಹೆಸರಾಂತ ಲೇಖಕ, ಪ್ರಸಿದ್ಧ 'ಸಂಪಾದಕ'.

'ಪ್ರಜಾಮತ' ವಾರಪತ್ರಿಕೆಯಲ್ಲಿ ಎರಡು ದಶಕಕ್ಕೂ ಹೆಚ್ಚು ಕಾಲ ಸಂಪಾದಕ, ಪ್ರಧಾನ ಸಂಪಾದಕರಾಗಿ ದುಡಿದ ಹೆಗ್ಗಳಿಕೆ ಇವರದು. ಪತ್ರಕರ್ತರಾಗಿ ಸಾವಿರಾರು ಪುಟಗಳಷ್ಟು ಲೇಖನ ಬರೆದಿರುವುದಲ್ಲದೆ ಅನೇಕ ಉತ್ಕೃಷ್ಟ ಸೃಜನಾತ್ಮಕ ಕೃತಿಗಳನ್ನು ರಚಿಸಿದ್ದಾರೆ. 'ನವ ರಷ್ಯದ ನೋಟ' (ಪ್ರವಾಸ ಗ್ರಂಥ) ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ.

ಕೃತಿಗಳು: 'ಐದು ದೀಪದ ಕಂಬ', ಮಹಾತ್ಮ ಗಾಂಧಿ ರಸ್ತೆ ಮತ್ತು ಇತರ ಕವನಗಳು (ಕವನ ಸಂಗ್ರಹಗಳು), ಕತ್ತಲಬೆಳಕು (ಕಥಾಸಂಕಲನ), ಸೃಜನಶೀಲ (ಪ್ರಬಂಧ).

ಇವರ ಸಾಹಿತ್ಯ ಸೇವೆಯನ್ನು ಗಮನಿಸಿ ಮುಳಬಾಗಿಲ ಶ್ರೀಪಾದಮಠದ ಶ್ರೀ ಶ್ರೀ ಶ್ರೀ ವಿಜಯನಿಧಿ ತೀರ್ಥ ಶ್ರೀ ಪಾದಂಗಳವರು 'ಪತ್ರಿಕಾ ಸಾಹಿತ್ಯ ರತ್ನ' ಎಂಬ

---

1 ಜನನ: ಅರಸೀಕೆರೆ ತಾಲ್ಲೂಕಿನ 'ಕುರಿವೆಂಕ' ಹುಟ್ಟಿದ ಸ್ಥಳ.

2 ಜನನ: ಮೇ, 5. 1926, ತುಮಕೂರು, ತಂದೆ: ವೆಂಕಟರಾವ್.

ಬಿರುದನ್ನು ದಯಪಾಲಿಸಿದ್ದಾರೆ. ಕರ್ನಾಟಕ ಜನಸೇವಾ ಪರಿಷತ್ 'ಸಂಪಾದಕ ಕೇಸರಿ' ಪ್ರಶಸ್ತಿ ನೀಡಿ ಗೌರವಿಸಿದೆ. 1978ರಲ್ಲಿ ಕರ್ನಾಟಕದ ಲೇಖಕರು. ಕಲಾವಿದರು ರಾಜ್ಯ ಪಾಲರ ಸಮ್ಮುಖದಲ್ಲಿ 'ಸನ್ಮಾನ ಪತ್ರಿಕೆ' ನೀಡಿ ಸನ್ಮಾನಿಸಿದ್ದಾರೆ.

**ಕೆ. ಎಸ್. ನಾರಾಯಣಸ್ವಾಮಿ**[1]: ಪತ್ರಿಕೋದ್ಯಮದಲ್ಲಿ ಪ್ರಥಮಬಾರಿಗೆ ಹೊರದೇಶದಲ್ಲಿ (ಹಂಗೇರಿಯ ಬುಡಾಪೆಸ್ಟಿನಲ್ಲಿ) ವಿಶೇಷ ತರಬೇತಿ ಪಡೆದು ಬಂದ ಹೆಗ್ಗಳಿಕೆ ಇವರದು. 1967ರವರೆಗೆ ಪ್ರಜಾವಾಣಿಯಲ್ಲಿದ್ದು ಅನಂತರ 'ಕನ್ನಡಪ್ರಭ' ಸೇರಿ ಸಹಸಂಪಾದಕರಾಗಿ ಸಾಪ್ತಾಹಿಕ ಪುರವಣಿಯಲ್ಲಿ ತಮ್ಮ ಪ್ರತಿಭೆ ಪ್ರಕಾಶಿಸುತ್ತಿದಾರೆ.

ಶ್ರೀಯುತರು ಒಳ್ಳೆಯ ಕಥೆಗಾರರು, ಕಾದಂಬರಿಕಾರರು, ನಾಟಕಕಾರರು, ಚಲನಚಿತ್ರ ನಿರ್ಮಾಪಕರು. ನಿರ್ದೇಶಕರು ಅಲ್ಲದೆ ಚಿತ್ರಕಥೆ ಲೇಖಕರೂ ಹೌದು.

ಇವರ ಕೃತಿಗಳು: ಕರುನಾಳು ಬಾ ಬೆಳಕೆ (ಕಾದಂಬರಿ), ನಾಗೇಶರಾಯರು (ಜೀವನ ಚರಿತ್ರೆ), ಮಂಜು ಹೂವಿನ ಮದುವಣಿಗ (ಹಂಗೇರಿಯನ್ ಕಥೆಗಳ ಅನುವಾದ). ಕರ್ನಾಟಕ ಸರ್ಕಾರದ ಪ್ರಶಸ್ತಿ ಪಡೆದ 'ಮುಕ್ತಿ' ಚಲನಚಿತ್ರದ ನಿರ್ಮಾಪಕರು. 'ನಾಂದಿ', 'ಸಾಹಿತ್ಯವಾಹಿನಿ' ಚಲನಚಿತ್ರ ಪತ್ರಿಕೆಗಳ ಸಂಪಾದಕ ಮಂಡಲಿಯಲ್ಲಿದ್ದಾರೆ.

'ಕರ್ನಾಟಕ ಚಲನಚಿತ್ರ ಪತ್ರಕಾರರ ಪರಿಷತ್ತಿನ' ಸ್ಥಾಪಕ ಅಧ್ಯಕ್ಷರು, ಆದರ್ಶ ಫಿಲ್ಮ್ ಇನ್ಸ್ಟಿಟ್ಯೂಟ್‌ನ ಉಪನ್ಯಾಸಕರು, ಕರ್ನಾಟಕದ ಡಾಕ್ಯುಮೆಂಟರಿ ಅವಾರ್ಡ್ ಕಮಿಟಿಯ ಜ್ಯೂರಿಗಳು ಮುಂತಾಗಿ ಹಲವು ಪ್ರಮುಖ ಸಂಸ್ಥೆಗಳಲ್ಲಿ ಗುರುತರ ಕಾರ್ಯ ನಿರ್ವಹಿಸುತ್ತಿದ್ದಾರೆ.

**ವೆಂಕಟರಾಜ ಪಾನಸೆ**[2]: ಬಡತನದಿಂದಾಗಿ ಹೆಚ್ಚಿಗೆ ಓದದೆ ಮೆಟ್ರಿಕ್ ಪಾಸಾಗಿ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಲೇ ಕಥೆ, ಲೇಖನಗಳನ್ನು ಬರೆಯಲು ಪ್ರಾರಂಭಿಸಿದರು, 'ರೈತ' ವಾರಪತ್ರಿಕೆಯಲ್ಲಿ ಉಪ ಸಂಪಾದಕರಾಗಿ ಸೇರಿ ಅನಂತರ 'ಚಿತ್ರಗುಪ್ತ'ದಲ್ಲಿ ಸಹಸಂಪಾದಕರಾಗಿ ಕೆಲಕಾಲ ದುಡಿದು 'ಜನಶಕ್ತಿ'ಯ ಸಂಪಾದಕರಾದರು. ಮರಣಕ್ಕೆ ಮುಂಚೆ ಮದರಾಸಿನ ಸೋವಿಯತ್ ಒಕ್ಕೂಟದ ಸಮಾಚಾರ ಇಲಾಖೆಯಲ್ಲಿ ಕನ್ನಡ ವಿಭಾಗದ ಸಂಪಾದಕರಾಗಿದ್ದರು. ವಿಶ್ವಕಥಾ ಕೋಶದ 5ನೇ ಸಂಪುಟದ ಸಂಪಾದಕರು.

ಕೃತಿಗಳು: ಮನ್ಮಥನ ಹೆಂಡತಿ. ಇದು ಬರೆಯುವಂಥದಲ್ಲ (ಕಥಾ ಸಂಕಲನಗಳು).

---

1 ಜನನ: ಮಾರ್ಚ್ 2, 1929, ಅರಸೀಕೆರೆಯಲ್ಲಿ. ತಂದೆ: ಕೆ. ಸೀತಾರಾಮಯ್ಯ, ತಾಯಿ: ಶಂಕರಮ್ಮ.

2 ಜೀವಿತಕಾಲ: (1931–1981) ಬೆಳಗಾವಿ ಜಿಲ್ಲೆಯ, ಖಾನಾಪುರ ತಾಲ್ಲೂಕಿನ 'ಗಂದಿಗವಾಡ' ಗ್ರಾಮದಲ್ಲಿ ಜನನ.

**ಪಿ. ಸು. ಭಟ್ಟ**[1] : (ಪರಮೇಶ್ವರ ಸುಬ್ರಾಯ ಭಟ್ಟ) ಇವರು ಸಾಹಿತಿ, ಪತ್ರಕರ್ತ, ಸಹಕಾರಿ ಶಿಕ್ಷಣಾಸಕ್ತ ಹಾಗೂ ರಾಜಕಾರಣಿ. ಕರ್ನಾಟಕ ಸಹಕಾರಿ ಪ್ರಕಾಶನ ಸಂಸ್ಥೆಯ ವ್ಯವಸ್ಥಾಪಕನಿರ್ದೇಶಕ. 'ಹೂವಿನ ಸರ' ಇವರು ಮೊದಲು ನಡೆಸಿದ ಕೈ ಬರಹದ ಮಾಸಪತ್ರಿಕೆ. ಅನಂತರ ದುಡಿದ ಪತ್ರಿಕೆಗಳು 'ಸಂಯುಕ್ತ ಕರ್ನಾಟಕ', ಪ್ರಜಾಪ್ರಭುತ್ವ, 'ಜ್ಞಾನಗಂಗೋತ್ರಿ', (ಕಿರಿಯರ ವಿಶ್ವಕೋಶ-6 ಸಂಪುಟಗಳು) ; ಬೃಹತ್ ಕೃತಿಯ ವ್ಯವಸ್ಥಾಪಕ ಸಂಪಾದಕ. ಕಥೆ, ಕಾದಂಬರಿ, ಜೀವನ ಚರಿತ್ರೆ, ಭಾಷಾಂತರ ಕ್ಷೇತ್ರಗಳಲ್ಲಿ 15ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

ಕೃತಿಗಳು : ಎಮಿಲಿ ಬ್ರಾಂಟ್‌ನ 'ವುದರಿಂಗ್ ಹೈಟ್ಸ್', ಕೃಷ್ಣಚಂದ್ರರ 'ಸಾವಿರ ಪ್ರಣಯಿಗಳು', ಖುಶ್‌ವಂತ್‌ಸಿಂಗರ 'ಪ್ರಪಂಚ ಪರಿಚಯ' (ಅನುವಾದಗಳು), ಪದ್ಮಾವತಿ (ಕಥಾಸಂಕಲನ).

ಶಿಕ್ಷಣ ಕ್ಷೇತ್ರದಲ್ಲಿ ಭಟ್ಟರಿಗೆ ವಿಶೇಷ ಆಸಕ್ತಿ. ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯ, ವಿಶ್ವವಿದ್ಯಾಲಯದ ಅಚ್ಚುಕೂಟದ ಅಧ್ಯಕ್ಷ, ಪ್ರಿ-ಯೂನಿವರ್ಸಿಟಿ ಶಿಕ್ಷಣ ಬೋರ್ಡಿನ ಸದಸ್ಯ, ವಯಸ್ಕರ ಶಿಕ್ಷಣ ಸಮಿತಿಯ ಉಪಾಧ್ಯಕ್ಷ ಮುಂತಾದ ಗುರುತರ ಕಾರ್ಯಗಳನ್ನು ವಿಚಕ್ಷಣೆಯಿಂದ ನಿರ್ವಹಿಸಿದ್ದಾರೆ.

**ಬಿ. ವಿ. ವೈಕುಂಠರಾಜು**[2] : ಬಂಡಾಯ ಪ್ರವೃತ್ತಿಯ ವೈಕುಂಠರಾಜು ಸಾಹಸಗಾರ ಪತ್ರಿಕಾಕರ್ತ, ಹಾಗೂ ಹೆಸರಾಂತ ಲೇಖಕ.

**ಜಿ. ಎಸ್. ಸದಾಶಿವ**[3] : 1964ರಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ಉಪ ಸಂಪಾದಕರಾಗಿ ಪತ್ರಿಕೋದ್ಯಮ ಪ್ರವೇಶಿಸಿದರು. 1967ರಲ್ಲಿ 'ಪ್ರಜಾವಾಣಿ' ಸೇರಿ, ಸ್ವಸಾಮರ್ಥ್ಯದಿಂದ ಮೇಲೇರಿ ಈಗ 'ಮಯೂರ' ಪತ್ರಿಕೆಯ ಸಂಪಾದಕರಾಗಿದ್ದಾರೆ. 'ಸುಧಾ' ದ ಸಹಾಯಕ ಸಂಪಾದಕರು. ಚಿತ್ರರಂಗದಲ್ಲೂ ಶ್ರಮಿಸಿದ್ದಾರೆ. 'ಆಕ್ರಮಣ' ಚಲನಚಿತ್ರಕ್ಕೆ ಚಿತ್ರಕಥೆ-ಸಂಭಾಷಣೆ, 'ಎಲ್ಲಿಂದಲೊ ಬಂದವರು' ಚಲನಚಿತ್ರಕ್ಕೆ ಚಿತ್ರಕಥೆ, 'ಮೂರು ದಾರಿಗಳು' ಚಲನಚಿತ್ರಕ್ಕೆ ಸಂಭಾಷಣೆ ಬರೆದಿದ್ದಾರೆ.

**ಎಸ್. ದಿವಾಕರ್**[4] : ಜನಪ್ರಿಯ ಲೇಖಕರು ಹಾಗೂ ಹೆಸರಾಂತ ಪತ್ರಕರ್ತರು.

---

1 ಜೀವಿತಕಾಲ : ಜೂನ್ 3, 1931 – ಜುಲೈ 1981, ಉತ್ತರ ಕನ್ನಡ ಜಿಲ್ಲೆಯ 'ಹೊಲನಗದ್ದೆ'.

2 ಪುಟ 279 ನೋಡಿ.

3 ಪುಟ 241 ನೋಡಿ. ಇತರ ಕೃತಿಗಳು : 'ನಂ ಶಾಲಿ ಕಂಪ್ರ', ತಾಯಿ (ಅನುವಾದ), ಚೆಲುವು (ಅನುವಾದ).

4 ಜನನ : ನವೆಂಬರ್ 28, 1946, ಬೆಂಗಳೂರು ಜಿಲ್ಲೆಯ ಸೋಮತ್ತನಹಳ್ಳಿಯಲ್ಲಿ. ತಂದೆ : ಎಸ್. ಗೋಪಾಲಯ್ಯ, ತಾಯಿ : ವೆಂಕಟಲಕ್ಷ್ಮಮ್ಮ. ಪುಟ 250 ನೋಡಿ.

'ಕೌರ್ಯ' (ಸಣ್ಣಕಥೆ) ಪ್ರಜಾವಾಣಿ ದೀಪಾವಳಿ ಸ್ಪರ್ಧೆ (1979)ರಲ್ಲಿ ಪ್ರಥಮ ಬಹುಮಾನ ಗಳಿಸಿದೆ. 'ಪೋಲಿಸ್ ಸಾಹಿತ್ಯ ಕಲೆ' ಸಂಪಾದಿಸಿರುವ ಕೃತಿ.

ಇತರ ಕೃತಿಗಳು : ವೆನಿಸ್ಸಿನಲ್ಲಿ ಸಾವು, ಹಳ್ಳಿ. ಪೋಸ್ಟ್‌ಮ್ಯಾನ್, (ಅನುವಾದಗಳು) ; ಘಟಶ್ರಾದ್ಧ, ಹಂಸಗೀತೆ, ಗ್ರಹಣ ಮುಂತಾದ ಚಲನಚಿತ್ರ ನಿರ್ಮಾಣದಲ್ಲೂ ಸಹನಿರ್ದೇಶಕರಾಗಿ ಅವುಗಳ ಯಶಸ್ಸಿಗೆ ಕಾರಣರಾಗಿದ್ದಾರೆ.

**ಸಂತೋಷಕುಮಾರ ಗುಲ್ವಾಡಿ:** 'ತರಂಗ'ದ ಸಂಪಾದಕ ಸಂತೋಷ ಕುಮಾರ ಗುಲ್ವಾಡಿ ಪತ್ರಿಕಾ ಕ್ಷೇತ್ರದಲ್ಲಿ ಬಿರುಗಾಳಿಯಂತೆ ತೂರಿಬಂದವರು. ಸತ್ವ ಪೂರ್ಣ ಸಂಪಾದಕ, ಪ್ರತಿಭಾವಂತ ಲೇಖಕ.

ಬಹಳ ವರ್ಷಗಳಿಂದ ಇವರು ಮುಂಬಯಿಯಲ್ಲಿದ್ದೇ ಪತ್ರಿಕೆಗಳಿಗೆ ವಿಚಾರಪೂರ್ಣ ಲೇಖನಗಳನ್ನು ಬರೆಯುತ್ತಿದ್ದರು.

ಇವರ ಕೃತಿಗಳು ; ಪೃಥ್ವಿರಾಜ ಕಪೂರ, ಓಂಕಾರನಾಥ ಠಾಕೂರ್, ನಿಗೂಢ ನಿಕ್ಷೇಪ.

**ಕೃ. ನ. ಮೂರ್ತಿ :** ಪತ್ರಿಕಾಕ್ಷೇತ್ರದಲ್ಲಿ ಅಪಾರ ಸೇವೆ ಮಾಡುತ್ತಿರುವ ಶ್ರೀಯುತರಿಗೆ ರಾಜ್ಯ ಪತ್ರಿಕಾ ಅಕಾಡೆಮಿ 1987ರ ಪ್ರಶಸ್ತಿ ನೀಡಿ ಗೌರವಿಸಿದೆ.

'ಜನಮಿತ್ರ' ದೈನಿಕದ ಸಂಪಾದಕರು. ಇವರು ನಡೆಸಿರುವ ಇತರ ಪತ್ರಿಕೆಗಳು 'ಕಲಾ' (ವಾರಪತ್ರಿಕೆ). ಕೋಲಾರ ಪತ್ರಿಕೆ (ದೈನಿಕ), 'ತುಮಕೂರು ವಾಣಿ' (ತುಮಕೂರಿನಲ್ಲಿ ಪ್ರಾರಂಭಿಸಿದ ದೈನಿಕ), ನಗೆ–ಹೊಗೆ (ಹಾಸ್ಯಮಾಸಿಕ).

ಇವರು ಒಳ್ಳೆಯ ಸಾಹಿತಿಗಳೂ ಹೌದು. 10 ನಾಟಕ. 8 ಕಾದಂಬರಿ, 2 ಕಥಾ ಸಂಗ್ರಹ, 4 ಇತರ ಕೃತಿ ರಚಿಸಿದ್ದಾರೆ.

'ಪೂರ್ಣಿಮಾ ಸಾಹಿತ್ಯ ಮಂದಿರ' (1956) ಮತ್ತು 'ಹೊಯ್ಸಳ' ಮುದ್ರಣಾಲಯ ನಡೆಸುತ್ತಿದ್ದಾರೆ.

**ಹ. ರಾ. ಕಿದಿಯೂರು*:** ಶಿಕ್ಷಕರಾಗಿದ್ದು ಪತ್ರಿಕಾರಂಗಕ್ಕೆ ಅಡಿ ಇರಿಸಿದ್ದಾರೆ. 'ನವೋದಯ' ಪತ್ರಿಕೆಯ ಸಂಪಾದಕರು. 'ಸ್ಟೂಡೆಂಟ್ ಜರ್ನಲ್' ಇಂಗ್ಲೀಷ್ ಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದರು. ಪತ್ರಿಕಾ ಕ್ಷೇತ್ರದಲ್ಲಿ ಇವರು ದುಡಿದಿರುವ ಇತರ ಪತ್ರಿಕೆಗಳು : ಕರ್ನಾಟಕ ಬಂಧು. ದೇಶವಾಣಿ. ನಾಗರಿಕ. ಜಾಗ್ರತಿ ಮುಂತಾದವು.

ಶ್ರೀಯುತರು ಒಳ್ಳೆಯ ಸಾಹಿತಿಗಳೂ ಹೌದು. ಶಿಶುಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಕೊಡುಗೆಗಳನ್ನು ನೀಡಿದ್ದಾರೆ.

ಕರ್ನಾಟಕ ಪತ್ರಿಕಾ ಅಕಾಡೆಮಿ ಇವರಿಗೆ (1987)ರ ಪ್ರಶಸ್ತಿ ನೀಡಿ ಗೌರವಿಸಿದೆ.

---

* ಜನ್ಮಸ್ಥಳ : ದಕ್ಷಿಣ ಕನ್ನಡ ಜಿಲ್ಲೆಯ 'ಗದಗ್'.

ಇವರು ರಚಿಸಿರುವ 'ಗದಗ-ಬೆಟಗೇರಿ ನಗರದ ಸಮಗ್ರ ಇತಿಹಾಸ' ಒಂದು ಮಹತ್ವದ ದಾಖಲೆ ಕೃತಿ.

ಇತರ ಕೃತಿಗಳು : ಮಕ್ಕಳ ಅಂಕಲಿಪಿ, ನನ್ನ ಅಂಕಲಿಪಿ, (ಕನ್ನಡದ ಮೂಲಕ ಭಾರತೀಯ ಭಾಷೆಗಳನ್ನು ಕಲಿಯಲು ಸಹಾಯವಾಗುವ ವಿಶಿಷ್ಟ ಕೃತಿ).

ಮೂರ್ಖಕತ್ತೆ, ಸನ್ಯಾಸಿಬೆಕ್ಕಣ್ಣ, ಹೊಂಡಕ್ಕೆಬಿದ್ದ ಹುಲಿರಾಯ, ಒಕ್ಕಣ್ಣ ರಾಕ್ಷಸ, ಕಡ್ಡಿಗುಮ್ಮ, ನರಿಯಣ್ಣನ ಕಥೆಗಳು, ಮೋಸಹೋದ ನರಿಯಣ್ಣ (ಶಿಶುಸಾಹಿತ್ಯ).

ಪತ್ರಿಕಾರಂಗ, ಶಿಕ್ಷಣಕ್ಷೇತ್ರಗಳಲ್ಲದೆ ಸಮಾಜಸೇವಾಕ್ಷೇತ್ರದಲ್ಲೂ ದುಡಿಯುತ್ತಿದ್ದಾರೆ.

**ಜಿ. ಬಿ. ಎಸ್. ಜಗದೀಶ್ :** (ಗುರಪ್ಪ ಬಸಪ್ಪ ಸಿಕ್ಕಲಿಗಾರ ಜಗದೀಶ್)

ಅತ್ಯಂತ ಹಿಂದುಳಿದ ಅರೆಸಂಚಾರಿ ಜನಾಂಗವಾದ 'ಸಿಕ್ಕಲಿಗಾರ'ರಲ್ಲಿ ಜನ್ಮತಳೆದು ಬಿ. ಎ. ಡಿಗ್ರಿಗಳಿಸಿದ ಪ್ರಥಮ ವ್ಯಕ್ತಿ. ಕ್ರಾಂತಿಕಾರಿ ವಿಚಾರಧಾರೆಯ ಲೇಖಕ. ಪ್ರತಿಭಾವಂತ ಪತ್ರಿಕಾಕಾರ.

ಸುಮಾರು 30 ವರ್ಷ 'ಪ್ರಗತಿ' ಎಂಬ ಕೈಬರಹದ ಮಾಸಿಕ ಪತ್ರಿಕೆ ಸಂಪಾದಿಸಿದ ಹೆಗ್ಗಳಿಕೆ ಇವರದು. 'ವಿಶಾಲ ಕರ್ನಾಟಕ'ದಲ್ಲಿ ಎರಡು ದಶಕಕ್ಕೂ ಹೆಚ್ಚುಕಾಲದಿಂದ ದುಡಿಯುತ್ತಿದ್ದಾರೆ.

ಶ್ರೀಯುತರು ಒಳ್ಳೆಯ ಲೇಖಕರೂ ಹೌದು. ಕಾದಂಬರಿ (3) ಹಾಗೂ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ.

ಇವರ ಸರ್ವತೋಮುಖ ಸೇವೆಯನ್ನು ಗುರುತಿಸಿ ರಾಜ್ಯ ಪತ್ರಿಕಾ ಅಕಾಡೆಮಿ 1987 ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

**ಸಿ. ಎಚ್. ಪ್ರಹ್ಲಾದ ರಾವ್ [1] :** ಹವ್ಯಾಸಿ ಪತ್ರಕರ್ತ ಹಾಗೂ ಒಳ್ಳೆಯ ಲೇಖಕ. ಹಿಂದೆ ಸಂಪರ್ಕ ಇರಿಸಿಕೊಂಡಿದ್ದ ಪತ್ರಿಕೆ 'ಫೋರಂ'. ಈಗ ಅಂಕಣಕಾರರಾಗಿ ಸಂಪರ್ಕ ಇರಿಸಿಕೊಂಡಿರುವ ಪತ್ರಿಕೆ 'ದಿ ಹಿಂದೂ'.

ಕೃತಿಗಳು : ಶೂನ್ಯಸಂಪಾದನೆಗೆ ಸಂಬಂಧಿಸಿದ 'ಮ್ಯಾನ್ ದಿ ಡಿವೈನ್'. (ಅನುವಾದ) ; ನಂದಲಾಲ್ ಭೋಸ್, ದಿವಾನ್ ರಂಗಾಚಾರ್ಲು (ಮಕ್ಕಳ ಸಾಹಿತ್ಯ) ; ಬಂಜೆತೊಟ್ಟಿಲು, ಸುಂಕವಿಲ್ಲದ ಗಾಳಿ.

**ಹೆಚ್. ವಿ. ನಾರಾಯಣ್ [2] :** ಪತ್ರಿಕೋದ್ಯಮಿಯಾಗಿ ಸಾಹಿತಿಯಾಗಿ ಇವರು ಕನ್ನಡ ಸಾರಸ್ವತ ಲೋಕಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. 'ರಾಮರಾಜ್ಯ' ಹಾಗೂ 'ಯಾತ್ರಿಕ' ಈ ಎರಡು ವೈಶಿಷ್ಟ್ಯಪೂರ್ಣ ಪತ್ರಿಕೆಗಳನ್ನು (ಅವರ ಸಹೋದರ

---

1 ಜನನ: 1923, ಶಿವಮೊಗ್ಗದಲ್ಲಿ.

2 ಜೀವಿತಕಾಲ: 25-9-1930 ರಿಂದ 13-8-1979.

ಹೆಚ್. ಎ. ವರದರಾಜನ್‌ರವರ ಸಂಗಡ) ಸೃಷ್ಟಿಸಿ ಬಹುಕಾಲ ನಡೆಸಿದ ಹೆಗ್ಗಳಿಕೆ ಇವರದು. 'ಐಶ್ವರ್ಯ ಟ್ರಾವಲ್ ಲೈನ್ಸ್ ಸಂಸ್ಥೆ ಕಟ್ಟಿ ಅದರ ಜೊತೆಯಲ್ಲಿ 'ಯಾತ್ರಿಕ'ರಿಗೆ ಉಪಯುಕ್ತವಾಗಲು 'ಯಾತ್ರಿಕ' ಪಕ್ಷಪತ್ರಿಕೆ ಪ್ರಾರಂಭಿಸಿದರು (1971). (ಅವರ ಮರಣದ ನಂತರವೂ ಅವರ ಪತ್ನಿ ಶ್ರೀಮತಿ ಕಮಲ ನಾರಾಯಣ್ ಇದನ್ನು ನಡೆಸಿಕೊಂಡು ಬರುತ್ತಿರುವುದು ಬಹು ಸಂತಸದ ವಿಷಯ).

ನಾರಾಯಣ್ ಸುರಿತ ಲೇಖಕರಾಗಿದ್ದು ಕತೆ, ಕಾದಂಬರಿ, ನಾಟಕ, ಪ್ರಬಂಧಗಳನ್ನು ರಚಿಸಿರುವುದಲ್ಲದೆ ಅಗಣಿತ ಸಂಖ್ಯೆಯಲ್ಲಿ ಲೇಖನಗಳನ್ನು ಬರೆದಿದ್ದಾರೆ.

ಮುಖ್ಯ ಕೃತಿಗಳು : ಲೋಕಾಭಿರಾಮ (ಧಾರಾವಾಹಿಯಾಗಿ 'ತಾಯಿನಾಡು' ಪತ್ರಿಕೆಯಲ್ಲಿ ಬಂದಿದ್ದ ಲೇಖನಗಳ ಸಂಕಲನ) ; ಜಯಕಾಂತನ ಕಥೆಗಳು, ಕ್ರಿಸ್ಟೋಫರ್ ಕೊಲಂಬಸ್ (ಅನುವಾದಗಳು) ; ರಾಧಾಮಾಧವ (ನಾಟಕ) ಹಲವಾರು ಶರತ್ ಕಾದಂಬರಿಗಳನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ.

**ಎಸ್. ಆರ್. ಕೃಷ್ಣಮೂರ್ತಿ* :** 'ಎಸ್ಸಾರ್ಕೆ' ಎಂದೇ ಇವರು ಪ್ರಸಿದ್ಧ. 'ತಾಯಿನಾಡು' ಪತ್ರಿಕೆಯ ಮೂಲಕ ಪತ್ರಿಕೋದ್ಯಮ ಆರಂಭ, 1954ರಿಂದ ಸುಮಾರು 13 ವರ್ಷ 'ಪ್ರಜಾವಾಣಿ'ಯಲ್ಲಿದ್ದು 1967ರಲ್ಲಿ 'ಕನ್ನಡಪ್ರಭ' ಸೇರಿ 'ಪುರವಣಿ' ಸಂಪಾದಕರಾಗಿ ದುಡಿದು 1970ರಲ್ಲಿ 'ಅಮೇರಿಕನ್ ರಿಪೋರ್ಟರ್'ನ ಕನ್ನಡ ಆವೃತ್ತಿ ಸಂಪಾದಕರಾಗಿದ್ದು, ಅದನ್ನು ಬಿಟ್ಟು 'ಪ್ರಜಾಮತ' ಸೇರಿ ಕಥಾ ಸಂಪಾದಕರಾಗಿ ಕೊನೆಯ ತನಕ ದುಡಿದರು.

ಇವರು ಒಳ್ಳೆಯ ಸಾಹಿತಿಗಳೂ ಆಗಿದ್ದರು. ವಿಶ್ವಕಥಾಕೋಶದ 20ನೇ ಸಂಪುಟದ ಸಂಪಾದಕರು.

ಇತರ ಕೃತಿಗಳು : ಲಾರ್ಡ್‌ಜಿಮ್–ಜೋಸೆಫ್ ಕ್ರಾನ್ರಾಡ್ (ಅನುವಾದ), ಅದೋ ಚಿರತೆ (ಅನುವಾದ).

**ಎಂ. ಎಸ್. ಭಾರದ್ವಾಜ್ :** ಜನವಾಣಿ, ಪ್ರಜಾಮತ ಪತ್ರಿಕೆಗಳಲ್ಲಿ ದುಡಿದು, 'ಚಿತ್ರಗುಪ್ತ' ಪತ್ರಿಕೆಯ ಸಂಪಾದಕರಾಗಿ ಕೆಲಕಾಲ ದುಡಿದು, ಖಾಸಗೀ ಕ್ಷೇತ್ರದಿಂದ ಸರಕಾರಿ ಕ್ಷೇತ್ರಕ್ಕೆ ನಡೆದ ಮೂರ್ತಿಶ್ಯಾಮಸುಂದರ ಭಾರದ್ವಾಜರು ಪತ್ರಿಕೋದ್ಯಮದಲ್ಲಿ ನೆನಸಬೇಕಾದ ವ್ಯಕ್ತಿ. ಪ್ರಗತಿಶೀಲ ಸಾಹಿತ್ಯದ ಬೆಳವಣಿಗೆಗೆ ಇವರ ಕೊಡುಗೆ ಅಪಾರ. ಭಾರತ ಸರ್ಕಾರದ ಆಕಾಶವಾಣಿ ನಿಲಯ, ನವದೆಹಲಿಯಲ್ಲಿ ಸುದ್ದಿ ಸಂಪಾದಕರಾಗಿ, ಸರಕಾರಿ ಕ್ಷೇತ್ರ ಪ್ರವೇಶಿಸಿದ ಇವರು ಪ್ರಕಾಶನ ವಿಭಾಗದ ಸಂಪಾದಕರಾಗಿ ಅನಂತರ ಕರ್ನಾಟಕ ರಾಜ್ಯದ ನವದೆಹಲಿ ಸಮಾಚಾರ ಕೇಂದ್ರದಲ್ಲಿ ಸಂಪಾದಕರಾಗಿ. ಭಾರತ ಸರ್ಕಾರದ ಬೆಂಗಳೂರು ಕ್ಷೇತ್ರ ಪ್ರಚಾರ ನಿರ್ದೇಶಕರಾಗಿ

---

* ಜನನ : ಬೆಂಗಳೂರಿನ ಬಳಿಯ 'ಸೊಂಡೆಕೊಪ್ಪ'ದಲ್ಲಿ.

ದುಡಿದ ವ್ಯಕ್ತಿ. ಇದ್ದಕ್ಕಿದ್ದಂತೆಯೇ ಆಗಸ್ಟ್ 1981ರಲ್ಲಿ ಮರಣ ಹೊಂದಿದ್ದು ಪತ್ರಿಕಾ ಕ್ಷೇತ್ರಕ್ಕಾದ ಅಪಾರ ನಷ್ಟ.

ಕೃತಿಗಳು : ಅವರು ಕಂಡ ಭಾರತ, ಕಥಾಭಾರತೀ, ಬ್ರಾಹ್ಮಣ ಕನ್ಯೆ (ಅನುವಾದಗಳು), ಮುಂತಾದವು.

**ಪ್ರೊ. ಸಂಜೀವ ಬೋಳಾರ :** ಇತಿಹಾಸ ವಿಭಾಗದ ಮುಖ್ಯಸ್ಥರು, ಉಪಪ್ರಾಂಶುಪಾಲರು (ಬಂಟ್ವಾಳದ ಶ್ರೀವೆಂಕಟರಮಣಸ್ವಾಮಿ ಕಾಲೇಜು). ಮಂಗಳೂರಿನ 'ನವಭಾರತ' ದಲ್ಲಿ ಹನ್ನೊಂದು ವರ್ಷ ಸಾಹಿತ್ಯ ವಿಭಾಗದ ಗೌರವ ಸಂಪಾದಕ ಹಾಗೂ ಅಂಕಣಕಾರರಾಗಿದ್ದರು. ಶ್ರೀಯುತರು ಒಳ್ಳೆಯ ಸಾಹಿತಿಗಳೂ ಹೌದು.

ಕೃತಿಗಳು : ತೊರೆ ಬತ್ತಲಿಲ್ಲ, ಕ್ಷೋಭೆ, ಹೆಣ್ಣಾಗಿ ಕಾಡಿತ್ತು ಸೇಡು, ಪ್ರವಾಹ, ವಿಷಚಕ್ರ, ಬಿರುಗಾಳಿ, ಚಕ್ರವ್ಯೂಹ, ವ್ಯವಸ್ಥೆ (ಕಾದಂಬರಿಗಳು), ನೂರಐವತ್ತಕ್ಕೂ ಹೆಚ್ಚು ಕಥೆಗಳು ದೇಶದ ಎಲ್ಲ ಪತ್ರಿಕೆಗಳಲ್ಲೂ ಪ್ರಕಟಗೊಂಡಿವೆ.

**ಸಿ. ಸೀತಾರಾಂ**[1] **:** ಒಳ್ಳೆಯ ಪತ್ರಿಕಾಕರ್ತ ಹಾಗೂ ನುರಿತ ಲೇಖಕ. ಕಥೆ, ಕಾದಂಬರಿ, ಪ್ರಬಂಧ ಮುಂತಾದವುಗಳನ್ನು ರಚಿಸಿದ್ದಾರೆ.

ವಿಶ್ವ ಕಥಾಕೋಶದ 2 ನೇ ಸಂಪುಟದ ಸಂಪಾದಕರು. ನವಕರ್ನಾಟಕ ಪುಸ್ತಕ ಸಂಸ್ಥೆಗೆ ಇನ್ನೂ ಹಲವಾರು ಕೃತಿಗಳನ್ನು ರಚಿಸಿ ಕೊಟ್ಟಿದ್ದಾರೆ.

**ಈಶ್ವರಯ್ಯ**[2] **:** ಪತ್ರಿಕೋದ್ಯಮಿ ಹಾಗೂ ಒಳ್ಳೆಯ ಸಾಹಿತಿ.

ತುಷಾರ, ಉದಯವಾಣಿ, ತರಂಗಗಳ ಪತ್ರಿಕಾಲಯದಲ್ಲಿ ಸಹಸಂಪಾದಕ ರಾಗಿದ್ದಾರೆ. ಕನ್ನಡ ಮತ್ತು ಇಂಗ್ಲೀಷಿನಲ್ಲಿ ಹಲವಾರು ಕಥೆಗಳನ್ನು ರಚಿಸಿದ್ದಾರೆ. ನಗೆಚಿತ್ರ ಹಾಗೂ ಲೇಖನಗಳನ್ನು ಪತ್ರಿಕೆಗಳಿಗೆ ಬರೆಯುತ್ತಿರುತ್ತಾರೆ.

ಕೃತಿಗಳು : ಪ್ರಮಾಣ (ಕಥಾ ಸಂಕಲನ).

**ಬಾಬು ಕೃಷ್ಣಮೂರ್ತಿ**[3] **:** (ಚಿಂತಾಮಣಿ ವೆಂಕಟೇಶ ಶಾಸ್ತ್ರಿ ಕೃಷ್ಣಮೂರ್ತಿ) ಸಾಹಿತಿಯಾಗಿ ಪ್ರಸಿದ್ಧರಾಗಿದ್ದು, ಮೂರುಬಾರಿ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (ಅಲ್ಲೂರಿ ಸೀತಾರಾಮರಾಜು, ಅಜೇಯ, ಅದಮ್ಯ ಕೃತಿಗಳಿಗೆ) ಗಳಿಸಿರುವ ಶ್ರೀಯುತರು ಇತ್ತೀಚೆಗೆ 'ಮಂಗಳ' ವಾರಪತ್ರಿಕೆಯ ಮೂಲಕ ಪತ್ರಿಕೋದ್ಯಮ ಪ್ರವೇಶಿಸಿರುವ ವ್ಯಕ್ತಿ. ಸ್ವಸಾಮರ್ಥ್ಯದಿಂದಾಗಿ ಈ ಕ್ಷೇತ್ರದಲ್ಲೂ ಸಾಕಷ್ಟು ಯಶಸ್ಸುಗಳಿಸಿದ್ದಾರೆ. ಇವರ ಸಂಪಾದಕತ್ವದಲ್ಲಿ 'ಬಾಲಮಂಗಳ' ಸಹ ಹೊರಬಂದಿದೆ.

ಇತರ ಕೃತಿಗಳು : ಮಿಲ್ಟ್ರಿ ತಾತ ಕಥೆ ಹೇಳ್ತಾರೆ, ಧಿಂಗ್ರ (ಶಿಶುಸಾಹಿತ್ಯ).

---

1 ಜನನ : 1940, ನಂಜನಗೂಡಿನಲ್ಲಿ.

2 ಜನನ : 1940, ಕಾಸರಗೋಡು ತಾಲ್ಲೂಕಿನ ಅನಂತಪುರದಲ್ಲಿ.

3 ಜನನ : ಮೇ 11, 1944, ಬೆಂಗಳೂರಿನಲ್ಲಿ. ಇವರು ಒಳ್ಳೆಯ ಚಲನಚಿತ್ರ ದಿಗ್ದರ್ಶಕರು, ನುರಿತ ನಾಟಕಕಾರರು.

ಇದುವರೆಗೆ ನಾವು ಪತ್ರಿಕೋದ್ಯಮಿಗಳಾಗಿದ್ದು ಸಾಹಿತ್ಯ ಪ್ರಕಾರವನ್ನು ಸಂಪನ್ನಗೊಳಿಸಿರುವ ಪ್ರಮುಖರ ಪರಿಚಯವನ್ನು ಮಾಡಿಕೊಂಡಂತಾಯಿತು. ಪತ್ರಿಕೋದ್ಯಮಿ ಉದ್ಗ್ರಂಥಗಳನ್ನು ಸೃಷ್ಟಿಸದೆ ಹೋದರೂ, ಸಾಹಿತ್ಯಕ್ಷೇತ್ರದಲ್ಲಿ, ಸಾಹಿತ್ಯದ ಪ್ರಗತಿಗಾಗಿ ಆತನ ಲೇಖನಗಳ ಕೊಡುಗೆಯೂ ಸಹ ಅಮೂಲ್ಯವಾದದ್ದೆ. ಸಾಹಿತಿಗಳ ಸೃಷ್ಟಿಕರ್ತನೆಂದೂ ಈತನನ್ನು ನಾವು ಹೆಸರಿಸಬಹುದು.

ಈ ದಿಸೆಯಲ್ಲಿ ಗಣನೀಯ ಸೇವೆ ಮಾಡಿರುವ ಪತ್ರಿಕೋದ್ಯಮಿಗಳ ಹೆಸರನ್ನು ನೆನೆಯುವುದು ಒಳಿತು. ಇನ್ನೊಮ್ಮೆ ಸಮಯ ದೊರೆತಾಗ ಇವರುಗಳ ಬಗ್ಗೆಯೇ ವಿವರವಾಗಿ ಹೇಳುತ್ತೇನೆ.

'ಮೈಸೂರು ಗೆಜೆಟಿಯರ್'ನ ಸಂಪಾದಕರಾಗಿದ್ದ **ಸಿ. ಹಯವದನ ರಾವ್**[1]; 'ಜನಪ್ರಗತಿ', 'ಕನ್ನಡ ಪ್ರಭ', 'ಮೈಸ್ ಇಂಡಿಯಾ' ಮುಂತಾದವುಗಳ ಸಂಪಾದಕರಾಗಿದ್ದ **ಎನ್. ಎಸ್. ಸೀತಾರಾಮ ಶಾಸ್ತ್ರಿ**[2]; 'ಪ್ರಜಾಮತ', ಜನವಾಣಿ, ಚಿತ್ರಗುಪ್ತ, 'ಮಲ್ಲಿಗೆ'ಗಳ ಸ್ಥಾಪಕ **ಬಿ. ಎನ್. ಗುಪ್ತ**[3]; 'ಒಕ್ಕಲಿಗ' ಹಾಗೂ 'ಚಿತ್ರಗುಪ್ತ' ಪತ್ರಿಕೆಗಳ ಸಂಪಾದಕರಾಗಿದ್ದ **ಹೆಚ್. ಕೆ. ವೀರಣ್ಣಗೌಡ**[4]; 'ಜನಪದ', 'ರಂಗಭೂಮಿ'ಯ (ಮಾಸಪತ್ರಿಕೆ) ಸಹ ಸಂಪಾದಕರಾಗಿದ್ದ ಸ್ವಾತಂತ್ರ್ಯ ಹೋರಾಟಗಾರ **ಕಿಲ್ಲೆ ನಾರಾಯಣರಾವ್**[5]; ಹಿರಿಯ ಪತ್ರಕರ್ತ **ಕೆ. ಜೀವಣ್ಣರಾವ್**[6]; 'ಲೋಕವಾಣಿ' ದೈನಿಕದ ಪ್ರಥಮ ಸಂಪಾದಕರಾಗಿದ್ದ **ಆರ್. ಕೆ. ಜೋಶಿ**[7]; ಮೈಸೂರಿನ 'ಅರುಣಾ' ಪತ್ರಿಕೆಯ ಸ್ಥಾಪಕ **ಹೆಚ್. ಕೆ. ಕುಮಾರ ಸ್ವಾಮಿ**; 'ನಂದಾದೀಪ' (ಮಾಸಿಕ), 'ಶಕ್ತಿ' (ದಿನಪತ್ರಿಕೆ), 'ಸಂಧ್ಯಾ ದೀಪ' (ಸಂಜೆ ದೈನಿಕ), 'ಚೇತನ' (ಸಾಪ್ತಾಹಿಕ) ಪತ್ರಿಕೆಗಳನ್ನು ನಡೆಸಿದ ಕೊಡಗಿನ **ಬಿ. ಎಸ್. ಗೋಪಾಲಕೃಷ್ಣ**[8]; ರಾಜ್ಯದ ಹಿರಿಯ ಪತ್ರಿಕೋದ್ಯಮಿ 'ಮುಂಜಾನೆ' ಸಂಪಾದಕರಾಗಿದ್ದ

---

1 ಪುಟ 130 ನೋಡಿ.

2 ಜನನ: 1913. ರಾಜ್ಯ ಪತ್ರಿಕಾ ಅಕಾಡೆಮಿ 1987ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

3 ಜೀವಿತಕಾಲ: (1895–1976). ಆಂಧ್ರದ 'ಚಿತ್ತೂರು' ಜನ್ಮಸ್ಥಳ. 'ಜನ್ಮಭೂಮಿ ಟ್ರಸ್ಟ್' ಸ್ಥಾಪಕರು.

4 ಜೀವಿತಕಾಲ: (1899–1976). ಚನ್ನಪಟ್ಟಣ ತಾಲ್ಲೂಕಿನ 'ಅಪ್ಪೇರಹಳ್ಳಿ'ಯಲ್ಲಿ ಜನನ.

5 ಜೀವಿತಕಾಲ: (1904-1980). ಕಾರ್ಕಳ ತಾಲ್ಲೂಕಿನ ಕಲ್ಲೆಕೈರಬೆಟ್ಟು ಜನ್ಮಸ್ಥಳ.

6 ಜೀವಿತಕಾಲ: (1904-1984)

7 ಜನನ: 1913. ರಾಜ್ಯ ಪತ್ರಿಕಾ ಅಕಾಡೆಮಿಯು ಪ್ರಶಸ್ತಿ ನೀಡಿದೆ (1987).

8 1987ರಲ್ಲಿ ರಾಜ್ಯ ಪತ್ರಿಕಾ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

**ಎಸ್. ವಿ. ಜಯಶೀಲರಾವ್**[1] ; 'ಜನಸೇವಕ' ವಾರಪತ್ರಿಕೆಯ ಸಂಪಾದಕರಾಗಿದ್ದ **ಅಮ್ಮೆಂಬಳ ಆನಂದ**[2] ; ಕರ್ನಾಟಕದ ಪ್ರಸಿದ್ಧ ವಾರಪತ್ರಿಕೆ 'ಸುಧಾ'ದ ಪ್ರತಿಭಾವಂತ ಸಂಪಾದಕ **ಎಂ. ಬಿ. ಸಿಂಗ್**[3] ; 'ಸುಧಾ'ದ ಹಿಂದಿನ ಸಮರ್ಥ ಸಂಪಾದಕ **ಇ. ಆರ್. ಸೇತೂರಾಂ**[4] ; 'ಲೋಕವಾಣಿ'ಯ ಸಂಪಾದಕ **ವಿಠ್ಠಲ ಬಾಟ್ವಾಳ್** ; 'ವಾರಪತ್ರಿಕೆ' ಹಾಗೂ 'ರಾಜುಪತ್ರಿಕೆ'ಗಳ ಸಂಪಾದಕ, ಹಾಗೂ ರಾಜ್ಯ ನಾಟಕ ಅಕಾಡೆಮಿ ಅಧ್ಯಕ್ಷ **ಬಿ. ವಿ. ವೈಕುಂಠರಾಜು**[5] ; 'ಸುದ್ದಿ ಸಂಗಾತಿ'ಯ **ಇಂದುಧರ ಹೊನ್ನಾಪುರ** ; 'ಮುಂಗಾರು' ಪತ್ರಿಕೆಯ **ರಘುರಾಮ ಶೆಟ್ಟಿ** ; 'ಪ್ರಜಾವಾಣಿ'ಯ **ಶೂದ್ರ ಶ್ರೀನಿವಾಸ** : 'ತರಂಗ'ದ **ಚಿರಂಜೀವಿ**[6] ; 'ಪ್ರಜಾಮತ'ದ **ಹೆಚ್. ಎನ್. ಮೂರ್ತಿ, ಗಿರಿಶಾಸ್ತ್ರಿ, ಹೆಚ್. ಪಿ. ಫಿಲೋಮಿನ**[7] ; 'ಇಂಡಿಯನ್ ಎಕ್ಸ್‌ಪ್ರೆಸ್'ನ **ವಿ. ಎನ್. ಸುಬ್ಬರಾವ್** ; 'ಸಂಯುಕ್ತ ಕರ್ನಾಟಕ'ದ **ಸುರೇಂದ್ರದಾನಿ** ; 'ಲೋಕವಾಣಿ'ಯ **ಮಹದೇವ ಪ್ರಕಾಶ್** ; 'ಸಂಜಯ', 'ಸಂಯುಕ್ತ ಕರ್ನಾಟಕ'ದ **ಕೆ. ಶಾಮರಾವ್** ; 'ಪ್ರಜಾಮತ'ದ ಚಲನಚಿತ್ರ ವಿಭಾಗದ ಹೆಸರಾಂತ **ಕಳಸ ಸತ್ಯನಾರಾಯಣ** ; 'ರೂಪಲೇಖಾ'ದ **ಎಂ. ರಾಮನ್, ವಿಜಯಾ ಸುಬ್ರಹ್ಮಣ್ಯಂ** ;

---

1 ಅಖಿಲ ಭಾರತ ಕಾರ್ಯನಿರತ ಪತ್ರಕರ್ತರ ಒಕ್ಕೂಟದ ಉಪಾಧ್ಯಕ್ಷರು. ಭಾರತ ಸರಕಾರ ರಚಿಸಿರುವ ಕಾರ್ಯನಿರತ ಪತ್ರಕರ್ತರ ವೇತನ ಮಂಡಲಿಯ ಸದಸ್ಯರು. ಇಂಗ್ಲೆಂಡ್, ಜಕಾರ್ತ, ರಷ್ಯಾ, ಬಲ್ಗೇರಿಯಾ, ಜಕೋಸ್ಲೋವೇಕಿಯಾಗಳಿಗೆ ಭಾರತೀಯ ನಿಯೋಗದ ಸದಸ್ಯರಾಗಿ ಭೇಟಿ ನೀಡಿದ್ದಾರೆ.

ಜನನ : ಸುಮಾರು 1929. 1987ರ ರಾಜ್ಯ ಪತ್ರಿಕಾ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ.

2 ಜನನ : 1927. 1987ರಲ್ಲಿ ರಾಜ್ಯ ಪತ್ರಿಕಾ ಅಕಾಡೆಮಿಯು ಪ್ರಶಸ್ತಿ ನೀಡಿ ಗೌರವಿಸಿದೆ.

3 ಜನನ : ಮೇ 24, 1925, ಮೈಸೂರಿನಲ್ಲಿ. 'ಪ್ರಜಾವಾಣಿ' ದಿನಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ. ಹಿಂದೆ 'ಮಯೂರ' ಮಾಸಪತ್ರಿಕೆಯ ಸಂಪಾದಕತ್ವ ನಿರ್ವಹಿಸಿದ್ದರು.

4 ಜನನ : ನವೆಂಬರ್ 1920, ನಂಜನಗೂಡಿನಲ್ಲಿ. 'ಪ್ರಜಾವಾಣಿ'ಯಲ್ಲಿ ಸುಮಾರ 18 ವರ್ಷ ಸುದ್ದಿಸಂಪಾದಕರಾಗಿ ಸೇವೆಸಲ್ಲಿಸಿ, 'ಸುಧಾ' ಪ್ರಾರಂಭವಾದಾಗ ಸಂಪಾದಕರಾಗಿ ಆಯ್ಕೆಗೊಂಡು ಅದರ ಉನ್ನತಿಗಾಗಿ ಶ್ರದ್ಧಾಪೂರ್ವಕ ಶ್ರಮಿಸಿದ ಒಳ್ಳೆಯ ಲೇಖಕ. ಹಾಸ್ಯ ವಿಡಂಬನ ಕ್ಷೇತ್ರದಲ್ಲಿ ಹೆಸರಾಂತರು.

5 ಪುಟ 279 ನೋಡಿ.

6 ಜನನ : ಡಿಸೆಂಬರ್ 5, 1939. ನುರಿತ ಕಥಾ ಲೇಖಕರು. ಕಾದಂಬರಿಕಾರರೂ ಹೌದು.

7 ಸಾಹಸಗಾತಿ ಪತ್ರಕರ್ತೆ. ಒಳ್ಳೆಯ ಲೇಖಕಿ. 'ದೇವದಾಸಿ ಸಮಸ್ಯೆ', 'ದೌರ್ಜನ್ಯದ ದಳ್ಳುರಿ', 'ಕಂಬಿಗಳ ಹಿಂದೆ ಕಂಬನಿ', ವೈಚಾರಿಕ ಲೇಖನಗಳು ಅತ್ಯಂತ ಜನಪ್ರಿಯಗೊಂಡಿವೆ. ಪಟೇಲ್ ಭೈರಹನುಮಯ್ಯ ಪ್ರಶಸ್ತಿಗಳಿಸಿದ್ದಾರೆ.

**'ಕಾಜಾಣ'**ದ **ಜಾಣಗೆರೆ ವೆಂಕಟರಾಮಯ್ಯ** ; 'ಅಭಿಮಾನಿ', 'ಅರಗಿಣಿ'; 'ಸಂಚು' ಪತ್ರಿಕೆಗಳ **ಟಿ. ವೆಂಕಟೇಶ್** ; 'ಡೆಕ್ಕನ್ ಹೆರಾಲ್ಡ್'ನ **ಯಶವಂತಕುಮಾರ್** ; ಸ್ವತಂತ್ರ ಪತ್ರಕರ್ತ **ಸಿ. ವಿ. ರಾಜಗೋಪಾಲ್** ; 'ಕಿಡಿ' ಪತ್ರಿಕೆಯ **ಶೇಷಪ್ಪ** ; ಉತ್ಥಾನದ **ಎಸ್. ಆರ್. ವೆಂಕಟರಾವ್** ; 'ರಾಯಭಾರಿ' ಪತ್ರಿಕೆಯ **ಎಸ್. ಎಲ್. ಭಟ್** ; 'ಉದಯವಾಣಿ'ಯ **ಟಿ. ಸತೀಶ್, ಯು. ಪೈ** ಮತ್ತು **ಈಶ್ವರ ಭಟ್** ಮುಂತಾಗಿ ಬಹಳಷ್ಟುಮಂದಿ ಇದ್ದಾರೆ... ಇಂದಿಗೆ ಈ ವಿಚಾರ ಸಂಕಿರಣ ಮುಕ್ತಾಯ ಮಾಡೋಣ. ನಾಳೆ ಪುನಃ ಪ್ರಾರಂಭಿಸೋಣ" ಆಕಳಿಸಿ, ಮೈಮುರಿದು ಮೇಲೆದ್ದರು ವ್ಯಾಸರಾಯರು.

–000–

## (ಊ) ಶಿಶುಸಾಹಿತ್ಯ ರಚನಕಾರರು

"ಇವತ್ತು ಯಾರ ವಿಷಯ ಪ್ರಾರಂಭಿಸ್ತೀರಿ ತಾತ" ದಿನೇಶ ಪ್ರಶ್ನಿಸಿದ.

"ಇಂದು ನಿಮಗೆಲ್ಲಾ ಅತ್ಯಂತ ಪ್ರಿಯವಾದ ಮಕ್ಕಳ ಸಾಹಿತ್ಯ ಸಂಪನ್ನಗೊಳಿಸಿರೊ ಸಾಹಿತಿಗಳ ಪರಿಚಯ ಮಾಡಿಕೊಡ್ತೀನಿ" ವ್ಯಾಸರಾಯರು ನುಡಿದೊಡನೆ ಮುಕುಂದ ಎದ್ದು ನಿಂತು ಸಂತೋಷದಿಂದ ಹೇಳಿದ "ತಾತ....ತಾತ....ಹೋದವರ್ಷ ಈ ಬಗ್ಗೆ ಪ್ರಜಾಮತದಲ್ಲಿ ಒಂದು ಧಾರವಾಹಿ ಲೇಖನಮಾಲೆ ಬರ್‍ತಾ ಇತ್ತು. ತುಂಬಾ ಚೆನ್ನಾಗಿತ್ತು. ಸುಮಾರು ಒಂದು ವರ್ಷ ಬಂತು ಅಂತಾ ಕಾಣ್ಸುತ್ತೆ....ನಾನು ಇದ್ರಲ್ಲಿ ಬಹಳಷ್ಟು ಓದಿದ್ದೀನಿ.... ಲೇಖಕರ ಪರಿಚಯ ಮಾಡ್ತೋದರ ಜೊತೇಲಿ ಅವರ ಕೃತಿಗಳ ಒಳ್ಳೇ ಭಾಗಗಳನ್ನು ಅದ್ರಲ್ಲಿ ಉದಾಹರಿಸಿದ್ರು...."

"ಹೌದು....ಹೌದು.... ಅದನ್ನು ಬರ್ದೋರು ಎಸ್. ವಿ. ಶ್ರೀನಿವಾಸರಾವ್ ಅಂತಾ" ಈಗ ಈ ಲೇಖನ ಮಾಲೆ ಪುಸ್ತಕ ರೂಪದಲ್ಲೂ ಹೊರಬಂದಿದೆ. ಹೆಸ್ರು 'ಮಕ್ಕಳೇ ಇವರನ್ನು ನೀವು ಬಲ್ಲಿರಾ ?' ಅಂತಾ.

"ನಾನು ಆ ಪುಸ್ತಕ ಮೊನ್ನೆ ನಡೆದ ಪುಸ್ತಕ ಪ್ರದರ್ಶನದಲ್ಲಿ ಕೊಂಡ್ಕೊಂಡು ಬಂದಿದ್ದೀನಿ ಸಾರ್.." ನುಡಿದ ಮುರುಳಿ.

"ಒಳ್ಳೇದು, ನನ್ನಹತ್ರಾನೂ ಒಂದು ಕಾಪಿ ಇದೆ, ಕೊಡ್ತೀನಿ ಎಲ್ಲಾರೂ ಓದಿ" ನುಡಿದರು ಮಾಸ್ತರು.

"ನಮ್ಮನೇಲೂ ಒಂದು ಕಾಪಿ ಇಲ್ಲಿ. ತಂದ್ಕೊಡಿ ವ್ಯಾಸಣ್ಣ" ಅಡಿಗೆ ಮನೆಯಲ್ಲೇ ನುಡಿದರು ಪದ್ಮಮ್ಮ.

"ಅಡಿಗೆ ಮನೇಲಿ ಕೆಲ್ಸಮಾಡ್ತಾ ಇದ್ರೂ ಅಮ್ಮಂಗೆ ತಾತನ ಮಾತ್ನ ಕಡೇಸೆ ಜ್ಞಾನ" ದಿನಕರ ನುಡಿದ.

"ಹರಿಕಥೆ, ಪುರಾಣಕ್ಕಿಂತ ಅಮ್ಮಂಗೆ ಈ ನಡ್ವೆ ತಾತನ ಭಾಷಣದಲ್ಲೇ ಆಸಕ್ತಿ ಬಂದ್ಬಿಟ್ಟಿದೆ", ದಿನೇಶನ ಮಾತು ಕೇಳಿ ತಾಯಿ ಸೆರಗಿಗೆ ಕೈ ಒರೆಸಿಕೊಳ್ಳುತ್ತ ಹೊರಗೆ ಬಂದರು. ಮುಸಿ ನಗುತ್ತ.

"ಆಟ ಆಡೋದು, ಟಿ. ವಿ. ನೋಡೋದು ಬಿಟ್ಟೇ ನೀವೆಲ್ಲಾ ಹೀಗೆ ಆಸಕ್ತಿಯಿಂದ ಕೇಳ್ತಾ ಇರೋದು ನೋಡಿ ನಂಗೂ ಸ್ವಲ್ಪ ಕೇಳೋ ಹುಚ್ಚು ಬಂದಿರೋದು ತಪ್ಪೇ ವ್ಯಾಸಣ್ಣ ?" ಹುರಿಗಾಳಿನ ತಟ್ಟೆ ಹುಡುಗರ ಮುಂದಿರಿಸಿದರು.

"ಹೂಂ....ಇನ್ನು ಮುಂದ್ವರ್ಸಿ ಮೇಷ್ಟ್ರೆ", ಬಾಯಿಗೆ ಒಂದು ಹಿಡಿ ಹುರಿಗಾಳನ್ನು ತುಂಬಿ ಕೊಳ್ಳುತ್ತ ನುಡಿದ ದಿನಕರ. "ಹೂಂ... ಎಲ್ಲಾರು ನಾಲ್ಕು ನಾಲ್ಕು ಕಾಳು

ಶಿನ್ಹಾಇರಿ....ನಾನು ಬೈರಿಗೆ ಶುರುಮಾಡ್ತೀನಿ" ವ್ಯಾಸರಾಯರು ಮಕ್ಕಳತ್ತ ಹುಡುಗರತ್ತ ದೃಷ್ಟಿಹರಿಸಿ ಉಪನ್ಯಾಸ ಪ್ರಾರಂಭಿಸಿದರು.

"ಶ್ರೀನಿವಾಸರಾಯರ ಪುಸ್ತಕದಲ್ಲಿ ನಿಮಗೆ ಸಾಕಷ್ಟು ಗ್ರಾಸ ಸಿಕ್ಕುತ್ತೆ. ಇವತ್ತು ಸಾಯಂಕಾಲ ಇನ್ನೊಂದು ಪುಸ್ತಕ ತಂದು ಕೊಡ್ತೀನಿ. ನೀವೇ ಓದ್ಕೊಂಡ್ಬಿಡಿ. ಮತ್ತು ವಿವರ ಸಿಕ್ಕುತ್ತೆ. ಶ್ರೀನಿವಾಸರಾಯರು ಬಿಟ್ಟರೊ ಕೆಲ ಶಿಶುಸಾಹಿತಿಗಳ ವಿಷಯ ವಿವರವಾಗಿ ಹೇಳಿ, ಉಳಿದವರ ವಿಷಯ ಮೊಟಕಾಗಿ ಹೇಳ್ತೀನಿ. ಆಗ್ಬೊಹುದು ತಾನೇ ?"

"ಆಗ್ಬಹುದು ಸಾರ್,...." ಮುರುಳಿ ನುಡಿದ. ಉಳಿದವರೆಲ್ಲ ತಲೆ ಅಲ್ಲಾಡಿಸಿ ಸಮ್ಮತಿ ಸೂಚಿಸಿದರು.

ಮನುಷ್ಯನಲ್ಲಿ ಬುದ್ಧಿಶಕ್ತಿ ಬೆಳೆದಂತೆಯೇ, ಕಥೆ ಹೇಳುವ ಕೇಳುವ, ಪದ್ಧತಿಯು ಪ್ರಾರಂಭವಾಯಿತೆಂದು ಹೇಳಬಹುದು. ಪಂಚತಂತ್ರ, ಹಿತೋಪದೇಶ, ಉಪನಿಷತ್ ಕಥೆಗಳು, ಜಾತಕದ ಕಥೆಗಳು, ಸಾವಿರಾರು ವರ್ಷಗಳಷ್ಟು ಹಿಂದಿನವು. ಗ್ರೀಸ್ ದೇಶದ ಈಸೋಪನ ಕಥೆಗಳು ಕ್ರಿ.ಪೂ. 7ನೇ ಶತಮಾನದ್ದೆಂದು ತಿಳಿದು ಬರುತ್ತವೆ.

18ನೇ ಶತಮಾನದಿಂದೀಚೆಗೆ ಪ್ರಪಂಚದಾದ್ಯಂತ ಶಿಶುಸಾಹಿತ್ಯ ಕಂಡು ಬರುತ್ತದೆ. ಆದರೆ ಕರ್ನಾಟಕದಲ್ಲಿ ದುರ್ಗಸಿಂಹ ಕ್ರಿ.ಶ. ಸುಮಾರು 1130ರಲ್ಲಿ 'ಕರ್ನಾಟಕ ಪಂಚತಂತ್ರ' (ಸಂಸ್ಕೃತ 'ಪಂಚತಂತ್ರ'ದ ಅನುವಾದ) ಎಂಬ ಗ್ರಂಥವನ್ನು ಹೊರತಂದಿದ್ದುದು ತಿಳಿದು ಬರುತ್ತದೆ. 'ಪಂಚತಂತ್ರ'ವೇ ಪ್ರಪಂಚದ ಬಹಳಷ್ಟು ಭಾಷೆಗಳಿಗೆ (ಸುಮಾರು ಐವತ್ತು) ಅನುವಾದಿತಗೊಂಡಿರುವ ಗ್ರಂಥ. ಭಾರತದ ಬುದ್ಧನ ಕತೆಗಳು ಕ್ರಿ.ಶ. 7ನೇ ಶತಮಾನದ ಹೊತ್ತಿಗಾಗಲೇ ಚೀನಿ ಭಾಷೆಗೆ ಅನುವಾದಿತ ಗೊಂಡಿದ್ದವು. ಕ್ರಿ.ಪೂ. 5ನೇ ಶತಮಾನದಷ್ಟು ಪುರಾತನವಾದ ಜಾತಕ ಕಥೆ, ಚಿತ್ರ ರೂಪದಲ್ಲಿ ಅಜಂತಾ ಗುಹೆಗಳಲ್ಲಿ ಮೂಡಿರುವುದನ್ನು ಕಾಣುತ್ತೇವೆ. ಇವುಗಳಿಂದ ಭಾರತ ಕಥೆಗಳ ಪ್ರಾಚೀನತೆ ಅರಿವಾಗುತ್ತದೆ.

ಕ್ರಿ.ಶ. ಒಂದನೇ ಶತಮಾನದ ಪ್ರಾರಂಭದಲ್ಲಿ ಈಸೋಪನ ಕಥೆಗಳು ಲ್ಯಾಟಿನ್ ಭಾಷೆಗೆ ತರ್ಜುಮೆಗೊಂಡವು. ಇದಕ್ಕೆ ಈಗಿನ ವ್ಯವಸ್ಥಿತ ರೂಪಕೊಟ್ಟವನು, 14ನೇ ಶತಮಾನದಲ್ಲಿದ್ದ ಕ್ರೈಸ್ತ ಸನ್ಯಾಸಿಯೊಬ್ಬ. ಮೊಟ್ಟ ಮೊದಲು ಮಕ್ಕಳಿಗೆಂದೇ ಸಾಹಿತ್ಯ ರಚಿಸಿದವನು, ಇಂಗ್ಲೆಂಡಿನ 'ಬೀಡ್'.

ಯೂರೋಪಿನಲ್ಲಿ 12ನೇ ಶತಮಾನದ ನಂತರವೇ ಕಥೆಗಳು ಕಾಣ ಬರುತ್ತವೆ. 15ನೇ ಶತಮಾನದಲ್ಲಿ ಮುದ್ರಣ ರೂಢಿಗೆ ಬಂದರೂ 18ನೇ ಶತಮಾನದಿಂದೀಚೆಗೆ ಮಕ್ಕಳ ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸುತ್ತೇವೆ. ಪರ್ಷಿಯನ್ ಭಾಷೆಯ 'ಸಾವಿರದೊಂದು ರಾತ್ರಿ', ಡೇನಿಯಲ್ ಡೆಫೋನ 'ರಾಬಿನ್ಸನ್ ಕ್ರೂಸೊ', ಜೋನಾಥನ್ ಸ್ವಿಫ್ಟ್‌ನ 'ಗಲಿವರನ ಪ್ರವಾಸ', ಗ್ರಿಮ್ ಸಹೋದರರ 'ಕಿನ್ನರ ಕಥೆಗಳು', ಜೂಲ್ಸ್ ವರ್ನ್‌ನ ರೋಮಾಂಚಕಾರಿ ಕತೆಗಳು (ಸಮುದ್ರ ಗರ್ಭದಲ್ಲಿ 20,000 ಹರದಾರಿ,

ಭೂಮಿಯಿಂದ ಚಂದ್ರನೆಡೆಗೆ, ಭೂಮಿಯ ಸುತ್ತ 80 ದಿನಗಳಲ್ಲಿ, ಆಕಾಶ ಬುಟ್ಟಿಯಲ್ಲಿ 5 ವಾರಗಳು, ಭೂ ಕೇಂದ್ರದೆಡೆಗೆ, ರಹಸ್ಯಮಯ ದ್ವೀಪ ಇತ್ಯಾದಿ), ಸ್ಟೀವನ್‌ಸನ್‌ನ 'ಸಿರಿದ್ವೀಪ'. ಲೂಯಿಸ್‌ಕ್ಯಾರೆಲ್‌ನ 'ಅಲಿಸ್ ಇನ್ ವಂಡರ್‌ಲ್ಯಾಂಡ್', ಕಿಪ್ಲಿಂಗ್‌ನ 'ಜಂಗಲ್ ಬುಕ್', ಜ್ಯೂನ್‌ನ್ಯೂಬರಿಯ 'ಮದರ್ ಗೂಸ್'. ಮಾರ್ಕ್‌ಟ್ವೇನ್‌ನ 'ಟಾಮ್ ಸಾಯರನ ಸಾಹಸಗಳು', ಕಾರ್ಲೋಕಲಾಡಿಯನ್‌ನ 'ಪಿನೋಕಿಯೋ' ಹೆಸರಿಸಬಹುದಾದ ಕೃತಿಗಳು.

ಕರ್ನಾಟಕದಲ್ಲಿ ದುರ್ಗಸಿಂಹನ ನಂತರ ಮಕ್ಕಳ ಸಾಹಿತ್ಯ ರಚನೆಗೊಂಡದ್ದು 19ನೇ ಶತಮಾನದಲ್ಲಿ ಎಂದು ಹೇಳಬಹುದು.

ಮುಖ್ಯರಾದವರುಗಳು ಹಾಗೂ ಅವರ ಕೆಲ ಕೃತಿಗಳ ಪರಿಚಯ ಮಾಡಿಕೊಳ್ಳೋಣ.

**ಗಂಗಾಧರ ಮಡಿವಾಳೇಶ್ವರ ತುರಮರಿ** * : ಹಳಗನ್ನಡ, ಸಂಸ್ಕೃತ ಆಳವಾಗಿ ಅಧ್ಯಯನ ಮಾಡಿದ್ದವರು. ಉಪಾಧ್ಯಾಯರಾಗಿದ್ದು ಕನ್ನಡ ಸಾಹಿತ್ಯಕ್ಕಾಗಿ ಅಪಾರ ಸೇವೆ ಮಾಡಿದ್ದಾರೆ. ಕೆಲವು ಲೋಕೋಪಯೋಗಿ ಪುಸ್ತಕಗಳನ್ನು ಪರಿಷ್ಕರಿಸಿದ್ದಲ್ಲದೆ ಕನ್ನಡ ಐದನೇ ಪುಸ್ತಕ (1872) ರಚಿಸಿದ ಹೆಗ್ಗಳಿಕೆ ಇವರದು.

ಪರಿಷ್ಕರಿಸಿದ್ದ ಮಕ್ಕಳ ಪಠ್ಯ ಪುಸ್ತಕಗಳು : ಕನ್ನಡ 1 ಮತ್ತು 2ನೇ ಪುಸ್ತಕ.

ಗಂಗಾಧರಯ್ಯನವರ ಕನ್ನಡಶೈಲಿಗೆ ಉದಾಹರಣೆ : '........ಗ್ಯಾಲಿಲಿಯೋನು ಸರ್ವಜನರ ಹಿತಕ್ಕೋಸ್ಕರವಾಗಿ ಮಾಡಿದ ಗ್ರಂಥವನ್ನು ತೆಗೆದುಕೊಂಡು ಸನ್ ೧೬೩೦ ನೇ ಇಸವಿಯಲ್ಲಿ ರೋಮ್ ಪಟ್ಟಣಕ್ಕೆ ಹೋದನು. ಆವಾಗ ಅವನು ೬೬ ವರ್ಷದವನಾಗಿದ್ದನು. ಬಳಿಕ ಧರ್ಮಾಧಿಕಾರಿಗಳೂ, ವಿದ್ವಾಂಸರೂ ಕೂಡಿ ಸಭೆಯನ್ನು ಮಾಡಿ, ಈ ಗ್ರಂಥವನ್ನು ಓದುವುದರಿಂದ ಜನರು ಕೆಟ್ಟು ಹೋದಾರೆಂದು ನಿರ್ಣಯಿಸಿದರು. ಆ ಕಾಲದೊಳಗೆ ರೋಮ್ ಪಟ್ಟಣದೊಳಗೆ ಪಾಖಂಡ ಜನರ ವಿಚಾರಸಲುವಾಗಿ ಇನ್‌ಕ್ವಿಜಿಶನ್ ಎಂಬ ಸಭೆ ಇತ್ತು. ಆ ಸಭೆಯವರು ಗ್ಯಾಲಿಲಿಯೋನನ್ನು ಕೆಲವು ದಿವಸಗಳ ತನಕ ಸೆರೆಯೊಳಗಿಟ್ಟು, ಕಡೆಗೆ ಹೇಳಿದ್ದೇನೆಂದರೆ ನಮ್ಮ ಮುಂದೆ ನೀನು ಕೈ ಜೋಡಿಸಿ ನಿಂತುಕೊಂಡು ಇಂದಿನ ತನಕ ನಾನು ಅಜ್ಞಾನದೊಳಗಿದ್ದೆನು. ಈಗ ಅದರೊಳಗಿಂದ ಮುಕ್ತನಾದನೆಂದು ಒಡಂಬಡು ; ಯಾಕೆಂದರೆ ಈ ಅಜ್ಞಾನದಿಂದ ನಿನಗೆ ಬಹಳ ಪಾಪ ತಟ್ಟಿದೆ........' ಸಿಟ್ಟಿಗೆದ್ದು ಭೂಮಿಯನ್ನು ಒದ್ದು, ನಾನು ಇಲ್ಲಿಯೇನು ಅಂದಾಗ್ಯಾದರೂ ಪೃಥ್ವಿಯು ತಿರುಗುವುದು ಸತ್ಯವೆಂದನು".

ಈ ಪುಸ್ತಕದಲ್ಲಿರುವ ಅಂದಿನ ಜನಪ್ರಿಯ ಗಾದೆಗಳು :

ಕಾಡಿನಲ್ಲಿ ಹುಲಿ ಕೂಗಿದರೆ ನಾಡಿನಲ್ಲಿ ಒಕ್ಕಲು ತೆಗೆದರಂತೆ, ಕಿಚ್ಚಿಗಂಜದವ

---

* ಜೀವಿತಕಾಲ : ಸು. (1827-1877). ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ 'ತುರಮರಿ' ಗ್ರಾಮದಲ್ಲಿ ಜನನ. ತಂದೆ : ಚೆನ್ನಬಸಪ್ಪ.

ಬೂದಿಗಂಜುವನು, ಕಿವುಡ ಯಜಮಾನನಿಗೆ ಮೂಕ ಬಂಟ, ಜೋಡು ಇದ್ದರೆ ನಾಡು ತಿರುಗಬಹುದು, ತಗ್ಗಿದವಯೆಂದಿಗೂ ನುಗ್ಗಾಗ, ಬಾಲಸನ್ಯಾಸಿ ಕೆಟ್ಟರೆ ಖೂಳ ನಾಯಿಗಿಂತ ಕಡೆ, ಭಂಗಿ ಮುಕ್ಕುವವನಿಗೆ ಅಂಗಿಯಾದರೂ ಉಳಿಯುದು, ಸುಣ್ಣ ದೇವರಿಗೆ ಮಜ್ಜನವೇ ಸಾಕ್ಷಿ, ಮಾನ ಹೋದ ಮೇಲೆ ಮರಣವಾದ ಹಾಗೆ, ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ ಮುಟ್ಟುವುದು ಇತ್ಯಾದಿ.

ಇವರ ಇತರ ಕೃತಿಗಳು: ಶಬ್ದಮಣಿ ದರ್ಪಣದ ವ್ಯಾಖ್ಯಾನ (1866), ಶಬ್ದಮಂಜರಿ (1869), ರಾಜಶೇಖರವಿಳಾಸದ ಮೊದಲನೆ ಆಶ್ವಾಸನದ ಟೀಕೆ (1871).

**ವೆಂಕಟರಂಗೋ ಕಟ್ಟಿ** * : ಡಾ॥ ದ. ರಾ. ಬೇಂದ್ರೆಯವರು ಇವರ ಬಗ್ಗೆ 'ವೆಂಕಟರಂಗೋಕಟ್ಟಿಯವರು ಉತ್ತರ ಕರ್ನಾಟಕದ ಇಂದಿನ ಗದ್ಯಶೈಲಿಗೆ ರೂಪ ಕೊಟ್ಟವರಲ್ಲಿ ಒಬ್ಬರು. ಇವರು ಶಿಕ್ಷಣ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಮನಸ್ಸುಳ್ಳವರು, ರಸಲ್‌ರವರ ಸೇನಾನಿಯಾಗಿ ಕನ್ನಡ ಚಳವಳಿಗೆ ಕಳೆ ತಂದವರು' ಎಂದು ಹೇಳಿದ್ದಾರೆ. ಸಾರಸ್ವತ ಲೋಕಕ್ಕೆ ಇವರು ಅಪೂರ್ವ ಕೊಡುಗೆಗಳನ್ನು ನೀಡಿದ್ದಾರೆ.

ಪ್ರಪ್ರಥಮವಾಗಿ 'ಅಖಂಡ ಕರ್ನಾಟಕದ ಭೂಪಟ'ವನ್ನು ನಿರ್ಮಿಸಿದ ಶ್ರೇಯಸ್ಸು ಇವರದು. 'ಕನ್ನಡ ಐದನೆ ಪುಸ್ತಕ' ಮತ್ತು ಕನ್ನಡ 'ಆರನೇ ಪುಸ್ತಕ'ಗಳನ್ನು ರಚಿಸಿ ಶಿಶುಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ. 'ಸುರಸ ಕಥೆಗಳ ಸಂಗ್ರಹ' (1863), ಈ ವಿಭಾಗಕ್ಕೆ ಇವರ ಇನ್ನೊಂದು ಅಮೋಘ ಕೊಡುಗೆ. ಅವರ ಶೈಲಿಗೆ ಉದಾಹರಣೆ: '........(ಅವಳು) ಕುಳಿತಿರುವುದನ್ನು ಕಂಡು ಕೋಪದಿಂದಡಿಗಳನ್ನು ಝಾಡಿಸಿ ಕತ್ತಿಯನ್ನು ತಡವಿಲ್ಲದೇ ಪಡಕೊಂಡು, ನಡಹುಬ್ಬುಗಳನ್ನು ಕೂಡಿಸಿ ಸುಡು ಸುಡುವ ಕೆಂಡದಂಥ ಕಣ್ಣುಗಳೊಡನೆ, ಮುಂದೆ ನಡೆದು ಹೋಗಿ, ಸಿಟ್ಟುತಾಳದೇ ಆ ದುಷ್ಟನನ್ನು ನಟ್ಟನಡುವೆ ಕಟ್ಟನೆ ಕಡಿದು ಒಟ್ಟಿಗೆ ಒಂದೇ ಮೊಟ್ಟೆಯೊಳಗೆ ಗಟ್ಟಿಯಾಗಿ ಕಟ್ಟಿ ಆ ಕೊಠಡಿಯ ಕಿಡಿಕಿಯೊಳಗಿಂದ ಅದನ್ನು ಪಟ್ಣದ ಕೋಟೆಯ ಕಂದಕದೊಳಗೆ ಬಿಟ್ಟುಬಿಟ್ಟನು' ಇದೂ ಅಲ್ಲದೆ "ಅವನು ತನ್ನ ಸೇವಕರಿಗ ಖಾನಾತಯಾರು ಮಾಡುವುದಕ್ಕೆ ಅಪ್ಪಣೆ ಕೊಟ್ಟನು....".

ಕನ್ನಡ ಆರನೇ ಪುಸ್ತಕದಲ್ಲಿ ವಿಜ್ಞಾನ, ಸಾಹಿತ್ಯ, ತತ್ವಜ್ಞಾನ, ಶರೀರಶಾಸ್ತ್ರ ಮೊದಲಾದವುಗಳನ್ನು ಕುರಿತ ಪಾಠಗಳಿವೆ. ಆಗಿನ ಶಿಕ್ಷಣದ ಮಟ್ಟ ನೋಡಿದರೆ. ಈಗಿನ ನಮ್ಮ ಶಿಕ್ಷಣದ ಮಟ್ಟ ಬಹು ಕುಸಿದಿದೆ ಅನಿಸದೆ ಇರದು.

---

* ಜೀವಿತಕಾಲ: (1833–1909). ಜನಿಸಿದ್ದು 'ಬಟಕುರಕಿ' ಗ್ರಾಮದಲ್ಲಿ. ಪುಣೆಯ ಸರಕಾರಿ ಟ್ರೈನಿಂಗ್ ಕಾಲೇಜು ಹಾಗೂ ಬೆಳಗಾವಿ ನಾರ್ಮಲ್ ಶಾಲೆಯಲ್ಲಿ ಅಧ್ಯಾಪಕ/ ಪ್ರಿನ್ಸಿಪಾಲರಾಗಿದ್ದರು.

ಉದಾ : 'ಅನುಭವ ರಸಾಯನ' ಪಠ್ಯಭಾಗದಿಂದ ಉದ್ಧೃತ :'

"ಭ್ರಾಂತಿಯೇತಕ್ಕೆ ಬಂದುದು—ವಿವೇಕವಿಲ್ಲದ ಕಾರಣಂ ಬಂದುದು ; ವಿವೇಕವೆಂದರೇನು ?—ಹಿಂಗಡಿಸಿ ನೋಡುವುದು—ಯಾವ ಪದಾರ್ಥಗಳಂ ? ಸರ್ವ ಪದಾರ್ಥಗಳನು—ಸರ್ವ ಪದಾರ್ಥಂಗಳೂ ದೋಷಾಕ್ರಾಂತಂಗಳೇ ? ಅಹುದು—ಇದೆಂತು ? ಯದ್ದೃಷ್ಟಂ ತನ್ನಿಷ್ಟಮೆಂಬದರಿಂ ನೋಡತಕ್ಕ ಪದಾರ್ಥಗಳೆಲ್ಲವು ನೋಟದಿಂ ಸಾಧ್ಯಮಾದದರಿಂ ಜಡವಾಗಿ ಕೆಡುವದಾದುದರಿಂ ದೋಷಾಕ್ರಾಂತಂಗಳು. ಕೆಲವು ಸಾಂಸರ್ಗಿಕ ದೋಷಂಗಳು, ಕೆಲವು ಕಾಲಕೃತ ದೋಷಂಗಳು, ಕೆಲವು ಕರ್ಮಕೃತ ದೋಷಂಗಳು—ಅವಾವವು ?..........."

ಇವರ ಇತರ ಕೃತಿಗಳು : ಆರು ಬೆರಳಿನ ಕುರುಹು (ನಾಟಕ), ನರತನು (ಶರೀರಶಾಸ್ತ್ರ ಕುರಿತ ಗ್ರಂಥ), ಕರ್ನಾಟಕ ವರ್ಣನೆಯೂ ಇತಿಹಾಸವೂ (ಇತಿಹಾಸ), ವಿಧವೆಗಳ ಮುಂಡನ ಅನಾಚಾರವು, ಸಟೀಕಜೈಮಿನಿ, ಉಪನ್ಯಾಸವಿದ್ಯಾ, ಬರ್ಥೋಲ್ಡನ ಚರಿತ್ರೆ, ಕರ್ನಾಟಕ ಗ್ಯಾಝೆಟಿಯರ್ (ಉದ್ಗ್ರಂಥ).

ಕಟ್ಟಿಯವರು 'ಶಾಲಾ ಪತ್ರಕ', 'ಲೋಕಶಿಕ್ಷಕ' ಮತ್ತು 'ಕರ್ನಾಟಕ ಪತ್ರ' ಪತ್ರಿಕೆಗಳನ್ನು ಸ್ಥಾಪಿಸಿ ಅವುಗಳ ಸಂಪಾದಕರಾಗಿದ್ದರು. ಕರ್ನಾಟಕ ವಿದ್ಯಾವರ್ಧಕ ಸಂಘದ (1890) ಪ್ರಥಮ ಉಪಾಧ್ಯಕ್ಷರಾಗಿದ್ದರು. ಧಾರವಾಡದ ಟ್ರೈನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು (1876–1890).

**ಚ. ವಾಸುದೇವಯ್ಯ** [1] : ಇವರು ರಚಿಸಿದ್ದ ಆಟ-ಊಟ-ಓಟದಿಂದ ಪ್ರಾರಂಭವಾಗುವ 'ಕನ್ನಡ ಬಾಲಬೋಧೆ'ಯನ್ನು (ರಚನೆ ಸು. ಕ್ರಿ.ಶ. 1878) ಓದಿದ್ದ ಹಿರಿಯರೆಲ್ಲಾ ಅದನ್ನು 'ಮಕ್ಕಳ ವೇದ'ವೆಂದೇ ಪರಿಗಣಿಸಿದ್ದರು. ಮಕ್ಕಳಿಗೆ ಪ್ರಿಯವಾದ ಕೈತುತ್ತು, ಬುತ್ತಿಚೆಂಡು, ತಂದೆ, ತಾಯಿ, ಹುಲಿ, ಇಲಿ, ಬಾಳೆತೋಟ ಮುಂತಾದ ಪುಟ್ಟಪುಟ್ಟ ಪದಗಳಿಂದಲೇ ಈ ಪುಸ್ತಕ ತುಂಬಿದೆ. 60 ವರ್ಷಕ್ಕೂ ಹೆಚ್ಚು ಕಾಲ ಇದು ಪ್ರಾಥಮಿಕ ಶಾಲಾ ಮಕ್ಕಳಿಗೆ ಪಠ್ಯಪುಸ್ತಕವಾಗಿತ್ತೆಂದರೆ ಅದರ ಜನಪ್ರಿಯತೆಯು ಅರ್ಥವಾದೀತು.

ಇವರ ಇತರ ಕೃತಿಗಳು : ಆರ್ಯಕೀರ್ತಿ (ಬಂಗಾಳಿಯ ರಜನಿಕಾಂತ ಗುಪ್ತಾರವರ 'ರಾಜಪುತ್ರಿ ಮಹಿಮೆ'ಯ ಅನುವಾದ) ; ಛತ್ರಪತಿ ಶಿವಾಜಿ, ಸರಳಾರೋಗ್ಯ, ಭೀಷ್ಮ ಚರಿತೆ.

**ಎಂ. ಎಸ್. ಪುಟ್ಟಣ್ಣ** [2] : ಪುಟ್ಟಣ್ಣನವರು ಪುರಾಣ, ಇತಿಹಾಸ ಹಾಗೂ

---

1 ಜೀವಿತಕಾಲ : (1852–1943). ಜನಿಸಿದ್ದು ಚನ್ನಪಟ್ಟಣದಲ್ಲಿ. ತಂದೆ : ವೆಂಕಟರಾಮಯ್ಯ. ಹೆಚ್ಚಿನ ವಿವರಗಳಿಗೆ 'ಮಕ್ಕಳೇ, ಇವರನ್ನು ನೀವು ಬಲ್ಲಿರಾ?' ಗ್ರಂಥ ನೋಡಿ.

2 ಜೀವಿತಕಾಲ : (1854–1930). ಜನನ ಮೈಸೂರಿನಲ್ಲಿ. ತಂದೆ : ಸೂರ್ಯನಾರಾಯಣ ಶಾಸ್ತ್ರಿ.

ಜನಜೀವನದಿಂದ ಕುತೂಹಲ ಘಟನೆಗಳನ್ನು ಆಯ್ದು ಪುಟ್ಟ ಪುಟ್ಟ ವಾಕ್ಯಗಳಲ್ಲಿ ಮಕ್ಕಳ ಮನರಂಜಿಸುವ ರೀತಿಯಲ್ಲಿ ಕಥೆಗಳನ್ನು ಹೆಣೆದಿರುವುದು ಇವರ ವೈಶಿಷ್ಟ್ಯ.

ಎಲ್ಲಾ ಕಥೆಗಳ ಪ್ರಾರಂಭದಲ್ಲೂ ಪುಟ್ಟಣ್ಣನವರು ಸಾಮಾನ್ಯವಾಗಿ ಭಾರತ, ಭಾಗವತ, ರಾಮಾಯಣ, ಭಗವದ್ಗೀತೆ, ದಾಸರಪದ, ಸರ್ವಜ್ಞಪದ ಮುಂತಾದವುಗಳಿಂದ ಒಂದು ಸೂಕ್ತ ಶ್ಲೋಕ ಅಥವಾ ಪದ್ಯ ಉದಾಹರಿಸಿ ಕಥೆಯ ಅಂತ್ಯದಲ್ಲಿ ಒಂದು ನೀತಿವಾಕ್ಯ ಹೇಳುತ್ತಾರೆ. ಇದು ಮಕ್ಕಳ ಮನಸ್ಸಿನ ಮೇಲೆ ಬಹಳ ಒಳ್ಳೆಯ ಪರಿಣಾಮ ಬೀರುತ್ತದೆ.

ಮಾದಪೂರ ಧ್ವಜನ ಕಥೆ ಹೇಳಿ, ಅದರ ನೀತಿ 'ಕೊಟ್ಟು ಕೆಟ್ಟವರಿಲ್ಲ, ತಿಂದು ಬದುಕಿದವನಿಲ್ಲ; ದೇಹಿ ಎಂದವನಿಗೆ ನಾಸ್ತಿ ಎನಬೇಡಿ' ಎನ್ನುತ್ತಾರೆ. ಕಶ್ಯಪನ ಕಥೆ ಹೇಳಿ, 'ಕೈಯಲ್ಲಿ ಹಿಡಿಯದಿದ್ದವ ಮೈಯೆಲ್ಲಾ ಪರಚಿಕೊಂಡ' ಎಂಬ ಗಾದೆ ನುಡಿಯುತ್ತಾರೆ. 'ವ್ಯಾಧನು ಅನ್ನದಾನ ಮಾಡಿದ್ದು' ಕಥೆಯಡಿಯಲ್ಲಿ 'ಮರ್ಮ ತಿಳಿದು ಧರ್ಮ ಮಾಡು', ಎಂದು ಬೋಧಿಸುತ್ತಾರೆ.

ಲಲಿತಭಾಷೆ, ಆಕರ್ಷಕ ಶೈಲಿ ಅವರ ನಿರೂಪಣೆಯ ವೈಶಿಷ್ಟ್ಯ.

ಕೃತಿಗಳು: ನೀತಿಚಿಂತಾಮಣಿ (150 ಕಥೆಗಳ ಕಥಾಕೋಶ), ಮಾಡಿದ್ದುಣ್ಣೋ ಮಹರಾಯ (ಸಾಮಾಜಿಕ ಕಾದಂಬರಿ), ಜಯಸಿಂಹರಾಜಚರಿತ್ರೆ, ಹೇಮಚಂದ್ರ ವಿಲಾಸ (ಅನುವಾದಗಳು), ಸುಮತಿ ಮದನಕುಮಾರರ ಚರಿತ್ರೆ (ನೀತಿಕಥೆಗಳು).

**ಕರ್ಕಿಸೂರಿ ವೆಂಕಟರಮಣ ಶಾಸ್ತ್ರಿ**[1]: ಉದಯಕಾಲದ ಲೇಖಕರಲ್ಲಿ ಪ್ರಮುಖರು. ಪತ್ರಿಕಾ ಸಂಪಾದಕರೂ, ಲೇಖಕರು ಹಾಗೂ ಸಮಾಜ ಸುಧಾರಕರು.

'ಹಿತೋಪದೇಶ' ಇವರು ನಡೆಸುತ್ತಿದ್ದ ಮಾಸಪತ್ರಿಕೆ. ಕನ್ನಡ ಬಾಲಕರ ವಿದ್ಯಾಭ್ಯಾಸಂಗವನ್ನು ಊರ್ಜಿಸುವುದಕ್ಕೆ ಬಹಳ ಸಹಾಯ ಮಾಡಿದ್ದಾರೆ. ಇದರಲ್ಲಿ ಚರಿತ್ರೆ, ಇತಿಹಾಸ, ವಿಜ್ಞಾನಗಳಿದ್ದುದಲ್ಲದೆ ಚಿಕ್ಕಮಕ್ಕಳಿಗಾಗಿ 'ವಿವಿಧ ವೃತ್ತಾಂತ ಸಂಗ್ರಹ' ಮುಖ್ಯ ವಿಭಾಗವೂ ಇದ್ದವು. ವ್ಯಂಗ್ಯಚಿತ್ರಗಳೂ ಇರುತ್ತಿದ್ದವು.

ಇವರ ಕೃತಿಗಳು: ದಕ್ಷಿಣ ಯಾತ್ರಾ ಚರಿತ್ರೆ (1885), ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ (1887), ತುರಂಗ ಭಾರತ (1889).

**ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ (ಗೌರೀಶ)**[2]: ಧಾರವಾಡ ಟ್ರೈನಿಂಗ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಕಿಟ್ಟೆಲ್‌ರವರಿಗೆ ಸಹಾಯಕ

---

1 ಜೀವಿತಕಾಲ: (1855-1925). ಉತ್ತರ ಕನ್ನಡ ಜಿಲ್ಲೆಯ 'ಕರ್ಕಿ' ಗ್ರಾಮದಲ್ಲಿ ಜನನ. ತಂದೆ: ವಿಘ್ನೇಶ್ವರ ಶಾಸ್ತ್ರಿ ಸೂರಿ. 'ಹವ್ಯಕ ಸುಬೋಧ' ಇವರು ನಡೆಸುತ್ತಿದ್ದ ಸಾಪ್ತಾಹಿಕ (1885).

2 ಜೀವಿತಕಾಲ: (1869-1918). ಧಾರವಾಡ ಜಿಲ್ಲೆಯ ಹಾವೇರಿ ತಾಲ್ಲೂಕಿನ 'ಮಲ್ಲೂರು' ಜನ್ಮಸ್ಥಳ. ತಂದೆ: ಸೋಮಪ್ಪ, ತಾಯಿ: ವೀರಾಂಬೆ.

ರಾಗಿದ್ದರು. ಈಗ್ಗೆ ಸುಮಾರು 70 ವರ್ಷಗಳ ಹಿಂದಿನ ತಲೆಮಾರಿನವರು ಕನ್ನಡ ಪಠ್ಯಪುಸ್ತಕಗಳಲ್ಲಿ ಓದುತ್ತಿದ್ದ ಪದ್ಯಗಳೆಲ್ಲಾ ಶಿವರುದ್ರಪ್ಪನವರಿಂದಲೇ ರಚಿತವಾದವುಗಳು. ಇವರು ಕನ್ನಡ ಪಂಡಿತರು. ವೈಯಾಕರಣರೂ ಆಗಿದ್ದರು.

ಇವು ಮೊದಲನೆ ಇಯತ್ತೆಯ ಪುಸ್ತಕದಲ್ಲಿ ಬರುವ ಪದ್ಯಗಳು :

‘ಎದ್ದು ಬೇಗನೆ ಮೋರೆ ತೊಳೆಯಿರಿ
ಬುದ್ಧಿ ಕೊಡುವನಂ ಬಿಡದೆ ನಮಿಸಿರಿ
ತಾಯೆ ನಿನ್ನುಪಕಾರ ಮರೆಯೆ ನಾನೆಂದು
ಮಾಯೆಯುಳ್ಳಾಕೆ ನೀನತಿ ಹಿತದ ಬಂಧು
ಚಿಕ್ಕಂದು ನಾನಳಲು ತಾಯೆ ಮೊಲೆಗೊಟ್ಟು
ಅಕ್ಕರದ ಹಾಲುಣಿಸಿ ಪೊರೆದೆ ಮನವಿಟ್ಟು’

ಹೆಣ್ಣುಮಕ್ಕಳಿಗಾಗಿ ಬರೆದ ಪಠ್ಯಪುಸ್ತಕದಲ್ಲಿನ ಕವನ :

‘ಇಂದು ಪಂಚಮಿ ಹಬ್ಬ ಹರಷದ ಹಬ್ಬ । ಬಾರೌ ಕೆಳದಿಯೇ
ನಂದದಿಂ ಜೋಕಾಲಿಯಾಡಿ ವಿನೋದ ಪಡುವ ಕೆಳದಿಯೇ’.

**ಪದಾರ್ಥ ಬೋಧಿನಿ** (1900) ಶಾಲಾ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ರಚಿತವಾಗಿದ್ದ ಚಿಕ್ಕಪುಸ್ತಕ. **ನನ್ನ ತಾಯಿ** (1901) 64 ಪುಟದ ಈ ಚಿಕ್ಕಪುಸ್ತಕದಲ್ಲಿ ಚಿಕ್ಕಮಕ್ಕಳಿಗಾಗಿ ನೀತಿಬೋಧಕ 34 ಕಥೆಗಳಿವೆ. ಇದರ ಶೈಲಿ ಮನೋಜ್ಞವಾಗಿದೆ. ಅಲ್ಲಲ್ಲಿ ನಡುನಡುವೆ ಪದ್ಯಗಳು ಇವೆ.

ಈ ಕೃತಿಯಲ್ಲಿನ ನಿರೂಪಣೆಗೆ ಉದಾಹರಣೆ :

‘ಕುಂಬಾರರ ಗುಂಡು ದಿನಂಪ್ರತಿ ಶಾಲೆಗೆ ಹೋಗುತ್ತಿದ್ದನು. ಅಲ್ಲಿ ಗುರುಗಳ ಕೂಡ ಬಹು ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು. ಅವರು ಹೇಳಿದ್ದನ್ನು ಮನಸ್ಸುಗೊಟ್ಟು ಕಲಿಯುತ್ತಿದ್ದನು. ಅದರಿಂದ ಅವನು ಬೇಗ ಜಾಣನಾದನು. ಶಾನುಭೋಗರ ಸೀನು ಗುರುಗಳ ಅಪ್ಪಣೆಯಂತೆ ನಡೆಯುತ್ತಿದ್ದಿಲ್ಲ. ಮೇಲೆ ಮೇಲೆ ಶಾಲೆಯನ್ನು ತಪ್ಪಿಸಿ ಆಡಲಿಕ್ಕೆ ಹೋಗುತ್ತಿದ್ದನು. ಇದರಿಂದ ವಿದ್ಯೆ ಬಾರದೆ ದಡ್ಡನಾದನು’.... ಗುಂಡುವಿಗೆ ಮಾನ ದೊರೆತದ್ದು ವಿದ್ಯೆಯಿಂದ ಎಂಬುದು ಇಲ್ಲಿಯ ನೀತಿ. ನಾವು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ, ‘ಜನನದ ಆಕಸ್ಮಿಕ ಮಾತ್ರ ಯಾರಿಗೂ ಮರ್ಯಾದೆಯನ್ನು ತರದು. ನೆಲೆಯಿದ್ದವನಿಗೆ ಬೆಲೆ ಇದೆ’ ಎಂದು ಹೇಳಬೇಕು.

ಭೂಮಂಡಲ ಬೋಧಿನಿ (ಭೂಗೋಳ ಕುರಿತ ಗ್ರಂಥ). **ನಾಡನೆಲೆಗಾರ** (ನೀತಿ ಕಥಾ ಕದಂಬ) ಇದೊಂದು ವೈಶಿಷ್ಟ್ಯಪೂರ್ಣ ಗ್ರಂಥ. ಇದರಲ್ಲಿ ಲಘು ಕಥೆಗಳು, ನಾಣ್ ನುಡಿಗಳು, ಜಾಣ್ ನುಡಿಗಳು, ಕನ್ನಡ ಪಡೆನುಡಿ ಮತ್ತು ತಿರುಳ್ ಕನ್ನಡ ಶೈಲಿ ಈ ಪುಸ್ತಕಕ್ಕೆ ಮೆರುಗನ್ನು ತಂದುಕೊಟ್ಟಿದೆ.

**ವಲ್ಲಭ ಮಹಾಲಿಂಗ ತಟ್ಟಿ**[1]**:** ಕನ್ನಡ ಶಾಲೆಯ ಮಾಸ್ತರು. ಜನಪ್ರಿಯ ಲೇಖಕರು.

'ಮಾತೃಭೂಮಿ ಜನನಿ ನಿನ್ನ ಚರಣ ಸೇವೆಮಾಡುವ....' ಎಂಬ ಪ್ರಸಿದ್ಧ ಕವನ ಇವರಿಂದಲೇ ರಚಿತವಾದುದು. ಇವರ ಬಹಳಷ್ಟು ಲೇಖನಗಳು 'ಪ್ರಭಾತ' ಮಾಸ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

ಇವರ ಕೃತಿಗಳು: ಕನ್ನಡಿಗರ ಜನ್ಮ ಸಾರ್ಥಕತೆ (1899) ; ಗೀತಾವಲೋಕನ, ಗುರುಪ್ರಸಾದ, ಪುನರ್ಜನ್ಮ, ಲಕ್ಷ್ಮೀಬಾಯಿ ಮುಂತಾದವು.

**ಗ. ಹು. ಹೊನ್ನಾಪುರ ಮಠ**[2]**:** (ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರ ಮಠ) ವೃತ್ತಿಯಲ್ಲಿ ವಕೀಲರು, ಪ್ರವೃತ್ತಿಯಲ್ಲಿ ಸಾಹಿತಿಗಳು. ಇವರು ರಚಿಸಿದ್ದ 'ನೀತಿಮಂಜರಿ' ಎಂಬ ಉತ್ಕೃಷ್ಟ ಗ್ರಂಥ ಸುಮಾರು ಹನ್ನೊಂದು ಆವೃತ್ತಿಗಳನ್ನು ಕಂಡು 60 ವರ್ಷಕ್ಕೂ ಹೆಚ್ಚು ಕಾಲ ಶಾಲಾಕ್ಷೇತ್ರದಲ್ಲಿ ಪ್ರಸಿದ್ಧವಾಗಿತ್ತು. (ಇದರಲ್ಲಿ ಸದ್ವರ್ತನ, ಪರೋಪಕಾರ, ಸ್ವಶಿಕ್ಷಣ, ಅಭಿಮಾನ, ಜೀವದ ಉಪಯೋಗ, ಲೌಕಿಕ ಜ್ಞಾನ, ಮನುಷ್ಯ ಜನ್ಮ; ಮರಣ, ನಗೆ, ತಾರುಣ್ಯವೂ, ವೃದ್ಧಾಪ್ಯವೂ ಆಶೆ, ಶಾಂತಿ, ಸೌಖ್ಯಗಳು, ಈಶ್ವರ ಭಕ್ತಿ, ಮತ್ತು ಬ್ರಹ್ಮಚರ್ಯೆ, ಯಕ್ಷ-ಯುಧಿಷ್ಠಿರ ಸಂವಾದ, ಅಕಬರನ ಪ್ರಭಾವವೂ ಅವನ ಆಳ್ವಿಕೆಯೂ, ಶ್ರೀ ರಾಮಕೃಷ್ಣಪರಮಹಂಸರು ಮುಂತಾದ ವಿಭಾಗಗಳಿವೆ).

ನೀತಿಮಂಜರಿಯ ಕೊನೆಯಲ್ಲಿ ಬಾಲಕ-ಬಾಲಕಿಯರಿಗೆ ಹೆಚ್ಚು ಉಪಯೋಗವಾಗ ಬೇಕೆಂದು ನಿಜಲಿಂಗ ಶತಕ, ಸೋಮೇಶ್ವರ ಶತಕ ಹಾಗೂ ಸರ್ವಜ್ಞ ವಚನಗಳ ಕೆಲವು ನೀತಿಪರ ವಚನಗಳನ್ನೂ ನೀಡಿದ್ದಾರೆ.

ಮಕ್ಕಳು ಅನುಕರಣೆಯಿಂದ ಕಲಿಯುತ್ತಾರೆ. ಆದ್ದರಿಂದ ಅವರಿಗೆ ನೇರವಾಗಿ ನೀತಿಬೋಧೆ ಮಾಡುವ ಬದಲು ಅಪ್ರತ್ಯಕ್ಷವಾಗಿ ಉದಾಹರಣೆಗಳ ಮೂಲಕ. [illegible] ಗಳ ಮೂಲಕ ಅವರು ನೀತಿವಂತರಾಗುವಂತೆ, ಸಾಹಸಿಗಳಾಗುವಂತೆ ಮಾಡಬೇಕು- ಇದನ್ನೇ ಹೊನ್ನಾಪುರ ಮಠ ಅವರು ಅನುಸರಿಸಿದ್ದಾರೆ.

ಅವರ ಶೈಲಿಗೆ ಉದಾಹರಣೆ : '....ಒಂದಾನೊಂದು ಕಾಲದಲ್ಲಿ ಚೀನಾ ದೇಶದೊಳಗೆ ಒಬ್ಬ ಬಡಸಿಂಪಿಗನು ಇರುತ್ತಿದ್ದನು. ಅವನು ಎಷ್ಟು ಮೈಮುರಿದು ದುಡಿದಾಗ್ಯೂ ಅವನಿಗೆ ಸಾಕಷ್ಟು ಹಣದ ಗಳಿಕೆಯಾಗುತ್ತಿದ್ದಿಲ್ಲ. ಇದರಿಂದ ಅವನಿಗೆ ತನಗೂ ತನ್ನ ಹೆಂಡತಿಗೂ ಮತ್ತು ತನ್ನ ಒಬ್ಬನೇ ಒಬ್ಬ ಮಗನಿಗೂ ಬೇಕಾಗುವ ಅನ್ನಸಾಮಗ್ರಿಯನ್ನು ಕೊಳ್ಳುವುದು ಸಹ ಜಡವಾಗುತ್ತಿತ್ತು. ಆದ್ದರಿಂದ ಅವನು ಮತ್ತು ಕುಟುಂಬದವರು ಒಮ್ಮೊಮ್ಮೆ ಅರೆಹೊಟ್ಟೆ ಉಂಡು ಮತ್ತು ಒಮ್ಮೊಮ್ಮೆ ಉಪವಾಸಬಿದ್ದು ಕಾಲ ಕಳೆಯುತ್ತಿದ್ದರು.

---

1 ಜೀವಿತಕಾಲ : (1870-1922).

2 ಜೀವಿತಕಾಲ : (1870-1933).

ಒಂದು ದಿನ ಬಾದಶಹನ ಮಗಳು ತನ್ನ ಮೈ ತೊಳೆದುಕೊಳ್ಳುವುದಕ್ಕಾಗಿ ನದಿಯ ಹತ್ತಿರವಿದ್ದ ಒಂದು ಸ್ನಾನಗೃಹಕ್ಕೆ ತನ್ನ ಅರಮನೆಯಿಂದ ಹೋಗುತ್ತಿದ್ದ ಕಾರಣ ಆ ದಾರಿಯೊಳಗಿನ ಎಲ್ಲ ಅಂಗಡಿಗಳ ಮತ್ತು ಮನೆ ಬಾಗಿಲುಗಳನ್ನು ಮುಚ್ಚಿದ್ದರು.........ಅವಳು ಬಹಳ ಸುಂದರಿ ಇದ್ದಳು. ಉತ್ತಮವಾದ ಚಂದ ಸೀರೆಯನ್ನುಟ್ಟುಕೊಂಡು, ತನ್ನ ನಡುವಿನಲ್ಲಿ ಒಂದು ಬಂಗಾರದ ನಡುಪಟ್ಟಿಯನ್ನು ಇಟ್ಟಿದ್ದಳು. ಇವಳನ್ನು ನೋಡಿ ಅಲ್ಲಾವುದ್ದೀನನು ಅವಳ ಮೇಲೆ ಮೋಹಿತನಾಗಿ, ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಬಹಳ ಆತುರಪಟ್ಟನು.. (ಅಲ್ಲಾವುದ್ದೀನನ ಕಥೆಯಿಂದ).

'ಚಂದ್ರೋದಯ', 'ವಾಗ್ದೇವಿ', 'ವಾಗ್ಭೂಷಣ' ಪತ್ರಿಕೆಗಳ ಸಂಪಾದಕರಾಗಿದ್ದರು.

ಇವರು ಒಳ್ಳೆಯ ಪ್ರಬಂಧ, ನಾಟಕ, ಕಥೆ, ಕಾದಂಬರಿ ರಚನಕಾರರೂ ಆಗಿದ್ದುದಲ್ಲದೆ ಅನೇಕ ಉಪಯುಕ್ತ ಧರ್ಮಸಾಹಿತ್ಯ ಸಹ ರಚಿಸಿದ್ದಾರೆ. ಇವರ ಕೃತಿಗಳ ಸಂಖ್ಯೆ 35.

ಮುಖ್ಯ ಕೃತಿಗಳು: ಅದ್ಭುತ ಪ್ರೇಮ (ಕಾದಂಬರಿ), ಸುಧಾಮ ಚರಿತ್ರ (ಪುಟ್ಟಪುಸ್ತಕ), ಕೃಷ್ಣ ಚರಿತ್ರ, ಶ್ರೀಬಸವೇಶ್ವರ ಚರಿತ್ರ, ಶ್ರೀ ಶನಿಮಹಾತ್ಮೆ, ಶಿವಲೀಲಾಮೃತ ಕಥೆಗಳು (20 ಕಥೆಗಳ ಸಂಕಲನ); ವೀರವಿಮಲಾ, ಸಾವಿತ್ರಿ ಚರಿತ್ರೆ, ಚಿಲ್ಲಾಳ ಚರಿತ್ರ, ಧ್ರುವ ಚರಿತ್ರೆ, ಸಚಿತ್ರ ಬಾಲರಾಮಾಯಣ, ಸಚಿತ್ರ ಬಾಲ ಭಾಗವತ, ಅಲ್ಲಾವುದ್ದೀನ ಮತ್ತು ಸೋಜಿಗವಾದ ದೀಪ, ಅಲ್ಲೀಬಾಬ ಮತ್ತು ನಲವತ್ತು ಮಂದಿ ಕಳ್ಳರು, ಶ್ರೀ ರಾಮಕೃಷ್ಣ ಪರಮಹಂಸರ ಸತ್ಯ ಕಥೆಗಳು, ಶ್ರೀಸ್ವಾಮಿ ರಾಮತೀರ್ಥ ಚರಿತ್ರ, ನಿಂದಾಪ್ರಭಾವ (ನಾಟಕ): ತ್ರಾಟಿಕ ನಾಟಕ—ಇದಕ್ಕೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪಾರಿತೋಷಕ ದೊರೆತಿತ್ತು.

**ಪಂಜೆ ಮಂಗೇಶರಾಯರು***: ಇವರು ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯ ಪುರುಷರಲ್ಲಿ ಒಬ್ಬರು. ಶಿಶುಸಾಹಿತ್ಯ ರಚನಾಕಾರರಲ್ಲಿ ಅತ್ಯಂತ ಪ್ರಮುಖರು.

ನಾಗರ ಹಾವೇ ಹಾವೊಳು ಹೂವೆ
ಬಾಗಿಲ ಬಿಲದಲಿ ನಿನ್ನಯ ಠಾವೆ
ಕೈಗಳ ಮುಗಿವೆ ಹಾಲನ್ನೀವೆ
ಬಾಬಾ ಬಾಬಾ ಬಾಬಾ ಬಾಬಾ ॥

ಈ ಸುಂದರ ಕವನ ಕೇಳಿರದವರಾರು ?

---

* ಜೀವಿತಕಾಲ: (1874–1937). ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ 'ಬಂಟವಾಳ'ದಲ್ಲಿ ಜನನ. ತಂದೆ: ರಾಮಪ್ಪಯ್ಯ, ತಾಯಿ: ಸೀತಮ್ಮ. ಹೆಚ್ಚಿನ ವಿಷಯಗಳಿಗೆ 'ಮಕ್ಕಳೇ, ಇವರನ್ನು ನೀವು ಬಲ್ಲಿರಾ ?' ಕೃತಿಯ ಪುಟ 21–26 ನೋಡಿ.

'ಸಾಹಿತ್ಯ ಉತ್ಕೃಷ್ಟವಾಗುವುದು ಹೇಗೆ? ಮುಂದಿನಬೆಳೆ ಒಳ್ಳೆಯದೂ ಹುಲುಸೂ ಆಗಬೇಕಾದರೆ ಇಂದಿನ ಸಸಿಗಳನ್ನು ಗಮನಿಸಬೇಕು. ಕನ್ನಡ ಮಕ್ಕಳ ವಿದ್ಯಾಭ್ಯಾಸವು ಮುಖ್ಯವಾಗಿ, ಪ್ರಾಥಮಿಕ ವಿದ್ಯಾಭ್ಯಾಸವು ಒಂದು ಸರಿಯಾದ ಕ್ರಮದಲ್ಲಿ ನಡೆಯುವ ಏರ್ಪಾಡಾಗಬೇಕು....' ಪಂಜೆಯವರ ಈ ವಾಣಿಯಲ್ಲಿ ಮಕ್ಕಳ ಮೇಲಿನ ಕಾಳಜಿ ಎದ್ದು ಕಾಣುತ್ತಿದೆ.

ಪಂಜೆಯವರು ಮಕ್ಕಳಿಗಾಗಿಯೇ ಕಥೆ, ಕವನ, ಪ್ರಬಂಧಗಳನ್ನು ರಚಿಸಿದ್ದಾರೆ. 'ಅಜ್ಜಿ ಕಥೆಗಳು' ಸಂಕಲನದಲ್ಲಿ ಇಲಿಗಳ ಥಕ್ಕಥೈ, ಕೊಕ್ಕೊಕ್ಕೊ ಕೋಳಿ, ಗುಡುಗುಡು ಗುಮ್ಮಟ ದೇವರು, ಗೋಣಿಚಟ್ಟಿನ ಪಟ್ಟೆಹುಲಿ, ಬೊಕ್ಕಬಾಯಿ ಕೊಕ್ಕೇರಾಜ ಮುಂತಾದ ಕಥೆಗಳಿವೆ. 'ನಾಗಣ್ಣನ ಕನ್ನಡಕ' (ಕಥಾಕವನ) ; 'ಅಗೋಳಿ ಮಂಜಣ್ಣ' ದೊಡ್ಡಮಕ್ಕಳಿಗೆ ಬರೆದಿರುವ ಕಥೆ ಹಲ್ಲಿ, ಬಂದಣಿಕೆ (ಪ್ರಬಂಧಗಳು) : 'ಪಂಚಕಜ್ಜಾಯ', 'ಸ್ಥಳನಾಮ' (ಸಂಶೋಧನಾತ್ಮಕ ಲೇಖನಗಳು).

'ಕೋಟಿ ಚೆನ್ನಯ್ಯ' (ಕಿರು ಕಾದಂಬರಿ) ; ಹಾವಿನ ಹಾಡು. ತೆಂಕಣ ಗಾಳಿಯಾಟ, ಹುತ್ತರಿ ಹಾಡು, ಹೊಲೆಯರ ಹಾಡು (ಹಾಡುಗಳು).

ಇವರು 1934ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಎಮ್. ಎನ್. ಕಾಮತ್ *:** ಶಾಲೆಯಲ್ಲಿ ಕಾಮತರು ಕಲಿತದ್ದು ಭೂಗೋಳವಾದರೂ ಕನ್ನಡ ಜನತೆಗೆ ಇವರು ನೀಡಿದ್ದು ಕುತೂಹಲಭರಿತ, ನೀತಿವಂತ ಶಿಶುಸಾಹಿತ್ಯ, ಕತೆ, ಹರಟೆ, ಕವನ ಎಲ್ಲಕ್ಕೆ ಮಿಗಿಲಾಗಿ ಸಮೃದ್ಧ ನಾಟಕಗಳು.

ಇವರು ನಿರ್ವಹಿಸುತ್ತಿದ್ದ ವೃತ್ತಿ—ಅಧ್ಯಾಪಕ. ಕಾಮತರು ಶಾಲೆಯ ಮಕ್ಕಳಿಗಾಗಿಯೇ ಮೊದಲಿನ ತರಗತಿಯಿಂದ ಹಿಡಿದು ಎಂಟನೇ ತರಗತಿತನಕ ಪಠ್ಯಪುಸ್ತಕಗಳನ್ನು ರಚಿಸಿದ್ದಾರೆ.

ಆಡು ಮುಟ್ಟದ ಎಲೆ ಇಲ್ಲ ಎಂಬಂತೆ, ಕಾಮತರು ಕೈಯಾಡಿಸದ ಸಾಹಿತ್ಯ ವಿಭಾಗವಿಲ್ಲ. ಪತ್ರಿಕೋದ್ಯಮದಲ್ಲೂ ದುಡಿದಿದ್ದಾರೆ. 'ಆನಂದ ಬೋಧಿನಿ'. 'ಉದಯ ಭಾರತ', 'ಕಂಠೀರವ', ಇವರು ಸಂಪರ್ಕ ಇರಿಸಿಕೊಂಡಿದ್ದ ಆಗಿನ ಪತ್ರಿಕೆಗಳು. ಪ್ರಸಿದ್ಧ ಪತ್ರಕರ್ತ ಹುರುಳೀ ಭೀಮರಾಯರು ಕಾಮತ್‌ರನ್ನು 'ಕರ್ನಾಟಕ ಪತ್ರಿಕಾ ಪ್ರಪಂಚದ ಅಕ್ಷಯ ಪಾತ್ರೆ' ಎಂದು ಹೊಗಳಿದ್ದಾರೆ.

ಕೃತಿಗಳು : ಅರ್ಜುನನ ಚಾತುರ್ಮಾಸ, ಕೃಷ್ಣ ಸಂಧಾನ. ಮೌರ್ಯ ಸಿಂಹಾಸನ, ಪ್ರತಾಪಸಿಂಹ, ಕ್ಷಾತ್ರತೇಜ, ತೆನಾಲಿರಾಮ, ಸದ್ರಿಸುಬ್ಬ. ಯುದ್ಧಾಂತ್ಯ ಮುಂತಾದ ನಾಟಕಗಳು ; ಕೆಪ್ಪಟರಾಯ, ಹತ್ತರೊಡನೆ ಹನ್ನೊಂದು. ಬಾಲಕರ ಆರ್ಯಮತೋಪಖ್ಯಾನ ಕಥಾ ಸಂಕಲನಗಳು : ಬಾಲಕಳೆದ ನರಿಯ ಉಪದೇಶ. ಸಂತೆಯ ಕುರುಡನ

* ಜೀವಿತಕಾಲ : (1883-1940.) ಕಾರ್ಕಳದಬಳಿಯ 'ಮುಂಡ್ಕೂರು' ಗ್ರಾಮದಲ್ಲಿ ಜನನ. ತಂದೆ : ಶ್ರೀನಿವಾಸ ಕಾಮತ್, ತಾಯಿ : ತುಂಗಭದ್ರ.

ಹಾಡು (ಕವನಗಳು) ; ಸಾಹಿತ್ಯ ರೈಲ್ವೆ ಕಂಪನಿ, ಬೀಡಿ ಸೇದಬೇಡಿ (ಪದಬೆಗಳು) : ಬಾಲಕರ ಮಹಾಭಾರತ, ಯಾದವಕೃಷ್ಣ, ಚಂಡಕೌಶಿಕ, ಸೀತಾರಾಮ (ಗದ್ಯ ಕೃತಿಗಳು).

**ಹರ್ಡೇಕರ್ ಮಂಜಪ್ಪ**[1] **:** 'ಕರ್ನಾಟಕ ಗಾಂಧಿ' ಯೆಂದು ಪ್ರಸಿದ್ಧರಾಗಿದ್ದ ಇವರು ಶಿಶುಸಾಹಿತ್ಯ ಕ್ಷೇತ್ರದಲ್ಲಿ ನೆನೆಯಬೇಕಾದ ಸಾಹಿತಿ.

'ಧೀರರಾಗಿರಿ, ವೀರರಾಗಿರಿ, ಪವಿತ್ರರಾಗಿರಿ, ಸ್ವತಂತ್ರ ರಾಷ್ಟ್ರವೀರರಾಗಿರಿ' ವಿದ್ಯಾರ್ಥಿಗಳಿಗೆ ಮಂಜಪ್ಪನವರಿತ್ತ ಈ ಉಪದೇಶ ವಿದ್ಯಾರ್ಥಿಗಳ ತಾರಕ ಮಂತ್ರವಾದಾಗ ರಾಷ್ಟ್ರ ನಿಜವಾಗಿ ರಾಮರಾಜ್ಯವಾದೀತು.

"ಪ್ರಿಯ ಶಿಷ್ಯನೇ ಇಲ್ಲಿ ಬಾ, ನಿನಗೆ ಹೇಳತಕ್ಕ ಕೆಲವು ಮಾತುಗಳಿವೆ. ನೀನು ಈವರೆಗೂ ವಿದ್ಯೆಯನ್ನು ಕಲಿಯುವುದರಲ್ಲಿಯೇ ಕಾಲಕಳೆದಿರುವ ನಿನಗೆ ಬೇರೆ ಜನಗಳ ಒಡನಾಟವೇ ಇಲ್ಲ...." ಹೀಗೆ ಅವರು ತಮ್ಮ 'ಬುದ್ಧಿಯ ಮಾತು' ಪುಸ್ತಕದಲ್ಲಿ ಶಿಷ್ಯವೃಂದಕ್ಕೆ ಉಪದೇಶ ನೀಡಿದ್ದಾರೆ.

ಮಕ್ಕಳ ಸಾಹಿತ್ಯ ನಿರ್ಮಾಣದಲ್ಲಿ ಮಂಜಪ್ಪನವರ ಕೊಡುಗೆ ಅಪಾರ. ಮಕ್ಕಳಿಗಾಗಿಯೇ ಒಂದು ಪ್ರತ್ಯೇಕ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿದ ಇವರು ಆರೋಗ್ಯ ಜೀವನ, ಭಾಗ್ಯದಬೀಗದಕೈ, ಗೋಸೇವೆ, ಅಣ್ಣನಪ್ರೀತಿ, ಅಕ್ಕನಉಪದೇಶ, ಕಾಯಕವೇ ಕೈಲಾಸ, ಏಕಲವ್ಯನ ಕಥೆ, ಕಚದೇವನ ಕಥೆ, ದೇವಯಾನಿಯ ಕಥೆ, ಅಕ್ಕಮಹಾದೇವಿಯ ಕಥೆ, ಶ್ರೀ ಬಸವ ಚರಿತ್ರೆ ಮುಂತಾದ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಇತರ ಕೃತಿಗಳು : ಭಾರತೀಯ ದೇಶಭಕ್ತ, ಸತ್ಯಾಗ್ರಹ ಧರ್ಮ, ಸತ್ಯಾಗ್ರಹಿ ಬಸವೇಶ್ವರ, ಎಚ್ಚೆತ್ತ ಹಿಂದೂಸ್ತಾನ, ಸ್ತ್ರೀನೀತಿ ಮುಂತಾದವು.

**ಐರೋಡಿ ಶಿವರಾಮಯ್ಯ**[2] **:** ಉಪಾಧ್ಯಾಯರಾಗಿದ್ದು ಕನ್ನಡ ಸಾಹಿತ್ಯವನ್ನು ಅದರಲ್ಲೂ ಮಕ್ಕಳ ಸಾಹಿತ್ಯ ವಿಭಾಗವನ್ನು ಸಂಪನ್ನಗೊಳಿಸಲು ಜೀವನ ಪರ್ಯಂತ ಶ್ರಮಿಸಿದ ಸಾಹಿತಿ.

ಆನೆಗೆ ಸೊಂಡಿಲು ಹೇಗೆ ಬಂತು ? ಉತ್ತರ ಬೇಕಿದ್ದರೆ ಐರೋಡಿ ಶಿವರಾಮಯ್ಯನವರ ಕಥೆಯಲ್ಲಿದೆ.

ಇವರು ಪುಟ್ಟಪುಟ್ಟ ಮಾತುಗಳಲ್ಲಿ ಆಕರ್ಷಕ ವಿಷಯಗಳನ್ನು ಕಥಾ ರೂಪದಲ್ಲಿ ಹೆಣೆದಿದ್ದಾರೆ. ಕಥೆಗಳಿಗೆ ಬಹು ಆಕರ್ಷಕ ಶೀರ್ಷಿಕೆಗಳನ್ನೂ ನೀಡಿದ್ದಾರೆ. ಚಿಲಿಮಿಲಿ ಇಲಿ, ಚಿಣಿಮಿಣಿ ಚಿಟ್ಟೆ, ಕೊಂಬಿನ ವೀರ, ಕುರಿಯೂ ಅದರ ಸ್ನೇಹಿತರು,

---

1 ಜೀವಿತಕಾಲ : (1886-1947). ಆದಿಕವಿ ಪಂಪನ ಜನ್ಮಸ್ಥಳ 'ಬನವಾಸಿ' ಇವರು ಹುಟ್ಟಿದೂರು.

2 ಜೀವಿತಕಾಲ : (1876-1941). ಹುಟ್ಟಿದೂರು ದಕ್ಷಿಣ ಕನ್ನಡ ಜಿಲ್ಲೆಯ 'ಐರೋಡಿ'.

ಕಬ್ಬಿಣದ ಬುದ್ಧಿವಾದ, ಬೇಸರದಾಸಮ್ಮ ಮುಂತಾದವು. ಮಕ್ಕಳಿಗೆ ಹಲವಾರು ಪಠ್ಯಪುಸ್ತಕಗಳನ್ನು ರಚಿಸಿದ್ದಾರೆ.

ಮುಖ್ಯ ಕೃತಿಗಳು : ಕನ್ನಡಭಾಷಾ ಪಾಠಪುಸ್ತಕ, ಚರಿತ್ರೆಯ ಕಥೆಗಳು, ಸದಾನಂದ ಪಾಠಶಾಲೆ, ಪಿತೃಭಕ್ತಿ, ವಿಶ್ವಾಮಿತ್ರನ ಮಹಿಮೆ, ಆರ್ಯನೀತಿಕಥೆಗಳು (ಭಾಗ 1 ಮತ್ತು 2), ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ, ಸಂಕ್ಷಿಪ್ತ ಮಹಾಭಾರತ, ಹರ್ಷ ಚರಿತೆ ಮುಂತಾದ ಪುಸ್ತಕಗಳು.

**ಸುಬೋಧ ರಾಮರಾಯರು** [1] **:** ಸುಬೋಧ ಕುಸುಮಾಂಜಲಿ ಗ್ರಂಥ ಮಾಲೆಯಡಿ ಪುಣ್ಯಪುರುಷರ ಸುಮಾರು 140 ಜೀವನ ಚರಿತ್ರೆಗಳನ್ನು ರಚಿಸಿ ಮಕ್ಕಳಿಗೆ ಆದರ್ಶ ಜೀವನದ ಪರಿಚಯ ಮಾಡಿಸಿದ್ದಾರೆ. 1925ರಲ್ಲಿ ಸುಬೋಧ ಮಾಸ ಪತ್ರಿಕೆ ಸಹ ಪ್ರಾರಂಭಿಸಿದ ಹೆಗ್ಗಳಿಕೆ ಇವರದು.

ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಕಥಾಸಾರ ಬರೆದು ಕನ್ನಡ ಸಾಹಿತ್ಯ ಸಂಪನ್ನಗೊಳಿಸಿದ್ದಾರೆ. ಕೆಂಗಲ್ ಹನುಮಂತಯ್ಯನವರು ಇವರನ್ನು 'ಜ್ಞಾನಶಿಲ್ಪಿ'ಯೆಂದು ಕೊಂಡಾಡಿದ್ದರು.

ಇವರ ಇತರ ಕೃತಿಗಳು : ಮೈಸೂರಿನ ರಾಜಲಕ್ಷ್ಮಿಯರು. ಹೆಲೆನ್ ಕೆಲರ್, ಹೆನ್ರಿಫೋರ್ಡ್ (ಇಂಗ್ಲೀಷ್ ಕೃತಿಗಳು) 'ಹರಿದಾಸ ಕೀರ್ತನ ತರಂಗಿಣಿ'ಯಲ್ಲಿ ದಾಸ ಶ್ರೇಷ್ಠರ ಕೀರ್ತನೆಗಳನ್ನು ಸಂಗ್ರಹಿಸಿದ್ದಾರೆ.

**ಹೊಯ್ಸಳ** [2] **:** '....ಬಂದ ಬಂದ ಸಣ್ ತಮ್ಮಣ್ಣ, ಕಲ್ಯಾಣಸೇವೆ ಜೇಬಿನ ಬುಡದಲ್ಲಿ, ಪುಟ್ಟಾಣಿ ಪುರಿಯು ಮೇಲೊಂದಿಷ್ಟು, ಗೋಲಿ ಬಳಪ ಮತ್ತೊಂದಿಷ್ಟು ಬಂದ ಬಂದ ಸಣ್ಣ ತಮ್ಮಣ್ಣ....' ಇಂತಹ ಸುಂದರ ಶಿಶುಗೀತೆ ರಚಿಸಿದ ಹೊಯ್ಸಳರು ಕನ್ನಡ ಶಿಶುಸಾಹಿತ್ಯ ಪ್ರವರ್ತಕರಲ್ಲಿ ಮುಖ್ಯರು. ಇವರು ಮಕ್ಕಳಿಗಾಗಿ ಕಥೆ, ಕವನ, ನಾಟಕ, ಸ್ಕೌಟ್ ಗೀತೆಗಳನ್ನು ರಚಿಸಿದ್ದಾರೆ. ಮಕ್ಕಳ ಪತ್ರಿಕೆ ನಡೆಸಿದ್ದಾರೆ. ಪತ್ರಿಕೆಗಳಲ್ಲಿ ನೂರಾರು ಲೇಖನಗಳನ್ನು ಬರೆದಿದ್ದಾರೆ.

ಕೃತಿಗಳು : ಪೋರಿ, ವೀರಕುಮಾರ, ರಾಜನ ಬುದ್ಧಿವಂತಿಕೆ, ಖೈದಿಗಳಕಷ್ಟ, ಜೇನ್ನೊಣರುವೆ, ಶುಭಾಂಗ, ಬದುಕುವ ಮಂತ್ರ, ಗಂಟೆ ಗೋಪುರ, ಪಠಾಕ್ಷಿ, ಸಕ್ಕರೆಬೊಂಬೆ, ಹೂವಿನ ಹಾಸಿಗೆ, ಅನ್ನುಬಾಟಕಥೆ, ಮಗುವಿನ ಕೂಗು, ಕೋಗಿಲೆ, ಅಂಜೂರ, ಚಂದಮಾಮ, ಕೋಲುಕುದುರೆ, ಮರಿಗಳಕೂಸು, (ಕವನ ಸಂಗ್ರಹಗಳು).

---

1 ಜೀವಿತಕಾಲ : (1890-1970). ಹುಟ್ಟಿದೂರು ಚಿಕ್ಕಮಗಳೂರು. ತಂದೆ : ಹನುಮಂತರಾವ್.

2 ಜೀವಿತಕಾಲ : (1893-1939). ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ಹುಟ್ಟಿದೂರು. ತಂದೆ : ಸುಬ್ಬಯ್ಯ. ತಾಯಿ : ಸುಬ್ಬಮ್ಮ.

**ಆರ್. ಕಲ್ಯಾಣಮ್ಮ**[1] : 'ಮಕ್ಕಳಕೂಟ'ದ ಸ್ಥಾಪಕಿ ಕಲ್ಯಾಣಮ್ಮನವರ ಹೆಸರು ಕೇಳದ ಮಕ್ಕಳು ಕರ್ನಾಟಕದಲ್ಲಿ ಯಾರೂ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

'ಮಕ್ಕಳು ನಮ್ಮ ರಾಷ್ಟ್ರದ ಆಸ್ತಿ, ಅವರನ್ನು ಎಷ್ಟು ಶ್ರದ್ಧೆಯಿಂದ ಕಾಪಾಡಿದರೆ ನಮ್ಮ ದೇಶಕ್ಕಷ್ಟು ಪ್ರಯೋಜನವಾಗುತ್ತದೆ' ಈ ಧ್ಯೇಯ ಸಾಧನೆಗಾಗಿ ಕಲ್ಯಾಣಮ್ಮ ನಿರಂತರ ದುಡಿದರು.

'ದೇವರು ನನ್ನ ಹೊಟ್ಟೆಯಲ್ಲಿ ಮಕ್ಕಳನ್ನು ಕೊಡಲಿಲ್ಲ ಯಾಕೆ ಗೊತ್ತೆ? ಕನ್ನಡ ನಾಡಿನ ಮಕ್ಕಳನ್ನೆಲ್ಲಾ ನನ್ನ ಮಕ್ಕಳಂತೆಯೇ ಪ್ರೀತಿಸಿ ಮುದ್ದಾಡಲೆಂದು ಆತನ ಆಸೆ' ಅನ್ನುತ್ತಿದ್ದ ಆಕೆ, 'ಆತನ' ಈ ಆಸೆಯನ್ನು ಪೂರೈಸಲೆಂದೇ ತಮ್ಮ ದೇಹವನ್ನು ಬದುಕಿದ್ದಷ್ಟು ದಿನವೂ ಗಂಧದ ಕೊರಡಿನಂತೆ ತೇಯ್ದರು. ಹತ್ತನೆ ವರ್ಷದಲ್ಲೇ ಮದುವೆಯಾಗಿ ಮೂರು ತಿಂಗಳಲ್ಲೆ ವಿಧವೆಯಾದ ಕಲ್ಯಾಣಮ್ಮ ತಮ್ಮ ಜೀವಿತವನ್ನೆಲ್ಲಾ ಮಕ್ಕಳು ಮಹಿಳೆಯರಿಗಾಗಿ ಶ್ರಮಿಸಿದರು.

'ಸರಸ್ವತಿ' ಪತ್ರಿಕೆಯನ್ನು ಪ್ರಾರಂಭಿಸಿ ಸುಮಾರು ನಾಲ್ಕುದಶಕ ಕಾಲ ನಡೆಸಿಕೊಂಡು ಬಂದದ್ದು ಹೆಗ್ಗಳಿಕೆ.

ಕೃತಿಗಳು : ಪ್ರಿಯಂವದೆ, ನಿರ್ಭಾಗ್ಯವನಿತೆ, ಸುಖಾಂತ, ಭಕ್ತವೀರ, ಮಾಧವಿ, ನಿರ್ಮಲಾ (ಕಾದಂಬರಿಗಳು) ; ಬ್ಯಾರಿಸ್ಟರ್ ರಾಮಚಂದ್ರನ್, ಇಪ್ಪತ್ತನೆ ಶತಮಾನದ ಅಳಿಯ, ಯದುರಾಯ, ವರದಕ್ಷಿಣೆ, ನಿರ್ಮಲಾ, ದರಿದ್ರನಾರಾಯಣ. (ನಾಟಕಗಳು).

**ಕೊರಡ್ಕಲ್ ಶ್ರೀನಿವಾಸರಾವ್**[2] : ಬಹುಮುಖ ಪ್ರತಿಭೆಯ ಶ್ರೀನಿವಾಸರಾವ್ ಕಥೆ, ಕಾದಂಬರಿ, ನಾಟಕಗಳನ್ನು ರಚಿಸಿರುವುದಲ್ಲದೆ ಶಿಶುಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸಿದ್ದಾರೆ.

'ಪದ್ಮಾವಳಿ' ಕಥನಕವನ ಸಂಗ್ರಹ, ಹನ್ನೊಂದು ಆವೃತ್ತಿಗಳನ್ನು ಕಂಡು ದಕ್ಷಿಣ ಕನ್ನಡದ ಶಾಲೆಗಳಲ್ಲಿ ಪಠ್ಯಪುಸ್ತಕವಾಗಿದ್ದ ಈ ಸಂಕಲನದ ಶಿಸುಗೀತೆಗಳು, ಆರೋಗ್ಯ ಗೀತೆಗಳು, ಸರಳ ರಂಜನೀಯ ಹಾಗೂ ಬೋಧಪ್ರದವಾಗಿದ್ದವು. 'ಆರೋಗ್ಯ ಪ್ರತಾಪ' ಅತ್ಯಂತ ಜನಪ್ರಿಯವಾಗಿದ್ದ ನಾಟಕ. ಇದಕ್ಕೆ 'ರಾಷ್ಟ್ರೀಯ ಆರೋಗ್ಯ ಮತ್ತು ಶಿಶು ಸಪ್ತಾಹ'ದಲ್ಲಿ ಸ್ವರ್ಣಪದಕ ಲಭಿಸಿದೆ. 'ಬಾಲವಾಙ್ಮಯ' ಇನ್ನೊಂದು ಪ್ರಮುಖ ಕೃತಿ.

ಇತರ ಕೃತಿಗಳು : ನಂದಾದೀಪ (ಕಥಾಸಂಕಲನ) ; ಧರ್ಮಸಂಕಟ, ಸುಶೀಲಾ

---

1 ಜೀವಿತಕಾಲ : (1894–1965). ಬೆಂಗಳೂರಿನಲ್ಲಿ ಜನನ. ತಂದೆ : ರಾಮಸ್ವಾಮಿ ಅಯ್ಯಂಗಾರ್, ತಾಯಿ : ಜಾನಕಮ್ಮ. ಈಕೆ ಹುಟ್ಟಿದ್ದು ತಮಿಳು ಮನೆತನವಾದರೂ, ದುಡಿದದ್ದು ಕನ್ನಡಕ್ಕಾಗಿ. ಸಮಾಜಸೇವೆಯಲ್ಲಿಯೇ ದೇಹ ಸವೆಸಿದರು.

2 ಜೀವಿತಕಾಲ : (1894–1948). ಜನನ ಶೃಂಗೇರಿ ಬಳಿಯ 'ಕೊರಡ್ಕಲ್' ಗ್ರಾಮ. ತಂದೆ : ವೆಂಕಟಾಚಲಯ್ಯ, ತಾಯಿ : ಸುಬ್ಬಮ್ಮ.

ಸುಂದರ, ಆನಂದ ಕಥಾವಳಿ, ಅಡ್ಡಬೆಳೆದ ಗಿಡ್ಡಿಯ ಮದುವೆ, ಮುದುಕನ ಹೆಂಡತಿ ಫಕಫೈರಾಥೆ, ಮೂರು ಪ್ರಹಸನ, ರಂಗಿನ ಬುಡುಬುಡಿಕೆ, ಟೊಪ್ಪಿ, ವಶೀಕರಣ (ನಾಟಕಗಳು) ; ಭಾರತೀಯ ಕಥೆಗಳು, ಸುಲಭದಲ್ಲಿ ಇಂಗ್ಲೀಷ್ ಇತರೆ ಕೃತಿಗಳು.

**ದೇವುಡು ನರಸಿಂಹಶಾಸ್ತ್ರಿ**[1]: 'ದೇವುಡು' ತೆಲುಗುಪದ. ಇದರ ಅರ್ಥ 'ದೇವರು'. ಇದು ಒಂದು ಮನೆತನದ ಹೆಸರು. ಬಹಳಷ್ಟು ವರ್ಷ ಉಪಾಧ್ಯಾಯರಾಗಿದ್ದು, ತೃಪ್ತಿ ಲಭಿಸದೆ. ಅದನ್ನು ತ್ಯಜಿಸಿ ಸಾಹಿತ್ಯ ಸೇವೆಗೇ ತಮ್ಮ ಜೀವನವನ್ನು ಮುಡುಪಾಗಿರಿಸಿದ್ದವರು.

ಮಕ್ಕಳ ಸಾಹಿತ್ಯಕ್ಕಾಗಿ ಉತ್ಕೃಷ್ಟ, ಸಮೃದ್ಧ ಕೊಡುಗೆಗಳನ್ನು ನೀಡಿದ್ದಾರೆ. 'ನಮ್ಮ ಪುಸ್ತಕ ಇವರು ಸಂಪಾದಕರಾಗಿ ಬಹುಕಾಲ ನಡೆಸಿದ್ದ ಪತ್ರಿಕೆ. ಮಕ್ಕಳ ವಯೋಮಿತಿಗನುಗುಣವಾಗಿ ಕೃತಿ ರಚನೆಯನ್ನು ಬದಲಾಯಿಸಿ ಬರೆದುದು ಇವರ ವೈಶಿಷ್ಟ್ಯ.

**ಶಿವರಾಮಕಾರಂತ**[2]: ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಕಡಲತೀರದ ಈ ಭಾರ್ಗವ ಕಥೆ. ಕಾದಂಬರಿ. ನಾಟಕ, ಪ್ರವಾಸ ಸಾಹಿತ್ಯ, ವಿಜ್ಞಾನ ಸಾಹಿತ್ಯಗಳಲ್ಲದೆ ಅಪಾರ ಸಂಖ್ಯೆಯಲ್ಲಿ ಮಕ್ಕಳ ಸಾಹಿತ್ಯಕ್ಕೂ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಾರೆ. ಮಾಲಿಕಾ ಕಥಾಮಾಲೆ, ಮೂಲವಿಜ್ಞಾನ ಪಾಠಶಾಲೆ. ಹೂಗನ್ನಡಮಾಲೆ, ಮಕ್ಕಳ ಮುತ್ತುಗಳು, ಇಕೋ ಪುಸ್ತಕಮಾಲೆ, ಅಮರ ಚಿತ್ರಕಥೆ ಮುಂತಾದ ಮಾಲೆಗಳ ಮುಖಾಂತರವೂ ಇವರು ಮಕ್ಕಳ ಸಾಹಿತ್ಯ ಭಂಡಾರವನ್ನು ಸರ್ವಾಂಗೀಕರಣವಾಗಿ ಸಂಪನ್ನಗೊಳಿಸಿದ್ದಾರೆ.

ಮಕ್ಕಳಿಗಾಗಿ ಇವರು ರಚಿಸಿರುವ ಕೃತಿಗಳು : ಡಂ ಡಂ ಡೋಲು (ಶಿಶುಗೀತೆಗಳ ಸಂಕಲನ), ಮೊಸೆಯ ಬಂಟು, ಬೊಬ್ಬೊ ಭೋಂ ಬೊಮ್ಮ. ಗಜರಾಜ. ಹುಲಿರಾಯ, ದುಮ್ಮಿಂಗೋ, ಮಂಗನ ಮದುವೆ, ಸೂರ್ಯಚಂದ್ರ, ಒಂದೇ ರಾತ್ರಿ ಒಂದೇ ಹಗಲು, ನರನೋ ವಾನರನೋ, ಮರಿಯಪ್ಪನ ಸಾಹಸಗಳು, ಜೋಗಿಕಂಡ ಊರು. ಚೆಲುವ ಕನ್ನಡನಾಡು ಮುಂತಾದ ಪುಸ್ತಕಗಳು. ಇವಲ್ಲದೆ ಇವರು 1ನೇ ತರಗತಿಯಿಂದ ಹಿಡಿದು 8ನೇ ತರಗತಿ ಮಕ್ಕಳಿಗೆ ಉಪಯುಕ್ತವಾಗಬಲ್ಲ ಪಠ್ಯ ಪುಸ್ತಕಗಳನ್ನೂ ರಚಿಸಿದ್ದಾರೆ.

ಅವರ ಶಿಶುಗೀತಕ್ಕೊಂದು ಉದಾಹರಣೆ :

ಸೆಟ್ಟರೆ ಸೆಟ್ಟರೆ ಬೇಗ ಏಳಿ
ಕಳ್ಳರು ಬಂದರು ಓಡಿ ಓಡಿ
ಊರನು ಮುತ್ತಿ ಸುಲಿಯಲಿಕ್ಕೆ

---

1 ಪುಟ 197 ನೋಡಿ.

2 ಪುಟ 200–202 ನೋಡಿ.

ಬಂದು ಕೊಳ್ಳಲಿ, ಯಾರು ಕೇಳಿ
ಮತ್ತು ಬಂದರೆ ನನಗೆ ಹೇಳಿ
ನಾನು ಇಲ್ಲವೆ ಕೊಲ್ಲಲಿಕ್ಕೆ
ಸೆಟ್ಟರೆ ಸೆಟ್ಟರೆ ಬಂದೇ ಬಂದರು
ಪೇಟೆಯ ನುಗ್ಗಿ-ಮನೆಯ ಹೊಕ್ಕರು
ಗುದ್ದು ಕೊಟ್ಟು ಹಣವ ಕಿತ್ತರು.

**ಜಿ. ಎನ್. ಲಕ್ಷ್ಮಣ ಪೈ[1]:** (ಗುರುಪುರ ನರಸಿಂಹ ಪೈ ಲಕ್ಷ್ಮಣ ಪೈ) ಪೈಗಳು ಮಕ್ಕಳಿಗಾಗಿ ಹಲವು ಕೃತಿಗಳನ್ನು ರಚಿಸಿದ್ದಾರೆ. ಐದು ದಶಕಗಳ ಹಿಂದೆ ಮಕ್ಕಳ ಪಾಠಮಾಲೆಗಳಲ್ಲಿ ಇವರು ಬರೆದ 'ಮಂಗನ ಮದುವೆ', 'ತೋಳವೂ ಕುರಿಮರಿಯೂ', 'ಸ್ವರ್ಗ ನರಕ' ಮುಂತಾದ ಕವನಗಳು ಅಚ್ಚಾಗಿ ಮಕ್ಕಳ ಬಾಯಲ್ಲಿ ನಲಿಯುತ್ತಿದ್ದವು.

ಇವರು ರಚಿಸಿರುವ ಮುಖ್ಯ ಕೃತಿಗಳು: ಕನ್ನಡ ಪದ್ಯ ರತ್ನಾವಳಿ (ಸಚಿತ್ರ) ; ಕೀರ್ತನಾಂಜಲಿ, ಶಿಶಿರ ಗೀತಮಾಲೆ, ಅಭಿನಯ ಗೀತಮಂಜರಿ, ದಸರೆಯ ಕಾಣಿಕೆ, ಅಭಿನಯ ಗೀತಾವಳಿ (ಕವನ ಸಂಗ್ರಹಗಳು) ; 'ದಾಮಾಜಿ ಪಂತ' (ನಾಟಕ) ; ಸತ್ಯವಾನ್ ಸಾವಿತ್ರಿ (ಕೊಂಕಣಿಯಲ್ಲಿ ರಚಿಸಿದ್ದ ನಾಟಕ) ; ರಮಣ ಮಹರ್ಷಿಗಳ ಉಪದೇಶಸಾರ (ಅನುವಾದ).

**ಕುವೆಂಪು[2]:** 1988ರಲ್ಲಿ ಭಾರತ ಸರಕಾರ ಇವರಿಗೆ 'ಪದ್ಮವಿಭೂಷಣ' ಪ್ರಶಸ್ತಿ ನೀಡಿ ಗೌರವಿಸಿದೆ. ಮಕ್ಕಳ ಸಾಹಿತ್ಯಕ್ಕೂ ಇವರ ಕೊಡುಗೆ ಅಪಾರ ಹಾಗೂ ಅಮೂಲ್ಯ.

ಈ ದಿಸೆಯಲ್ಲಿ ಇವರ ಕೃತಿಗಳು: 'ಕಿರಿಯ ಕಾಣಿಕೆ'ಯಲ್ಲಿನ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' : ಅಮಲನ ಕಥೆ, ಹಾಳೂರು, ನನ್ನಮನೆ, ಮರಿ ವಿಜ್ಞಾನಿ ಮತ್ತು ಮೇಘಪುರ, ನನ್ನ ಗೋಪಾಲ, ಮೋಡಣ್ಣನ ತಮ್ಮ ಮುಂತಾದವು.

ಶಿಶು ಗೀತೆಗಳಿಗೆ ಒಂದು ಉದಾಹರಣೆ :
ಬಂದನು ಬಂದನು ಕಿಂದರಿ ಜೋಗಿ
ಕೆದರಿದ ಕೂದಲ ಗಡ್ಡದ ಜೋಗಿ
ಕೈಯಲ್ಲಿ ಕಿಂದರಿ ಹಿಡಿದಾ ಜೋಗಿ

---

ಬಡವನೊಬ್ಬನು ಇರುತ ಸುಖದಲಿ
ಮಡದಿ ಮಕ್ಕಳ ಕೂಡೆ ನಲಿಯುತ

---

1 ಜೀವಿತಕಾಲ: (1904-1975). ಜನನ ಮಂಗಳೂರು ತಾಲ್ಲೂಕಿನ 'ಮರಕಡ' ದಲ್ಲಿ. ತಂದೆ : ಗುರುಪುರ ನರಸಿಂಹ ಪೈ, ತಾಯಿ : ರುಕ್ಮಿಣಿಯಮ್ಮ.

2 ಪುಟ 37-40 ಮತ್ತು 160-161 ನೋಡಿ.

ನುಡಿದ ಭಾಷೆಗೆ ಎರಡು ಬಗೆಯುದ
ಪಡೆದನಚ್ಯುತ ಪದವಿಯು

ನನ್ನೀ ಶಿಶುತನ ನಿನ್ನೀ ತಾಯ್ತನ
ಎರಡೇ ಒಡವೆಗಳೆಮಗಮ್ಮ
ನಾನಿನಗೊಡವೆಯು ನೀನನಗೊಡವೆಯು
ಬೇರೆಯು ಒಡವೆಗಳೇಕಮ್ಮ ?

**ವೈ. ಎಸ್. ಗುಂಡಪ್ಪ**[1]: 'ಆದರ್ಶ ಶಿಕ್ಷಕ' ಪ್ರಶಸ್ತಿಗಳಿಸಿರುವ ಗುಂಡಪ್ಪ ನವರು ಮಕ್ಕಳಸಾಹಿತ್ಯ ರಚನೆಯಲ್ಲಿ ಸಿದ್ಧಹಸ್ತರು. ಗೀತೆ, ಕಥೆ, ನಾಟಕ, ಕಾದಂಬರಿ ಗಳನ್ನು ಬರೆದಿದ್ದಾರೆ.

ಪ್ರಮುಖ ಕೃತಿಗಳು : ಧ್ರುವ ಬಾಲ (ಮಕ್ಕಳ ಸಂಗೀತ ನಾಟಕ) ; ಗೋಲಿಯ ಮೈಮೆ, ಬಾಲಕಬೀರ್, ಮಗುವಿನ ಮೈಮೆ (ಸರಳರಗಳೆ) ; ತೋಳರಾಯನ ಸಭೆ (ಸ್ಕ್ಯಾಟ್ ಪ್ರಕಟಣೆ) ; ಕಾಸಿನ ಗಂಟು (ಹಾಸ್ಯ ಪ್ರಹಸನ) ; ಭ್ರಾತೃ ಭಕ್ತಾಗ್ರಣಿ ಲಕ್ಷ್ಮಣ ಮೂರ್ತಿ (ಕಾದಂಬರಿ) ; ಅಹಿಂಸಾ ಪರಮೋ ಧರ್ಮಃ (ಅಥವಾ ಬುಡು ಬಡಿಕೆಯುವನ ಗಡಿಬಿಡಿ), ಗಾನರಸಾಯನ ಮತ್ತು ಸದ್ಗುರು ಗೀತೆ (ಭಕ್ತಿ ಗೀತೆಗಳ ಸಂಕಲನ) ಮುಂತಾದವು.

ರಾಜ್ಯ ಸರ್ಕಾರ 1964ರಲ್ಲಿ ಇವರನ್ನು ಆದರ್ಶ ಶಿಕ್ಷಕರೆಂದು ಗೌರವಿಸಿದೆ. ಚಿಂತಾಮಣಿಯಲ್ಲಿ 1948ರಲ್ಲಿ 'ಸಾಹಿತ್ಯ ಕೂಟ' ರಚಿಸಿ ಇಂದೂ ನಡೆಸಿಕೊಂಡು ಬರುತ್ತಿದ್ದಾರೆ.

**ಮೋವುಂಡಿ ಮಲ್ಲಾರಿ**[2]: ಮಕ್ಕಳಿಗಾಗಿ ಕವನ, ಕಥೆ ರಚಿಸಿದ್ದಾರೆ. 'ಕರ್ನಾಟಕ ದೇವಿ', ಕರ್ನಾಟಕ ವೃತ್ತ, ಕನ್ನಡ ಕಂದ, ಜಯಕರ್ನಾಟಕ ಮುಂತಾದ ಪತ್ರಿಕೆಗಳಲ್ಲಿ ಸಂಪಾದಕರಾಗಿ ದುಡಿದಿದ್ದಾರೆ. ಮಕ್ಕಳ ವಯೋಗುಣಕ್ಕನುಗುಣವಾಗಿ ಬಹು ಸಂಖ್ಯೆ ಕೃತಿಗಳನ್ನು ಮೂರು ವಿಭಾಗಗಳಲ್ಲಿ ನೀಡಿದ್ದಾರೆ.

ಮುಖ್ಯ ಕೃತಿಗಳು : ಪೆದ್ದನ ಪುರಿ, ಕಳೆದ ಕಡಲೆ, ಕತ್ತೆಯ ಮೇಳ, ಬೆಕ್ಕನಂಗಡಿ, ಧ್ರುವನ ದೋಸ್ತ, ಓತಿಕ್ಯಾತನ ತಂಗಿ, ಮಡ್ಡಮ್ಮನ ಸಂಸಾರ, ಗಾಳಿಯ ಹಾವಳಿ, ಗೆಳೆಯ, ಮೂವರು ಕಳ್ಳರು, ಸೇರಿಗೆ ಸವ್ವಾಸೇರು, ಅವಿವೇಕಿ ಅರಸು, ಗುಬ್ಬಚ್ಚಿ ಗೂಡು ಮುಂತಾಗಿ ಸುಮಾರು 35ಕ್ಕೂ ಹೆಚ್ಚು ಕೃತಿಗಳು.

ಹತ್ತು ವರ್ಷದ ಮೇಲ್ಪಟ್ಟ ಮಕ್ಕಳಿಗೆ ದಾರಿಯ ಬುತ್ತಿ, ಠಕ್ಕರ ಗುರು, ಜನಪದ

1 ಜನನ : 1905, 'ಆನೇಕಲ್'ನಲ್ಲಿ. ತಂದೆ : ವೈ. ಸುಬ್ರಹ್ಮಣ್ಯಂ, ತಾಯಿ ; ಗೌರಮ್ಮ.

2 ಜೀವಿತಕಾಲ : (1906-1975). ಧಾರವಾಡ ಜಿಲ್ಲೆಯ 'ಮೋವುಂಡಿ' ಗ್ರಾಮ ದಲ್ಲಿ ಜನನ. ತಂದೆ : ನೀಲಕಂಠ ಭಟ್ಟ, ತಾಯಿ : ಲಕ್ಷ್ಮೀಬಾಯಿ.

ಕಥೆಗಳು, ಆದರ್ಶದ ಕಥೆಗಳು, ಪಂಚಶೀಲದ ಪ್ರತಿನಿಧಿಗಳು, ಮಕ್ಕಳ ಭಾಗವತ, ಇಸೋಪನ ನೀತಿಕಥೆಗಳು, ಗುಂಡಗುಡಿಯ ರಹಸ್ಯ ಇತ್ಯಾದಿ 40 ಕೃತಿಗಳು.

ಇತರ ಕೃತಿಗಳು : ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಬಿರುದಿನ ಕುದುರೆಯು ಒಂದೆ, ಶಿವಾನಂದ ಲಹರಿ (ಅನುವಾದ) ಮುಂತಾದವು.

**ಎಚ್. ವೈ. ಸರಸ್ವತಮ್ಮ**[1] : "ಮುದ್ದು ಕನ್ನಡ ಮಕ್ಕಳೇ ! ಪ್ರಪಂಚದಲ್ಲೆಲ್ಲ ಬಹು ದೊಡ್ಡ ಕಥೆಯ ಪುಸ್ತಕ ಯಾವುದು ಗೊತ್ತೆ ? ಅದೇ 'ಮಹಾಭಾರತ' ನೀವು ದೊಡ್ಡವರಾದ ಮೇಲೆ ಆ ದೊಡ್ಡ ಪುಸ್ತಕವನ್ನೇ ಓದಬಲ್ಲಿರಿ. ಚಿಕ್ಕವರಾಗಿರುವಾಗಲೇ ನಿಮಗೆ ಅದರ ಸ್ವಾರಸ್ಯ, ರುಚಿ ತಿಳಿಯಬೇಕಾದರೆ ಆ ದೊಡ್ಡ ಕಥೆಯನ್ನು ಚಿಕ್ಕದಾಗಿ ಹೇಳುವ ಪುಸ್ತಕ—ಅದರಲ್ಲಿಯೂ ಬೊಂಬೆಯ ಪುಸ್ತಕ ನಿಮಗೊಂದು ಬೇಕಲ್ಲವೇ ?...."

ಸುಮಾರು 38 ವರ್ಷಗಳ ಹಿಂದೆ ಕನ್ನಡದಲ್ಲಿ 'ಮಕ್ಕಳ ಸಚಿತ್ರ ಭಾರತ' ನೀಡಿದ ಶ್ರೀಮತಿ ಎಚ್. ವೈ. ಸರಸ್ವತಮ್ಮನವರು ಮಕ್ಕಳ ಸಾಹಿತ್ಯದ ವಿಭಾಗದಲ್ಲಿ ನೆನೆಯಬೇಕಾದ ವ್ಯಕ್ತಿ.

'ಸರಸ್ವತಿ'ಯಲ್ಲಿ ಅನೇಕ ಉಪಯುಕ್ತ ಲೇಖನಗಳನ್ನು ಬರೆದಿದ್ದಾರೆ. ಮಹಾರಾಷ್ಟ್ರದ ಸುಪ್ರಸಿದ್ಧ ಸಮಾಜ ಸೇವಕಿಯಾದ ಪಾರ್ವತಿ ಬಾಯಿ ಅರವಳೆಯವರ ಆತ್ಮ ಚರಿತ್ರೆಯನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಪುಸ್ತಕ ಹಲವು ವರ್ಷ ಹೈಸ್ಕೂಲಿಗೆ ಪಠ್ಯ ಪುಸ್ತಕವಾಗಿತ್ತು. ಅಕ್ಷರ ಪ್ರಚಾರ ಸಮಿತಿಯವರಿಗಾಗಿ 'ಅಜ್ಜಿಯ ರಾಜು' ಕಿರು ನಾಟಕ ರಚಿಸಿಕೊಟ್ಟಿದ್ದಾರೆ. 'ಪ್ರಬುದ್ಧ ಕರ್ನಾಟಕ'ದಲ್ಲೂ ಸಹ ಇವರ ಹಲವಾರು ಲೇಖನಗಳು ಪ್ರಕಟಗೊಂಡಿವೆ.

**ಜಿ. ಪಿ. ರಾಜರತ್ನಂ**[2] : (ಗುಂಡ್ಲುಪಂಡಿತ ರಾಜೈಯ್ಯಂಗಾರ್) 'ಬಣ್ಣದ ತಗಡಿನ ತುತ್ತೂರಿ, ಕಾಸಿಗೆ ಕೊಂಡನು ಕಸ್ತೂರಿ' ರಾಜರತ್ನಂರವರ ಅತ್ಯಂತ ಜನಪ್ರಿಯ ಶಿಶುಕವನ. ಇವರು ಶಿಶುಸಾಹಿತ್ಯಕ್ಕೆ ನೀಡಿರುವಷ್ಟು ಕೊಡುಗೆಯನ್ನು ಇನ್ಯಾರು ನೀಡಿಲ್ಲವೆಂದರೆ ಅತಿಶಯೋಕ್ತಿ ಆಗದು.

ಕಥೆ, ಕವನ, ನಾಟಕ, ಚುಟುಕಗಳನ್ನು ರಚಿಸಿರುವುದಲ್ಲದೆ ಬೇರೆಬೇರೆ ಭಾಷೆಯ ಉತ್ತಮ ಕಥೆ, ಜೀವನ ಚರಿತ್ರೆ ಮುಂತಾದವುಗಳನ್ನು ನೂರಾರು ಸಂಖ್ಯೆಯಲ್ಲಿ ಕನ್ನಡಕ್ಕೆ ತಂದಿದ್ದಾರೆ. ಇವರು ರಚಿಸಿರುವ ಮಕ್ಕಳ ಕವನಸಂಗ್ರಹ ಹನ್ನೊಂದು. ಕಂದನ ಕಾವ್ಯಮಾಲೆ, ಕಡಲೆಪುರಿ, ಕಲ್ಲುಸಕ್ಕರೆ, ಕೆನೆಹಾಲು, ತುಂಟಗಣಪತಿ, ತುತ್ತೂರಿ,

---

1 ಜನನ : 1906, ಬೆಂಗಳೂರಲ್ಲಿ. ತಂದೆ : ರಾಜಪೇಯಂ ವೆಂಕಟಸುಬ್ಬಯ್ಯ, ಪತಿ : ವಿದ್ವಾಂಸ ಎಚ್. ಯೋಗಾನರಸಿಂಹ. ಹೆಚ್. ವೈ. ಶಾರದ ಪ್ರಸಾದ್ (ಪ್ರಧಾನ ಮಂತ್ರಿಗಳಿಗೆ ಪತ್ರಿಕಾ ಸಲಹಾಗಾರರು) ಇವರ ಮಗ.

2 ಜೀವಿತಕಾಲ : (1908-1979). ಹುಟ್ಟಿದೂರು 'ರಾಮನಗರ'. ತಂದೆ : ಗೋಪಾಲಕೃಷ್ಣಯ್ಯಂಗಾರ್."

ಮುದ್ದುಕೃಷ್ಣ; ತಾರೆ, ಕಳ್ಳರಂಗಪ್ಪ, ಪೋಲಿಸುಬ್ಬಣ್ಣ ಮುಂತಾದವುಗಳು. ಕಥಾ ಸಂಕಲನಗಳು ೨0ನ್ನೂ ಮೀರಿವೆ. ಅಣ್ಣತಮ್ಮ, ಆರುಕೊಂಬಿನ ಆನೆ, ಕೋಳಿಕಳ್ಳ, ಬೆಪ್ಪತಕ್ಕಡಿ ಐವಾನ್, ಸರಿಬುರುಡೆ, ಮಕ್ಕಳಿಗೆ ಮಣಿದೀಪ, ಹೇಳಲುತಕ್ಕ ಕಥೆಗಳು. ಜಯವಿಜಯರ ಕಥೆಗಳು, ಪಂಚತಂತ್ರದ ಕಥೆಗಳು, ಗೋಳೂರಿನ ಗಾಯಕರು ಮುಂತಾದವು. ಇವಲ್ಲದೆ ಬೌದ್ಧಸಾಹಿತ್ಯ, ಜೈನಸಾಹಿತ್ಯ, ವಿಷ್ಣುಭಕ್ತಿಸಾಹಿತ್ಯ, ಗಾಂಧಿಸಾಹಿತ್ಯ ಮುಂತಾದ ನೂರಾರು ಕಥೆಗಳನ್ನು ಆಯ್ದು ಇತ್ತಿದ್ದಾರೆ. 64 ಕಥೆಗಳ 'ಕಥಾಕೋಶ' ಅತ್ಯುತ್ತಮ ಕಥೆಗಳ ಸಂಕಲನ. 'ರತ್ನನ ಪದಗಳು', ಬುದ್ಧವಚನ ಪರಿಚಯ ಗ್ರಂಥಗಳಿಗೆ ದೇವರಾಜ್ ಬಹದ್ದೂರ್ ಪಾರಿತೋಷಕ ಲಭಿಸಿದೆ. 1969ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ, 1970ರಲ್ಲಿ ರಾಜ್ಯೋತ್ಸವ ಪುರಸ್ಕಾರ ಲಭಿಸಿದೆ. 1978ರಲ್ಲಿ ದೆಹಲಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು.

**ಬಿ. ಶಂಕರ ಭಟ್ಟ***: ಇವರು ಮಕ್ಕಳಿಗಾಗಿ ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಮಕ್ಕಳ ವಯಸ್ಸು, ವಿದ್ಯೆಯ ಮಟ್ಟ, ಮನೋಧರ್ಮ ಮುಂತಾದವುಗಳನ್ನು ಸಾಂಗವಾಗಿ ಅಭ್ಯಸಿಸಿ ಐದುಹಂತಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಮೊದಲನೆಹಂತದಲ್ಲಿ ಶಿಶುಗಳಿಗೆ ಪಶು, ಪಕ್ಷಿ, ಪ್ರಾಣಿಗಳ ವಿಷಯವನ್ನೇ ಆಯ್ದು, ಇವುಗಳ ಚತುರತೆ, ಸಾಹಸಗಳಿಗೇ ಆದ್ಯತೆಕೊಟ್ಟು ಕುತೂಹಲಕಾರಿಯಾಗಿ ಕಥೆ ಹೇಳಿದ್ದಾರೆ. ಪುಟ್ಟಪುಟ್ಟ ಪದಗಳಬಳಕೆ ಹಾಗೂ ಸಣ್ಣ ವಾಕ್ಯ ಇಲ್ಲಿನ ವೈಶಿಷ್ಟ್ಯ. ಎರಡನೆ ಹಂತದಲ್ಲಿ ಸ್ವಲ್ಪ ಬೆಳೆದ ಮಕ್ಕಳಿಗೆ ಹಿಡಿಸುವಂತಹ ವಿಷಯಗಳನ್ನೇ ಆಯ್ದುಕೊಂಡಿದ್ದಾರೆ. ವಾಕ್ಯರಚನೆ ಇಲ್ಲೂ ಸಣ್ಣದಾಗಿದ್ದರೂ ಮೊದಲನೆ ಹಂತಕ್ಕಿಂತ ಹೆಚ್ಚಿಗೆ ಪದಗಳನ್ನು ಬಳಸಿದ್ದಾರೆ. ಕಥೆಯ ಕೊನೆಯಲ್ಲಿ ಮಕ್ಕಳ ಮನಸ್ಸಿಗೆ ನಾಟುವಂತಹ ನೀತಿ ಉಪದೇಶಿಸಿದ್ದಾರೆ. ಹೀಗೆ ಹಂತಹಂತಕ್ಕೂ ಪದಗಳ ಪರಿಚಯ ವೃದ್ಧಿಸಿದಂತೆ ಶೈಲಿಯೂ ಪ್ರೌಢವಾಗುತ್ತಸಾಗುತ್ತದೆ. ಅಲ್ಲದೆ ಕಥೆಯ ವಸ್ತು, ರಚನೆ, ಶೈಲಿಯಲ್ಲಿಯೂ ಸೂಕ್ತ ಬೆಳವಣಿಗೆಯನ್ನು ಗುರುತಿಸುತ್ತೇವೆ. 4–5ನೇ ಹಂತದ ಕೃತಿಗಳಲ್ಲಿ ವಸ್ತು, ಪಾತ್ರ ಹೊರದೇಶದಲ್ಲೂ ವಿಚರಿಸುವುದನ್ನು ಕಾಣುತ್ತೇವೆ. ಹೀಗೆ ಭಟ್ಟರು ತಮ್ಮ ಕೃತಿಗಳ ಮೂಲಕ ಮಕ್ಕಳ ಮನೋವಿಕಾಸ ಮತ್ತು ಜ್ಞಾನಾರ್ಜನೆಗೆ ಶ್ರಮಿಸಿದ್ದಾರೆ.

ಮುಖ್ಯ ಕೃತಿಗಳು: ಕಾಡುಮೀನು, ಬುದ್ಧಿವಂತರ ಬುರುಡೆಗಳು, ಭೂದೇವಿಯ ಮದುವೆ, ನೀಲಿಹೂ, ಬಡಗಿಗಳ ಬಂಡಾಟ, ಮಾಯೆಯ ಕನ್ನಡಿ, ಗ್ರೀಕ್ ವೀರರು, ಅದ್ಭುತ ಲೋಕದಲ್ಲಿ ಆಲೀಸ್, ಚೀನದ ಚಾಂಗ್, ಜಂತುಗಳ ಜಾಣ್ಮೆ, ಸೋಮಾರಿ ನಾನಲ್ಲ, ಹಿಂದಿನ ಹುಡುಗರು, ನರಿಯ ನಟನೆ ಮುಂತಾದವು.

---

* ಜೀವಿತಕಾಲ: (1908–1972). ಮಂಜೇಶ್ವರದ ಬಳಿಯ 'ಚೋಳಂಕಕೊಡಿ' ಗ್ರಾಮದಲ್ಲಿ ಜನನ. ತಂದೆ: ನಾರಾಯಣ ಭಟ್ಟ, ತಾಯಿ: ಲಕ್ಷ್ಮಿ.

ಭಟ್ಟರು ಮೇಲ್ಕಂಡ ಪುಸ್ತಕಗಳಲ್ಲದೆ 'ಚೆಲುಗನ್ನಡ ಪಾಠಶಾಲೆ' ಮತ್ತು 'ಚೆಲುಗನ್ನಡ ಪದ್ಯಮಾಲೆ'ಗಳನ್ನು ಮಕ್ಕಳಿಗೆ ಸಂಪಾದಿಸಿ ಕೊಟ್ಟಿದ್ದಾರೆ. 'ಕವನ ಕಿಶೋರ' ಸಂಪಾದಿಸಿರುವ ಇನ್ನೊಂದು ಪದ್ಯಗಳ ಸಂಕಲನ.

**ಟಿ. ಚಂದ್ರರಾಜ ಶೆಟ್ಟಿ** [1] **:** 'ಕನ್ನಡ ಬರಹಗಾರರ ಬಳಗ' ಎಂಬ ಹಸ್ತಲಿಖಿತ ಸಂಗ್ರಹದಲ್ಲಿ 2,500ಕ್ಕೂ ಹೆಚ್ಚು ಹಿರಿಯ, ಕಿರಿಯ ಲೇಖಕರ ವಿವರಗಳನ್ನು ಅವರ ಮುಖಚಿತ್ರಗಳೊಡನೆ ಕೂಡಿಸಿಟ್ಟಿದ್ದಾರೆ. ದೇ.ಜ.ಗೌ.ರವರು ಇದನ್ನು 'ಅದ್ಭುತ ಸಂಗ್ರಹ' ಎಂದು ಕೊಂಡಾಡಿದ್ದಾರೆ.

ಇವರು ಕವಿತೆ, ಕಥೆ, ಕಾದಂಬರಿ, ಜೀವನ ಚರಿತ್ರೆ–ಕೋಶ, ಪ್ರವಾಸ ಸಾಹಿತ್ಯ. ಮಕ್ಕಳ ಸಾಹಿತ್ಯ. ನಾಟಕ ಮುಂತಾದ ವಿಭಾಗಗಳಲ್ಲಿ ಸುಮಾರು ,20 ಕೃತಿಗಳನ್ನು ರಚಿಸಿದ್ದಾರೆ.

'ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಸಂಪತ್ತು' ಎಂಬ ಉಪಯುಕ್ತ ಲೇಖನವನ್ನು 'ಕನ್ನಡನುಡಿ'ಯಲ್ಲಿ ಪ್ರಕಟಿಸಿ, ಆಕಾರಾದಿಯಾಗಿ ಮಕ್ಕಳಸಾಹಿತ್ಯ ರಚಿಸಿರುವ ಎಲ್ಲ ಲೇಖಕರುಗಳ ಹೆಸರನ್ನೂ, ಕೃತಿಗಳನ್ನು ಹೆಸರಿಸಿದ್ದಾರೆ.

ಅವರ ಮರಣಕ್ಕೆ ಕೆಲತಿಂಗಳ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ್ದ 'ಶಿಶುಸಾಹಿತ್ಯ ಸ್ಪರ್ಧೆ'ಯಲ್ಲಿ (1979) ಬಹುಮಾನ ಗಳಿಸಿದ್ದರು.

**ಚಿ. ಸದಾಶಿವಯ್ಯ** [2] **:** ಶ್ರೀಯುತರು ಚಿತ್ರರಂಗಕ್ಕೆ ಪ್ರವೇಶಿಸುವ ಮುನ್ನ ಪ್ರಸಿದ್ಧಿಗೆ ಬಂದಿದ್ದುದು ಮಕ್ಕಳ ಸಾಹಿತ್ಯ ರಚನಕಾರರಾಗಿ. ಜನಪ್ರಿಯರಾಗಿದ್ದುದು ಉಪಾಧ್ಯಾಯರಾಗಿ. 1927ರ ಸುಮಾರಿನಲ್ಲಿ ಇವರು ಬರೆದ ಪ್ರಥಮ ನಾಟಕ ಮೈಸೂರು ಮಾಣಿಕ್ಯ (ರಾಜಭಕ್ತಿ), ಕಲ್ಯಾಣಮ್ಮನವರ 'ಸರಸ್ವತಿ'ಯಲ್ಲಿ ಪ್ರಕಟಗೊಂಡು ಅಪಾರ ಹೆಸರು ಗಳಿಸಿತು. ಈ ಯಶಸ್ಸು ಇವರ ಸಾಹಿತ್ಯಕ್ಕೆ ನಾಂದಿಯಾಯಿತು. ದೊರೆತ ಈ ಪ್ರೋತ್ಸಾಹದಿಂದಲೇ 20ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದರು.

ಪ್ರಸಿದ್ಧ ಕೃತಿಗಳು: ಅಮ್ಮ, ಶಿವಾಜಿಯಬಾಲ್ಯ. ಮಕ್ಕಳೀ ದೇವರು (ಮಕ್ಕಳ ನಾಟಕಗಳು) ; ಬೃಂದಾವನ (ಸಂಗೀತ ನಾಟಕ) ; ಲೀಲಾಗಂಡ (ಸ್ವಗತಗಳ ಸಂಕಲನ) : ಮೈಸೂರು ಹುಲಿ (ಐತಿಹಾಸಿಕ ಪ್ರಬಂಧ) : ಜಯಶ್ರೀ. ಶಾಂತ. ಶಾಂತಿ. ಮಾಂಗಲ್ಯ, ಧರ್ಮಸಂಸ್ಥಾಪನೆ ಮುಂತಾದವು ರಂಗನಾಟಕಗಳು. ಇವರು ಸಂಪಾದಕತ್ವವಹಿಸಿದ್ದ ಪತ್ರಿಕೆ 'ವಿಜಯಚಿತ್ರ'. ಶ್ರೀಯುತರು ಹಲವಾರು ಚಿತ್ರಗಳನ್ನು ಸಹ ನಿರ್ದೇಶಿಸಿದ್ದಾರೆ.

---

1 ಜೀವಿತಕಾಲ : (1908–1980). ಮಂಗಳೂರು ತಾಲ್ಲೂಕಿನ 'ತೋಡಾರು' ಗ್ರಾಮದಲ್ಲಿ ಜನನ. ತಂದೆ : ಪಾಚಪ್ಪ ಶೆಟ್ಟಿ, ತಾಯಿ : ರತ್ನಮಾಲ ಅಮ್ಮ.

2 ಜೀವಿತಕಾಲ : (1908–1982). ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ 'ಚಿಟ್ಟನಹಳ್ಳಿ' (ಈಗಿನ ಚಂದ್ರಶೇಖರಪುರ) ಜನ್ಮಸ್ಥಳ. ತಂದೆ : ಶ್ರೀಕಂಠಯ್ಯ, ತಾಯಿ : ಸಂಜಮ್ಮ. ಇವರ ಕಾವ್ಯನಾಮ : 'ಚಿರಂಜೀವಿ'.

ದಿನಕರ ದೇಸಾಯಿ* : ಅವರ ಮಕ್ಕಳ ಕವನ ಶೈಲಿಗೆ ಒಂದೆರಡು ಉದಾಹರಣೆ :

ಒಂದು ಎರಡು
ಆಕಳು ಬರಡು
ಮೂರು ನಾಲ್ಕು
ಮಜ್ಜಿಗೆ ಬೇಕು

ಐದು ಆರು
ಹಾಲಿನ ಕೀರು
ಏಳು ಎಂಟು
ಮೊಸರಿನ ಅಂಟು

…………………
ಕೊನೆಯಲ್ಲಿ ಹತ್ತು
ಬಾಯಿಗೆ ತುತ್ತು

ತಿಪ್ಪಾಭಟ್ಟರ ಚಂದಕೊಡೆ
ಸಾವಿರ ತೂತುಗಳೆಲ್ಲಕಡೆ
ಮಳೆ ನೀರೆಲ್ಲಾ ಒಳಗಡೆಗೆ
ಭಟ್ಟರು ಮಿಂದರು ಕೊಡೆಯೊಳಗೆ

**ಅರ್ಚಿಕ ವೆಂಕಟೇಶ :** ಮಕ್ಕಳೆಂದರೆ ಅರ್ಚಿಕ ವೆಂಕಟೇಶರಿಗೆ ಬಹಳ ಪ್ರೀತಿ.

'ಬನ್ನಿರೆಲ್ಲ ಬಾಲರು
ಮುದ್ದು ಮುಖ ಚಿಣ್ಣರು
ಹಾಡನೊಂದು ಹೇಳಿರಿ
ನಾಡಕಿವಿಯ ತುಂಬಿರಿ

ಮಕ್ಕಳ ಪಾಲಿಗೆ ದೇವರು ಯಾರು ? ಅ.ವೆಂ.ರ ಮಾತಿನಲ್ಲೇ ಕೇಳಿ—

'ನನ್ನ ಪಾಲಿಗೆ ತಾಯಿ ದೇವರು
ತಂದೆ ಗುರುಗಳು ದೇವರು
ನನ್ನ ಕೆಲಸವೆ ನನಗೆ ದೇವರು
ಸತ್ಯ, ಧರ್ಮವೆ ದೇವರು
ನನ್ನ ಪುಸ್ತಕ ಹಾಗೇ ಬಳಪವು
ನನ್ನ ಪಾಲಿಗೆ ದೇವರು

---

* ಪುಟ 158 ನೋಡಿ.

ಇವರು ಮಕ್ಕಳಿಗಾಗಿಯೇ ಅಧಿಕ ಸಂಖ್ಯೆಯಲ್ಲಿ 'ಆಕಾಶವಾಣಿ' ಹಾಗೂ 'ಮಕ್ಕಳ ಪುಸ್ತಕ' ಪತ್ರಿಕೆಯಲ್ಲಿ ಬರೆದಿದ್ದಾರೆ.

**ಟಿ. ಎಂ. ಆರ್. ಸ್ವಾಮಿ * :** (ತಾಯುಮ್ಮ ಮುನಿಸ್ವಾಮಪ್ಪ ರಾಮಸ್ವಾಮಿ). 'ಕನ್ನಡ ಕಣಜ'ದ ಸಂಪಾದಕರು. ಉಪಾಧ್ಯಾಯರಾಗಿದ್ದ ಸ್ವಾಮಿಗಳು ಮಕ್ಕಳ ಸಾಹಿತ್ಯ ಪ್ರಗತಿಗಾಗಿ ಬಹಳವಾಗಿ ದುಡಿದಿದ್ದಾರೆ.

'ಆಡಿಪಾಡಿ ನಲಿಯಲು ಕುಣಿಯಲು ಉಡುಗೊರೆ ಇದನು ಮುಡುಪಿಡುವೆ ಕನ್ನಡ ನಾಡಿನ ಕಂದನಿಗೆ । ನಗೆಯಲಿ ಸೊಗವನು ತೋರಿಸುವ ಅದರಲಿ ಜಗವನು ತೇಲಿಸುವ ಕನ್ನಡ ನಾಡಿನ ಕಂದನಿಗೆ ॥

ಎಷ್ಟೊಂದು ವಾತ್ಸಲ್ಯ ತುಂಬಿದೆ ಈ ಮಾತುಗಳಲ್ಲಿ !

'ಭಾರತ ವಿದ್ಯಾಮಂದಿರ' ಇವರು ಸ್ಥಾಪಿಸಿದ ಆದರ್ಶ ವಿದ್ಯಾಸಂಸ್ಥೆ. ಮಕ್ಕಳಿಗೆ ಚಿತ್ರಗಳನ್ನು ಕಂಡರೆ ಬಹು ಪ್ರೀತಿ. ಇದಕ್ಕೆ ಇದೇ ಮಾಧ್ಯಮ ಆರಿಸಿಕೊಂಡು ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿತರುವ ಯೋಚನೆಯಿಂದ. 'ಸಚಿತ್ರ ಶಿಕ್ಷಣ' ಪ್ರಾಯೋಗಿಕವಾಗಿ ಪ್ರಾರಂಭಿಸಿದರು. ನವೀನ ರೀತಿಯಲ್ಲಿ 'ಸಚಿತ್ರ ವಾಕ್ಯರಚನೆ' ಪುಸ್ತಕವನ್ನು ಮೂರು ಭಾಗಗಳಲ್ಲಿ ಪ್ರಕಟಿಸಿದ ಯಶಸ್ಸು ಇವರಿಗೆ ಸೇರುತ್ತದೆ.

ಕೃತಿಗಳು : ಪಾಯಸದ ಪಟ್ಟಣ (ಕಾಲ್ಪನಿಕ ನಾಟಕಗಳು). ಬೆಂಕಿಕೋಳಿ (ನಾಟಕ), ಗುಲಾಬಿ (7 ಕಥೆಗಳ ಸಂಕಲನ), ರಂಕಲ್‌ರಾಟೆ (4 ಕಥೆಗಳ ಸಂಕಲನ), ಕೊಕ್ಕರೆಯು ಕತ್ತೇಕೆ ಕೊಂಕು (7 ಕಥೆಗಳ ಸಂಕಲನ), ಪಿಳ್ಳಂಗೋವಿ (ಪಟಾಕಿ ಪುಟ್ಟು ವಿನ ಕಥೆಗಳು). ಉಡುಗೊರೆ (ಕವನಗಳು).

ಶಬ್ದದಲ್ಲೆ ಚಿತ್ರನಿರ್ಮಿಸಿರುವ ಅವರ ಕುಶಲತೆಗೆ ಒಂದು ಉದಾಹರಣೆ :

ಚುಕ್ಕು ಪುಕ್ಕು ರೈಲುಬಂತು
ಗಂಟು ಮೂಟೆ ಮೇಲೆ ಹಾಕಿ
ಕಿಟಕಿ ಪಕ್ಕ ಕುಳಿತುಕೊಳ್ಳಿ
ಗಾರ್ಡು ಶಿಳ್ಳೆ ಸದ್ದು ಕೇಳಿ
ಕತ್ತುನೀಡಿ ಕೂಗುತಿದೆ
ಹೊಗೆ ಉಗುಳಿ ಹೋಗಲಿದೆ.

ಕಾಲ್ ನಡುವೆ
ಕೋಲ್ ಕುದುರೆ
ಹೈ ! ಹೈ ! ಹೈ !
ಕಾಲ್‌ಹಾಕಿ

---

* ಜೀವಿತಕಾಲ : (1911-1947).

ಕೀಲ್ ಕುದುರೆ

ಥೈ ! ಥಕ್ಕ ! ಥೈ !

**ಬಿ. ಶ್ರೀ. ಪಾಂಡುರಂಗರಾವ್ *** : (ಬಿಂಗಿಪುರ ಶ್ರೀನಿವಾಸರಾವ್ ಪಾಂಡುರಂಗರಾವ್). ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಹೆಸರಿಸಬೇಕಾದ ಹೆಸರು. ಇವರ 'ಕಲ್ಲುಸಕ್ಕರೆ ಬೆಟ್ಟ'ದ ಸಾಹಸ ಕಥೆಯನ್ನು ಓದದ ಮಕ್ಕಳೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇವರು ಮಕ್ಕಳಿಗಾಗಿ ಶಾಲೆನಡೆಸಿದ್ದಾರೆ, ಪದ್ಯ ಬರೆದಿದ್ದಾರೆ. ಕಥೆ. ಕಾದಂಬರಿ, ನಾಟಕ ರಚಿಸಿದ್ದಾರೆ. ಮಕ್ಕಳ ಮನಸ್ಸನ್ನು ಅರಿತು ಅವರ ಮನಸ್ಸನ್ನು ಆಹ್ಲಾದಗೊಳಿಸುವಲ್ಲಿ ಸಿದ್ಧಹಸ್ತರು.

'ಮಕ್ಕಳ ಮಂಟಪ' ಶಿಶುಶಿಕ್ಷಣಕ್ಕಾಗಿ ಇವರು ಸ್ಥಾಪಿಸಿದ್ದ ಆದರ್ಶ ಶಾಲೆ. ರಾಜ್ಯದಲ್ಲಿ ನಡೆದ ಶಿಶುಸಮ್ಮೇಳನದ ಅಧ್ಯಕ್ಷತೆಯನ್ನು ಎರಡುಬಾರಿ ನಿರ್ವಹಿಸಿದ ಹೆಗ್ಗಳಿಕೆ ಇವರದು.

ಮಕ್ಕಳ ವಯೋಮಿತಿಗೆ ತಕ್ಕಂತೆ ಮೂರು ಹಂತಗಳಲ್ಲಿ ಕಥೆ ಹೇಳಿದ್ದಾರೆ. ಕವನ ರಚಿಸಿದ್ದಾರೆ, ನಾಟಕ ಬರೆದಿದ್ದಾರೆ, ಆಡಿಸಿದ್ದಾರೆ. ಪಂಚತಂತ್ರದ ಪ್ರಾಣಿಗಳನ್ನು ಅಂಕದಮೇಲೆತಂದು ಮಾತನಾಡಿಸಿ ಮಕ್ಕಳನ್ನ ನಗಿಸಿದ್ದಾರೆ, ತಣಿಸಿದ್ದಾರೆ. ಪುರಾಣ, ಉಪನಿಷತ್ತು, ಚರಿತ್ರೆಗಳಿಂದ ಕುತೂಹಲ ಕಥಾನಕ ಆಯ್ದು ಶಿಶುಸಾಹಿತ್ಯ ರಚಿಸಿ. ನೀತಿಪಾಠ ನೀಡಿದ್ದಾರೆ. ಅವರ ಕೊಡುಗೆಗಳು ಅಪಾರ : ಮಳೆರಾಯ, ಪುಟಾಣಿ ಗೆಳೆಯ, ಮುದ್ದುಸಿಂಗಾರಿ, ತುಂಟನಗುರು, ತಾಯಿಯೇ ದೇವರು, ಗುರುವೇ ದೊಡ್ಡವನು, ಆದರ್ಶ ಸಹೋದರರು, ಸುಳ್ಳಿನ ಸೋಲು, ರಾಜಾ ಬೀರ್‌ಬಲ್, ಧೀರ ಮಗ ಮತ್ತು ಇತರ ಕಥೆಗಳು, ವಿದ್ಯೆಗೆ ಹಂಬಲಿಸಿದ ಬಾಲಕ ಮತ್ತು ಇತರ ಕಥೆಗಳು, ಜ್ಞಾನ ಶೃತಿ. ಎಳೆಯರ ಭಾರತ, ಮಹಾತ್ಯಾಗಿ, ಮಹಾಮಾತೆ. ಮಹಾಸಾಹಸಿ. ಶಿಖರದಿಂದ ಶಿಖರಕ್ಕೆ, ಕಾಶ್ಮೀರ, ಆಕಾಶದಲ್ಲಿ ಅದ್ಭುತಗಳು, ರೈಕ್ವನಶಿಷ್ಯ, ಸಹಕಾರ ಸೌಖ್ಯ (ಪ್ರಥಮ ರಚನೆ–ನಾಟಕ). ಉತ್ತಮ ಸೃಜನಾತ್ಮಕ ಕೃತಿ 'ಕನ್ನಡ ಮಕ್ಕಳ ಸಾಹಿತ್ಯದ ಹೆಜ್ಜೆ', ಹಿಸ್ಟರಿ ಆಫ್ ಕನ್ನಡ ಲಿಟರೇಚರ್. ಮುದುಳಿಗೆ ಮೃಷ್ಟಾನ್ನ (1857 ರಿಂದ 1945ರ ತನಕ ನಡೆದ ಸ್ವಾತಂತ್ರ್ಯ ಸಂಗ್ರಾಮದ ಗಾಥೆ). ಇವಲ್ಲದೆ 'ಪಾಪಚ್ಚಿ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿದ್ದ 'ಮೊಲರಾಜನು ರಾಜನಾದಾಗ', 'ಶಾಲೆಯ ಶೂರರು', 'ಮರವೇರಿದ ಹುಂಜ' ಮುಂತಾದವು ಇನ್ನೂ ಪುಸ್ತಕರೂಪದಲ್ಲಿ ಹೊರಬರಬೇಕಾಗಿವೆ.

---

* ಜನನ : 1913, ಬೆಂಗಳೂರಿನಲ್ಲಿ. ತಂದೆ : ಶ್ರೀನಿವಾಸರಾವ್, ತಾಯಿ : ಭಾಗೀರಥಿಬಾಯಿ.

**ಭಾರತೀಸುತ**[1] **:** (ಎಸ್. ಆರ್. ನಾರಾಯಣರಾವ್) ಕಾದಂಬರಿಕಾರರೆಂದೇ ಇವರು ಪ್ರಸಿದ್ಧರಾಗಿದ್ದರೂ, ಮಕ್ಕಳ ಸಾಹಿತ್ಯಕ್ಕೂ ಸಮೃದ್ಧ ಕೊಡುಗೆಗಳನ್ನು ನೀಡಿದ್ದಾರೆ.

ಅವರ ಎಲ್ಲ ಕೃತಿಗಳಲ್ಲಿ ವೈವಿಧ್ಯತೆ ಕಾಣುತ್ತೇವೆ. ಕುತೂಹಲಭರಿತ ಚಿತ್ರಣ, ಅದ್ಭುತ ಘಟನೆ, ಪ್ರಾಣಿಗಳ ಸಂಭಾಷಣೆ, ಸರಳಸುಂದರ ಚೋದ್ಯ ಮಕ್ಕಳನ್ನು ಆಕರ್ಷಿಸಲು ಇವರು ಆರಿಸಿಕೊಂಡಿರುವ ಸಾಧನಗಳು.

ಶೆಟ್ಟರಿಗೆ ದೊರೆತ ಕೊಪ್ಪರಿಗೆ ಹೊನ್ನು ಇರುವೆಯಾದ ಕತೆ 'ಕೊಪ್ಪರಿಗೆ ಚಿನ್ನ' ಕಥೆಯ ವಸ್ತುವಾದರೆ, ಜಿರಾಫೆಗಳ ಸುಂದರ ಚಿತ್ರಣವೇ 'ಗೀಗಿ' ಕಥೆ. 'ಮರಿಯಾನೆ' ಯಲ್ಲಿ ಕಾಡಿನಲ್ಲಿದ್ದ ಮರಿಯಾನೆಯ ಸಾಹಸ ಚಿತ್ರಣವನ್ನು, 'ಸಿಗೋರ'ದಲ್ಲಿ ಪರಾಕ್ರಮ ಶಾಲಿ ಸಿಂಹ ಅಡ್ಡದಾರಿ ಹಿಡಿದಾಗ ಆಗುವ ಅನರ್ಥ ಚಿತ್ರಣವನ್ನೂ, 'ಹುಲಿಗಳ ದಿಬ್ಬಣ'ದಲ್ಲಿ ಬಡರೈತರ ಮಗ ಹುಲಿಗಳ ದಿಬ್ಬಣ ತಂದು ಗೌಡರ ಮಗಳನ್ನು ಮದುವೆಯಾದ ಕಥೆಯನ್ನೂ, 'ಹೋತನ ಬೆನ್ನೇರಿದ ತೋಳ' ಕಥೆಯಲ್ಲಿ ಬೈರಾಗಿಯ ಮಾತು ಕೇಳಿ ಮುದಿ ತೋಳವೊಂದು ಕುದುರೆ, ಹೋರಿ, ಹೋತಗಳ ಕೈಲಿಸಿಕ್ಕಿ ನರಳುವ ಚಿತ್ರಣ ಬರುತ್ತದೆ.

'ಕಾಣೆಯಾದ ಕಬ್ಬಿಣರಾಯ' ಕಥೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ಲೋಹಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಜೇನು ಕೊಡಲಾರದ ಆಸೆಬುರುಕ ಕರಡಿ ಹುಲಿಯೊಡನೆ ಹೋರಾಡುವಂತೆ ಮಾಡಿ ಸೇಡು ತೀರಿಸಿಕೊಳ್ಳುವ ಮಂಗಣ್ಣನ ಉಪಾಯವೇ 'ಕಿಲಾಡಿ ಮಂಗಣ್ಣ'ನ ಕಥಾವಸ್ತು. ಪಾಶ್ಚಾತ್ಯ ಮಕ್ಕಳ ಸಾಹಿತಿ ಹ್ಯಾಫ್ ಅಂಡರ್‌ಸನ್‌ನ ಕಥೆಯೊಂದರ ಸರಳಾನುವಾದ 'ಹನ್ನೊಂದು ಹಂಸಗಳು'.

**ಡಾ|| ವರದರಾಜ ಹುಯಿಲಗೋಳ**[2] **:** "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ? ನಮ್ಮ ಮಕ್ಕಳನ್ನು ಮೊಟ್ಟ ಮೊದಲೇ ತಿದ್ದಿ ತೀಡುವುದು ಹಿರಿಯರ ಹಾಗೂ ಶಿಕ್ಷಕರ ಕರ್ತವ್ಯ. ಈ ಮಕ್ಕಳು ದೊಡ್ಡವರಾಗಿ ಆದರ್ಶ ಭಾರತೀಯರಾಗಿ ಬಾಳುವಂತಾಗಬೇಕಾದರೆ, ಪ್ರಾರಂಭದ ಜೀವನದಲ್ಲಿಯೇ ಅವರ ಓದುವಿಕೆಗೆ ಯೋಗ್ಯ ಮಕ್ಕಳ ಕಥೆಗಳು ದೊರೆಯಬೇಕು. ಮಕ್ಕಳ ಬೌದ್ಧಿಕ ಬೆಳವಣಿಗೆಗೆ ಸಹಾಯ ಮಾಡುವಲ್ಲಿ ಈ ಮಕ್ಕಳ ಕತೆಗಳದು ಸಿಂಹಪಾಲು......." ಎನ್ನುವ ಡಾ|| ವರದರಾಜ ಹುಯಿಲಗೋಳರವರು ಮಕ್ಕಳ ಸಾಹಿತ್ಯ ನಿರ್ಮಾಪಕರಲ್ಲೊಬ್ಬ ಪ್ರಮುಖರು.

ಅಧ್ಯಾಪಕರಾಗಿ, ಉಪನ್ಯಾಸಕರಾಗಿ, ಉಪಪ್ರಾಚಾರ್ಯ ಹುದ್ದೆತನಕ ಏರಿ (ಧಾರವಾಡದ ಭಾಸಿನ್ ಮಿಶನ್ ಸಂಸ್ಥೆ) ನಿವೃತ್ತಿಗೊಂಡಿದ್ದಾರೆ.

---

1 ಪುಟ 211 ನೋಡಿ.

2 ಜನನ: ಆಗಸ್ಟ್ 12, 1917. ಬಿಜಾಪುರ ಜಿಲ್ಲೆಯ 'ಮುದ್ದೇಬಿಹಾಳ' ಗ್ರಾಮದಲ್ಲಿ. ತಂದೆ: ರಾಜೇರಾವ, ತಾಯಿ: ಗೋದಾವರಿ.

ಪ್ರಮುಖ ಕೃತಿಗಳು : ದೀಪಾವಳಿ (ನಾಟಕ ಸಂಕಲನ) ; 'ಸಾಹಸ ಜೀವಿಗಳು' (ಸಂಕಲನ) ; ಹೋರಾಟದ ವೀರರು, ಜನಪದ ಕಥೆಗಳು.

ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂಥ 'ಸಾಹಿತ್ಯ ಮಂಜರಿ', 'ಸಾಹಿತ್ಯ ಮಧು ಸಂಚಯ' (8ನೇ ತರಗತಿಯ ಪಠ್ಯ ಪುಸ್ತಕ) ; 'ಕನ್ನಡ ಸಾಹಿತ್ಯ ಪ್ರವೇಶ' (ಹತ್ತನೆ ತರಗತಿಯ ಪಠ್ಯ ಪುಸ್ತಕ) ; ರಾಜೇಂದ್ರ ಪ್ರಸಾದ್, ಲೋಕ ಮಾನ್ಯತಿಲಕ, ದೇಶಪಾಂಡೆ ಗಂಗಾಧರರಾವ್, ಆಲೂರು ವೆಂಕಟರಾವ್, ಮಯಿಲಗೋಳ ನಾರಾಯಣ ರಾವ್, ಫರ್ಡಿನೆಂಡ್ ಕಿಟ್ಟೆಲ್, ಆರ್. ಜಿ. ಭಂಡಾರ್‌ಕರ್ (ಮಕ್ಕಳಿಗಾಗಿ ಜೀವನ ಚರಿತ್ರೆ).

ಇತರ ಕೃತಿಗಳು : ಫಲ ಸಂಚಯ, ಚಂದ್ರತಾರೆ, ಬಾಗಿಲು ತೆರೆದಿತ್ತು, ದಯಾ ಸಾಗರ, ದೀಪಪ್ರಸಂಗ, ನಿನಗೊಂದು ಮಾತು (ಕಥಾ ಸಂಕಲನಗಳು) ; ಬಾಡಿಗೆ ಮನೆ, ಅಮೃತವಾಣಿ, ಈಸಬೇಕು ಇದ್ದು ಜಯಿಸಬೇಕು (ನಾಟಕಗಳು) ; ಇತಿ ಶ್ರೀ, ಕ್ರೂರ ಹಂಬಲ, ಬಾವಿನ ವಸಂತ ತಲೆಕೆಳಗಾಗಿ ನಿಂತ (ಕಾದಂಬರಿಗಳು) ; ಕನ್ನಡ ಸಾಹಿತ್ಯದಲ್ಲಿ ಲಲಿತ ಪ್ರಬಂಧಗಳು, ಕ್ರೈಸ್ತರಿಂದ ಕನ್ನಡ ಕಾಣಿಕೆ, ಪಂಚತಂತ್ರದ ಕಥೆಗಳು, ಕನ್ನಡಕ್ಕೆ ವಿದೇಶಿಯರ ಸೇವೆ (ವಿಮರ್ಶೆ/ಪ್ರಬಂಧ) ; ಅನೇಕ ಶೇಕ್ಸ್‌ಪಿಯರನ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

**ಪಂಡಿತ ಚೆನ್ನಬಸಪ್ಪ ಎಲ್ಲಪ್ಪ ಕವಲಿ** * : ಬಹುಕಾಲ ಶಾಲಾಮಾಸ್ತರಾಗಿದ್ದು ಮಕ್ಕಳ ಸಾಹಿತ್ಯ ವಿಭಾಗಕ್ಕೆ ಸಂಪನ್ನ ಕೊಡುಗೆಗಳನ್ನು ನೀಡಿದ್ದಾರೆ. ಈ ಕ್ಷೇತ್ರದಲ್ಲಿ ಇವರು ಸಲ್ಲಿಸಿರುವ ಕೃತಿಗಳ ಸಂಖ್ಯೆ ಅರವತ್ತಕ್ಕೂ ಹೆಚ್ಚು.

ಮುಖ್ಯವಾದವುಗಳು : ಪುಟ್ಟಣ್ಣನ ಪಂಚತಂತ್ರ (ಕೇಂದ್ರ ಸರ್ಕಾರದ ಬಹುಮಾನ ಗಳಿಸಿದೆ) ; 'ಸ್ವಾಮಿ ವಿವೇಕಾನಂದ' ಮತ್ತು 'ಹರಿಜನ' (ಮುಂಬೈ ಸರಕಾರದ ಪುರಸ್ಕಾರ ಲಭಿಸಿದೆ) 'ಸುಸಂಸ್ಕೃತ ಶಿಶುಸಾಹಿತ್ಯ ಸುಧಾ' (ಮೈಸೂರು ಸರ್ಕಾರದಿಂದ ಪುರಸ್ಕೃತಗೊಂಡಿದೆ). 'ಕೋಳೂರು ಕೊಡಗೂಸು' (ಹೆಚ್.ಎಂ.ವಿ.ಯಲ್ಲಿ ರೆಕಾರ್ಡ್ ಆಗಿದೆ) 'ಸಚಿತ್ರ ಮಹಾಗಾಂಧಿ', 'ಬಡವ ಭಾಗ್ಯಶಾಲಿಯಾದ', ಪ್ರಭಾರಾಣಿ (ಜಾನಪದ ಕಥೆ) ; 'ಪೌರಾಣಿಕ ಕಥೆಗಳು' (ಇತರೆ) ; 'ಕನ್ನಡದ ಚೆನ್ನುಡಿ' ಹಾಗೂ 'ಮಾತಿನ ಮುನ್ನಡೆ' ಇವರು ಶಾಲಾ ಮಕ್ಕಳಿಗಾಗಿ ರಚಿಸಿರುವ ಪಠ್ಯಪುಸ್ತಕಗಳು.

ಸಾರಸ್ವತ ಕ್ಷೇತ್ರಕ್ಕೆ ನೀಡಿರುವ ಅಮೂಲ್ಯ ಕೃತಿಗಳು : 'ಕ್ಷ ಕಿರಣದಲ್ಲಿ ಕಾಳಿದಾಸ' (ವಿಶಿಷ್ಟ ರೀತಿಯ ವಿಮರ್ಶಾ ಕೃತಿ) ; 'ಸಚಿತ್ರ ಕನ್ನಡ ಕಸ್ತೂರಿಕೋಶ' (ಪ್ರತಿಷ್ಠಿತ ಕೃತಿ) ; ಸಚಿತ್ರ ಭಾರತೀಯರ ಚರಿತ್ರೆ, ಕಿರಾತಾರ್ಜುನೀಯ, ದಮಯಂತಿ, ಭಾರತದ ಭೀಷ್ಮ ಅಥವಾ ಮಹರ್ಷಿ ದಾದಾಬಾಯಿ ನೌರೋಜಿ, ಸರ್ ಚಂದ್ರಶೇಖರ

---

* ಜೀವಿತಕಾಲ : (1900-1985). ಜನಿಸಿದ್ದು 'ಬ್ಯಾಡಗಿ'ಯಲ್ಲಿ ತಂದೆ : ಎಲ್ಲಪ್ಪ, ತಾಯಿ : ಮರಿಯಮ್ಮ.

ವೆಂಕಟರಾಮನ್, ದೇಶಬಂಧು ಚಿತ್ತರಂಜನದಾಸರು, ನೇತಾಜಿ ಸುಭಾಸಚಂದ್ರ ಬೋಸ್, ರಾಷ್ಟ್ರಮಾತಾ ಕಸ್ತೂರಿಬಾ ಗಾಂಧಿ, ಗೋಪಾಲಕೃಷ್ಣ ಗೋಖಲೆ, ಸ್ವಾಮಿ ವಿವೇಕಾನಂದ, ರಾಧಾಕೃಷ್ಣನ್, ಈಶ್ವರಚಂದ್ರ ವಿದ್ಯಾಸಾಗರ (ಜೀವದ ಚರಿತ್ರೆಗಳು) : ಸತೀಶ್ರೇಷ್ಠೆ ಶರ್ಮಿಷ್ಠೆ, ಸಾವಿತ್ರಿದೇವಿ, ಹರ್ಷ, ನಳದಮಯಂತಿಯರ ಕಥೆ. ಮುಂತಾದವುಗಳು.

**ಡಾ|| ಸಿದ್ಧಯ್ಯಪುರಾಣಿಕರು[1] :** ಅವರ ಮಕ್ಕಳ ಸಾಹಿತ್ಯ ಶೈಲಿಗೆ ಒಂದೆರಡು ಉದಾಹರಣೆ :

'ಅಜ್ಜನ ಕೋಲಿದು ನನ್ನಯ ಕುದುರೆ
ಹೆಜ್ಜೆ ಹೆಜ್ಜೆಗೆ ಕುಣಿಯುವ ಕುದುರೆ
ಕಾಲಿಲ್ಲದೆಯೇ ನಡೆಯುವ ಕುದುರೆ
ಕುಳಿತಲ್ಲಿಯೇ ಬದುಕುವ ಕುದುರೆ

— — —

ಕಾಣದ ದೇವರ ಕಂಡವರಾರೋ
ಕಾಣುವ ದೇವರು ತಾಯಿಯೇ ?
ಕಲ್ಲು ದೇವರು ಕೊಡುವುದು ಏನೋ
ಎಲ್ಲ ಕೊಡುವವಳು ತಾಯಿಯೇ !

ಹೀಗೆ ತಾಯಿಯೇ ಪ್ರತ್ಯಕ್ಷ ದೇವರು ಎಂಬ ಪವಿತ್ರ ಭಾವನೆಯನ್ನು ಮಕ್ಕಳ ಮನಸ್ಸಿನಲ್ಲಿ ಕಡೆದು ನಿಲ್ಲಿಸುತ್ತಾರೆ. ಕಾವ್ಯಾನಂದರು ಮಕ್ಕಳಿಗೆಂದೇ 'ಬಾಲಭಾರತಿ' ಮಾಸಪತ್ರಿಕೆಯಲ್ಲಿ 'ಶುಕವನ', 'ಸಮುದ್ರಲೋಕ', 'ವಾಲ್ಟ್‌ಡಿಸ್ನಿಲೋಕ. 'ಕಾಡುಮನೆ', ಮೊದಲಾದ ಸ್ವಾರಸ್ಯಪೂರ್ಣ ಲೇಖನಗಳನ್ನು ಬರೆದಿದ್ದಾರೆ. 'ನ್ಯಾಯನಿರ್ಣಯ' ಮಕ್ಕಳಿಗಾಗಿಯೇ ರಚಿಸಿರುವ ನಾಟಕ. 'ತುಷಾರಹಾರ' ಕಿರುಗತೆಗಳ ಸಂಕಲನ. 'ತುಪ್ಪಾ ರೊಟ್ಟಿಗೇ ಗೇ ಗೇ' ಗೇ ಭಾರತ ಸರ್ಕಾರದ ಬಹುಮಾನ ಲಭಿಸಿದೆ. 'ಬಣ್ಣ ಬಣ್ಣದ ಓಕುಳಿ' (ಮಕ್ಕಳ ಪದ್ಯಗಳು) ಇತ್ತೀಚಿನ ಕೃತಿ.

**ಎಸ್. ಪ್ರಹ್ಲಾದರಾವ್[2] :** ಗುಮಾಸ್ತೆಯಾಗಿ ಜೀವನ ಪ್ರಾರಂಭಿಸಿ, ಉಪಾಧ್ಯಾಯರಾಗಿ ಮುಂದುವರಿಸಿ, ಉಪಪ್ರಾಧ್ಯಾಪಕರಾಗಿ ಒಟ್ಟು ಮೂರು ದಶಕಕ್ಕೂ ಹೆಚ್ಚುಕಾಲ ಅಧ್ಯಾಪಕ ವೃತ್ತಿಯಲ್ಲಿ ಸೇವೆ ಸಲ್ಲಿಸಿದ್ದರು.

ಇವರ ಕೃತಿಗಳು : ಪಿನೋಕಿಯೊ (ಅನುವಾದ) ; ಮಿಂಚುಳ್ಳಿ, ಇದು ನಮ್ಮ ಭಾರತ (5 ಭಾಗಗಳಲ್ಲಿ) ; ಮಹಾಯಾನ, ರಾಜಬೇಸ್ತ, ಸರಳವಿವಾಹ, ಒಬ್ಬನಿಗಾದರೂ

---

1 ಪುಟ 173 ನೋಡಿ.

2 ಜೀವಿತಕಾಲ : (1920-1980). ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಜನನ. ತಂದೆ : ಹನುಮಂತರಾವ್, ತಾಯಿ : ತುಳಜಾಬಾಯಿ.

ಓದು ಬರಹ ಕಲಿಸಿ. ಒಂದಾದರೂ ಸಸಿನೆಡಿ. ಸ್ಮೃತಿಕನ್ಯೆ. ರಥರಥಿಕ. ಮಧುವ್ರತ. ಮುತ್ತಿನಹಾರ (ಕಥಾ ಸಂಕಲನಗಳು) ; ಆಮಲನ ವಚನಗಳು, ಮುಂತಾದವು.

**ಎಂ. ಎಸ್. ವೆಂಕಟರಾಮಯ್ಯ**[1] : ಕಾವ್ಯನಾಮ 'ಹರಿಚರಣ' ಪ್ರಾಣಿಶಾಸ್ತ್ರದಲ್ಲಿ ' ಪದವೀಧರರಾದ ಶ್ರೀಯುತರು ಕನ್ನಡಜಾಣ ಪರೀಕ್ಷೆ ಪಾಸು ಮಾಡಿರುವುದಲ್ಲದೆ ಜರ್ನಲಿಸಂನಲ್ಲಿ ಡಿಪ್ಲೊಮಾಸಹ ಪಡೆದಿದ್ದಾರೆ. ಶಿಶುಸಾಹಿತ್ಯ ರಚನೆಯಲ್ಲಿ ಅತೀವ ಆಸಕ್ತಿಯಿದೆ. ಸುಮಾರು 30 ಕೃತಿಗಳನ್ನು ರಚಿಸಿದ್ದಾರೆ.

ಮುಖ್ಯವಾದವುಗಳು : ನಮ್ಮಭಾಗ್ಯ. ವೀರನಾರಾಯಣ, ಗೋ ಜ್ಯೋತಿ-ಗ್ರಾಮ ಜ್ಯೋತಿ, ಅಣುವಿಜ್ಞಾನಿ ಭಾಬಾ, ನ್ಯೂಟನ್, ಹಸುವಿನ ಮೊಟ್ಟೆ, ಮಕ್ಕಳ ಮೆಂಡಲ್, ಗಟಗನ್ನಿ, ಹಾಲು ಹೈನು, ಮೊಸರ-ಗಿಣ್ಣು, ಶಿವಪ್ರಕಾಶ, ಸ್ಕೌಟುಗಳ ಕೈತುತ್ತು, ಮೇನ್ಯಾಕಥೆ, ಡಾಲ್ಫಿನ್. 'ನಾಗನ ಮನೆಯ ನಂದಾದೀಪ' ಕೃತಿಗೆ ಭಾರತ ಸರ್ಕಾರದ ವಿದ್ಯಾ ಇಲಾಖೆಯಿಂದ ಬಹುಮಾನ ದೊರೆತಿದೆ.

ಇತರ ಕೃತಿಗಳು : ವಿಜ್ಞಾನ ವೈಭವ, ವಿಜ್ಞಾನ ವಿಕಾಸ, Gems and Pearls, Gandhiji the Journalist, Chease, Ruman the Mighty Organ, Fidelity, ಕಾವಕಾಶಿ (ಕವನ ಸಂಗ್ರಹ) ಮುಂತಾದವುಗಳು.

**ಪ್ರೊ|| ಎಂ. ವಿ. ಸೀತಾರಾಮಯ್ಯ**[2] :

ಹೂವನು ಮಾರುತ
ಹೂವಾಡಗಿತ್ತಿ
ಹಾಡುತ ಬರುತಿಹಳು
ಘಮ ಘಮ ಹೂಗಳು
ಬೇಕೆ ಎನ್ನುತ
ಹಾಡುತ ಬರುತಿಹಳು

ಈ ಹಾಡನ್ನು ಕೇಳಿಲ್ಲದವಾರಾರು ? ಮಕ್ಕಳ ಪಠ್ಯ ಪುಸ್ತಕಗಳಲ್ಲಿ ಬಹಳಷ್ಟು ಕಾಲ ಅತ್ಯಂತ ಜನಪ್ರಿಯವಾಗಿ ಮಕ್ಕಳನ್ನು ಸೂರೆಗೊಂಡಿದ್ದುದು ಈ ಪದ್ಯ.

ಈ ವಿಭಾಗದಲ್ಲಿನ ಇವರ ಇತರ ಪ್ರಸಿದ್ಧ ಕೃತಿಗಳು : ಹಾವಾಡಿಗ, ಹೂವಾಡಗಿತ್ತಿ (ಮಕ್ಕಳ ಕವನಗಳು) ; ಕುಮಾರ ಗೌತಮ (ಮಕ್ಕಳ ನಾಟಕ) : ಯುಧಿಷ್ಠಿರ, (ಜೀವನ ಚರಿತ್ರೆ) ; 'ನಮ್ಮ ಪುಸ್ತಕ'ದಲ್ಲಿ ಪಂಚತಂತ್ರದ ಕಥೆಗಳನ್ನು ಹಾಗೂ ರಾಬಿನ್ ಸನ್ ಕ್ರೂಸೊ (ಸಚಿತ್ರ) ಪ್ರಕಟಿಸಿದ್ದಾರೆ. ಊರುಗೋಲು, ಕರುಣಾಮೂರ್ತಿ, ಬಾಲಬಸವೇಶ್ವರ (ರೇಡಿಯೋ) ಪ್ರಸಾರಿತ ನಾಟಕಗಳು.

---

1 ಜನನ : ಜೂನ್ 23, 1920, ತಂದೆ : ಮಿರ್ಲೆ ಸುಬ್ಬಯ್ಯ, ತಾಯಿ : ಲಕ್ಷ್ಮಿ ಅಮ್ಮ.

2 ಪುಟ 166 ನೋಡಿ. ಇವರ 'ಶ್ರೀಕೃಷ್ಣ ಬಾಲಲೀಲೆ' ಕೃತಿಗೆ 1986ರ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

**ಪಳಕಳ ಸೀತಾರಾಮ ಭಟ್ಟ**[1]**:** ಶಿಶುಸಾಹಿತ್ಯ ಕ್ಷೇತ್ರದಲ್ಲಿ ಹೆಸರಿಸಲೇ ಬೇಕಾದ ವ್ಯಕ್ತಿ. ಮೂಡಬಿದರೆಯ ಜೈನ ಕಿರಿಯ ಮಹಾ ವಿದ್ಯಾಲಯದಲ್ಲಿ ಅಧ್ಯಾಪಕ ರಾಗಿದ್ದಾರೆ. ಮಕ್ಕಳಿಗಾಗಿ ಗಣನೀಯ ಸಂಖ್ಯೆಯಲ್ಲಿ ಕಥೆ, ಕವನ, ನಾಟಕ, ಪ್ರಹಸನ, ಜೀವನ ಚರಿತ್ರೆ ಮುಂತಾಗಿ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೊಡುಗೆ ನೀಡುತ್ತಾ ಬಂದಿದ್ದಾರೆ.

ಮುಖ್ಯ ಕೃತಿಗಳು : ಎಳೆಯರ ಗೆಳೆಯ, ಕಂದನ ಕೊಳಲು, ತಮ್ಮನ ತಂಬೂರಿ, ಬಾಲರ ಬಾವುಟ, ಮಕ್ಕಳ ಮುದ್ದು, ಪುಟ್ಟನ ಪೀಪಿ, ಗಾಳಿಪಟ, ಕಿರಿಯರ ಕಿನ್ನರಿ, ತಿಮ್ಮನ ತುತ್ತೂರಿ (ಕವನ ಸಂಗ್ರಹಗಳು) ; ಪುಟಾಣಿ ಕತೆಗಳು, ಗಡಿಬಿಡಿ ಗುಂಡ, ಮಿಠಾಯಿ ಗೊಂಬೆ, ಪುಟ್ಟಬಿಲ್ಲಿ, ಚಿಕ್ಕಣಿಚೋಮ, ಹೂದೋಟದ ಹುಡುಗಿಯರು, ಕಟುಂ ಕಟುಂಕಪ್ಪೆಯಣ್ಣ, ಬೆಕ್ಕಿನಮರಿ ಹಕ್ಕಿಯಾಯಿತೆ? (ಕಥಾ ಸಂಕಲನಗಳು); ಏಕಲವ್ಯ, ಭಕ್ತ ಧ್ರುವ, ನಚಿಕೇತ, ಕಿಟ್ಟಾಯಣ, ಯಾರವರು (ನಾಟಕಗಳು) ; ಬೆಳಕಿನಹಬ್ಬ (ಪ್ರಹಸನ), ಎಳೆಯರ ಗೆಳೆಯ (ಕಿರುಪ್ರಬಂಧ) ; ಮಕ್ಕಳಮಿತ್ರ (ಪತ್ರಲೇಖನ) ; ಈಶ್ವರಚಂದ್ರ ವಿದ್ಯಾಸಾಗರ (ಜೀವನ ಚರಿತ್ರೆ).

ಮಕ್ಕಳ ಸಾಹಿತ್ಯಕ್ಕೆ ಮೀಸಲಾದ 'ಶಿಶುಸಾಹಿತ್ಯಮಾಲೆ' ಸ್ಥಾಪಿಸಿ ಹಲವಾರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

'ಬೆಳಕಿನಹಬ್ಬ' ಕನ್ನಡ ಸಾಹಿತ್ಯ ಪರಿಷತ್ತಿನ ಜಿ. ಪಿ. ರಾಜರತ್ನಂ ಸ್ಮಾರಕ ಬಹುಮಾನಗಳಿಸಿದೆ.

**ಎಲ್. ಗುಂಡಪ್ಪ**[2]**:** ಮೈಸೂರು ವಿಶ್ವವಿದ್ಯಾಲಯದ ಸಿಲ್ವರ್ ಜ್ಯೂಬಿಲಿ ಕನ್ನಡ ಸ್ವರ್ಣಪದಕ ವಿಜೇತರು. ತಮಿಳು–ಕನ್ನಡ ಬಾಂಧವ್ಯಕ್ಕೆ ಶ್ರಮಿಸಿದ್ದಾಗಿ ನಾಗರ್‌ಕೊಯಲಿನಲ್ಲಿ ಬಂಗಾರದ ಪದಕ ಪಡೆದಿದ್ದರು. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ನೆನೆಯ ಬೇಕಾದ ಸಾಹಿತಿ.

ಕೃತಿಗಳು : ಕಳ್ಳಮರಿ, ಮಕ್ಕಳ ರವೀಂದ್ರರು, ರವೀಂದ್ರನಾಥ ಠಾಕೂರರ ಜೀವನ ವ್ಯಕ್ತಿತ್ವ ಪರಿಚಯ (ಭಾರತ ಸರ್ಕಾರದ ಬಹುಮಾನಗಳಿಸಿರುವ ಕೃತಿ), ಒಂಬತ್ತನೇ ತರಗತಿಯ ವಿದ್ಯಾರ್ಥಿಗಳಿಗಾಗಿ ಪಠ್ಯಪುಸ್ತಕ ರಚಿಸಿದ್ದಾರೆ.

ಅಕಾಡೆಮಿ ಪ್ರಶಸ್ತಿ, ದೇವರಾಜ ಬಹದ್ದೂರ್ ಬಹುಮಾನ ವಿಜೇತರು. ಒಟ್ಟು ಕೃತಿಗಳು 52.

ಪ್ರಮುಖ ಸಾಹಿತ್ಯಕ ಕೃತಿಗಳು : ನಾಡ ಪದಗಳು, ಭಾರತ ಕಥಾ ಮಂಜರಿ, ಕನ್ನಡ ವ್ಯಾಕರಣ ಪಾಠಗಳು, ಮುಕುಂದಮಾಲಾ ಭಾಸನಾಟಕ ಮುಂತಾದವು.

---

1 ಜನನ : ಆಗಸ್ಟ್ 14, 1931, ದ. ಕ. ಜಿಲ್ಲೆಯ ಕಾರ್ಕಳ ತಾಲ್ಲೂಕಿನ 'ಪುತ್ತಿಗೆ' ಗ್ರಾಮದಲ್ಲಿ.

2 ಜೀವಿತಕಾಲ : (1903–1986). ಪುಟ 21 ನೋಡಿ.

**ಆರ್. ಎಸ್. ರಾಮರಾವ್** [1]: ಉಪಾಧ್ಯಾಯ ವೃತ್ತಿ ನಿರ್ವಹಿಸಿ ಸೆಕ್ರೆಟರಿಯೇಟ್‌ನಿಂದ ನಿವೃತ್ತರಾದ ನಂತರ (1970) ಸಾಹಿತ್ಯ ಪರಿಷತ್ತು, ಐ.ಬಿ.ಹೆಚ್. ಗಳಲ್ಲಿ ದುಡಿದು, ಈಗ ನಿವೃತ್ತರಾಗಿದ್ದಾರೆ. ಸಾಹಿತ್ಯದ ಅಭ್ಯುದಯಕ್ಕೆ ತಮ್ಮ ಕಾಲ ವನ್ನು ವ್ಯಯಿಸುತ್ತಿದ್ದಾರೆ.

ಇವರು ಮಕ್ಕಳಿಗಾಗಿ ರಚಿಸಿದ ಕೃತಿಗಳು ; ಸಾಹಸ 'ಭೀಮವಿಜಯ' (ಎಂಟನೆ ತರಗತಿಗೆ ಪಠ್ಯಪುಸ್ತಕ); 'ಗದ್ಯಮಂಜರಿ' (9ನೇ ತರಗತಿಯ ಪಠ್ಯಪುಸ್ತಕ); ಹರಿಶ್ಚಂದ್ರ, ಅತ್ತಿಮಬ್ಬೆ, ರೂದ್ರ ಶ್ರೀನಿವಾಸರಾವ್, ಗೋದಾವರಿ, ಎಚ್ಚಮ್ಮನಾಯಕ, ಕುಣಿಗಲ್ ರಾಮಶಾಸ್ತ್ರಿ, ಬಾವುಟ, ಕಲ್ಯಾಣದ ಚಾಲುಕ್ಯರು, ಪಂಡಿತ ಮೋತಿಲಾಲ್ ನೆಹರು, ಮುಂತಾದವುಗಳು.

ಇತರ ಕೃತಿಗಳು: ಸಣ್ಣ ಕಥೆಗಳ ಬೆಳವಣಿಗೆ (ಪ್ರಬಂಧ); ಕವಿಕಾವ್ಯ ಪರಿಚಯ, ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ, ಒಂಡುಣಿ (ಭಾಮಿನಿ ಷಟ್ಪದಿ ಕಾವ್ಯಗಳ ಆಯ್ದ ಭಾಗಗಳ ಸಂಕಲನ) ; ನಾಗಚಂದ್ರ ಕವಿಕಾವ್ಯ ವಿಮರ್ಶೆ, ಸಿದ್ಧರಾಮ ಚಾರಿತ್ರ– ಕಾವ್ಯಾನುವಾದ, ತಿಮ್ಮಣ್ಣ ಕವಿಯ ಭಾರತ (ಸಂಪಾದನೆ) ; ಚಾರು ವಿಠಲನಾಥ, ಸೇಡು (ಕಥಾಸಂಕಲನ) ; ಭಾರತವೀರ ಕುಲಭೂಷಣ (ಐತಿಹಾಸಿಕ ನಾಟಕಗಳು); ಹಾವಿನ ಹೆಜ್ಜೆ (ಆಕಾಶವಾಣಿ ಪ್ರಸಾರಿತ ನಾಟಕ) ; ಕನ್ನಡ–ಇಂಗ್ಲೀಷ್ ಸಂಕ್ಷಿಪ್ತಕೋಶ, ಅಡಳಿತ ಸಂಯುಕ್ತ ಪದಕೋಶ (ಇಂಗ್ಲೀಷ್ ಸಂಯುಕ್ತ ಪದಗಳಿಗೆ ಕನ್ನಡ ಅರ್ಥ) ಮುಂತಾದವು.

**ಸೋಮಯಾಜಿ ಬಂಟವಾಳ ಪದ್ಮನಾಭ** [2]: ಇವರು ಪ್ರಾಥಮಿಕ ಶಾಲೆಯ ಮಕ್ಕಳಿಗಾಗಿಯೇ ಬಹಳಷ್ಟು ಪುಸ್ತಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದುವು : ಜೀವನ ಕಥೆಗಳು, ಸಾಹಿತಿಗಳ ಕಥೆಗಳು, ಚಂದ್ರಹಾಸ ಮತ್ತು ಇತರ ಕಥೆಗಳು, ವೀರ ಭೀಮಸೇನ, ಸತ್ಯಹರಿಶ್ಚಂದ್ರ, ಮಕ್ಕಳ ರಾಮಾಯಣ, ಪಂಚ ತಂತ್ರದ ಕಥೆಗಳು, ವಿಜಯೀ ಚಂದ್ರಗುಪ್ತ, ಕೋಟಿ ಚನ್ನಯ್ಯನ ಕಥೆ ಮುಂತಾದವು.

**ದಾಮೋದರ ಬಾಳಿಗ** [3]: ಇವರು ಮಕ್ಕಳ ಸಾಹಿತ್ಯಕ್ಕೆ ಕಥೆ, ಕವನಗಳ ಮಹಾ ಪೂರವನ್ನೇ ಹರಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದವು : ದೇವರ ಮಕ್ಕಳು, ಭಾರತ ಜ್ಯೋತಿ ಮಹಾತ್ಮ, ಅಜ್ಜಿ ಕತೆ ಮತ್ತು ಗುಬ್ಬಿ ಕುಣಿತ, ಅತ್ತೆಯ ಕರಾರು ಮತ್ತು ಇತರ ಕಥೆಗಳು, ಉಂಡಾಡಿ ತೋಳ, ಮೃಗರಾಜ ಇತ್ಯಾದಿ.

**ಎಸ್. ಚೆನ್ನಪ್ಪ** [4]: ವೃತ್ತಿಯಲ್ಲಿ ಇವರು ಉಪನ್ಯಾಸಕರು. ಮೈಸೂರು ವಿಶ್ವವಿದ್ಯಾಲಯದಲ್ಲಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

---

1 ಜನನ : ಅಕ್ಟೋಬರ್ 15, 1915, ಬೆಂಗಳೂರಿನಲ್ಲಿ.

2 ಜನನ : 1917 3 ಜನನ : 1909

4 ಜನನ : 1946

ಕೃತಿಗಳು : ಬುದ್ಧನ ಬುದ್ಧಿವಾದ, ಗಾಂಧೀಜಿ ಕಥೆಗಳು, ಕುವೆಂಪು ಕಥೆ, ಚಿನ್ನದ ತಟ್ಟೆ, ಚಿನ್ನದಂಥ ಮಾತುಗಳು, ಮಿಂಚಿದ ಮಹಿಳೆಯರು, ಮೂವರು ಮಹನೀಯರು, ಇಬ್ಬರು ಮಹನೀಯರು, ಇಬ್ಬರು ಮಾನ್ಯರು, ಬೇಸ್ರವೆ ವೆಂಕಟ ನಾರಣಪ್ಪ, ಬಿ. ಎಂ ಶ್ರೀಕಂಠಯ್ಯ, ಎಂ. ಎಸ್. ಪುಟ್ಟಣ್ಣ.

ಇತರ ಸಾಹಿತ್ಯಕ ಕೃತಿಗಳು : ಸಹೃದಯ, ವಾಙ್ಮಯ ವ್ಯಕ್ತಿಗಳು, ಅಪರೂಪದವರು ಇತ್ಯಾದಿ.

ಸಂಪಾದಿಸಿರುವ ಕೃತಿಗಳು : ಕಂಗಳು ಕಂಡ ಕರ್ನಾಟಕ, ಕುವೆಂಪು ಸಾಹಿತ್ಯ, ಅವಲೋಕನಗಳು, ಪು. ತಿ. ನ ಸಾಹಿತ್ಯ, ಸೌರಭ, ನಮ್ಮ ನಾಡು, ನಮ್ಮ ನುಡಿ.

**ಹೆಚ್. ಶ್ರೀನಿವಾಸಮೂರ್ತಿ**[1]: ಕಾವ್ಯನಾಮ 'ಪರಿಮಳ' ಕಲ್ಯಾಣಮ್ಮನವರ 'ಮಕ್ಕಳ ಕೂಟ'ದೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದವರಲ್ಲಿ ಇವರೂ ಒಬ್ಬರು. ಮಕ್ಕಳಿಗಾಗಿ ಹಾಗೂ ಮಕ್ಕಳ ಸಾಹಿತ್ಯ ಬೆಳವಣಿಗೆಗಾಗಿ ಶ್ರಮಿಸುತ್ತಿದ್ದಾರೆ. ಗಾಂಧೀಜಿ ಇವರಿಗೆ ಅಚ್ಚುಮೆಚ್ಚಿನ ಆದರ್ಶ ವ್ಯಕ್ತಿ. ಅವರ ಪ್ರಭಾವ ಇವರ ಮೇಲೆ ಅಪಾರ. ಈ ದಿಸೆಯಲ್ಲಿ ಇವರು ರಚಿಸಿರುವ ಕೃತಿಗಳು 'ನಂದಾ ದೀಪ', ಬಾಪುವಾಣಿ, ಗಾಂಧಿ ದಂಡು, ಗಾಂಧಿ ತಾತ, ಅಜ್ಜ-ಅಜ್ಜಿ, ಕೋಲು ತಾತ ಮುಂತಾದವು.

ಇತರ ಕೃತಿಗಳು : ಮಕ್ಕಳ ಮಂಡಿಗೆ, ಹುಟ್ಟಿದ ಹಬ್ಬ, ನನ್ನ ದೋಣಿ, ಸ್ವಾಮಿಗಳ ಕಥೆಗಳು, ಕಡೆಗೋಲು, ರೈಲು ಬಂಡಿ, ಬೆಳದಿಂಗಳು; ಹನ್ನೆರಡು ಪಠ್ಯ ಪುಸ್ತಕಗಳನ್ನು ಶಿಕ್ಷಣ ಇಲಾಖೆಗೆ ರಚಿಸಿ ಕೊಟ್ಟಿರುವುದು ಇವರ ಅಗ್ಗಳಿಕೆ.

**ಕುಮಾರ ವೆಂಕಣ್ಣ**[2]**:** (ವೆಂಕಟರಾವ್ ಕ್ಯೊಲೂರ್‌ಕರ್) ಸಾರಸ್ವತ ಕ್ಷೇತ್ರದಲ್ಲಿ, ಅದರಲ್ಲೂ ಮಕ್ಕಳ ಸಾಹಿತ್ಯ ವಿಭಾಗದಲ್ಲಿ ಚಿರಪರಿಚಿತ ಹೆಸರು. ಮಕ್ಕಳಿಗಂತೂ ಇವರು ಅಚ್ಚುಮೆಚ್ಚು. ಕೆಲವರಿಗೆ ಇವರು ವೆಂಕಣ್ಣನಾದರೆ ಮತ್ತೆ ಕೆಲವರಿಗೆ ದೊಡ್ಡಣ್ಣ. ಬಾಲ್ಯದಿಂದಲೂ ಕಷ್ಟ ಜೀವಿಯಾದ ವೆಂಕಣ್ಣನವರಿಗೆ ಪತ್ರಕರ್ತ ವೃತ್ತಿಯೇ ಹೆಚ್ಚು ಪ್ರಿಯವಾದರೂ, ಮಕ್ಕಳ ಸಾಹಿತ್ಯ ರಚನೆಯಲ್ಲಿಯೇ ಅಮಿತ ಆಸಕ್ತಿ. ಈ ದಿಸೆಯಲ್ಲಿನ ಅವರ ಕೃತಿಗಳು : ಕಪ್ಪೆ ಮಾಡಿದ ಕ್ರಾಂತಿ, ಜಾಣ ಗೆಲ್ಲುತ್ತಾನೆ, ಜಾಣರು ತೋಡಿದ ಭಾವಿ, ತಂದೆ ಹೇಳಿದ ಬುದ್ಧಿ, ನ್ಯಾಯ ಶೀಲ ಗೆಲ್ಲುತ್ತಾನೆ, ಮಂತ್ರಿಯಾದ ಬುದ್ಧಿವಂತ, ಆನೆಗೆ ಬುದ್ಧಿ ಬಂತು, ಬೆಟ್ಟದ ಮೇಲೆ ಪುಟ್ಟ ಮನೆ, ದೇವರ ಹೆಂಡರು, ಮರೆಯಲಾರದ ಮಹಾವೀರರು, ದೇವರು ಮದುವೆ ಮಾಡಿಸಿದ ಮುಂತಾದವು.

'ಪಾಪಚ್ಚಿ' ಪತ್ರಿಕೆಯ ಸಂಪಾದಕರಾಗಿ ಮಕ್ಕಳ ಸಾಹಿತ್ಯಕ್ಕೆ ಬಹುಮುಖ ಕೊಡುಗೆ ನೀಡುತ್ತಿದ್ದಾರೆ.

---

1 ಜನನ: ಆಗಸ್ಟ್ 24, 1924, ಚಿತ್ರದುರ್ಗದಲ್ಲಿ. ತಂದೆ : ಹನುಮಂತರಾವ್, ತಾಯಿ : ಸುಬ್ಬಮ್ಮ.

2 ಜನನ: ನವೆಂಬರ್ 4, 1916, ದಕ್ಷಿಣ ಕನ್ನಡ ಜಿಲ್ಲೆಯ 'ಕ್ಯೊಲ' ಎಂಬಲ್ಲಿ. ತಂದೆ : ವಾಸುದೇವಯ್ಯ.

**ಸಿಸು ಸಂಗನೇಶ**[1]: (ಸಂಗಮೇಶ ಸಿದ್ಧರಾಮಪ್ಪ ಮನಗೊಂಡ) ಶಿಶು ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತ ಹೆಸರು. ಮೂವತ್ತಾರು ವರ್ಷಗಳ ದೀರ್ಘಕಾಲ ಶಿಕ್ಷಣ ಕ್ಷೇತ್ರದಲ್ಲಿ ನಿಷ್ಕಾಮ ಸೇವೆಗೈದು. ಸುಮಾರು ನಾಲ್ಕು ದಶಕಕ್ಕೂ ಹೆಚ್ಚಿನ ಕಾಲದಿಂದ ಮಕ್ಕಳ ಸಾಹಿತ್ಯ ರಚನೆ. ಸಂಪಾದನೆ. ಪ್ರಕಟಣೆಯಲ್ಲಿ ತೊಡಗಿರುವ ಪ್ರಸಿದ್ಧ ಸಾಹಿತಿ. ಉಪಾಧ್ಯಾಯ ವೃತ್ತಿಯಿಂದ ನಿವೃತ್ತರಾದ ಮೇಲೆ ಸಾಹಿತ್ಯ ಸೇವೆಯೇ ಇವರ ಇಂದಿನ ವೃತ್ತಿ.

'ಭಾರತೀ ಸಾಹಿತ್ಯ ಭಂಡಾರ' (1954). 'ಬಾಲ ಭಾರತ' (ಮಾಸ ಪತ್ರಿಕೆ) 1978 ; ಕರ್ನಾಟಕ ಮಕ್ಕಳ ಸಾಹಿತ್ಯ ಅಕಾಡೆಮಿ (1983) ಸ್ಥಾಪನೆ ಮಾಡಿರುವುದಲ್ಲದೆ ಅವಿರತ ಅಮೂಲ್ಯ ಕೊಡುಗೆಗಳನ್ನು ನೀಡಿ ಮಕ್ಕಳ ಸಾಹಿತ್ಯ ಸಂಪನ್ನಗೊಳಿಸುತ್ತಿದ್ದಾರೆ.

ಇವರ ಕೃತಿ. ಪಕ್ಷಿ ವಿಜ್ಞಾನದ ಹಿನ್ನಲೆಯಲ್ಲಿ ರಚಿತಗೊಂಡಿರುವ 'ನನ್ನ ಮನೆ' (1963) ಹಾಗೂ ಜಪಾನದ ಜನಜೀವನ ನಿರೂಪಿಸುವ 'ನನ್ನ ಗೆಳೆಯ ಜಪಾನದ ಜಾರೊ' (1968) ರಾಷ್ಟ್ರ ಪ್ರಶಸ್ತಿಗಳಿಸಿದ್ದರೆ, 'ನನ್ನ ಗೆಳೆಯ ಎಸ್ಕಿಮೊ ಇಗ್ಲಿಯಿನ್' 1980ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದಿದೆ. 'ಮೊಲದ ಮೂಗು ಮೊಂಡಾಯಿತು' (ನಾಲ್ಕು ಕಥೆಗಳ ಸಂಕಲನ) 1980ರ ಕಾವ್ಯಾನಂದ ಪ್ರಶಸ್ತಿಗೆ ಪಾತ್ರವಾಗಿದೆ.

ಇತರ ಕೃತಿಗಳು : ನರಿಯ ಫಜೀತಿ. ಯಾರು ಜಾಣರು, ಮಂಕುಮರಿ, ಆಲಿಯ ಒಂಟೆ. ಕಳ್ಳ ಸಿಕ್ಕ, ಚತುರ ಚಾಣಾಕ್ಷ ಮುಂತಾದವು.

'ಹೊರನಾಡ ರೈತರು' ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗಾಗಿ ನಿರ್ಮಿಸಿ ಕೊಟ್ಟಿರುವ ಗ್ರಂಥ. ಪುಟ ಚಂಡು (ಭಾಗ 1 ಮತ್ತು 2). ಆಣೆಕಲ್ಲು (ಭಾಗ 1 ಮತ್ತು 2), 'ನಾವು ನಮ್ಮವರು' (ಭಾಗ 1 ಮತ್ತು 2). 'ಸೀತನಿ ಸುಲಗಾಯಿ', 'ಪಂಚ ಗಂಗೆ', 'ಅನಿ ಬತ್ತಾನಿ', 'ಮಿಡಿ ಗೊಂಚಲು', 'ಮಕ್ಕಳ ಸಾಹಿತ್ಯ 1984' ಇವರು ಸಂಪಾದಿಸಿರುವ ಕೃತಿಗಳು.

ಇವರ ಅವಿರತ ಸಾಹಿತ್ಯ ಸೇವೆಯನ್ನು ಮೆಚ್ಚಿ ಬಿಜಾಪುರ ಜಿಲ್ಲಾ ಪರಿಷತ್ತು 1978ರಲ್ಲಿ 'ಶಿಶು ಸಾಹಿತ್ಯ ಶಿಲ್ಪಿ' ಬಿರುದಿತ್ತು ಸನ್ಮಾನಿಸಿದೆ. 1980ರಲ್ಲಿ ರಾಜ್ಯ ಸರ್ಕಾರ 'ಆದರ್ಶ ಶಿಕ್ಷಕ' ಪ್ರಶಸ್ತಿ ನೀಡಿ ಅವರ ಸೇವೆಯನ್ನು ಗುರುತಿಸಿದೆ.

**ರಸಿಕ ಪುತ್ತಿಗೆ**[2]: (ಪಿ ಸುಬ್ರಹ್ಮಣ್ಯ ಆಚಾರ್ಯ). ಉಪಾಧ್ಯಾಯ-

---

1 ಜನನ: ಏಪ್ರಿಲ್ 29, 1929, 'ಯರನಾಳ'ದಲ್ಲಿ. ತಂದೆ: ಸಿದ್ಧರಾಮಪ್ಪ, ತಾಯಿ: ಗೌರಮ್ಮ.

2 ಜನನ: ಜೂನ್ 15, 1932, ಕಾರ್ಕಳ ತಾಲ್ಲೂಕಿನ 'ಪುತ್ತಿಗೆ'ಯಲ್ಲಿ. ತಂದೆ: ವೆಂಕಟರಮಣಾಚಾರ್ಯ, ತಾಯಿ: ನಾಗವೇಣಿ ಅಮ್ಮ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾಲಯದಿಂದ ಎಂ.ಎ. (ಕನ್ನಡ) ಹಾಗೂ ಭಾಷಾ ಶಿಕ್ಷಣದಲ್ಲಿ ಡಿಪ್ಲೋಮಾ ಪಡೆದಿದ್ದಾರೆ.

ಉಪನ್ಯಾಸಕ ಶ್ರೀ ಸುಬ್ರಹ್ಮಣ್ಯ ಆಚಾರ್ಯ, ಸಾರಸ್ವತ ಕ್ಷೇತ್ರದಲ್ಲಿ ಪ್ರಸಿದ್ಧರಾಗಿರುವುದು 'ರಸಿಕ ಪುತ್ತಿಗೆ' ಕಾವ್ಯನಾಮದಿಂದಲೇ. ಹಿಂದಿ ಇವರು ಅಭ್ಯಾಸ ಮಾಡಿರುವ ಭಾಷೆಯಾದರೂ, ಹೆಚ್ಚಾಗಿ ಬರೆದಿರುವುದು ಕನ್ನಡದಲ್ಲಿಯೇ. ಮಕ್ಕಳಿಗಾಗಿ ಕಥೆ, ಕಾದಂಬರಿ, ನಾಟಕ, ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ನಾಟಕಗಳನ್ನು ಮಕ್ಕಳಿಂದ ಆಡಿಸಿದ್ದಾರೆ. ಆಕಾಶವಾಣಿಯಲ್ಲಿ ಕಥೆ ಹೇಳಿದ್ದಾರೆ. ಕವನ ಹಾಡಿದ್ದಾರೆ. ಹಿಂದಿ ಕಾರ್ಯಕ್ರಮ ನಡೆಸಿಕೊಟ್ಟಿದ್ದಾರೆ.

ಇವರ 'ಕೆಂಪು ಕಾರು' ಪುಟ್ಟ ಕಾದಂಬರಿ ರಾಷ್ಟ್ರೀಯ ಪ್ರಶಸ್ತಿ (NCERT) ಗಳಿಸಿದೆ. 'ಮಾರುತಿ ಶಾಲೆ ಹುಡುಗರು', ಮೂವರು ಮಾಣಿಗಳು (ಮಕ್ಕಳ ಕಾದಂಬರಿಗಳು) ; ಸತಿ ಅನುಸೂಯ, ತಿಲೋತ್ತಮೆ, ವೀರಜಟಾಯು, ಮರೆವೋ-ಮರೆವು, ಸುಂದೋಪಸುಂದ, ಅಗ್ನಿಪರೀಕ್ಷೆ (ನಾಟಕಗಳು) ; ಸೂರದಾಸ, ತುಳಸೀದಾಸ, ಸುಭದ್ರಾ ಕುಮಾರಿ ಚೌಹಾನ್, ಟಿ. ಎಲ್. ವಾಸ್ವಾನಿ, ಕುರಿಯ ವಿಠ್ಠಲಶಾಸ್ತ್ರಿ, ಕೋಟಿ ಚೆನ್ನಯ್ಯ (ಜೀವನ ಚರಿತ್ರೆಗಳು) ; ಕೊಂಬಿನ ಕಂಬಯ್ಯ, ಇಲಿಗೆ ಅಂಜಿದ ಹುಲಿ, ನೀತಿ ಕಥೆಗಳು, ತುಂಟಾಟದ ಕಥೆಗಳು, ಸುಕ್ಕಿನುಂಡೆ ಸುಬ್ಬ ಮತ್ತು ಇತರ ಕಥೆಗಳು, ತಪ್ಪೋವನದ ಸಾಹಸಿಗಳು (ಕಥಾ ಸಂಕಲನಗಳು) ; 'ಕಂಬಳ-ಕೋಳಿ ಅಂಕ', ಒಂದು ವಿಶಿಷ್ಟ ಕೃತಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನಡೆಯುವ ಆಕರ್ಷಕ ಕ್ರೀಡೆ ಕಂಬಳ ಮತ್ತು 'ಕೋಳಿಅಂಕ' ಗಳನ್ನು ಸ್ವಾರಸ್ಯರೀತಿಯಲ್ಲಿ ಪರಿಚಯಿಸಿದ್ದಾರೆ.

**ಪ. ವಿ. ಚಂದ್ರಶೇಖರರಾವ್ *:** ಶಿವಮೊಗ್ಗ, ಮಂಡ್ಯ, ಕೋಲಾರ ಮತ್ತು ಮೈಸೂರು ಕಾಲೇಜುಗಳಲ್ಲಿ ಉಪನ್ಯಾಸಕರಾಗಿದ್ದು ಈಗ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾರೆ.

ಮಕ್ಕಳ ಸಾಹಿತ್ಯಕ್ಕೆ ಇವರು ಇತ್ತಿರುವ ಕೊಡುಗೆಗಳು : 'ಇರುವೆಯ ಕಥೆ', ಇದಕ್ಕೆ ಮೈಸೂರು ಸರ್ಕಾರದ ಬಹುಮಾನ ಬಂದಿದೆ. ಇದು ಇರುವೆಗಳ ಜೀವನವನ್ನೇ ಕಥೆಯ ರೂಪದಲ್ಲಿ ಹೇಳುವ ಮಹತ್ವಪೂರ್ಣ ಕೃತಿ. ಪುಟ್ಟಜೀವಿ ಇರುವೆಯ ಜೀವನ ಎಷ್ಟು ರಮ್ಯ ! ಎಷ್ಟು ಚೇತೋಹಾರಿ ! ಎಂಬುದನ್ನು ಶ್ರೀಯುತರು ಕಲಾತ್ಮಕವಾಗಿ ನಿರೂಪಿಸಿದ್ದಾರೆ. 'ಚಿನ್ನದ ಗರಿಗಳು' (ಮಕ್ಕಳ ಕಾದಂಬರಿ) ; ಆಂಡಯ್ಯ ಮತ್ತು ಪ್ರಹ್ಲಾದ (ಮಕ್ಕಳಿಗೆ ಜೀವನ ಚರಿತ್ರೆಗಳು).

ಶ್ರೀಯುತರು ಸಾರಸ್ವತಲೋಕಕ್ಕೆ ಉತ್ತಮ ಕೊಡುಗೆಗಳನ್ನು ನೀಡಿದ್ದಾರೆ. ಮುಖ್ಯವಾದವುಗಳು : 'ಸಾಕ್ರೆಟೀಸನ ದರ್ಶನ', 'ಕರ್ನಾಟಕ ಶಾಕುಂತಲ ನಾಟಕಂ-ಒಂದು ಸಮೀಕ್ಷೆ', 'ಹರಿಹರನ ಹತ್ತು ರಗಳೆಗಳು', 'ನೇಮಿಚಂದ್ರನ ಲೀಲಾವತಿ ಪ್ರಬಂಧಂ', 'ಸಮ್ಯಕ್ತ್ವ ಕೌಮುದಿ', 'ವಿ.ಸೀ.', 'ಕವಿ ಆಂಡಯ್ಯ', 'ರಷ್ಯಾದ ಸಣ್ಣ

---

* ಜನನ : ಜುಲೈ 15, 1933.

ಕಥೆಗಳು' ಮುಂತಾದವು. 'ಪ್ರಹ್ಲಾದ' ಇಂಗ್ಲೀಷ್ ಮತ್ತು ಹಿಂದಿ ಭಾಷೆಗೂ ಅನುವಾದಗೊಂಡಿದೆ.

**ಬಿ. ಎಸ್. ರುಕ್ಕಮ್ಮ** [1]: (ಬಿಂಡಿಗನವಿಲೆ ಶ್ರೀನಿವಾಸ ಅಯ್ಯಂಗಾರ್ ರುಕ್ಕಮ್ಮ). ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧ ಹೆಸರು.

'ಪಾಪು ಅಮ್ಮನಿಗೆ ಹೇಳಿದ ಕಥೆಗಳು' ಪುಸ್ತಕಕ್ಕೆ ಅಖಿಲ ಭಾರತ ಶಿಶು ಸಾಹಿತ್ಯ ಸ್ಪರ್ಧೆಯಲ್ಲಿ (1970) ಬಹುಮಾನ ಬಂದಿದೆ. 'ಫೇಬರನ ಕೀಟಲೋಕ'ಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿದೆ.

ಇವರು ರಚಿಸಿರುವ ಇತರ ಕೃತಿಗಳು : 'ಮೇರಿಕ್ಯೂರಿ' (ಇದು ಕರ್ನಾಟಕ ವಿಶ್ವ ವಿದ್ಯಾನಿಲಯ ಮತ್ತು ವೆಂಕಟೇಶ್ವರ ವಿಶ್ವವಿದ್ಯಾನಿಲಯಗಳ ಪದವಿಪೂರ್ವ ತರಗತಿಗಳಿಗೆ ಪಠ್ಯಪುಸ್ತಕವಾಗಿತ್ತು). 'ಮಕ್ಕಳ ಸಾಹಿತ್ಯ-1985' ಕರ್ನಾಟಕ ಸಾಹಿತ್ಯ ಅಕಾಡೆಮಿಗಾಗಿ ಸಂಪಾದಿಸಿಕೊಟ್ಟಿರುವ ಗ್ರಂಥ ; ನಂದ ಗೋಪಿ ಮತ್ತು ಕೃಷ್ಣ, ವ್ಯಾಪಾರಿ ಮಂಗಣ್ಣ, ಕಚ, ಹರಿಹರ, ಶಾಲೆಯ ಮಕ್ಕಳು (ರಷ್ಯ ಕಥೆಗಳ ಅನುವಾದ) ಮುಂತಾದವು.

ಪ್ರಸ್ತುತ ಶ್ರೀಮತಿಯವರು ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ.

**ಸೂ. ಸುಬ್ರಹ್ಮಣ್ಯಂ** [2]: (ಸೂರ್ಯನಾರಾಯಣರಾವ್ ಸುಬ್ರಹ್ಮಣ್ಯಂ). ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಅಧಿಕಾರಿಯಾಗಿದ್ದಾರೆ. ವಿಜ್ಞಾನ ಪರಿಷತ್ತಿನ ಸಂಸ್ಥಾಪಕರು 'ನಮ್ಮ ಸೂರ್ಯ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯಿಂದಲೂ, 'ರಕ್ತದ ಕಥೆ'ಗೆ ದಕ್ಷಿಣ ಭಾರತ ಪುಸ್ತಕ ಸಂಸ್ಥೆಯಿಂದಲೂ, 'ಶಬ್ದ ಸಾಗರದಲ್ಲಿ' ಕೃತಿಗೆ 20ನೇ ರಾಷ್ಟ್ರೀಯ ಮಕ್ಕಳ ಸ್ಪರ್ಧೆಯಲ್ಲೂ ಬಹುಮಾನಗಳು ಲಭಿಸಿವೆ. ಅಂತರ ರಾಷ್ಟ್ರೀಯ ಮಕ್ಕಳ ಸಾಹಿತ್ಯ ಸಂಶೋಧನಾ ಸಂಸ್ಥೆಯಲ್ಲಿ ಭಾಗವಹಿಸಲು ಶ್ರೀಯುತರು ಫ್ರಾನ್ಸ್. ಪಶ್ಚಿಮ ಜರ್ಮನಿಗಳಿಗೆ ಭೇಟಿ ನೀಡಿದ್ದಾರೆ.

ಇವರ ಇತರ ಮಕ್ಕಳ ಕೃತಿಗಳು : ಪ್ರಾಣಿಗಳ ಮೋಜು, ಅಲೆಕ್ಸಾಂಡರ್ ಫ್ಲೆಮಿಂಗ್, ಮೇಘನಾದ ಸಹಾ, ಶ್ರೀ ಚಾಮುಂಡೇಶ್ವರಿ, ಅದೃಷ್ಟವೇ ? ಅನ್ವೇಷಣೆಯೇ, ನಕ್ಕಿತು ನಕ್ಷತ್ರ (ಮಕ್ಕಳ ವಿಜ್ಞಾನ ನಾಟಕ); ದಿ ರೆಡ್ ರಿವರ್ ಆಫ್ ಲೈಫ್ (ಇಂಗ್ಲೀಷಿನಲ್ಲಿ ಮಕ್ಕಳ ಪುಸ್ತಕ).

ಇತರ ಕೃತಿಗಳು : ವಿಜ್ಞಾನ ವಿಹಾರ, ಆಲ್‌ಫ್ರೆಡ್ ನೊಬೆಲ್, ಆಚಾರ್ಯ ಪ್ರಫುಲ್ಲ ಚಂದ್ರರಾಯ್, ಜಗದೀಶ್ ಸುಭಾಷ್‌ಚಂದ್ರ ಬೋಸ್, ವಿಸ್ಮಯಕರ ವಿಜ್ಞಾನ, ವನರಾಜ ಆನೆ, ಗಗನ ಸಾಹಸ ಮತ್ತು ಕಾಲ ಯಾತ್ರಿಗಳು, ದೇವತೆಗಳು ಮತ್ತು

---

1 ಜನನ : ಸೆಪ್ಟೆಂಬರ್ 5, 1934, ಮೈಸೂರಿನಲ್ಲಿ. ಪತಿ : ಪ್ರೊ॥ ಪ. ವಿ. ಚಂದ್ರಶೇಖರರಾವ್.

2 ಜನನ : 1935. 'ವನಸುಮ' ಕಾವ್ಯನಾಮ.

ರಾಕ್ಷಸರು, ಪತ್ರ ವ್ಯವಹಾರದಲ್ಲಿ ಸೌಜನ್ಯ, ಬಿಸಿಲುಂಗಳು, ಕಣ್ಣುಗಳು, ಹಣ್ಣುಗಳ ಹೂ, ಸೀಕರಣೆ, ಸಹಚಿಂತನ ಮುಂತಾದವು.

**ಟಿ. ಎಸ್. ನಾಗರಾಜಶೆಟ್ಟಿ :** ತಿಪಟೂರಿನಲ್ಲಿ ಉಪನ್ಯಾಸಕರಾಗಿರುವ ಶ್ರೀಯುತರು ಸಾಹಿತ್ಯ ಕ್ಷೇತ್ರದಲ್ಲಿ, ಅದರಲ್ಲೂ ಪ್ರಮುಖವಾಗಿ ಮಕ್ಕಳ ಸಾಹಿತ್ಯ ವಿಭಾಗದಲ್ಲಿ ಬಹು ಶ್ರದ್ಧೆಯಿಂದ ದುಡಿಯುತ್ತಿದ್ದಾರೆ. ಇವರ 'ನವಿಲು ಗರಿ' (ಶಿಶು ಗೀತೆಗಳು) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನಗಳಿಸಿದೆ (1984). 'ಸಕ್ಕರೆ ಬೊಂಬೆ' (ಮಕ್ಕಳ ಪದ್ಯಗಳು) ಅಪಾರ ಜನಮೆಚ್ಚುಗೆ ಪಡೆದಿದೆ. 'ಆಮೆ ಮತ್ತು ಹಂಸಗಳು' (ಮಕ್ಕಳ ಕಥನ ಕವನಗಳು) 1987ರಲ್ಲಿ ಹೊರಬಂದಿದೆ. 'ಸಂಕರ' (ಸಣ್ಣ ಕಥೆಗಳ ಸಂಕಲನ).

**ಜಂಬುನಾಥ ಕಂಚ್ಯಾಣಿ :** ಯುವ ಸಾಹಿತಿಗಳಲ್ಲಿ ಇವರು ಎದ್ದು ಕಾಣುವ ವ್ಯಕ್ತಿ. ಕಥೆ, ಕವನ, ಜನಪದ ಸಾಹಿತ್ಯ ಹಾಗೂ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿಮಾಡುತ್ತಿದ್ದು ಜನಪ್ರಿಯತೆ ಗಳಿಸಿದ್ದಾರೆ. ವೃತ್ತಿಯಲ್ಲಿ ಶ್ರೀಯುತರು ಉಪಾಧ್ಯಾಯರು.

ಕೃತಿಗಳು : 'ಹಸಿರು ಗಿಡದ ಮೇಲೆ ಮೊಸರು ಚಲ್ಲೇದ' (ಜಾನಪದ ಕೃತಿ) ; ವಸಂತಾಗಮನ (ಕವನ ಸಂಕಲನ); 'ಅಂಬೆಗಾಲಿನ ಹೋರಿ' (ಮಕ್ಕಳ ಕವನ ಸಂಕಲನ).

**ಲಕ್ಷ್ಮಣ ಕಂದಕೂರ :** ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸುತ್ತಿರುವವರಲ್ಲಿ ಇವರೂ ಪ್ರಮುಖರು. ಪ್ರಕಟಿಸಿರುವ ಕೃತಿಗಳು : ಗುಲಾಬಿ (ಕವಿತಾ ಸಂಕಲನ), ಮುದ್ದಿನ ಮೊಲ (ಮಕ್ಕಳ ಕವನ ಸಂಕಲನ).

**ಕೆ. ಎಚ್. ರಾವ್ :** ಕಾವ್ಯನಾಮ 'ಶ್ರೀ ರವಿ'. ವೃತ್ತಿಯಲ್ಲಿ ಉಪಾಧ್ಯಾಯರು. ಮಕ್ಕಳ ಸಾಹಿತ್ಯ ರಚನೆಯಲ್ಲಿ ಬಹಳ ಆಸಕ್ತಿಯಿದೆ. ಇವರ ಹಲವು ರಂಜನೀಯ ಧಾರಾವಾಹಿ ಕಥೆಗಳು ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ.

ಕೃತಿಗಳು : ರಾಮಾಯಣದ 20 ಕಥೆಗಳು, ಮಕ್ಕಳ ದೀಪ, ಮಕ್ಕಳ ಕವನ ಮಾಲೆ, ವಿನೋದ ವನ, ಚಾಚಾ, ಮಿಠಾಯಿ, ಆದಿ ಮಾನವರು, ಗಣೇಶ, ಮಂತ್ರವಾದಿ ಮಾಯಾಜಾಲ, ಮುದ್ದು ಮಗನ ರಾದ್ಧಾಂತ (ನಗೆ ನಾಟಕ) ; ನೀತಿಯ ಬೆಳಕು. ರಸ್ತೆ ಅಪಘಾತಗಳು. ಕಾಡಿನಲ್ಲಿ ಮೀನಾ, ಪುರಾಣ ಕಥೆಗಳು, ವೀರ ಹನುಮ. ಅಕ್ಷರ ಸೇವೆ. ಬೆಂಕಿ ಅಪಘಾತಗಳು, ಪೋಲೀಸ್ ನಾಯಿಗಳು, ಮಾಯದ ಗಿಣಿ, ದೇವಿ, ಪೋಲೀಸರ ಪುಟಗಳು, ವರದಕ್ಷಿಣೆ ಏಕೆ—ಮುಂತಾದವು.

**ಕೃ. ನಾರಾಯಣರಾವ್ :** ಇವರ ಕೃತಿಗಳು ಎಲ್ಲಾ ಪತ್ರಿಕೆಗಳಲ್ಲೂ ಈ ನಡುವೆ ಹೆಚ್ಚಾಗಿ ಕಂಡುಬರುತ್ತಿವೆ. ಇವರು ಒಳ್ಳೆಯ ವಿಮರ್ಶಕರೂ ಕೂಡ.

ಕೃತಿಗಳು : ಗುಣವಂತರ ಕಥೆಗಳು, (ಮಕ್ಕಳ ಕಥಾ ಸಂಕಲನ).

**ಜಿ. ಕೆ. ಅನಂತರಾಮ್ :** ಪ್ರಕಟಣಾ ಕ್ಷೇತ್ರದಲ್ಲಿ ಸುಪರಿಚಿತ ಹೆಸರು. ಐ.ಬಿ.ಎಚ್.ನಲ್ಲಿ ಕನ್ನಡ ವಿಭಾಗದ ಪ್ರಮುಖರು. ಕನ್ನಡನಾಡು ನುಡಿಗಾಗಿ ಹಲವಾರು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಒಳ್ಳೆಯ ಅನುಭವಿಗಳು, ಸೃಜನ ಶೀಲರು, ಹಲವಾರು ಕೃತಿಗಳನ್ನು ಸ್ವತಃ ರಚಿಸಿದ್ದಾರೆ. 'ಇಭ ಮತ್ತು ಹುಲಿ', 'ಶ್ರೀ ರಾಮಾನುಜಾಚಾರ್ಯರು, 'ಕರ್ನಾಟಕ ಸಂಸ್ಕೃತಿ ಸಾಧನೆ ಚಿತ್ರದರ್ಶನ', 'ಕನ್ನಡ ನಾಡು ಮತ್ತು ಕನ್ನಡಿಗರ ಪರಂಪರೆ', 'ಹಸಿರು ಭೂತ ಮತ್ತು ಇತರ ಸೂಫಿ ಕಥೆಗಳು', 'ವಾಸವದತ್ತೆ' (ಇಂಗ್ಲೀಷಿನಿಂದ ಅನುವಾದ) ; 'ಮಾತನಾಡುವ ಮಾವಿನ ಹಣ್ಣು' (ಮರಾಠಿಯಿಂದ ಅನುವಾದ) ; 'ತಾಮ ಮತ್ತು ಪುಟ್ಟ ಹಕ್ಕಿ', (ಕಮಲಾ ಲಕ್ಷ್ಮಣ್ ರವರ ಇಂಗ್ಲೀಷ್ ಕೃತಿಯ ಅನುವಾದ) ; 'ರಾಮಾಯಣದಿಂದ ಆರಿಸಿದ ಕಥೆಗಳು' (ಶಾರದಾ ಕೇಸ್ಕರ್‌ರವರ ಇಂಗ್ಲೀಷ್ ಕೃತಿಯ ಅನುವಾದ) ; 'ಲೂಸಿಗೆ ಒಂದು ಅಂಗಿ' (ಮೂಲ ಲೇಖಕರು : ದೊಲತ್, ಎಚ್ ದೊಂಗಾಜಿ ಮತ್ತು ಲವಂಗಿಯ).

**ಮನೋಹರ ಬಾಲಚಂದ್ರ ಘಾಣೇಕರ[1] :** ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ತುಂಬಾ ದುಡಿದಿರುವ ಹಾಗೂ ದುಡಿಯುತ್ತಿರುವ ಸಾಹಿತಿ. ಇವರು ಮಕ್ಕಳಿಗಾಗಿ ಬಾಲ ಚರಿತ್ರೆಗಳನ್ನು ರಚಿಸಿದ್ದಾರೆ. ಕಥೆಗಳನ್ನು ಹೇಳಿದ್ದಾರೆ. ಪ್ರಪಂಚದ ಬಹಳಷ್ಟು ದೇಶಗಳ ಜಾನಪದ ಕಥೆಗಳನ್ನು ಕಲೆಹಾಕಿ ಮಕ್ಕಳಿಗೆ ನೀಡಿದ್ದಾರೆ.

ಇವರ ಕೃತಿಗಳು : ಚಿರಂಜೀವಿ ಪರಶುರಾಮ, ಶ್ರೀ ಬಸವಣ್ಣ, ಮಾರ್ಕೋ ಪೋಲೋ, ಗೌತಮ, ಬೋಧಿಸತ್ವನ ಕಥೆಗಳು, ಬುದ್ಧ ಜಾತಕ ಕಥೆಗಳು, ಪುರಾಣ ಪಂಚಕ, ಮಾತಾಡುವ ಕುದುರೆ, ಆದರ್ಶದ ಕಥೆಗಳು, ಠಕ್ಕರ್ ಗುರು, ಕೊಪ್ಪರಿಗೆ ತುಂಬ ಕಥೆಗಳು, ಮಕ್ಕಳ ನಿತ್ಯಪಾಠ, ಅಮೇರಿಕೆ ಜನಪದ ಕಥೆಗಳು, ಜಪಾನಿನ ಇಂಗ್ಲೀಷ್ ಜನಪದ ಕಥೆಗಳು, ಬಂಗಾರದ ಹೆಜ್ಜೆ, ಇರಾಣದ ಲೋಕ ನೀತಿ ಕಥೆಗಳು, ತುಷಾರ ಮಣಿ, ಅಜ್ಜಾ ನನಗೊಂದು ಕಥೆಹೇಳು, ಅಜ್ಜಿ ನನಗೊಂದು ಕಥೆಹೇಳು, ಅಮ್ಮಾ ನನಗೊಂದು ಕಥೆಹೇಳು, ಗರುಡನ ಕಥೆ, ಬಂಗಾರದ ಹೆಜ್ಜೆ ಮುಂತಾದವುಗಳು. ಇವುಗಳಲ್ಲದೆ ಹಲವು ಉತ್ತಮ ಕೃತಿಗಳನ್ನು ಹಿರಿಯರಿಗೂ ರಚಿಸಿದ್ದಾರೆ. ರತ್ನಾಕರ ಶತಕ, ಕವಿ ಕಂಠಹಾರ, ಚತುರಾಸ್ಯ ನಿಘಂಟು, ಪಂಪ ಭಾರತಂ ಹಾಗೂ ಪುರಂದರ, ಜಗನ್ನಾಥ, ವಾದಿರಾಜ, ವಿಜಯದಾಸರು ಮುಂತಾದ ದಾಸಶ್ರೇಷ್ಠರ ಹಾಡುಗಳನ್ನೂ ಸಂಪಾದಿಸಿದ್ದಾರೆ.

**ಡಾ|| ಬಿ. ಎಸ್. ಸ್ವಾಮಿ[2] :** ಪ್ರಸ್ತುತ ಶ್ರೀಯುತರು ಆಕಾಶವಾಣಿಯಲ್ಲಿ ಸಹಾಯಕ ಸಂಪಾದಕರಾಗಿದ್ದಾರೆ. ಇವರು ಶಿಶುಸಾಹಿತ್ಯವಲ್ಲದೆ ಇತರ ಸಾಹಿತ್ಯ ವಿಭಾಗಗಳಿಗೂ ಸಂಪನ್ನ ಕೊಡುಗೆಗಳನ್ನು ನೀಡಿದ್ದಾರೆ. ಇವರ ಒಟ್ಟು ಕೃತಿಗಳ

---

1 ಜನನ : ಆಗಸ್ಟ್ 2, 1937, 'ಬನವಾಸಿ'ಯಲ್ಲಿ. ಕಾವ್ಯನಾಮ : ಮನೋಹರ ಮತ್ತು ಕಾವ್ಯಪ್ರೇಮಿ.

2 ಜನನ : ಸೆಪ್ಟೆಂಬರ್ 8, 1942, ಮೈಸೂರು ಜಿಲ್ಲೆಯ 'ಮಧುವನ ಹಳ್ಳಿ'.

ಸಂಖ್ಯೆ ನೂರನ್ನೂ ಮೀರಿದೆ ಎಂದರೆ ಅಚ್ಚರಿಯಾದೀತು. ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೇ ಸುಮಾರು 30 ಕೃತಿಗಳನ್ನಿತ್ತಿದ್ದಾರೆ.

ಮುಖ್ಯವಾದವುಗಳು : ಭಾರತದ ಮೂವರು ಮಹಾಪುರುಷರು, ಆದರ್ಶ ಗುರುಶಿಷ್ಯರು, ಎಂ. ವೆಂಕಟಕೃಷ್ಣಯ್ಯ, ಜನಪದಕಥೆಗಳು, ಮಹಮ್ಮದ್ ಪೈಗಂಬರ್, ಗೋಗ್ರಹಣ ( 1, 2, 3), ಚಿಕ್ಕದೇವರಾಜ ಒಡೆಯರು, ಕರ್ನಾಟಕದ ಪ್ರಮುಖ ಹಬ್ಬಗಳು, ಆರೋಗ್ಯ ತರಂಗ, ಬಾಲಲೀಲೆ (ರೇಡಿಯೋ ರೂಪಕಗಳು), ಅಮರಜೀವಿ ಇಂದಿರಾಗಾಂಧಿ, ಆರೋಗ್ಯ ಸಂಜೀವಿನಿ, ಮಹಾಯೋಗಿ ಮಾದೇಶ್ವರ (ಬೃಹತ್ ಕಾದಂಬರಿ) ಮುಂತಾದವುಗಳು.

**ಎ. ಕೆ. ರಾಮೇಶ್ವರ**[1] **:** ಇವರು ರಾಷ್ಟ್ರಪ್ರಶಸ್ತಿ (1985) ಪಡೆದಿರುವ ಶಿಕ್ಷಕರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ '1986ರ ಮಕ್ಕಳ ಸಾಹಿತ್ಯ'ದ ಸಂಪಾದಕರು. 1984ರಲ್ಲಿ ರಾಜ್ಯ ಸರಕಾರ ಆದರ್ಶಶಿಕ್ಷಕರೆಂದು ಪ್ರಶಸ್ತಿ ನೀಡಿದೆ.

ಮಕ್ಕಳ ಸಾಹಿತ್ಯ ಕೃತಿಗಳು : ನಂದಿಕೋಲು (1972) ರಾಜ್ಯ ಪ್ರಶಸ್ತಿಗಳಿಸಿದೆ. ಕಡಕೋಳ ಮಡಿವಾಳಪ್ಪ (1974) ರಾಷ್ಟ್ರಪ್ರಶಸ್ತಿ ಗಳಿಸಿದೆ. ವಸಂತ ಬಂದ (ಕವನ ಸಂಕಲನ), ಸಂತ ತುಕಾರಾಮ, ನಮಗಾಗಿ ದುಡಿದವರು, ಸಂತ ಮಾಣಿಕ ಪ್ರಭುಗಳು (ಜೀವನ ಚರಿತ್ರೆ), ಬನ್ನಿರಿ ಮನುಕುಲ ಚಂದಿರರೆ (ಕವನ ಸಂಕಲನ ಇಂಗ್ಲೀಷಿಗೆ ಅನುವಾದಗೊಂಡಿದೆ), ಹಬ್ಬಗಳು (ನಿಬಂಧಗಳು), ನಾಗಾಯಿ (ಸಂಶೋಧನೆ).

ಇತರ ಕೃತಿಗಳು : ಜೀವನ ಪುಷ್ಪ (ಪ್ರಬಂಧ), ಚೀನಾ ದುರಾಕ್ರಮಣ (ನಾಟಕ), ಪರಿಸರದ ಪದರುಗಳು (ಕವನ ಸಂಕಲನ), ಹಣಚಿ ಬಟ್ಟನಕ್ಕೆ (ಜಾನಪದ ಸಂಬಂಧ ಸಂಕಲನ), ಗುರುವಂದನ ಮುಂತಾದವು.

**ಕೆ. ಚಿದಾನಂದ :** ಕಂಪ್ಯೂಟರ್ ವಿಜ್ಞಾನಿ. ಶ್ರೀ ಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. 'ಪುಟಾಣಿಗಳ ವಿಜ್ಞಾನ ಪದ್ಯಗಳು' ಕೃತಿಗೆ 1986ರ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

ಇವರ ಇತರ ಕೃತಿಗಳು : 'ವೈರ್ ಮ್ಯಾನ್', 'ಇಂಜಿನಿಯರಿಂಗ್ ಗೀತೆಗಳು' ಮತ್ತು 'ವಿಜ್ಞಾನ ವಚನಗಳು'.

**ಪಂಡಿತ ಚೆನ್ನಪ್ಪ ಎರೇಸೀಮೆ**[2] **:** ಉಪಾಧ್ಯಾಯರು. ಇವರ 'ಜೇನು' ಮಕ್ಕಳ ಪುಸ್ತಕ, ವೈಜ್ಞಾನಿಕ ಪುಸ್ತಕವೆಂದು ಕರ್ನಾಟಕ ಸರ್ಕಾರದಿಂದ (1964) ಪ್ರಥಮ ಬಹುಮಾನಗಳಿಸಿದೆ. ಮಾಧ್ಯಮಿಕ ಶಾಲೆಯ ಮಕ್ಕಳಿಗೆ ಸರಳ ವ್ಯಾಕರಣ ಪ್ರಕಟಿಸಿದ್ದಾರೆ. ಕೇರಳ ಮತ್ತು ಕರ್ನಾಟಕ ಪಠ್ಯಪುಸ್ತಕ ಮತ್ತು ಸಿಲಬಸ್ ಕಮಿಟಿಯಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಆದರ್ಶ ಶಿಕ್ಷಕರಾಗಿದ್ದು, ಮಕ್ಕಳ ಸಾಹಿತ್ಯ ಪ್ರಗತಿ

---

1 ಜನನ: ಫೆಬ್ರ 2, 1934. 'ಜೀವನ ವಿಕಾಸ' ಪತ್ರಿಕೆಯ ಸಹ ಸಂಪಾದಕರು.

2 ಜನನ: 1919. ಧಾರವಾಡ ಜಿಲ್ಲೆಯ 'ಹರವಿ' ಗ್ರಾಮದಲ್ಲಿ.

ಗಾಗಿ ಬಹುವಾಗಿ ಶ್ರಮಿಸುತ್ತಿದ್ದಾರೆ. ನಾಲ್ಕು ಮಕ್ಕಳ ಕೃತಿಗಳನ್ನು ರಚಿಸಿರುವುದಲ್ಲದೆ ಸಾರಸ್ವತ ಕ್ಷೇತ್ರಕ್ಕೆ ಒಟ್ಟಾರೆ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ.

**ಪಾ. ಭೀ. ಪಾಟೀಲ :** (ಪಾಂಡುರಂಗ ಭೀಮನಗೌಡ ಪಾಟೀಲರು). ಮಹಾರಾಷ್ಟ್ರದ ತಾಂಜತ್ತಾ ಜಿಲ್ಲೆಯ. ಕೋಣಬಾಗಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದಾರೆ. ಇವರ ಕವನ ಸಂಕಲನ 'ಅಮ್ಮಾ ಹಾಡು ಹೇಳು' 1969ರಲ್ಲೂ, 'ಹಾದಿಯ ಹೂವು' 1971ರಲ್ಲೂ, 'ಮುದ್ದುಮರಿ' 1971ರಲ್ಲೂ ರಾಜ್ಯ ಪ್ರಶಸ್ತಿ ಗಳಿಸಿವೆ. 'ಚಿಗರೆಯ ಮರಿ' ಕೃತಿಗೆ 1986–87ರ ಕೇಂದ್ರ ಸರ್ಕಾರದ ಪ್ರಶಸ್ತಿ ಲಭಿಸಿದೆ.

**ರಾಮಚಂದ್ರ ಭಟ್ಟ**[1] **:** ಅಧ್ಯಾಪಕರಾಗಿದ್ದು (1933–72), ಈಗ ನಿವೃತ್ತರಾಗಿ ತಮ್ಮ ವೇಳೆಯನ್ನೆಲ್ಲಾ ಸಾಹಿತ್ಯಾಭಿವೃದ್ಧಿಗಾಗಿಯೇ ವ್ಯಯಿಸುತ್ತಿದ್ದಾರೆ. 'ಮಕ್ಕಳ ಸಾಹಿತ್ಯ' ಇವರಿಗೆ ಬಹಳ ಪ್ರಿಯವಾದ ಸಾಹಿತ್ಯ ವಿಭಾಗ.

ಇವರ ಕೃತಿಗಳು : ತಮ್ಮನ ಕವಿತೆಗಳು, ಶಿಶುವಿಹಾರ, ಪುಟ್ಟನ ಪಿಟೀಲು, ಗಾನಗಾರಿ, ವಿಕಾಸವಾಣಿ ಮತ್ತು ಹಾಡುಗಳು, ಪೀಪಿ, ಮಕ್ಕಳ ಗೀತ ರಾಮಾಯಣ, ರಾಮಣ್ಣನ ರಗಳೆಗಳು ಮುಂತಾದವು.

**ಎಸ್. ಕೆ. ರಮಾದೇವಮ್ಮ**[2] **:** ಮನಃಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು ಅನಂತರ ಬಿ.ಎಲ್.ಸಹ ಗಳಿಸಿ, ಕರ್ನಾಟಕ ಸರ್ಕಾರದ ಹಲವು ಹುದ್ದೆಗಳಲ್ಲಿದ್ದು ನಿವೃತ್ತಿಗೆ ಮೊದಲು ಉಪಕಾರ್ಯದರ್ಶಿಯಾಗಿ ವಿದ್ಯಾ ಇಲಾಖೆಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಸಾಹಿತ್ಯದಲ್ಲಿ ಮೊದಲಿಂದಲೂ ಇವರಿಗೆ ಆಸಕ್ತಿ. ಅದರಲ್ಲೂ ಶಿಶು ಸಾಹಿತ್ಯ ಇವರಿಗೆ ಹೆಚ್ಚು ಅಕ್ಕರೆಯ ಸಾಹಿತ್ಯ ವಿಭಾಗ.

ಕೃತಿಗಳು : 'ರಷ್ಯಾ ದೇಶದ ಮಕ್ಕಳ ಕಥೆಗಳು', ಇದಕ್ಕೆ 1983ರ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ. 'ನಾಯಿಕೆ', ಮತ್ತು 'ರಾಗ ಭೈರವ್' (ಬಂಗಾಳಿ ಕಾದಂಬರಿಯ ಅನುವಾದ) ; ಗೃಹಿಣಿಯರಿಗೆ ಸಾವಿರದೊಂದು ಸಲಹೆಗಳು', 'ಭಾರತ ಸ್ವಾತಂತ್ರ್ಯ ಸಮರ' (ಇತರ ಕೃತಿಗಳು),

1985ರಲ್ಲಿ ಧಾರವಾಡದಲ್ಲಿ ನಡೆದ ರಾಜ್ಯಮಟ್ಟದ ದ್ವಿತೀಯ ಸಾಹಿತ್ಯ ಸಮ್ಮೇಳನ, 'ಮಕ್ಕಳ ಭವಿಷ್ಯ ರೂವಾರಿ' ಎಂಬ ಪದವಿನೀಡಿ ಗೌರವಿಸಿದೆ.

ಮಕ್ಕಳ ಸಾಹಿತ್ಯ ಸಂಪನ್ನಗೊಳಿಸಲು ಈ ಕೆಳಕಂಡವರೂ ಸ್ತುತ್ಯಾರ್ಹ ಕೆಲಸ ಮಾಡಿದ್ದಾರೆ. ಇವರ ವಿಷಯವನ್ನು ಸಾಹಿತ್ಯದ ಬೇರೆ ಬೇರೆ ವಿಭಾಗಗಳಡಿಯ ಆಗಲೇ ಹೇಳಿದ್ದೇನೆ.

---

1 ಜನನ: ಮೇ 14, 1914, ದಕ್ಷಿಣ ಕನ್ನಡ ಜಿಲ್ಲೆಯ 'ಮುಂಡಾಜೆ' ಎಂಬ ಹಳ್ಳಿಯಲ್ಲಿ.

2 ಜನನ: 1930. ಹಿಂದಿಯಲ್ಲಿ 'ವಿಶಾರದಾ' ಪದವಿ ಸಹ ಗಳಿಸಿದ್ದಾರೆ.

ಡಾ॥ ಅನುಪಮಾ ನಿರಂಜನ[1], ನಾ. ಕಸ್ತೂರಿ[2], ಸಿಂಪಿ ಲಿಂಗಣ್ಣ[3], ಎಸ್. ವಿ. ಶ್ರೀನಿವಾಸರಾವ್[4], ನಿರುಪಮಾ[5], ಸರೋಜಿನಿ ಮಹಿಷಿ[6], ನಾ. ಡಿಸೋಜ[7], ಹೆಚ್. ಎಸ್. ವೆಂಕಟೇಶಮೂರ್ತಿ[8], ಪ್ರೊ॥ ನಿಸಾರ್‌ಅಹಮದ್[9], ಸ. ಸ. ಮಾಳವಾಡ[10], ಪಂಚಾಕ್ಷರಿ ಹಿರೇಮಠ[11], ಸೂರ್ಯನಾಥ ಕಾಮತ್[12], ಕೃಷ್ಣಮೂರ್ತಿ ಪುರಾಣಿಕ[13], ಎಚ್ಚೆಸ್ಕೆ, ಎಂ. ಎಂ. ಅಣ್ಣಗೇರಿ, ಚೆನ್ನವೀರ ಕಣವಿ[14], ಶಂ. ಗು. ಬಿರಾದಾರ, ಬಿ. ಎ. ಸನದಿ[15], ಸುಮತೀಂದ್ರ ನಾಡಿಗ[16].

ಶಿಶು ಸಾಹಿತ್ಯ ಪ್ರಗತಿಗಾಗಿ ದುಡಿಯುತ್ತಿರುವ ಈ ಕೆಳಕಂಡ ಸಾಹಿತಿಗಳೂ ಮುಖ್ಯರು. ಇವರುಗಳ ಬಗ್ಗೆ ಮತ್ತೊಮ್ಮೆ ಹೇಳುತ್ತೇನೆ.

ಬೆ. ಗೋ. ರಮೇಶ್, ಯು. ಲಕ್ಷ್ಮಣ ಪೈ, ವಿಶ್ವಾಮಿತ್ರ, ಗಾಮ ಮಳಿಯೂರ, ಕೆ. ಎಸ್. ಕುಲಕರ್ಣಿ, ರಾಗೌ, ಎಸ್. ಎಸ್. ಕುಲಕರ್ಣಿ, ಜಗಳೂರು ರಾಘವೇಂದ್ರ ರಾವ್ ಲಕ್ಷ್ಮಣರಾವ್, ಪಿ. ವಿ. ವಿಜಯಕುಮಾರ್, ಬ. ನ. ಸುಂದರರಾವ್, ನವಗಿರಿನಂದ, ಕೆ. ಸಚ್ಚಿದಾನಂದ (ಚಿರಂತನ), ಚಿದಂಬರ ಶ್ರೀಪಾದ ಕುಲಕರ್ಣಿ, ಕೆ. ಸಂಜೀವ ಶೆಟ್ಟಿ, ಎಂ. ಎಸ್. ರಾಮರಾವ್ (15 ಕೃತಿಗಳನ್ನು ರಚಿಸಿದ್ದಾರೆ), ಜೆ. ವಾಮನಭಟ್ಟ, ವಿದ್ವಾನ್ ಬಾಲಸರಸ್ವತಿ ನರಹರಿಶರ್ಮ, ಜಿ. ಟಿ. ನಾರಾಯಣ ರಾವ್, ಎಸ್. ಆರ್. ನಾರಾಯಣರಾವ್ (14 ಕೃತಿಗಳು), ಗೋಪಾಲ ಭಾವೀ, ಗೋಪಾಲಕೃಷ್ಣ ಪಾಲೆಪ್ಪಾದ (12 ಕೃತಿಗಳು), ಕುಂದಾನಿ ಸತ್ಯನ್, ಡಾ॥ ಎಂ. ವಿ. ನರಸಿಂಹಮೂರ್ತಿ, ಬಿ. ಪಾಂಡುರಂಗಯ್ಯ, ಕವಿತಾ ಕೃಷ್ಣ, ಎಂ. ಡಿ. ಗೋಗೇರಿ, ಅಣ್ಣಾರಾಯ ಸಾಲಿಮನಿ, ಸರೋಜಾ ನಾರಾಯಣರಾವ್, ಜಿ. ಪ್ರಕಾಶ್, ಕುಪ್ಪಾಡಿ ವಿಶ್ವನಾಥ ರೈ, ಲಲಿತಮ್ಮ ಚಂದ್ರಶೇಖರ್, ವಸಂತ ಕವಲಿ, ಪಾಂಡುರಂಗ ದೇಸಾಯಿ.

---

1 ಪುಟ 235 ನೋಡಿ. 2 ಪುಟ 266 ನೋಡಿ.

3 ಜನನ: 1905. 'ಭರತ' ಕಾವ್ಯನಾಮ. 'ಆದರ್ಶ ಶಿಕ್ಷಕ' ಪ್ರಶಸ್ತಿ ಗಳಿಸಿದ್ದಾರೆ (1967). ಬಹುಮುಖ ಪ್ರತಿಭೆಯ ಸಾಹಿತಿ. ಪುಟ ನೋಡಿ.

4 ಪುಟ 227 ನೋಡಿ 5 ಪುಟ 229 ನೋಡಿ.

6 ಪುಟ 183 ನೋಡಿ 7 ಪುಟ 238 ಮತ್ತು 283 ನೋಡಿ

8 ಪುಟ 190 ನೋಡಿ. 'ಹಕ್ಕಿಸಾಲು' ಇತ್ತೀಚಿನ ಮಕ್ಕಳ ಕವನ ಸಂಗ್ರಹ. 'ಅಗ್ನಿಮುಖಿ'ಗೆ (ಮಕ್ಕಳ ಸಾಹಿತ್ಯ) 1987ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ.

9 ಪುಟ 185 ನೋಡಿ. 10 ಪುಟ 300 ನೋಡಿ.

11 ಪುಟ 315 ನೋಡಿ. 12 ಪುಟ 317 ನೋಡಿ.

13 ಪುಟ 207 ನೋಡಿ. 14 ಪುಟ 177 ನೋಡಿ.

15 ಪುಟ 184 ನೋಡಿ. 16 ಪುಟ 184 ನೋಡಿ.

ಪಂಚಾಕ್ಷರಿ ಹಿರೇಮಠ, ಹೆಚ್. ಎಸ್. ಪಾರ್ವತಿ, ದಾಮೋದರ ಬಾಳಿಗ, ಬಿ. ಪದ್ಮನಾಭ ಸೋಮಯಾಜಿ, ಲ. ಸ. ಶಾಸ್ತ್ರಿ, ಎಸ್. ಗುಂಡೂರಾವ್, ಎಂ. ಚೆಲುವರಾಯಸ್ವಾಮಿ. ಎಸ್. ಆರ್., ಗುಂಜಾಲ್, ಗೋವಿಂದರಾಜ ನರಸಿಂಹಾಚಾರ್, ಈಶ್ವರಚಂದ್ರ, ಕಂಚ್ಯಾಣಿ ಶರಣಪ್ಪ, ಪ. ಗು. ಸಿದ್ದಾಪುರ, ಜಂಬುನಾಥ ಕಂಚ್ಯಾಣಿ, ರಾಜಶೇಖರ ಕುಕ್ಕುಂದಾ, ಲಕ್ಷ್ಮಣ ಕಂದಕೂರ, ರಾಜಶೇಖರ ಹೊಸಮನಿ, ಸಂಪಟೂರು ವಿಶ್ವನಾಥ, ಆರ್. ಬಿ. ಕವಿ, ಅನ್ವಿಕಾ, ನೀಳಾದೇವಿ, ಲಾವಣ್ಯ ರಶ್ಮಿ ಎಸ್., ಎಚ್. ರವಿ, ವಸಂತೀಚಂದ್ರ, ಡಾ॥ ಆನಂದ ಪಾಟೀಲ, ನೀಲತ್ತಹಳ್ಳಿ ಕಸ್ತೂರಿ, ಗೊ. ರು. ಚನ್ನಬಸಪ್ಪ, ಎಸ್. ಬಿ. ಹೊಸಮನಿ, ಮತ್ತೂರು ಸುಬ್ಬಣ್ಣ ಮುಂತಾದವರು.

—o—

## (ಖ) ಪ್ರಬಂಧಕಾರರು

ಎರಡು ದಿನ ಊರಿಗೆ ಹೋಗಿ ಹೆಂಡತಿ ಮಕ್ಕಳನ್ನು ನೋಡಿಕೊಂಡು ಬರುತ್ತೇನೆಂದು ಹೇಳಿ ಹೋಗಿದ್ದ ವ್ಯಾಸರಾಯರು ಹಿಂತಿರುಗಲು ನಾಲ್ಕು ದಿನಗಳು ಹಿಡಿದವು. ಅಷ್ಟರಲ್ಲಿ ಸಾಹಿತ್ಯಾಸಕ್ತ ಶಿಷ್ಯವೃಂದ ಚಡಪಡಿಸಹತ್ತಿತ್ತು. ರಜಾ ಕಳೆದು ಶಾಲೆ ಮತ್ತೆ ಪ್ರಾರಂಭವಾಗುವುದಲ್ಲಾ ಎಂಬುದು ಅವರ ಕಳಕಳಿ, ಇಷ್ಟು ಕುತೂಹಲಕಾರಿಯಾದ ಸಾಹಿತಿ ದರ್ಶನ ಎಲ್ಲಿ ಅರ್ಧಕ್ಕೇ ನಿಂತುಹೋಗುವುದೋ ಎಂಬ ಕಳವಳಿ ಕೆಲವರಿಗಾದರೆ ವಾಸುದೇವರಾಯರ ಹೆಂಡತಿ ಮಕ್ಕಳಿಗೆ, ಅವರ ಮನೆಯಲ್ಲಿರುವವರ ಆರೋಗ್ಯ ಹೇಗಿದೆಯೋ ? ಊರಿಗೆ ಹೋಗುವಾಗ ನೆಗಡಿಯಿಂದ ಇರಸುಮುರುಸುಗೊಂಡಿದ್ದ ವ್ಯಾಸಣ್ಣ ಹೇಗಿದ್ದಾರೋ ಎಂಬ ಗಾಬರಿ !

ಅಂತೂ ನಗುಮುಖದಿಂದಲೇ ವ್ಯಾಸಣ್ಣ ಊರಿಗೆ ಹಿಂತಿರುಗಿದಾಗ, ದಿನಕರ, ಮುಕುಂದ, ದಿನೇಶ ಖುಷಿಯಿಂದ ಕುಣಿದಾಡಿದರು. ಪದ್ಮಮ್ಮನವರೂ ನಗುಮುಖದಿಂದ ಸ್ವಾಗತಿಸಿ ಎಲ್ಲರ ಆಯುರಾರೋಗ್ಯ ವಿಚಾರಿಸಿ ತೃಪ್ತಿಗೊಂಡರು.

ತಾತ ಊರಿಗೆ ಬಂದಿರುವ ವಿಷಯ ಸ್ನೇಹಿತರ ಮಧ್ಯೆ ಡಂಗುರ ಸಾರಲು ಮುಕುಂದ ಹೊರಗೆ ಧಾವಿಸಿದ.

ಮಧ್ಯಾಹ್ನ ಒಂದು ಗಂಟೆಗೆಲ್ಲಾ ಶಿಷ್ಯರು ವಾಸುದೇವರಾಯರ ಮನೆಯಲ್ಲಿ ಸೇರಿದರು.

"ಇಂದು ಪ್ರಬಂಧಕಾರರ ಪರಿಚಯ ಮಾಡಿಕೊಡ್ತೀನಿ" ಎಂದು ಪ್ರವಚನ ಪ್ರಾರಂಭಿಸಿದರು ವ್ಯಾಸರಾಯರು.

ಪ್ರಪಂಚದ ಸಾಹಿತ್ಯ ಕ್ಷೇತ್ರದಲ್ಲಿ, 'ಪ್ರಬಂಧ ಸಾಹಿತ್ಯ' ಇತ್ತೀಚಿನ ಬೆಳವಣಿಗೆ. ಫ್ರಾನ್ಸಿನ ಮಾಂಟೇನ್ ಇದರ ಪ್ರವರ್ತಕ ಎಂದು ಹೇಳಲಾಗುತ್ತದೆ. ಅನಂತರ ಬಂದವರು ಬೇಕನ್, ಕೌಲಿ, ಡಿಫೋ, ಅಡಿಸನ್, ಗೋಲ್ಡ್‌ಸ್ಮಿತ್, ಲ್ಯಾಂಬ್, ಹ್ಯಾಜ್ಲಿಟ್, ಚೆಸ್ಟರ್‌ಟನ್, ಗಾರ್ಡಿನರ್, ಲಿಂಡ್, ಲೂಕಾಸ್ ಮುಂತಾದವರು. ಕನ್ನಡದಲ್ಲಿ ಎಂ.ಜಿ.ವಿ. ಅವರ 'ಪುಲ್ಲಯ್ಯನ ಪ್ರಬಂಧಗಳು' ಅತಿ ಹಿಂದಿನದೆಂದು ಆಧಾರಗಳಿಂದ ತಿಳಿದುಬರುತ್ತದೆ. ಆದರೆ ಪ್ರಬಂಧ ಒಂದು ನಿಶ್ಚಿತರೂಪ ತಳೆದು ಆಧುನಿಕ ಕನ್ನಡ ಸಾಹಿತ್ಯ ಪ್ರವೇಶಿಸಿ 6 – 7 ದಶಕಗಳು ಮಾತ್ರ ಕಳೆದಿದೆ. ಈ ಪ್ರಕಾರದಲ್ಲಿ ವ್ಯಕ್ತಿಚಿತ್ರ, ಒಂದು ಸ್ಥಳದ ಅಥವಾ ವಸ್ತುವಿನ ಚಿತ್ರಣ, ಜೀವನಸ್ಮೃತಿ, ವಸ್ತುಸ್ಮೃತಿ, ಮುಂತಾದವೂ ಬರಬಹುದಾಗಿವೆ. ಲಘು ಹರಟೆ, ಲಲಿತ ಪ್ರಬಂಧ ಸಹ ಈ ಪ್ರಕಾರದಲ್ಲಿ ಪ್ರವೇಶಿಸುವುದುಂಟು.

'ಲೇಖಕನು ವಾಚಕರೊಂದಿಗೆ ನಿಸ್ಸಂಕೋಚವಾಗಿ, ಆತ್ಮೀಯ ಭಾವದಿಂದ ನಡೆಸುವ ಬರಹರೂಪದ ಸಂಭಾಷಣೆ' ಎಂದು ಪ್ರಬಂಧವನ್ನು ಶ್ರೀ ಗೋರೂರರು ವರ್ಣಿಸಿದರೆ, 'ಮನಸ್ಸಿನ ಒಲವು, ಓಟ, ಆಕಾಂಕ್ಷೆಗಳನ್ನು ನೇಯುವ ಒಂದು ಕ್ರಿಯೆ ಪ್ರಬಂಧ'ವೆಂದು ವಿ.ಸೀ. ಹೇಳುತ್ತಾರೆ. ಒಟ್ಟಿನಲ್ಲಿ ಪ್ರಬಂಧ ವ್ಯಕ್ತಿಗತ ಆತ್ಮಾನುಭವ ಎನ್ನುವುದರಲ್ಲಿ ಸಂದೇಹವಿಲ್ಲ. ಇದರಿಂದಾಗಿ ಅಂತಃಕರಣ ಜಾಗೃತಗೊಳ್ಳುವ ಸಂಭವ ಹೆಚ್ಚು. ಈ ಪ್ರಕಾರವನ್ನು ಕನ್ನಡದ ಹಿರಿಯ - ಕಿರಿಯ ಲೇಖಕರು ಸಂಪನ್ನಗೊಳಿಸಿದ್ದಾರೆ, ಸಂಪನ್ನಗೊಳಿಸುತ್ತಿದ್ದಾರೆ.

'ಮಲೆನಾಡಿನ ಚಿತ್ರ'ಗಳ **ಕುವೆಂಪು**, 'ರಾಮಾಚಾರಿಯ ನೆನಪು' ಕೆರಳಿಸಿ, 'ಈಚಲ ಮರದ ಕೆಳಗೆ', 'ಧೇನುಕ ಪುರಾಣ' ಹೇಳಿರುವ **ಪು.ತಿ.ನ.**, ಹಳ್ಳಿಯ 'ಹತ್ತು ಸಮಸ್ತರು' ಇವರೊಡನೆ ಸಮಾಗಮ ನಡೆಸಿ 'ಮೈಲಿಕಲ್ಲಿನೊಡನೆ ಮಾತುಕತೆಗಳು' ನಡೆಸಿರುವ **ಶಿವರಾಮಕಾರಂತ**, 'ನಾ ಕಂಡ ಕಲಾವಿದರು ಮತ್ತು ನೆನಪುಗಳು' ಕೃತಿಯ ಕರ್ತೃ **ಮೈಸೂರು ಕೆ. ವಾಸುದೇವಾಚಾರ್ಯ**, 'ಬರಹಗಾರನ ಹಣೆಬರಹ' ಚಿತ್ರಿಸಿರುವ **ಗೋವಿಂದ ಪೈ**, ಲಘು ಬರಹದ **ಎ. ಆರ್. ಕೃಷ್ಣಶಾಸ್ತ್ರಿ**, 'ನಿರಾಭರಣ ಸುಂದರಿ'ಯ **ಬೇಂದ್ರೆ**, ಬದುಕಿನ ಬಾಳು 'ಸಾವಧಾನ', 'ನಾ ಕಂಡ ಗೌರಮ್ಮ' ಪರಿಚಯಿಸಿರುವ **ದ. ಬಾ. ಕುಲಕರ್ಣಿ**, 'ಶಿವನ ಬುಟ್ಟಿ' ಹೆಣೆದಿರುವ **ಹಿರೇಮಲ್ಲೂರು ಈಶ್ವರನ್**, 'ನಂಟರು' ಪರಿಚಯ ಮಾಡಿಸಿರುವ **ತೀ.ನಂ.ಶ್ರೀ.** 'ಕುಲದೀಪಕರು'ಗಳಂತಹ ಉತ್ತಮ ಕೃತಿಯ ಕರ್ತೃ **ಸಿದ್ಧವನಹಳ್ಳಿ ಕೃಷ್ಣಶರ್ಮ**, 'ಕನ್ನಡ ಕುಲದೀಪಕರು' ರಚಿಸಿರುವ **ಅನಕೃ**, 'ಬೆಳದಿಂಗಳು ಬೆಳಕಿನಲ್ಲಿ ಮಹನೀಯರು' ಪರಿಚಯಿಸಿರುವ **ವಿ. ಸೀತಾರಾಮಯ್ಯ**, 'ಹಗಲುಗನಸುಗಳು', 'ಅಲೆಯುವ ಮನ', 'ಮಿನುಗು-ಮಿಂಚು' ಮುಂತಾದವುಗಳ ಕರ್ತೃ 'ಲಲಿತಪ್ರಬಂಧಗಳ ಆಚಾರ್ಯ'ರಾದ **ಎ. ಎನ್. ಮೂರ್ತಿರಾವ್**,

'ಮರೆಯದ ನೆನಪುಗಳು' ನೀಡಿರುವ **ರಾವ್‌ಬಹದ್ದೂರ್**, 'ಜೀವನ ನಾಟಕ' 'ಧೂಮಲೀಲೆ', 'ಮುಗಿಲುಗಳು'—ಪ್ರಬಂಧಗಳ **ಎಂ. ವಿ. ಸೀತಾರಾಮಯ್ಯ**, 'ಹಳ್ಳಿಗಳು ರಸಿಕರು' ಇವರ ಮೂಲಕ ಮನರಂಜನೆ ನೀಡುವ **ಗೊರೂರರು**, 'ಪಂಚ ಕಲಶ ಗೋಪುರದಲ್ಲಿ ಐವರು ಕನ್ನಡ ಹಿರಿಯರು', 'ಸ್ಮೃತಿಚಿತ್ರ' ಚಿತ್ರಿಸಿರುವ ಡಾ॥ ಬಿ. ಜಿ. ಎಲ್. ಸ್ವಾಮಿ, 'ತಲೆಮಾರಿನ ಹಿಂದೆ', 'ದಿಟ್ಟಿಸಿ ನೋಡಿದರೆ' ಸಂಕಲನಗಳ **ಸಿಂಪಿ ಲಿಂಗಣ್ಣ**, 'ಲಲಿತ ಪ್ರಬಂಧ'ಗಳ **ವರದರಾಜ ಹುಯಿಲಗೋಳ**, 'ಧೂಮಲೀಲೆ ಮತ್ತು ಮುಗಿಲುಗಳು', 'ಬಾಲ್ಕನಿಯ ಬಂಧುಗಳು' ಸೃಷ್ಟಿಸಿರುವ **ಜಿ. ವೆಂಕಟಸುಬ್ಬಯ್ಯ**, ''ಒಗ್ಗರಣೆ'ಯ ರುಚಿಯನ್ನು ಹಲವು ವಿಧದಲ್ಲಿ ಮಾಡಿಸಿರುವ **ಎಸ್. ಆರ್. ಚಂದ್ರ**, 'ಗಾಳಿಪಟ' ಹಾರಿಸಿ 'ದೇವಕನ್ಯೆ'ಯರನ್ನು ತಿರೆಗೆ ಎಳೆದು ತಂದಿರುವ **ರಾ. ಕು.**, 'ಸ್ನೇಹದೃಷ್ಟಿ' ಬೀರಿರುವ **ಕಲ್ಯಾಣ ಸುಂದರ್**, 'ಆನಂದಲಹರಿ' ಹರಿಸಿರುವ **ಆನಂದ**, 'ರಾಕ್ಷಸರು' ಪರಿಚಯಿಸಿರುವ **ಗೋಪಾಲಕೃಷ್ಣ ಅಡಿಗ**, 'ರಥ–ರಥಿಕ' ಮಧುವ್ರತ, 'ಮುತ್ತಿನಹಾರ' ನೀಡಿರುವ **ಎನ್. ಪ್ರಹ್ಲಾದರಾಯರು**, 'ಪ್ರಹಾರ'ದ **ಲಾಂಗೂಲಾಚಾರ್ಯರು**, 'ವೈದ್ಯನಲ್ಲದ ಡಾಕ್ಟರು' ಪರಿಚಯಿಸಿರುವ **ಡಾ॥ ಹೆಚ್. ಕೆ. ರಂಗನಾಥರು**, 'ಇಂಥವರೂ ಇದ್ದಾರೆ' ಎನ್ನುವ **ಎಸ್. ಅನಂತನಾರಾಯಣ**, 'ನಮ್ಮ ಅರಣ್ಯ ಯಾತ್ರೆ' ಚಿತ್ರಿಸಿರುವ **ಎಂ. ರಾಮರಾಯರು**, 'ಮೂಗು' ಚಿತ್ರಿಸಿರುವ **ಅಶ್ವತ್ಥರು**, 'ಅಕ್ಕನ ಮದುವೆ' ಮಾಡಿಸಿರುವ **ಕು. ಗೋ.**, 'ನಾಲ್ದೆಸೆಯ ನೋಟ' ತೋರಿಸಿರುವ **ಡಿ. ಎಸ್. ಕರ್ಕಿ**, 'ಲಂಚ ಪ್ರಪಂಚ' ವಿಸ್ಫೋಟಿಸಿರುವ **ಮ. ಶ್ರೀಧರಮೂರ್ತಿ**, 'ಗಪ್‌ಚಿಪ್' ಎನ್ನುವ **ಡಾ॥ ಎಂ. ಎಸ್. ಸುಂಕಾಪುರ**, 'ಅಡಿಗೆಮನೆ' ದರ್ಶನ ಮಾಡಿಸಿರುವ **ಉಮಾಪತಿ**, 'ಕಜ್ಜಾಯ'ದ ಸವಿ ಉಣಿಸಿರುವ **ಸುನಂದ ಬೆಳಗಾಂಕರ್** (ಅಕಾಡೆಮಿ ಬಹುಮಾನ ಗಳಿಸಿದ್ದಾರೆ), 'ತಾಮ್ರದ ಕಡಗ' ಶಬ್ದ ಮಾಡಿಸಿರುವ **ಅನಂತ ಕಲ್ಲೋಳ**, 'ಸಂಸಾರದಲ್ಲಿ ಸ್ವಾರಸ್ಯ' ತಿಳಿಸಿರುವ **ಜ್ಯೋತ್ಸ್ನಾ ಕಾಮತ್**, 'ಮಾತಿನ ಮಲ್ಲರು' ಪರಿಚಯಿಸಿರುವ **ಡಿ. ಕೆ. ರಾಜೇಂದ್ರ**–ಇವರು ಈ ವಿಭಾಗ ಸಂಪನ್ನಗೊಳಿಸಿರುವ ಕೆಲ ಮುಖ್ಯರು.

ಇವರಲ್ಲದೆ ಈ ಕೆಳಕಂಡ ಸಾಹಿತಿಗಳು ತಮ್ಮ ಪ್ರಬಂಧ ಸಂಕಲನಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿ ತಮ್ಮ ಪ್ರತಿಭೆಯನ್ನು ಮೆರೆಸಿದ್ದಾರೆ.

. **ಸದಾಶಿವ ಒಡೆಯರ್** ('ರವೀಂದ್ರ ದರ್ಶನ'–1965), **ಕ.ರಾ. ಮೋಹನ್** ('ಪ್ರಿಯತಮೆಯ ಶೋಧನೆಯಲ್ಲಿ'–1973) ; **ಎಂ. ಎಸ್. ನರಸಿಂಹಮೂರ್ತಿ** ('ಸ್ವಯಂವಧು'–1974) ; **ರಾಮಚಂದ್ರಶರ್ಮ** (ಪ್ರತಿಭಾ ಸಂದರ್ಶನ–1975) **ಸಿಂಪಿಲಿಂಗಣ್ಣ** (ನಾಟ್ಯಸಾಧನೆ–1976) : **ಅ. ರಾ. ಸೇತುರಾಮ್** (ಮುಗಿಲ ಹಳ್ಳಿಯ ಬಿಳ್ಳೈರು ಹಾಗೂ ಇತರ ಲೇಖನಗಳು–1977) : **ಎಚ್. ಎಸ್.**

**ಕೃಷ್ಣಸ್ವಾಮಿ ಆಯ್ಯಂಗಾರ್** (ಸುರಹೊನ್ನೆ–1979); **ವೀರೇಂದ್ರ ಸಿಂಪಿ** (ಭಾವಮೈದುನ–1981); **ಡಾ॥ ರಾ. ಯ. ಧಾರವಾಡಕರ್** (ತೂರಿದ ಚಿಂತನಗಳು–1982); **ದೇಜಗೌ** (ತೆನೆ–1983); **ಪಿ. ವಿ. ಶಾಸ್ತ್ರಿ** -[ಒಂಸೆಗೊಳಗಾದ ಮಗು ಮತ್ತಿತರ ಪ್ರಬಂಧಗಳು–1985]; **ಸು. ಕೃಷ್ಣಮೂರ್ತಿ** ('ಹಾದಿಪುರಾಣ'–1986).

**ಜೀವಾಜಿ ವಿಷ್ಣುಗೋಕೆ**[1] **:** 19ನೇ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಲ್ಲಿದ್ದ ಪ್ರಸಿದ್ಧ ಲೇಖಕರು. ಅನೇಕ ಉತ್ತಮ ಪ್ರಬಂಧಗಳನ್ನು ರಚಿಸಿದ್ದರು. ಹಲವಾರು ಗ್ರಂಥಗಳನ್ನು ಅನುವಾದಿಸಿದ್ದರು. ಹಾಸ್ಯ (1910) ಪ್ರಬಂಧ ಸಂಕಲನಕ್ಕೆ ವಿದ್ಯಾವರ್ಧಕ ಸಂಘದ ಬಹುಮಾನ ದೊರೆತಿತ್ತು. ಸಂಸಾರ ಕರ್ತವ್ಯ (1926) ಇನ್ನೊಂದು ಉತ್ತಮ ಪ್ರಬಂಧ ಸಂಕಲನ.

ಇತರ ಕೃತಿಗಳು : ಡಾ॥ ಜಾನ್ಸನ್ನನ 'ರೆಸೆಲಾಸ್' ಎಂಬ ಕಾದಂಬರಿಯನ್ನು 1905ರ ಸುಮಾರಿನಲ್ಲಿ ಕನ್ನಡಕ್ಕೆ ಪರಿವರ್ತಿಸಿದ್ದರು. ಒಡವೆಯ ಪಾಠ, ಮಾತೃಪ್ರೇಮ, ಹೆಣ್ಣುಮಕ್ಕಳ ಆರೋಗ್ಯವಿಚಾರ ಮುಂತಾದವು.

**ಡಾ॥ ಎ. ಎನ್. ಮೂರ್ತಿರಾವ್**[2] (ಅಕ್ಕಿಹೆಬ್ಬಾಳು ನರಸಿಂಹಮೂರ್ತಿ) : ಇಂಗ್ಲೀಷ್ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲ್ ಆಗಿ (ಚಿತ್ರದುರ್ಗ ಕಾಲೇಜು) ತಮ್ಮ ಉದ್ಯೋಗದ ಬಹಳಷ್ಟು ವರ್ಷಗಳನ್ನು ಕಳೆದು, ಕೆಲವರ್ಷ ಕರ್ನಾಟಕ ಸಾಹಿತ್ಯ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಮುಂತಾದ ಗುರುತರ ಹುದ್ದೆಗಳನ್ನು ನಿರ್ವಹಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ 'ಡಿಲಿಟ್' ಪ್ರಶಸ್ತಿನೀಡಿ ಗೌರವಿಸಿದೆ. 56ನೇ ಕನ್ನಡ ಸಾಹಿತ್ಯ ಸಮ್ಮೇಳನದ (ಕೈವಾರ) ಅಧ್ಯಕ್ಷರಾಗಿದ್ದುದು ಇವರ ಹೆಗ್ಗಳಿಕೆ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದರು.

ಇವರದು ಬಹುಮುಖ ಪ್ರತಿಭೆ. ನಾಟಕ, ಪ್ರಬಂಧ, ಕತೆ, ಕಾದಂಬರಿ, ಪ್ರವಾಸ ಸಾಹಿತ್ಯ–ವಿಡಂಬನ ಸಾಹಿತ್ಯ ಮೊದಲಾಗಿ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸಂಪನ್ನಗೊಳಿಸಿದ್ದಾರೆ.

ಪ್ರಬಂಧ ಸಾಹಿತ್ಯ ಕ್ಷೇತ್ರದಲ್ಲಂತೂ ಇವರು ಅಗ್ರಗಣ್ಯರು. ಇವರ ಪ್ರಬಂಧಗಳಲ್ಲಿ ಕಾವ್ಯದ 'ಹೊಳಪು' ಕಥೆಯ 'ಕುತೂಹಲ' ನಾಟಕದ 'ಪಾತ್ರಸೃಷ್ಟಿ', ಮಾತಿನಲ್ಲಿ ಹಾಸ್ಯದ 'ಮಧುಲೇಪನ'. ನಿರೂಪಣೆಯಲ್ಲಿ 'ಚಮತ್ಕಾರ' 'ವಿಶೇಷ ಪ್ರಬಂಧ ಧ್ವನಿ' ಕಾಣುತ್ತೇವೆ. ಅವರ ಮಾತಿನಲ್ಲಿ 'ಪ್ರಬಂಧ'ದ ವಿಶ್ಲೇಷಣೆ ಕೇಳಿ. 'ಎದುರಿನ ಕುರ್ಚಿಯಲ್ಲಿ ಬಾಹ್ಯಪ್ರಪಂಚದ ಪ್ರತಿನಿಧಿಯಾಗಿ ಆಪ್ತ ಮಿತ್ರನೊಬ್ಬ

---

1 ಜನನ : ಸು. 1874.

2 ಜನನ : ಜೂನ್ 16, 1900, ಮಂಡ್ಯಜಿಲ್ಲೆಯ 'ಅಕ್ಕಿಹೆಬ್ಬಾಳ'ನಲ್ಲಿ. ತಂದೆ : ಎಂ. ಸುಬ್ಬರಾವ್, ತಾಯಿ : ವೆಂಕಟಲಕ್ಷ್ಮಮ್ಮ.

ಕುಳಿತಿದ್ದಾನೆಂದೂ ಭಾವಿಸಿಕೊಂಡು ಮಾತನಾಡುತ್ತಾನೆ ಪ್ರಬಂಧಕಾರ' ಅನ್ನುತ್ತಾರೆ. 'ಹೂವುಗಳು' ಇವರ ಪ್ರಥಮ ಪ್ರಬಂಧ.

'ಹಗಲುಗನಸುಗಳು', 'ಅಲೆಯುವ ಮನ', 'ಮಿನುಗು ಮಿಂಚು', ಪ್ರಬಂಧ ಸಂಕಲನಗಳು. 'ಚಿತ್ರಗಳು–ಪತ್ರಗಳು' ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿ 'ಗಳ ಪುರಸ್ಕಾರ ಪಡೆದ ಪ್ರಸಿದ್ಧ ಪ್ರಬಂಧ ಸಂಕಲನ.

'ಆಷಾಢಭೂತಿ' (ಮೋಲಿಯರ್‌ನ 'ಟಾರ್ತುಫ್' ನಾಟಕದ ಅನುವಾದ). 'ಚಂಡಮಾರುತ' ('ಟೆಂಪೆಸ್ಟ್' ಅನುವಾದ).

ಡಾ॥ ಶಿವರಾಮಕಾರಂತರ 'ಮರಳಿ ಮಣ್ಣಿಗೆ'ಯನ್ನು ಇಂಗ್ಲೀಷಿಗೆ ಅನುವಾದಿಸಿದ್ದಾರೆ (ದಿ ರಿಟರ್ನ್ ಆಫ್ ದಿ ಸಾಯಿಲ್)

'ಸಾಹಿತ್ಯ ಮತ್ತು ಸತ್ಯ', 'ವಿಮರ್ಶಾತ್ಮಕ ಪ್ರಬಂಧಗಳು' 'ಶ್ರೀಮಾಸ್ತಿಯವರ ಕಥೆಗಳು', 'ಬಿ.ಎಂ. ಶ್ರೀಕಂಠಯ್ಯ (ವಿಮರ್ಶಾತ್ಮಕ ಕೃತಿಗಳು). 'ಬಿ.ಎಂ. ಶ್ರೀಕಂಠಯ್ಯ' ಕೃತಿಯನ್ನು ಇವರೇ ಇಂಗ್ಲೀಷಿಗೂ ಅನುವಾದಿಸಿದ್ದಾರೆ.

'ಅಪರ ವಯಸ್ಕನ ಅಮೇರಿಕಾಯಾತ್ರೆ' (ಪ್ರವಾಸ ಸಾಹಿತ್ಯ) ವೈಶಿಷ್ಟ್ಯಪೂರ್ಣ ಕೃತಿಯೆಂದು ಬಹಳ ಹೆಸರು ಗಳಿಸಿದೆ. 'ಹವಳದ ದ್ವೀಪ' (ಶಿಶುಸಾಹಿತ್ಯ). ಪಾಶ್ಚಾತ್ಯ ಗಣ್ಯಕಥೆಗಳು (ಅನುವಾದ), ಸೀತಾಪರಿತ್ಯಾಗ ಪ್ರಸಂಗ (ವಿಮರ್ಶೆ). ಸುಧೀರ ಮತ್ತು ಶೈಲಲ ಸಾಹಸ (ಶಿಶುಸಾಹಿತ್ಯ).

ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 25.

ಎಂ. **ಜಿ. ವೆಂಕಟೇಶಯ್ಯ**[1] **:** ಕನ್ನಡ-ಸಂಸ್ಕೃತ ವಿದ್ವಾಂಸರು. ಪ್ರೌಢಶಾಲಾ ಮಾಸ್ತರಾಗಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ರಾಜ್‌ಬಹದ್ದೂರ್ ಬಹುಮಾನ ಗಳಿಸಿದ್ದಾರೆ. ಪ್ರಬಂಧ, ಸಣ್ಣಕಥೆ, ಕಾದಂಬರಿ, ಸಾಹಿತ್ಯ ಚರಿತ್ರೆ, ಭಾಷಾ ವಿಜ್ಞಾನ ಮುಂತಾಗಿ ಸಾಹಿತ್ಯದ ಬಹುಪ್ರಕಾರಗಳಲ್ಲಿ ಕೃಷಿಮಾಡಿದ್ದಾರೆ.

ಒಟ್ಟು ಕೃತಿಗಳ ಸಂಖ್ಯೆ ಸುಮಾರು 15. ಮುಖ್ಯವಾದವುಗಳು : ಪುಲ್ಲಯ್ಯನ ಪ್ರಬಂಧಗಳು (ಪ್ರಬಂಧ), ಕಾಸಿನ ಸರ (ಸಣ್ಣಕಥೆ), ಪಚ್ಚೆಉಂಗುರ, ಮಾಧವ ಲೀಲೆ (ಕಾದಂಬರಿಗಳು), ಕನ್ನಡ ಧ್ವನಿಮಾ, ಶಬ್ದವರ್ತನಿರುಕ್ತ (ಭಾಷಾವಿಜ್ಞಾನ), ಕನ್ನಡ ಸಾಹಿತ್ಯ ಚರಿತ್ರೆಯ ಟಿಪ್ಪಣಿ (ಸಾಹಿತ್ಯ ಚರಿತ್ರೆ) – ಮುಂತಾದವು.

**ಪ್ರಹ್ಲಾದ ಬಂಡೇರಾವ ನರೇಗಲ್ಲ (ವತ್ಸ)**[2] **:** ಇವರು ಒಳ್ಳೆಯ ಪ್ರಬಂಧಕಾರರು, ಕಾದಂಬರಿಕಾರರು, ವಿಮರ್ಶಕರು ಹಾಗೂ ಗ್ರಂಥ ಸಂಪಾದಕರು,

1 ಜನನ : ಮಾರ್ಚ್ 3, 1902, ಬೆಂಗಳೂರಿನಲ್ಲಿ. ತಂದೆ : ಮಾಲೂರಗುಂಡಪ್ಪ. ತಾಯಿ : ಪಾರ್ವತಮ್ಮ.

2 ಜನನ : ಮೇ 30, 1907, ಧಾರವಾಡ ಜಿಲ್ಲೆಯ 'ಜಾಪೂರು' ಗ್ರಾಮದಲ್ಲಿ. ತಂದೆ : ಬಂಡೇರಾವ ಅನಂತರಾವ ನರೇಗಲ್ಲಿ. ತಾಯಿ : ಅಂಬಾಬಾಯಿ.

ಪ್ರೌಢಶಾಲಾ ಶಿಕ್ಷಕರು. ಇವರ ಒಂದು ಕೃತಿ 'ಕನ್ನಡ ಜ್ಞಾನೇಶ್ವರಿ ಸುಬೋಧಿನಿ' ಕೃತಿಗೆ ದೇವರಾಜ ಬಹದ್ದೂರ್ ಬಹುಮಾನ ದೊರೆತಿದೆ.

ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 30. ಮುಖ್ಯವಾದವುಗಳು: ಪ್ರಬಂಧ ಪುಷ್ಪಾಂಜಲಿ, ಶ್ರೀ ರವೀಂದ್ರ ಸೇವಾ ಪ್ರಬಂಧಗಳು (ಪ್ರಬಂಧಗಳು), ನಸುಕು (ಕಾದಂಬರಿ), ಕನ್ನಡದಲ್ಲಿನ ಯುಗಾದಿ ಗೀತೆಗಳು (ವಿಮರ್ಶೆ), ಶ್ರೀ ಅರವಿಂದ ಸೂಕ್ತಿ ಸಂಗ್ರಹ (ಸಂಪಾದನೆ).

**ಬಿ. ಆರ್. ವಾಡಪ್ಪಿ (ಭಾರತೀಶ)**[1]: ವೃತ್ತಿಯಲ್ಲಿ ಉಪಾಧ್ಯಾಯರು. ಒಳ್ಳೆಯ ಸಾಹಿತಿ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸಂಪನ್ನಗೊಳಿಸಿದ್ದಾರೆ. ಇವರ ಪ್ರಬಂಧ ಸಂಕಲನ 'ತಾರಕಂಬಿಗಳು' ರಾಜ್ಯಸರಕಾರದ ಬಹುಮಾನ ಗಳಿಸಿದೆ. 'ಜೀವನ ರಂಗ' ಕಥಾಸಂಗ್ರಹಕ್ಕೂ ಸಹ ಬಹುಮಾನ ಲಭಿಸಿದೆ.

ಇವರ ಇತರ ಮುಖ್ಯ ಕೃತಿಗಳು: ರಾಯರ ಸೋಲು (ನಾಟಕ). ಯಾರು ಹೊಣೆ (ಕಥಾಸಂಗ್ರಹ), ಗಾಳಿಗುದರೆ, ಸುಳಗಾಳಿ (ಪ್ರಬಂಧಗಳು).

**ಎಂ. ರಾಮರಾವ್**[2]: ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರು. ಇಂಗ್ಲೀಷ್–ಕನ್ನಡ ನಿಘಂಟಿನ ಸಂಪಾದಕರಾಗಿ ದುಡಿದಿದ್ದಾರೆ. ಹೆಸರಾಂತ ಪ್ರಬಂಧ ಕಾರರು, ಶಿಶುಸಾಹಿತ್ಯವಲ್ಲದೆ ಸಾಹಿತ್ಯದ ಇತರ ಪ್ರಕಾರಗಳಿಗೂ ಸಂಪನ್ನ ಕೊಡುಗೆ ಗಳನ್ನು ನೀಡಿದ್ದಾರೆ.

ಕೃತಿಗಳು: ಅರಣ್ಯ ಯಾತ್ರೆ ಮತ್ತು ಇತರ ಪ್ರಬಂಧಗಳು, ಇಪ್ಪತ್ತು ಇಂಗ್ಲೀಷ್ ಪ್ರಬಂಧಗಳು.

ವ್ಯಾಧಿಗೆ ತಕ್ಕ ವೈದ್ಯ, ಹರಪಾರ್ವತಿ, ಗ್ರಿಮ್ ಸಹೋದರರ ಕಥೆಗಳು, ಪಾದಯಾತ್ರೆ ಮುಂತಾದ ಸುಮಾರು 30 ಕೃತಿಗಳು.

**ಎಸ್. ರಮಾನಂದ**[3] (ನಾರಾಯಣ ಶ್ರೀನಿವಾಸ ಗದಗಕರ): ಅಧ್ಯಾಪಕರು. ಒಳ್ಳೆಯ ಪ್ರಬಂಧಕಾರರು. ಕವನಗಳನ್ನು ರಚಿಸಿದ್ದಾರೆ. 'ವಾಗ್‌ಲಹರಿ' ಕೃತಿ 1956ರಲ್ಲಿ ರಾಜ್ಯ ಸರ್ಕಾರ್ಧದ ಬಹುಮಾನ ಗಳಿಸಿದೆ.

ಇತರ ಕೃತಿಗಳು: ಸಪ್ತರಂಗ, ನಮ್ಮ ನೆರೆಹೊರೆಯುವರು (ವ್ಯಕ್ತಿಚಿತ್ರಗಳು). ಒಡೆದ ಕನ್ನಡಿ, ಸುತ್ತುಮುತ್ತು (ಪ್ರಬಂಧಗಳು), ಕ್ರೀಡಾಂಗಣ, ಮೈಲಿಗಲ್ಲು (ಕವನ).

---

1 ಜನನ: ಮಾರ್ಚ್ 10, 1914, ಧಾರವಾಡ ಜಿಲ್ಲೆಯ ಅಣ್ಣಿಗೇರಿಯಲ್ಲಿ. ತಂದೆ: ರಾಘವೇಂದ್ರರಾವ್. ತಾಯಿ: ಜೀಹೂಬಾಯಿ.

2 ಜನನ: ಸು. 1914.

3 ಜನನ: ಏಪ್ರಿಲ್ 12, 1915, ಧಾರವಾಡ ಜಿಲ್ಲೆಯ 'ಹಾನಗಲ್ಲ' ಗ್ರಾಮದಲ್ಲಿ.

**ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಎಚ್ಚೆಸ್ಕೆ)**[1] : ಹೆಸರಾಂತ ಅಂಕಣಕಾರರು, ಅರ್ಥಶಾಸ್ತ್ರಜ್ಞರು, ಶಿಕ್ಷಣವೇತ್ತರು, ವಿಮರ್ಶಕರು, ಪ್ರಬಂಧಕಾರರು, ಕಾದಂಬರಿಕಾರರು ಹಾಗೂ ಪತ್ರಿಕೋದ್ಯೋಗಿಗಳು. ಕನ್ನಡ ನಿಯತಕಾಲಿಕಗಳಲ್ಲಿ ಇವರ ಲೇಖನ ಒಂದಲ್ಲ ಒಂದು ವಿಷಯದ ಮೇಲೆ ಇರುವುದನ್ನು ಕಾಣುತ್ತೇವೆ.

ಹಿಂದೆ ಇವರು ನಡೆಸಿದ್ದ ಪತ್ರಿಕೆ, ಮೈಸೂರು ವಿಶ್ವವಿದ್ಯಾನಿಲಯದ 'ಮಾನವಿಕ ಕರ್ಣಾಟಕ', ಈಗ ನಡೆಸುತ್ತಿರುವ ಪತ್ರಿಕೆ 'ಬ್ಯಾಂಕಿಂಗ್ ಪ್ರಪಂಚ' (ನಿಯತಕಾಲಿಕ) 'ಕನ್ನಡ ವಿಶ್ವಕೋಶ'ದ ಮಾನವಿಕ ಸಂಪಾದಕರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಬನುಮಯ್ಯ ಕಾಲೇಜಿನಲ್ಲಿ ಅನೇಕ ವರ್ಷ ಅಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಶಿಕ್ಷಣ ಕ್ಷೇತ್ರದಲ್ಲಿ ಅಪಾರ ಹೆಸರು ಗಳಿಸಿದ್ದಾರೆ. "ಎಚ್ಚೆಸ್ಕೆ ಅವರ ಆಯ್ದ ಬರಹಗಳು" ಇವರ ಷಷ್ಠ್ಯಬ್ದಿ ಸಮಯದಲ್ಲಿ ಅಭಿಮಾನಿಗಳು ಅರ್ಪಿಸಿರುವ ಸಂಭಾವನಾಗ್ರಂಥ.

ಕೃತಿಗಳು : ವಾಣಿಜ್ಯಶಾಸ್ತ್ರ ಪರಿಚಯ (ಭಾಗ 1, 2), ನಮ್ಮ ಅಭಿವೃದ್ಧಿ ಯೋಜನೆಗಳು, ಕನ್ನಡದಲ್ಲಿ ವಿಡಂಬನಾ ಸಾಹಿತ್ಯ, ಕಳ್ಳ ಹೊಕ್ಕ ಮನೆ, ಜೇಡರಬಲೆ, ಒಯಕೆಯ ಬೆಲೆ, ಕುರುಕ್ಷೇತ್ರ, ಮುಕ್ತಿಮಾರ್ಗ (ಕಾದಂಬರಿಗಳು) ; ಸುರಹೊನ್ನೆ, 'ಜೇಡರಬಲೆ' (ಪ್ರಬಂಧಗಳು) ; ಚಂದ್ರಕಾಂತಿ (ಚಿಂತನಮಾಲೆ) ; ವ್ಯಾವಹಾರಿಕ ಕನ್ನಡ, 'ಬದುಕು ಬೆಳಕು'. 'ಎತ್ತರದ ವ್ಯಕ್ತಿಗಳು', 'ಪ್ರತಿಭಾ ಸಂದರ್ಶನ' (ವ್ಯಕ್ತಿ ಚಿತ್ರಗಳು) ; ಲಾಲ್‌ಬಹಾದೂರ್ ಶಾಸ್ತ್ರಿ, ಜಯಪ್ರಕಾಶ್ ನಾರಾಯಣ್, ಬಿ. ಆರ್, ಪಂತಲು, ಯಾಮುನಾಚಾರ್ಯರು, ಡಾ॥ ಬಿ. ಆರ್. ಅಂಬೇಡ್ಕರ್ (ಮಕ್ಕಳಿಗಾಗಿ ಬರೆದಿರುವ ಜೀವನ ಚರಿತ್ರೆಗಳು) ; ಪ್ರೊ॥ ವಿ. ಕೆ. ಆರ್. ವಿ. ರಾವ್, ಶ್ರೀ ರಾಮಾನುಜ, (ಪ್ರೌಢರಿಗಾಗಿ ಬರೆದ ಜೀವನ ಚರಿತ್ರೆಗಳು).

**ಪ್ರೊ॥ ಕು. ಶಿ. ಹರಿದಾಸಭಟ್ಟ**[2] : ಅರ್ಥಶಾಸ್ತ್ರ ವಿದ್ವಾಂಸರು. ಕನ್ನಡ ಸಾಹಿತ್ಯಕ್ಕೂ ಅಪಾರ ಸೇವೆ ಸಲ್ಲಿಸಿದ್ದಾರೆ. ಮದರಾಸು ಸರ್ಕಾರದ ಸಾಹಿತ್ಯ ಬಹುಮಾನ ವಿಜೇತರು.

ಇವರು ಉದಯವಾಣಿ ಪತ್ರಿಕೆಯಲ್ಲಿ ಬರೆದಿದ್ದ ಲೇಖನಗಳು, ಪ್ರಬಂಧಗಳು ಹಲವು ಭಾಗಗಳಲ್ಲಿ 'ಲೋಕಾಭಿರಾಮ' ಹೆಸರಿನಲ್ಲಿ ಪ್ರಕಟಗೊಂಡಿವೆ. ಈ ಪ್ರಬಂಧಗಳಲ್ಲಿ ವೈಶಿಷ್ಟ್ಯಪೂರ್ಣ ವೈವಿಧ್ಯತೆ ಕಾಣುತ್ತೇವೆ. 'ಪುಸ್ತಕ ಪುರಾಣ' ಇನ್ನೊಂದು ಪ್ರಬಂಧ ಸಂಕಲನ ; 'ಇತಾಲಿಯಾ ನಾ ಕಂಡಂತೆ' (ಪ್ರವಾಸ ಸಾಹಿತ್ಯ).

ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 30.

---

1 ಜನನ : ಆಗಸ್ಟ್ 26, 1920. ಕೆ. ಆರ್. ನಗರ ತಾಲ್ಲೋಕಿನ ಹಳಿಯೂರಿನಲ್ಲಿ. ಲೇಖನನಾಮಗಳು : 'ಸಮದರ್ಶಿ' 'ವಿಚಾರಪ್ರಿಯ'. ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವೀಧರರು.

2 ಪುಟ 308 ನೋಡಿ. ಜನನ : ಮಾರ್ಚ್ 17, 1924. ಉಡುಪಿ ತಾಲ್ಲೂಕು ಕುಂಜಿಬೆಟ್ಟು. ತಂದೆ : ಶಿವಗೋಪಾಲಭಟ್ಟ. ತಾಯಿ : ಕಮಲಮ್ಮ.

**ಸದಾಶಿವ ಒಡೆಯರು**[1] **:** (ಸದಾಶಿವ ಶಿವದೇವ ಒಡೆಯರು), ಕರ್ನಾಟಕ ವಿಶ್ವವಿದ್ಯಾನಿಲಯದ ಉಪ ಕುಲಪತಿಗಳಾಗಿದ್ದು ನಿವೃತ್ತಗೊಂಡಿದ್ದಾರೆ. ಒಳ್ಳೆಯ ಸಾಹಿತಿಗಳು. ಇವರ 'ರವೀಂದ್ರ ದರ್ಶನ' ಪ್ರಬಂಧ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ (1966). ಇದು ಜೀವನ. ಜೀವನ ಕಲೆ (ಪ್ರಬಂಧ ಸಂಕಲನಗಳು) ಜೋನ್ ಆಫ್ ಆರ್ಕ್ ಮತ್ತು ಇತರ ನಾಟಕಗಳು (ನಾಟಕಗಳು).

**ಹೆರಗನಹಳ್ಳಿ ಲಿಂಗೇಗೌಡ ಕೇಶವಮೂರ್ತಿ**[2] **:** ಇಂಜನಿಯರಿಂಗ್‌ನಲ್ಲಿ ಎಂ. ಇ. ಪದವೀಧರರು ; ಮಂಡ್ಯದ ಪಿ. ಇ. ಎಸ್. ಇಂಜನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಸಾಹಿತ್ಯಾಭ್ಯಾಸದಲ್ಲಿ ಅಪಾರ ಆಸಕ್ತಿ. ಒಳ್ಳೆಯ ಪ್ರಬಂಧ ಕಾರರು.

'ನೀನ್ಯಾಕೋ ನಿನ್ನ ಹಂಗ್ಯಾಕೋ ಮಾವ' ಕೃತಿಗೆ 1972 ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ, 'ಎಂಗಾರ ಟಿಕೇಟ್ ಕೊಡಿ' (ಪ್ರಬಂಧ ಸಂಕಲನ)

**ಹ. ಶಿ. ಭೈರನಟ್ಟಿ**[3] **:** ಕವಿ, ಕಾದಂಬರಿಕಾರ, ಸಣ್ಣ ಕತೆಗಾರ, ವೈಜ್ಞಾನಿಕ ಲೇಖಕ ಹಾಗೂ ಪ್ರಬಂಧಕಾರ. ಇವರ ವೈಜ್ಞಾನಿಕ ಕಥೆ, ಕಾದಂಬರಿಗಳು, ಲೇಖನ ಗಳು ಪ್ರಚಲಿತ ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟಗೊಂಡಿವೆ.

'ಬಣ್ಣದ ಕಣ್ಣು' (ಕಥಾತ್ಮಕ ಲಲಿತ ಪ್ರಬಂಧಗಳ ಸಂಕಲನ ಇದರಲ್ಲಿ 16 ಪ್ರಬಂಧಗಳಿವೆ).

ಇತರ ಕೃತಿಗಳು : ನಕ್ಷತ್ರ ಪುಂಜ (ಹನಿಗವನ ಸಂಗ್ರಹ) ಟ್ರಿಪ್ಲೆಟ್ ಸಿಗ್ಮಾ (ವೈಜ್ಞಾನಿಕ ಕಾದಂಬರಿ), ನೆಲದ ಮೇಲೆ ಹೆಜ್ಜೆ (ಪ್ರವಾಸ ಕಥೆಗಳು), ಬೆಳ್ಳಿ ತೆರೆಗೆ ಬದುಕಿನ ಚಿತ್ರ (ಕವನ ಸಂಗ್ರಹ) ಪುಟಿವ ಮೀನುಗಳು (ಕಥಾ ಸಂಗ್ರಹ) ಟಾಪ್ ಸೀಕ್ರೆಟ್ ಒಮೇಗಾ ಡ್ಯಾನ್ಸ್ (ವೈಜ್ಞಾನಿಕ ಕಥಾ ಸಂಗ್ರಹ), ನೆರಳು ಬ್ಲೂಫಿಲ್ಮ್ (ಕಾದಂಬರಿ).

**ಕೆ. ಸಚ್ಚಿದಾನಂದಯ್ಯ**[4] **:** ಮಂಡ್ಯದಲ್ಲಿ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿ ಗಳು. ಒಳ್ಳೆಯ ಸಾಹಿತಿಗಳು. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೃಷಿ ಮಾಡಿ ದ್ದಾರೆ. ಮಕ್ಕಳ ಸಾಹಿತ್ಯ ವಿಭಾಗದಲ್ಲಿ ರಾಜ್ಯ ಸರಕಾರದ ಪ್ರಶಸ್ತಿ ಸಹ ಗಳಿಸಿದ್ದಾರೆ.

ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 25.

---

1 ಜನನ : ಆಗಸ್ಟ್ 7, 1924, ಧಾರವಾಡ ಜಿಲ್ಲೆಯ 'ಮರೇವಾಡ' ದಲ್ಲಿ.

2 ಜನನ : ಡಿಸೆಂಬರ್ 28, 1939. ಮಂಡ್ಯ ಜಿಲ್ಲೆಯ ಹೆರಗನಹಳ್ಳಿಯಲ್ಲಿ.

3 ಎ.ಎಸ್.ಸಿ. ಪದವೀಧರರು.

4 ಜನನ : ಸೆಪ್ಟೆಂಬರ್ 9, 1930. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯದಲ್ಲಿ. ತಂದೆ : ಪರಮೇಶ್ವರಯ್ಯ, ತಾಯಿ : ಪದ್ಮಾವತಿ. ಕಾವ್ಯನಾಮ 'ಚಿರಂತನ'.

ಮುಖ್ಯವಾದವುಗಳು : ಪ್ರಬಂಧ ಪುಂಜ 'ಶಿಕ್ಷಣ ಚಿಂತನ : ಮಂಥನ' (ಪ್ರಬಂಧ) ಚೈತ್ರವನ, ಕರ್ಮಜೀವಿ (ಕವನ), ಕ್ರಾಂತಿಯ ಕಿಡಿ ಕಲ್ಯಾಣಸ್ವಾಮಿ, ಹರಕೆ ಬೀರಿದ ಬೆಳಕು (ಸ. ಕ.) ಏಳನೆಯ ಹೆಡೆ, ಹದಿನೆಂಟರ ನಂಟು (ಕಾದಂಬರಿ), ಮೂರು ಗೀತ ನಾಟಕಗಳು (ನಾಟಕ), ಕೊಡವ ನಾನು ಕೊಡಗುನಾಡು, ಹಾಲು ಜೇನು (ಬಾಲ ಸಾಹಿತ್ಯ), ಬ್ರಹ್ಮಗಿರಿ, ರಸಷಷ್ಠಿ (ಸಂಪಾದನೆ) ಬಂಗಾರದ ಹೂ, ಊಟ ಬಲ್ಲವನಿಗೆ ರೋಗವಿಲ್ಲ (ವಯಸ್ಕರ ವಾಙ್ಮಯ) ಮುಂತಾದವು.

ಅ. ರಾ. ಸೇ.[1] : (ಅಣಜಿ ರಾಮಪ್ಪ ಸೇತೂರಾಮರಾವ್) ವೃತ್ತಿಯಲ್ಲಿ ಉಪಾಧ್ಯಾಯರು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ದುಡಿದಿದ್ದಾರೆ. ಪ್ರಬಂಧ ವಿಭಾಗದಲ್ಲ ಹೆಸರಿಸಬೇಕಾದ ವ್ಯಕ್ತಿ. ಕೊರವಂಜಿ ಕಾಲದಲ್ಲಿ ಬೆಳಕಿಗೆ ಬಂದವರು.

ಮುಖ್ಯ ಕೃತಿಗಳು : ಸುಳಿ ನಗು, ಮುಗಿಲ ಹಳ್ಳಿಯ ಬಖೈರು ಹಾಗೂ ಇತರ ಲೇಖನಗಳು (ಪ್ರಬಂಧಗಳು) ನಗೆ ಮುಗಿಲು (ಕವನ), ಸೊಗದಿರುಳು ನವ್ವಗಲು (ಕಾದಂಬರಿ), ಗುರು ಕಥಾಮೃತ (ಜೀವನ ಚರಿತ್ರೆ), ಶ್ರೀ ಬ್ರಹ್ಮಾನಂದ ಸ್ತೋತ್ರ. ಸಂಗ್ರಹ (ಸಂಪಾದನೆ) ಚಿರತೆ ವೀರನ ಕೋಟೆ, ಅಪರಂಜಿ (ಹಾಸ್ಯ ಪ್ರಬಂಧಗಳು).

**ಪ್ರೊ|| ಅ. ರಾ. ಮಿತ್ರ[2] :** (ಅಕ್ಕಿ ಹೆಬ್ಬಾಳು ರಾಮಣ್ಣ ಮಿತ್ರ) ಅತ್ಯಂತ ಜನಪ್ರಿಯ ಕನ್ನಡ ಉಪನ್ಯಾಸಕರು, ಒಳ್ಳೆಯ ಪ್ರಬಂಧಕಾರರು, ವಿಮರ್ಶಕರು ಹಾಗೂ ಗ್ರಂಥ ಸಂಪಾದಕರು.

ಮುಖ್ಯ ಕೃತಿಗಳು : ಬಾಲ್ಕನಿಯ ಬಂಧುಗಳು, ಯಾರೊ ಬಂದಿದ್ದರು, ಸಂಕಲ್ಪಗಳು (ಪ್ರಬಂಧ ಸಂಕಲನಗಳು) ; ಲಲಿತ ಪ್ರಬಂಧಗಳು (ಸಂಪಾದನೆ) : ಕೈಲಾಸಂ, ಹಿರಿಯಡ್ಕ ರಾಮರಾಯ ಮಲ್ಯ (ಜೀವನ ಚರಿತ್ರೆ) ; ಚಂದ್ರಗುಪ್ತ ಮೌರ್ಯ (ಅನುವಾದ) ; ವಚನಕಾರರು ಮತ್ತು ಶಬ್ದಕಲ್ಪ (ವಿಮರ್ಶೆ) ; ಕಾಲಿಗುಲ ಮತ್ತು ತಪ್ಪಿದ ಎಳೆ. ಶಿಕ್ಷಣ ಚಿಂತನ, ಟಾಲ್‌ಸ್ಟಾಯ್ ಬದುಕು–ಬರಹ, ಮಂತ್ರವಿದ್ಯೆ, ಜರ್ಮನ್ ಸಂಪ್ರದಾಯ ದರ್ಪಣ (ಅನುವಾದಗಳು), ಅಜಿತ ಪುರಾಣ ಸಂಗ್ರಹ, ಪಂಪ ಭಾರತ ಸಂಗ್ರಹ, ಪುರಂದರ ಸಾಹಿತ್ಯ ದರ್ಶನ (ಸಂಪಾದನೆ ಇತರರೊಡನೆ)

**ಕೆ. ಆರ್. ಮೋಹನ್[3] :** (ಕಡೂರು ರಾಮಸ್ವಾಮಯ್ಯ ಮೋಹನ್) ಇಂಜನಿಯರಿಂಗ್ ಕಾಲೇಜಿನಲ್ಲಿ ಉಪನ್ಯಾಸಕರು. ಸಾಹಿತ್ಯದಲ್ಲಿ ಬಹಳ ಆಸಕ್ತಿ. ಇವರ ಪ್ರಬಂಧ ಸಂಕಲನ 'ಪ್ರಿಯತಮೆಯ ಶೋಧನೆಯಲ್ಲಿ' ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿದೆ. ಇವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು 20.

---

1 ಜನನ : ಜನವರಿ 26, 1931, ಚಿತ್ರದುರ್ಗ ಜಿಲ್ಲೆ ಭರಮಸಾಗರದಲ್ಲಿ. ತಂದೆ : ಅಣಜಿರಾಮಪ್ಪ ; ತಾಯಿ : ಸಂಜೀವಮ್ಮ.

2 ಜನನ : ಫೆಬ್ರವರಿ 25, 1935, ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರು.

3 ಜನನ : ನವೆಂಬರ್ 28, 1944, ಬೆಂಗಳೂರು ಜಿಲ್ಲೆಯ ಕರೂರು ಗ್ರಾಮದಲ್ಲಿ. ತಂದೆ : ರಾಮಸ್ವಾಮಯ್ಯ ; ತಾಯಿ : ಇಂದಿರಮ್ಮ.

ಮುಖ್ಯವಾದವುಗಳು: ತಾಂತ್ರಿಕ ಉಷ್ಣಚಲನ ಶಾಸ್ತ್ರ, ಥರ್ಮಾ ಮೀಟರ್, ಉಷ್ಣ ತಯಾರಿಕೆ ಮತ್ತು ರಚನೆ, (ವಿಜ್ಞಾನ ಸಾಹಿತ್ಯ), ಮೈಕೆಲ್ ಫ್ಯಾರೆಡೆ, ಲಿಯೊನಾರ್ಡೊ ಡಾವಿಂಚಿ (ಜೀವನ ಚರಿತ್ರೆ) ಮುಂತಾದವುಗಳು.

**ರಘುಸುತ**[1] **:** (ಕಸ್ತೂರಿ ರಘುನಾಥಾಚಾರ್ ರಂಗಾಚಾರ್) ಕಾಲೇಜು ಅಧ್ಯಾಪಕ. ನುರಿತ ಸಾಹಿತಿ.

ಒಟ್ಟು ಕೃತಿಗಳ ಸಂಖ್ಯೆ ಸುಮಾರು 60 ಎಂದರೆ ಇವರ ಬಹುಮುಖ ಪ್ರತಿಭೆ ಅರಿವಾದೀತು.

ಮುಖ್ಯ ಕೃತಿಗಳು: ಫ್ರಂಟ್ ಸೀಟ್ (ಪ್ರಬಂಧ), ನಾಡಿಗೇರ್ (ಸಂಪಾದನೆ), ಕೊಡುಗೆ, ವೀರಗರುಡ (ಕಥಾಸಂಕಲನ), ವೀಣೆಯ ತಂತಿ (ಕವನ), ವಿದುರಾಶ್ವತ್ಥ ರಾಮಾನುಜಾಚಾರ್ಯರು (ಶಿಶುಸಾಹಿತ್ಯ), ಮಾನವನ ಭೂಗೋಳ ಮರೀಚಿಕೆ (ಭೂ ವಿಜ್ಞಾನ), ಪ್ಲಾಟ್‌ಫಾರಂ ಪ್ರಣಯ, ಎಡಬಿಡಂಗಿ (ನಾಟಕಗಳು), ಭಾರತರತ್ನ ಶ್ರೀಮತಿ ಇಂದಿರಾಗಾಂಧಿ (ಜೀವನಚರಿತ್ರೆ)—ಮುಂತಾದವು.

**ಸಿದ್ಧಲಿಂಗಯ್ಯ**[2] **:** ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರದಲ್ಲಿ ಸಂಶೋಧಕರಾಗಿದ್ದಾರೆ. ಒಳ್ಳೆಯ ಕವಿ, ಪ್ರಬಂಧಕಾರ ಹಾಗೂ ನಾಟಕಕಾರ. ರಾಜ್ಯಸರ್ಕಾರದಿಂದ ಪುರಸ್ಕೃತಗೊಂಡಿದ್ದಾರೆ.

ಇವರ ಮುಖ್ಯ ಕೃತಿಗಳು: ಅವತಾರಗಳು (ಪ್ರಬಂಧ), ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು (ಕವನ), ಪಂಚಮಿ ಮತ್ತು ನೆಲಸಮ (ನಾಟಕ).

ಒಟ್ಟು ಕೃತಿಗಳ ಸಂಖ್ಯೆ ಸುಮಾರು 12.

ಈ ದಿಸೆಯಲ್ಲಿ ದುಡಿಯುತ್ತಿರುವ ಇತರ ಪ್ರಮುಖರು: 'ಗಂಧಮಾದನ' (14 ಪ್ರಬಂಧಗಳ ಸಂಕಲನ), 'ಹಾದಿ ಪುರಾಣ' 'ಚಂಕ್ರಮಣ' ಸೃಷ್ಟಿಸಿರುವ **ಡಾ॥ ಮ. ಸು. ಕೃಷ್ಣಮೂರ್ತಿ**, 'ಅನುಭವ ತರಂಗ' (ಮೂಲ ಇಂಗ್ಲೀಷ್ ಕೃತಿ–'ಡೈಲಿ ಡೈಜೆಸ್ಟ್')ದ ಕರ್ತೃ **ಪಿ. ಡಿಸೌಜ ಪ್ರಭು**, (ಅನುವಾದ: **ಎಸ್. ರಜತಾದ್ರಿ**) 'ಆಯ್ದ ಪ್ರಬಂಧಗಳು' ನೀಡಿರುವ **ಸುಲೋಚನಾದೇವಿ ಆರಾಧ್ಯ**, 'ಮಾತಿನ ಬಳ್ಳಿ'ಯ **ಜಿ. ಎ. ರೆಡ್ಡಿ**[3], 'ನಾಮದಬಲ ಮತ್ತು ಇತರ ಪ್ರಬಂಧಗಳ ಲೇಖಕ **ಕೆ. ರಾಮಕೃಷ್ಣ ಉಡುಪ**, 'ಪ್ರಚರಿತ'ದ ಕರ್ತೃ **ಅರಳುಮಲ್ಲಿಗೆ ಪಾರ್ಥಸಾರಥಿ**, 'ಸಾಹಿತ್ಯ ತರಂಗ'

---

1 ಜನನ: ಮೇ 8, 1929. ಬೆಂಗಳೂರು ಜಿಲ್ಲೆ ಚಿಕ್ಕಬಳ್ಳಾಪುರದಲ್ಲಿ. ತಂದೆ: ರಘುನಾಥಾಚಾರ್ಯ; ತಾಯಿ: ಇಂದಿರಮ್ಮ.

2 ಜನನ: ಫೆಬ್ರವರಿ 3, 1954, ರಾಮನಗರ ತಾಲೋಕು 'ಮಂಚನಬೆಲೆ'ಯಲ್ಲಿ. ತಂದೆ: ದೇವಯ್ಯ. ತಾಯಿ: ವೆಂಕಟಮ್ಮ. ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು.

3 ಇವರ ಇತರ ಕೃತಿಗಳು: ಶ್ರೀರಂಗರಾಯ (ನಾಟಕ), ಒಡೆಸ್ಸಿ (ಗದ್ಯಾನುವಾದ, ಇಂಗ್ಲೀಷ್ ಸಾಹಿತ್ಯ ಚಿತ್ರಗಳು (ಗದ್ಯಚಿತ್ರಗಳು). ಶ್ರೀಪುರಂದರದಾಸರು, ಹೊಯ್ಸಳ ವೀರ ಬಲ್ಲಾಳ, ಇಲಿಯೆಡ್, ಅಶ್ರುಧಾರೆ, ಹೊಯ್ಸಳ ದೇವಾಲಯಗಳು ಮುಂತಾದವು.

ಬರೆದಿರುವ **ಕೆ. ವೆಂಕಟರಾಯಾಚಾರ್ಯ**, 'ಜೇಷ್ಠನಿಗೆ ಬಂದ ಅನಿಷ್ಟ' ನಗೆಬರಹದ **ಸಾ. ಕೃ. ಪ್ರಕಾಶ್**, 'ಕಬ್ಬು ಕುಡುಗೋಲು', 'ನಗೆನಾಣ್ಯ' ಕೃತಿಗಳ **ಹೇರೂರು ರಾಮಶಾಸ್ತ್ರಿ ಶಂಕರನಾರಾಯಣ**[1], 'ಹೊಸ ಪ್ರವಾಹ' ಸಂಕಲನದ **ವಿರೂಪಾಕ್ಷಗೌಡ, ಕುಸಿಟ್ರೆಗೌಡ (ವಿರೂಪಾಕ್ಷ)**, 'ಚಿಂತೆ ಚಿಂತನ'ದ **ಪ್ರಭುಶಂಕರ**, 'ಸಂಸ್ಥಾನಿಕರು' ಕೃತಿಯ **ಗೋವಿಂದಮೂರ್ತಿ ದೇಸಾಯಿ**, 'ಸಾಹಿತಿ ಕಂಡ ಸಮಾಜ' ಕೃತಿಯ ಗಗನವಿಹಾರಿ (ಬಾಳೇಶ ಲಕ್ಷೆಟ್ಟಿ), 'ಹುಟ್ಟೂರಿನ ಮೋಹ' ಚಿತ್ರಿಸಿರುವ ವಿ. ಎಸ್. ರಾಮಕೃಷ್ಣ.

ಹರಟೆ, ವಿಡಂಬನ ಹಾಗೂ ಹಾಸ್ಯ ಲೇಖನಗಳು, ಲಲಿತ ಪ್ರಬಂಧದ ವಿವಿಧ ಅಂಗಗಳೆಂದೇ ಪರಿಗಣಿಸಬಹುದು. ಈ ವಿಭಾಗ ಸಂಪನ್ನಗೊಳಿಸಲು ಅನುಪಮ ಸೇವೆ ಸಲ್ಲಿಸಿರುವ ನಾ. ಕಸ್ತೂರಿ[2], ರಾಶಿ[3], ಬೀಚಿ[4], ಜಿ. ಪಿ. ರಾಜರತ್ನಂ[5], ದಾಶರಥಿ ದೀಕ್ಷಿತ್[6], ಸಿದ್ಧವನಹಳ್ಳಿ ಕೃಷ್ಣಶರ್ಮ[7], ಬೇಂದ್ರೆ[8], ಆನಂದಕಂದ[9], ಶ್ರೀರಂಗ[10], ಎನ್ಕೆ[11] ಮುಂತಾದವರು ಉಲ್ಲೇಖನೀಯರು. ಇವರುಗಳ ಬಗ್ಗೆ ಹಿಂದೆಯೇ ಹೇಳಿದ್ದೇನೆ. ಈಗ ಈ ಪ್ರಕಾರದ ಇನ್ನಿತರರ ಪರಿಚಯ ಮಾಡಿಕೊಳ್ಳೋಣ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್**[12] : ಆಧುನಿಕ ಕನ್ನಡ ಸಾಹಿತ್ಯ ದಿಗ್ಗಜರುಗಳಲ್ಲಿ ಒಬ್ಬರು. ಹೊಸಗನ್ನಡ ಗದ್ಯ ಲೇಖಕರಲ್ಲಿ ಗಣ್ಯರು. ಪ್ರಬಂಧ, ಹಾಸ್ಯ, ವಿಡಂಬನಾಕ್ಷೇತ್ರದಲ್ಲಿ ಅತ್ಯಂತ ಪ್ರಮುಖರು.

ಗಾಂಧಿ ಸಾಹಿತ್ಯ ನಿರ್ಮಾಣದಲ್ಲಿ ಗೊರೂರರ ಪಾತ್ರ ಗಣ್ಯವಾದದ್ದು. ಗಾಂಧೀಜಿಯವರ ಆತ್ಮಕಥೆಯೂ ಸೇರಿ ಅನೇಕ ಗಾಂಧಿ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 1940ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ವಿದ್ವಾನ್ ಪರೀಕ್ಷೆ ಪಾಸು ಮಾಡಿಕೊಂಡ ಇವರು ತಮ್ಮ ಜೀವಿತವನ್ನೆಲ್ಲಾ ಸಾಹಿತ್ಯ, ಸಂಸ್ಕೃತಿಗಳ ಉನ್ನತಿಗಾಗಿಯೇ ಶ್ರಮಿಸುತ್ತಿದ್ದಾರೆ. ಸಂಸ್ಕೃತ, ಇಂಗ್ಲೀಷ್ ಹಾಗೂ ತಮಿಳಿನಲ್ಲಿ ಇವರಿಗೆ ಸಾಕಷ್ಟು ಪಾಂಡಿತ್ಯವಿದೆ. ಇವರದು ಬಹುಮುಖ ಪ್ರತಿಭೆ. ಕಥಾ, ಕಾದಂಬರಿ ಕ್ಷೇತ್ರಗಳನ್ನೂ ಸಂಪನ್ನಗೊಳಿಸಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿಯು ಇವರನ್ನು 1969ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---

1 ಜನನ: ಜನವರಿ 9, 1927.

2 ಪುಟ 266 ನೋಡಿ.

3 ಪುಟ 329 ನೋಡಿ.

4 ಪುಟ 209 ನೋಡಿ.

5 ಪುಟ 362 ನೋಡಿ.

6 ಪುಟ 273 ನೋಡಿ.

7 ಪುಟ 328 ನೋಡಿ.

8 ಪುಟ 147 ನೋಡಿ.

9 ಪುಟ 199 ನೋಡಿ.

10 ಪುಟ 267 ನೋಡಿ

11 ಪುಟ 271 ನೋಡಿ. ಇವರಿಗೆ 1981ರ ರಾಜ್ಯಪ್ರಶಸ್ತಿ ದೊರೆತಿದೆ.

12 ಜನನ: ಜುಲೈ 4, 1904. ಎರಡು ಬಾರಿ ಇವರು ವಿಧಾನಪರಿಷತ್ತಿನ ಸದಸ್ಯರಾಗಿದ್ದರು.

ಪ್ರಮುಖ ಕೃತಿಗಳು: ಹಳ್ಳಿಯ ಚಿತ್ರಗಳು, ನಮ್ಮೂರಿನ ರಸಿಕರು, ಗರುಡ ಗಂಬದ ದಾಸಯ್ಯ, ಬೈಲಹಳ್ಳಿ ಸರ್ವೆ (ಲಲಿತ ಪ್ರಬಂಧಗಳು); ಮೆರವಣಿಗೆ. ಹೇಮಾವತಿ, ವಯ್ಯಾರಿ, ಮಲೆನಾಡವರು. ರಾಜನರ್ತಕಿ (ಕಾದಂಬರಿಗಳು). ಬೆಸ್ತರ ಕರಿಯ, ಶಿವರಾತ್ರಿ, ಕನ್ಯಾಕುಮಾರಿ ಮತ್ತು ಇತರ ಕಥೆಗಳು (ಕಥಾ ಸಂಕಲನಗಳು); ಭಾರತ ಭಾಗ್ಯ ವಿದಾತ, ಮದ್ಯಪಾನ ವಿಮೋಚನೆ, ಜಗದ್ಗುರುಗಳ ದಿವ್ಯಬೋಧೆ, ಗೋಪುರದ ಬಾಗಿಲು, (ಇತರೆ), ಹಳ್ಳಿಯ ಬಾಳು (ವಿವೇಚನೆ): ಸಾಹಿತ್ಯರಶ್ಮಿ (ವಿಮರ್ಶೆಗಳ ಸಂಗ್ರಹ), ಹಳ್ಳಿಯ ಹಾಡುಗಳು (ಸಂಗ್ರಹ).

**ನಾಡಿಗೇರ್ ಕೃಷ್ಣರಾಯರು*:** ಕನ್ನಡ ಸಾಹಿತ್ಯದ ಹಾಸ್ಯ/ವಿಡಂಬನ ಕ್ಷೇತ್ರದಲ್ಲಿ ಶಾಶ್ವತವಾಗುಳಿಯುವ ಹೆಸರು. ಇವರು ಹೆಚ್ಚಿಗೆ ಓದಿದವರಲ್ಲ. ಆದರೂ ಜೀವನ ಪಾಠಶಾಲೆಯಲ್ಲಿ ಗಳಿಸಿದ್ದು ಅಪಾರ. ಲೋಕಮತ, ಸಂಯುಕ್ತ ಕರ್ನಾಟಕ, ಕಥಾಂಜಲಿ, ಪ್ರಜಾಮತ, ದೇಶಬಂಧು ಮುಂತಾದ ಪತ್ರಿಕೆಗಳಲ್ಲಿ ದುಡಿದ ಅನುಭವ.

ಅ.ನ.ಕೃ.ರವರು ಕೆಳಗಿನ ಪದ್ಯದಲ್ಲಿ ಇವರ ವ್ಯಕ್ತಿಚಿತ್ರ ಕಡೆದು ನಿಲ್ಲಿಸಿದ್ದಾರೆ.

> 'ಪತ್ರಿಕೋದ್ಯಮಿಯಾಗಿ ಕಟ್ಟಿದನು ಗೆಜ್ಜೆ
> ಕಾದಂಬರಿಗಳ ಬರೆದು ಹಾಕಿದನು ಹೆಜ್ಜೆ
> ನಗೆ ಹರಟೆಗಳ ರಚಿಸಿ ಬಾರಿಸಿದ ಡೋಲು
> ಇವನ ಜೀವನ ಹಿರಿದು–ಇವಗಿಲ್ಲ ಸೋಲು'

ನಾಡಿಗೇರರು ಕಥೆ, ಕಾದಂಬರಿ, ಹಾಸ್ಯಲೇಖನ. ವಿಡಂಬನ ಸಾಹಿತ್ಯ, ಜೀವನ ಚಿತ್ರ, ಮುಂತಾದ ವಿಭಾಗಗಳಲ್ಲಿ ಹೇರಳವಾಗಿ ಕೃತಿ ರಚಿಸಿದ್ದಾರೆ.

ಮುಖ್ಯ ಕೃತಿಗಳು: ತಲೆಹರಟೆ, ಪರೆಕು-ಮುರುಕು, ಕಸದ ಬುಟ್ಟಿ, ಅಡ್ಡಾದಿಡ್ಡಿ, ಕೇಡಿಗನಕಿಡಿಗಳು, ನಾಡಿಗೇರರ ಬರಹಗಳು, ನಾಡಿಗೇರರ ನಗೆ ಮಿಂಚುಗಳು, ನಾಮಕರಣ, ಮೈಕಾಸುರನ ಹಾವಳಿ, ಸ್ವಾರಸ್ಯ ಪ್ರಸಂಗ, ಏನೋ ಆಯಿತು, ಹೇಗಿದ್ದರೂ ಕಷ್ಟ, ರಾಯಭಾರಿ, ಬೇಸ್ತು, ನೈಲಾನ್ ಹುಡುಗಿ, ಮೆಲ್ಲೋಗರ (ಹಾಸ್ಯ ಸಂಕಲನಗಳು); ಎದಿರೇಟು, ರಾಜಕಾರಣಿ, ಗುಲಾಮ, ಮೂರಕ್ಕೆ ಮುಕ್ತಿ, ಗಗನ ಚಂದಿರ, ಅದಲು ಬದಲು. ನರಕದಲ್ಲಿ ಸ್ವರ್ಗ, ಇಬ್ಬರು ಸುಂದರಿಯರು, ನಾಲ್ಕು ಸುಂದರಿಯರು, ತುಳಸಮ್ಮನ ಸಂಸಾರ, ಪ್ರೇಮ ಮಂಟಪ, ಸೆರಗಿನಲ್ಲಿ ಬಿದ್ದ ಹೆಣ್ಣು, ಗಾನನಂದಿನಿ, ಶಿಲಾಬಾಲಿಕೆ, ಬೆಂಕಿಯ ಹೂವು, ಕನಸಿನ ರಾಣಿ, ಸುಜಾತ, ಮೂವರು ಗೆಳತಿಯರು, ನೀಲವೇಣಿ, ಪ್ರೇಮವಂಚಿತ, ಕಮಲೆಯ ಕನಸು, ಪ್ರಿಯಸಖಿ— ಮುಂತಾದ ಕಾದಂಬರಿಗಳು.

'ಶ್ರೀ ಹರಿಹರ ಕ್ಷೇತ್ರ'—ಕ್ಷೇತ್ರ ಪರಿಚಯ. 'ಪೂಜಾರಿ ಪುಟ್ಟಯ್ಯ' (ಹಾಸ್ಯ ನಾಟಕ). ಒಟ್ಟು ಕೃತಿಗಳ ಸಂಖ್ಯೆ ಸುಮಾರು–70.

---

* ಜನನ: ಆಗಸ್ಟ್ 25. 1908. ಹರಿಹರದಲ್ಲಿ. ಕಾವ್ಯನಾಮ: ಗೋವಿನಾರ. ತಂದೆ: ದತ್ತಾತ್ರೇಯ ರಾಯ; ತಾಯಿ: ಕಾಮಾಕ್ಷಮ್ಮ.

**ಸಿಂಪಿ ಲಿಂಗಣ್ಣ**[1] : 'ಬೆಡಗಿನ ನುಡಿಗಾರ', 'ಹಾಸ್ಯಯೋಗಿ' ಎಂದು ಪ್ರಸಿದ್ಧರಾಗಿರುವ ಶ್ರೀಯುತರು ತಮ್ಮ ಜೀವನದುದ್ದಕ್ಕೂ ಪ್ರಥಮಗಳ ದಾಖಲೆಯನ್ನೇ ನಿರ್ಮಿಸಿದ್ದಾರೆ. ಇವರ ಸಾಹಿತ್ಯ ಕೊಡುಗೆಗಳು ಎಷ್ಟು ಅಮೂಲ್ಯ ಹಾಗೂ ವೈವಿಧ್ಯಪೂರ್ಣವಾಗಿವೆಯೆಂದರೆ ಇವರ ಜೀವನ ಹಾಗು ಸಾಹಿತ್ಯ ಕುರಿತೇ ಪ್ರೊ॥ ವಾಲಿಯವರು ಸಂಶೋಧನಾತ್ಮಕ ಪ್ರಬಂಧ ಮಂಡಿಸಿ ಡಾಕ್ಟರೇಟ್ ಗಳಿಸಿದ್ದಾರೆ. 'ಶಿಕ್ಷಣ' ಇವರು ಆರಿಸಿಕೊಂಡಿದ್ದ ಜೀವನವೃತ್ತಿ. ಸಾಹಿತ್ಯೋದ್ಯಮ ಅದರಲ್ಲೂ 'ಪ್ರಬಂಧ' 'ಲಘು ಹಾಸ್ಯ' ಇವರು ರೂಢಿಸಿ ಯಶಸ್ಸು ಗಳಿಸಿದ ಮಾಧ್ಯಮಗಳು. 'ಆದರ್ಶ ಶಿಕ್ಷಕ' ಪ್ರಶಸ್ತಿ ಗಳಿಸಿದ್ದಾರೆ.

ನಾಟಕ, ರಚನೆ, ಜಾನಪದಸಾಹಿತ್ಯ ಸಂಪಾದನೆ ಇವರು ಬಹು ಆಸಕ್ತಿಯಿಂದ ಸಂಪನ್ನಗೊಳಿಸಿದ ಇತರ ಸಾಹಿತ್ಯ ವಿಭಾಗಗಳು.

ಇವರ ಸಾಹಿತ್ಯಕ್ಕೆ ಬಹುಮಾನ. ಪ್ರಶಸ್ತಿಗಳ ಸರಮಾಲೆಗಳೇ ಸಂದಿದೆ.

'ಸ್ವರ್ಗ ದೋಲೆಗಳು' (ಮುಂಬಯಿ ಸರಕಾರದಿಂದ) 'ನೂರು ಗಡಿಗೆ ಒಂದು ಬಡಿಗೆ' 'ನಾಟ್ಯ ಸಾಧನೆ', 'ಶ್ರುತಾಶ್ರುತ' (ಕ. ಸಾ. ಅಕಾಡೆಮಿ ಬಹುಮಾನಗಳು).

ಕೃತಿಗಳ ಸಂಖ್ಯೆ ಸುಮಾರು 60.

ಮುಖ್ಯ ಕೃತಿಗಳು : ಗರತಿಯ ಬಾಳ ಸಂಹಿತೆ. ತಲೆಮಾರಿನ ಹಿಂದೆ, ದಿಟ್ಟಿಸಿ ನೋಡಿದರೆ, ಅಸ್ತವ್ಯಸ್ತ, ಧರ್ಮಸಭೆ. ಆಹಾರ ಸಮಸ್ಯೆ, ಕುಟುಂಬ ಯೋಜನೆ: ಕೃತಿಚೌರ್ಯ (ಹಾಸ್ಯ ಪ್ರಬಂಧಗಳು) ; ಶ್ರೀರಾಮ, ಪರಮಹಂಸ, ಮರೆಮುಚ್ಚುಕ (ನಾಟಕಗಳು), ಗರತಿಯ ಹಾಡು. ಜೀವನ ಸಂಗೀತ, ಮಲ್ಲಿಗೆ ದಂಡೆ (ಸಂಪಾದಿಸಿರುವ ಜಾನಪದ ಗೀತ ಸಂಗ್ರಹಗಳು). ದೇಶಭಕ್ತಿಯ ಕಥೆಗಳು, ವಿಶ್ವಾಮಿತ್ರನ ಸುಹಾಸ, ನಾಮದೇವ, ಭಗವಾನ್‌ಬುದ್ಧ, ಅಂದ ಚಂದ (ಶಿಶುಸಾಹಿತ್ಯ).

ಜೀವನದೃಷ್ಟಿ, ಬಾಳಬಟ್ಟೆ, ಜನಾಂಗದ ಜೀವನ, ಗರತಿಯ ಬಾಳು, ದತ್ತ ಸಾಹಿತ್ಯ (ವಿಮರ್ಶಾತ್ಮಕ ಪ್ರಬಂಧಗಳು) ; 'ನಮಸ್ಕಾರ' (ಗದ್ಯಗೀತ ಸಂಗ್ರಹ).

**ಟಿ. ಸುನಂದಮ್ಮ**[2] : ಹಾಸ್ಯ, ವಿಡಂಬನ ಸಾಹಿತ್ಯ ಕ್ಷೇತ್ರದಲ್ಲಿ ಹೆಸರಿಸಲೇಬೇಕಾದ ಹೆಸರು. ರೇಡಿಯೋ ನಾಟಕಗಳು, ಪ್ರಹಸನಗಳ ಮೂಲಕ ಜನರ ಮನದಲ್ಲಿ ನೆಲೆಸಿದ್ದಾರೆ.

ಇವರ ಕೃತಿಗಳು : ವೃಕ್ಷವಾಹನ. ಜಂಬದ ಚೀಲ. ಗೃಹಲಕ್ಷ್ಮಿ, ಚಿಕ್ಕಪ್ಪನ

---

1 ಜನನ : 1905. 'ಚಡಚಣ'ದಲ್ಲಿ. ಕಾವ್ಯನಾಮ : ಭರತ.

2 ಜನನ : ಆಗಸ್ಟ್ 1917. ಹುಟ್ಟಿದೂರು
ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆಯಾಗಿದ್ದರು. 'ಸುನಂದಾಭಿನಂದನ' ಅಭಿಮಾನಿಗಳು ವಿಶ್ವಾಸಪೂರ್ವಕವಾಗಿ ಅರ್ಪಿಸಿರುವ ಗ್ರಂಥ.

ಉಯಿಲು, ಸದಾಶಿವನ ಸ್ವಯಂವಧು, ಕೂಸುಹುಟ್ಟುವುದಕ್ಕೆ ಮುಂಚೆ, ತೆನಾಲಿ ರಾಮಕೃಷ್ಣ, ಚಕ್ರಚುಕ್ಕೆ, ನನ್ನ ಅತ್ತಗಿರಿ ಮತ್ತು ಇತರ ನಗೆ ಅಲೆಗಳು.'

'ಕನಸು ನನಸಾಯ್ತು', 'ತಾರಿನ ಹಂಬಲ' (ಗೀತ ರೂಪಕಗಳು), ಆಧುನಿಕ ನಗೆ ಸಾಹಿತ್ಯ (ಪ್ರಬಂಧ) ; ಬಾದರಾಯಣ (ಅನುವಾದ).

ಕರ್ನಾಟಕ ಸಾಹಿತ್ಯ ಅಕಾಡಮಿ 1981ರಲ್ಲಿ ಪ್ರಶಸ್ತಿ ನೀಡಿ ಇವರ ಸಾಹಿತ್ಯ ಸೇವೆಯನ್ನು ಗೌರವಿಸಿದೆ. ಇವರು ಕೆಲವರ್ಷ ಸಾಹಿತ್ಯ ಅಕಾಡೆಮಿಯ ಸದಸ್ಯ ಕೂಡ ಆಗಿದ್ದರು.

ಇವರ ಹಲವಾರು ಕೃತಿಗಳು ಇಂಗ್ಲೀಷಿಗೂ ಅನುವಾದಗೊಂಡಿವೆ.

**ಬೀಚಿ**[1] : ಹಾಸ್ಯಲೇಖನ, ಹರಟೆ, ಕಥೆ, ಕಾದಂಬರಿ, ಪ್ರಬಂಧಗಳಿಗೆ ಹೆಸರಾಂತರು.

ಇವರ ಪ್ರಮುಖ ಹರಟೆಗಳು : ತಿಂಮನ ತಲೆ, ಹುಚ್ಚುಮುಂಳು, ಚಿನ್ನದಕಸ, ಬೆಳ್ಳಿತಿಂಮ ನೂರೆಂಟು ಹೇಳಿದ, ಆರು ಏಳು ಸ್ತ್ರೀಸೌಖ್ಯ, ಆಗಿಷ್ಟು ಈಗಿಷ್ಟು, ಅಮ್ಮಾವ್ರ ಕಾಲ್ಗುಣ, ಸಾಹುಕಾರ ಸುಬ್ಬಮ್ಮ, ಮಹಾಯುದ್ಧ, ದೇವರು ಕೊಟ್ಟದ್ದು, ಕತ್ತಲಲ್ಲಿ ಬಂದವಳು, ಹೆಂಡತಿ ನಕ್ಕಾಗ, ಮಾತನಾಡುವ ದೇವರುಗಳು, ಗರತಿಯಗುಟ್ಟು, ಸಂಪನ್ನರಿದ್ದಾರೆ ಎಚ್ಚರಿಕೆ ಮುಂತಾದವು.

ತಿಂಮರಸಾಯನ (ಶಬ್ದಕೋಶ).

**ಡಾ|| ವೈ. ಎನ್. ಎಸ್. ಮೂರ್ತಿ**[2] : ವೃತ್ತಿಯಲ್ಲಿ ವೈದ್ಯರಾದರೂ ಪ್ರವೃತ್ತಿಯಲ್ಲಿ ಲೇಖಕರು. ಹಾಸ್ಯ ಸಾಹಿತ್ಯ ಪ್ರಕಾರದಲ್ಲಿ ಇತ್ತೀಚೆಗೆ ಬಹಳ ಹೆಸರು ಮಾಡಿರುವವರು. ದೂರದರ್ಶನದಲ್ಲಿ ಪ್ರಸಾರಗೊಂಡ 'ವೈದ್ಯೋನಾರಾಯಣೋ ಹರಿಃ' ಪ್ರಾಯೋಜಿತ ಕಾರ್ಯಕ್ರಮದ ಕರ್ತೃ. ನಗೆ ಲೇಖನಗಳಲ್ಲದೆ ವಿವಿಧ ರೀತಿಯ ಲೇಖನಗಳು ರಾಜ್ಯದ ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟಗೊಳ್ಳುತ್ತಿರುವುದು ಇವರ ಜನಪ್ರಿಯತೆಯ ದ್ಯೋತಕ.

**ಹೆಚ್. ಎಸ್. ಕೃಷ್ಣ**[3] : ಬ್ಯಾಂಕ್ ಮ್ಯಾನೇಜರ್ ಆಗಿರುವ ಶ್ರೀಯುತರಿಗೆ ಸಾಹಿತ್ಯದಲ್ಲಿ ಅಪಾರ ಆಸಕ್ತಿ. 'ನಗೆ ಸಾಹಿತ್ಯ' ಹೆಚ್ಚಿಗೆ ಪ್ರಿಯವಾದ ವಿಭಾಗ. ಇವರ ಲೇಖನಗಳು ರಾಜ್ಯದ ಎಲ್ಲಾ ಹೆಸರಾಂತ ಪತ್ರಿಕೆಗಳಲ್ಲೂ ಕಾಣಬರುತ್ತಿವೆ.

'ಹಾಸ್ಯದ ಹೊನಲು' ಆಯ್ದ ಲೇಖನಗಳ ಸಂಕಲನ.

---

1 ಪುಟ 209 ನೋಡಿ.

2 ಜನನ : ಮೇ 11, 1932, ಬೆಂಗಳೂರಿನಲ್ಲಿ. ತಂದೆ : ನಾರಾಯಣಮೂರ್ತಿ. ತಾಯಿ : ಪದ್ಮಾವತಮ್ಮ.

3 ಜನನ : ಡಿಸೆಂಬರ್ 13, 1949. ಮೈಸೂರಿನಲ್ಲಿ. ತಂದೆ : ಸುಬ್ಬರಾವ್. ತಾಯಿ : ಕಿಟ್ಟಮ್ಮ. ಕಾವ್ಯನಾಮ : ಕೃಷ್ಣಸುಬ್ಬರಾವ್ ; ಸುಕೃತ.

**ಎಂ. ಎಸ್. ನರಸಿಂಹಮೂರ್ತಿ**[1] **:** ಸಾಹಿತ್ಯದ 'ನಗೆಬರಹ' ಪ್ರಕಾರದಲ್ಲಿ ಹೆಸರಿಸಬೇಕಾದ ವ್ಯಕ್ತಿ. ಇತರ ಸಾಹಿತ್ಯ ಪ್ರಕಾರಗಳನ್ನೂ ಸಂಪನ್ನಗೊಳಿಸಿದ್ದಾರೆ. ಪುಸ್ತಕ ಸಾಹಿತ್ಯ, ವಿಚಾರ ಸಾಹಿತ್ಯಗಳಲ್ಲದೆ ಕಾದಂಬರಿ ಕ್ಷೇತ್ರದಲ್ಲೂ ಕೃಷಿಮಾಡಿದ್ದಾರೆ.

ಇವರ ಕೃತಿಗಳ ಸಂಖ್ಯೆ ಸುಮಾರು 15. 'ಸ್ವಯಂವಧು' ನಗೆಬರಹಗಳ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿದೆ (1974). 'ಸಮಗ್ರ ಹಾಸ್ಯ' ಒಂದು ಸಹಸ್ರ ಪುಟಗಳ ನಗೆಬರಹಗಳ ಬೃಹತ್ ಸಂಕಲನ.

ಇತರ ಕೃತಿಗಳು : ಟೈರ್ ಪ್ರಶಸ್ತಿ ವಿಜೇತ, ಶ್ರಮದಾನ, ಬಾಬ್ಬಿ, ಗೂಳಿಕಾಳಗ, ಕಂಡಕ್ಟರ್ ಕರಿಯಪ್ಪ (ದೂರದರ್ಶನದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಜನಪ್ರಿಯಗೊಂಡಿದೆ), ಕಾನಿಷ್ಕೋಪಾಖ್ಯಾನ (ನಗೆಬರಹಗಳು), ಬಾಲಗಂಗಾಧರ ತಿಲಕ್, ಅಶುತೋಷಮುಖರ್ಜಿ, ವಿದ್ಯಾವತಿದೇವಿ, ಮೋಡಂಕಾಮು, (ಬಾಲಸಾಹಿತ್ಯ) : ಭಾರತದ ರಾಷ್ಟ್ರೀಯತೆ (ವಿಚಾರಸಾಹಿತ್ಯ) ; ಮಂದಸ್ಮಿತ (ಕಾದಂಬರಿ).

**ವೈ. ಎಮ್. ಎನ್. ಮೂರ್ತಿ :** 'ಹ್ಯೂಮರ್ ಕ್ಲಬ್' ಸ್ಥಾಪಕರು ಹಾಗೂ ಸಂಪಾದಕರಾದ ಶ್ರೀಯುತರು ರಾಷ್ಟ್ರಾದ್ಯಂತ ಪ್ರಸಿದ್ಧರು. ಇವರ ಹಾಸ್ಯೋಕ್ತಿಗಳನ್ನು ಕೇಳದ ಮತ್ತು ಚುಟುಕ, ವಿಡಂಬನ ಲೇಖನಗಳನ್ನು ಓದದ ಯಾವ ವ್ಯಕ್ತಿಯೂ ಕರ್ನಾಟಕದಲ್ಲಿಲ್ಲವೆಂದರೆ ಅತಿಶಯೋಕ್ತಿಯಾಗದು.

ಅವರ ಹಿತೋಕ್ತಿ/ಸಂಕೇತ, ಉಕ್ತಿಗಳು ಬಹು ಜನಪ್ರಿಯಗೊಂಡಿವೆ;

ಉದಾಹರಣೆಗಾಗಿ ಕೆಲವು :

'ಕೋಪವು ನಂದಿದ ದೀಪವಾಗಿರಲಿ,
ನಗುವು ನಂದದ ದೀಪವಾಗಿರಲಿ'

'ಒಂದು ನಿಮಿಷದ ಪ್ರಕೋಪ
ತರಬಹುದು
ಜೀವನವೆಲ್ಲಾ ಪ್ರಲಾಪ'

Success of an advocate depends
upon his knowing more loopholes
in law than law itself.

**ರಾ. ಕು.**[2] (ಆರ್. ವಿ. ಕುಲಕರ್ಣಿ) : ಪ್ರೌಢಶಾಲೆಯ ಉಪಾಧ್ಯಾಯರು. ಪ್ರಬಂಧ ಹಾಗೂ ಹರಟೆಕ್ಷೇತ್ರದಲ್ಲಿ ಬಹಳ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡ ನಿಘಂಟುವಿನ ಉಪಸಂಪಾದಕರು.

---

1 ಜನನ : ಅಕ್ಟೋಬರ್ 20, 1949. ಕೋಲಾರ ಜಿಲ್ಲೆ 'ಮಾಲೂರು' ಗ್ರಾಮದಲ್ಲಿ. ತಂದೆ : ಎಂ. ಎ. ಸೂರಪ್ಪ. ತಾಯಿ : ಸಾವಿತ್ರಮ್ಮ.

2 ಜನನ : 1918. ಹುಬ್ಬಳ್ಳಿಯಲ್ಲಿ.

ಪ್ರಮುಖ ಕೃತಿಗಳು : ಗಾಳಿಪಟ, ದೇವಕನ್ಯೆ.

ಈ ಕ್ಷೇತ್ರದಲ್ಲಿ ಅನುಪಮ ಸೇವೆ ಮಾಡುತ್ತಿರುವ ನಾಡಿಗೇರ ಗೋವಿಂದರಾಯ, ಅಷ್ಟಾವಕ್ರ, ಹಾರಾ, ಎಚ್. ಎಲ್. ಕೇಶವ ಮೂರ್ತಿ, ಎಂ. ಪಿ. ಮನೋಹರ ಚಂದ್ರನ್, ಕೇಫ, ಸೂರಿಹಾರ್ದಳ್ಳಿ, ಗಣೇಶ ಹೆಗ್ಗಡೆ, ಬಾಗೂರುಚಂದ್ರು, ಟಿ. ಎಸ್. ಸುದರ್ಶನ್, ಹರಿದಾಸ ಆಚಾರ್ಯ, ಬಿ. ಎಸ್. ಚಂದ್ರಶೇಖರ, ಹೆಚ್. ಆರ್. ಸತ್ಯನಾರಾಯಣ ರಾವ್ (ಹೊ ರಾ ಸ), ಪಿಸ್. ಎನ್. ಶಿವಸ್ವಾಮಿ, ಡಾ|| ತಾಳ್ತಜೆ ವಸಂತ ಕುಮಾರ್, ವೆಂ. ವೆಂಕಟಸುಬ್ಬಯ್ಯ, ಕುಮುದಾಪುರುಷೊತ್ತಮ, ಕಾಶಿ ರಘೋತ್ತಮ ರಾವ್, ಭುವನೇಶ್ವರಿ ಹೆಗಡೆ, ಪ್ರಭಾ ಮುಂತಾಗಿ ಇನ್ನೂ ಹಲವರಿದ್ದಾರೆ. ಇವರುಗಳ ಲೇಖನಗಳನ್ನು ನೀವೂ ಪತ್ರಿಕೆಗಳಲ್ಲಿ ನೋಡಿರಬಹುದು ಇವರುಗಳ ವಿವರ ಸಧ್ಯ ನನ್ನ ಬಳಿಯಲ್ಲಿಲ್ಲ ಸಂಗ್ರಹಿಸಿ ಇನ್ನೊಮ್ಮೆ ಹೇಳ್ತೀನೆ" ನುಡಿದು ಮೇಲೆದ್ದರು ವ್ಯಾಸರಾಯರು. "ಇವತ್ತಿಗೆ ಇಷ್ಟು ಸಾಕು ನಾಳೆ ನಮ್ಮ ಪ್ರವಚನ ಮುಂದುವರೆಸೋಣ" ಮೈ ಮುರಿದು ಮತ್ತೆ ನುಡಿದರು.

"ನಾಳೆ ಯಾರ ಬಗ್ಗೆ ಹೇಳ್ತೀರಿ ಮೇಸ್ಟ್ರೆ ?" ದಿನಕರ ಪ್ರಶ್ನಿಸಿದ.

"ಪ್ರವಾಸ ಸಾಹಿತ್ಯ ರಚನಕಾರರ ಬಗ್ಗೆ ನಾಳೆ ಹೇಳ್ತೀನಿ" ನುಡಿಯುತ್ತ ಹೊರ ನಡೆದರು ವ್ಯಾಸರಾಯರು.

—o—

## (೩೧) ಪ್ರವಾಸಕಥನಕಾರರು

ಪ್ರವಾಸದ ಮೂಲ ಉದ್ದೇಶ ಸುಂದರ ಸ್ಥಳ ವೀಕ್ಷಣೆ, ಮನರಂಜನೆ. ಅನ್ವೇಷಣೆ, ವ್ಯಾಪಾರ, ಉಚ್ಚ ವ್ಯಾಸಂಗ, ತೀರ್ಥಯಾತ್ರೆ, ವಿರಾಮ. ವಿಹಾರ ಇವುಗಳಲ್ಲಿ ಯಾವುದೇ ಒಂದಾಗಿರಬಹುದು ಇಲ್ಲವೇ ಎರಡು ಮೂರು ಕೂಡಿರಲೂಬಹುದು. 5ನೇ ಶತಮಾನದ **ಫಾಹಿಯಾನ್** ಮತ್ತು 7ನೇ ಶತಮಾನದ **ಹುಯೆನ್ ತ್ಸಾಂಗ್** ಪ್ರವಾಸ ಸಾಹಿತ್ಯ ರಚಿಸಿದ ಪ್ರಾಚೀನರೆನ್ನಬಹುದು. ಅವರ ಅಂದಿನ ಲೇಖನ ಇಂದೂ ನಮ್ಮ ಪ್ರಾಚೀನ ಪರಂಪರೆಯನ್ನು ಅರಿಯಲು ಮಾರ್ಗದರ್ಶಕಗಳಾಗಿವೆ.

ಪ್ರವಾಸಕಥನಕಾರ ಸಾಹಿತಿಯೇ ಆಗಿರಬೇಕಾಗಿಲ್ಲ. ಕಂಡದ್ದನ್ನು ಕಂಡಂತೇ ಶಬ್ದದಲ್ಲಿ ಪ್ರತಿಮಿಸುವ ಶಕ್ತಿ ಇದ್ದವರೆಲ್ಲಾ ಈ ಸಾಹಿತ್ಯ ರಚಿಸಬಹುದು.

'ಗಲಿವರನ ಪ್ರವಾಸಗಳು' ಇಂತಹ ಒಂದು ಗಣನೀಯ ಪ್ರವಾಸ ಕೃತಿ ಎನ್ನಬಹುದು. 19ನೇ ಶತಮಾನ ಮಧ್ಯದಲ್ಲಿ ಇಂಗ್ಲೆಂಡಿನಲ್ಲಿ ಈ ಸಾಹಿತ್ಯ ಪಲ್ಲವಿಸಿದ್ದನ್ನು **ಲೂಯಿ ಸ್ಟೀವನ್ ಸನ್**‌ನ 'ಕತ್ತೆಯೊಡನೆ ಪ್ರವಾಸಗಳು' ಪುಸ್ತಕದಲ್ಲಿ ಕಾಣುತ್ತೇವೆ.

ಕರ್ನಾಟಕದಲ್ಲಿ ಕರ್ಕಿವೆಂಕಟರಮಣಶಾಸ್ತ್ರಿ ಸೂರಿಗಳು ಈ ವಿಭಾಗದ ಆದ್ಯ ಪ್ರವರ್ತಕರೆನ್ನಬಹುದು (ಸು. 1890). 'ದಕ್ಷಿಣ ಭಾರತ ಯಾತ್ರೆ' ಪ್ರಥಮ ಪ್ರವಾಸ ಕಥನ. ಅನಂತರ ಸುಮಾರು ಮೂರು ದಶಕಗಳು ಈ ವಿಭಾಗದಲ್ಲಿ ಉಲ್ಲೇಖನೀಯ ಕೃತಿಯೊಂದೂ ಪ್ರಕಟಗೊಂಡಂತಿಲ್ಲ. 1926ರ ಸುಮಾರಿನಲ್ಲಿ ಹೊರಬಿದ್ದ ಪ್ರೊ॥ ವಿ. ಸೀತಾರಾಮಯ್ಯನವರ ಹಾಳು ಹಂಪೆಯ ವರ್ಣನೆಯುಳ್ಳ 'ಪಂಪಾಯಾತ್ರೆ' ಈ ದಿಸೆಯಲ್ಲಿ ಉಲ್ಲೇಖನೀಯ ಕೃತಿ.

'ಯಾತ್ರಿಕರು ನಾವು, ದಿವ್ಯಕ್ಷೇತ್ರವೀಲೋಕ', ಡಿ.ವಿ.ಜಿ.ಯವರ ಈ ಮಾತು ಕವಿ ಗೋಕಾಕರ ಜೀವನದಲ್ಲಿ ನಿತ್ಯ ಸತ್ಯ. ಪ್ರವಾಸ ಸಾಹಿತ್ಯವನ್ನು ಕಾವ್ಯಮಯ ಮಾಡಿರುವ ಅಪೂರ್ವ ಕಲಾವಿದರು. 'ಸಮುದ್ರದಾಚೆಯಿಂದ' ಮತ್ತು 'ಸಮುದ್ರ ದೀಚೆಯಿಂದ' ಇವರ ವಿಶಿಷ್ಟ ಕೃತಿಗಳು. 'ಸಮುದ್ರ ಗೀತೆಗಳು', ಮತ್ತು 'ದ್ಯಾವಾ ಪೃಥಿವಿ' ಕನ್ನಡ ಕಾವ್ಯಕ್ಕೆ ಹೊಸಬಗೆಯ ಕಾಣಿಕೆಗಳು. 'ಸಮುದ್ರ ಗೀತೆ'ಗಳಲ್ಲಿ ವಿನಾಯಕರು ನೌಕಾಯಾನದ ಅನುಭವವನ್ನು. 'ದ್ಯಾವಾ ಪೃಥಿವಿ'ಯಲ್ಲಿ ವಿಮಾನ ಯಾನದ ಆನಂದವನ್ನು ಓದುಗರಿಗೆ ನೀಡಿದ್ದಾರೆ.

ಈ ವಿಭಾಗದಲ್ಲಿ ಅಪೂರ್ವ ಸೇವೆ ಮಾಡಿರುವ ಇನ್ನೊಬ್ಬ ಸಾಹಿತಿ ಎಂದರೆ **ಡಾ॥ ಶಿವರಾಮ ಕಾರಂತ**. ಇವರ ಕೃತಿಗಳು : ಉತ್ತರ ಭಾರತ ಪ್ರವಾಸಕಥನದ 'ಅಬೂವಿಂದ ಬರಾಮಕ್ಕೆ' ಯೂರೋಪನ್ನು ಪರಿಚಯಿಸುವ 'ಅಪೂರ್ವ ಪಶ್ಚಿಮ', ಅಮೇರಿಕಾ ಪ್ರವಾಸಕಥನ 'ಪಾತಾಳದತ್ತ ಪಯಣ' ಮುಖ್ಯವಾದವುಗಳು. 'ಚಿತ್ರ ಮಯ ದಕ್ಷಿಣ ಕನ್ನಡ', 'ಚಿತ್ರಮಯ ದಕ್ಷಿಣ ಹಿಂದೂಸ್ಥಾನ' 'ಪಟಲದಲ್ಲಿ ಪಯಣ' ಇವರು ಇದೇ ವಿಭಾಗಕ್ಕೆ ಸಲ್ಲಿಸಿರುವ ಇತರ ಕೃತಿಗಳು.

'ಅಮೇರಿಕಾದಲ್ಲಿ ಗೊರೂರರು' ಕೃತಿ ರಚಿಸಿರುವ **ಗೊರೂರು ರಾಮಸ್ವಾಮಿ ಅಯ್ಯಂಗಾರ್**. 'ನಾ ಕಂಡ ಪಡುವಣ'ದ ಕರ್ತೃ **ದಿನಕರ ದೇಸಾಯಿ**, ಅಮೇರಿಕಾ ಜೀವನವನ್ನು ಯಥಾವತ್ತಾಗಿ ಚಿತ್ರಿಸಿರುವ 'ಅಮೇರಿಕದಲ್ಲಿ ನಾನು' ಕೃತಿಯ **ಡಾ॥ ಬಿ. ಜಿ. ಎಲ್. ಸ್ವಾಮಿ**, 'ಶ್ರೀರಂಗ ಯಾತ್ರೆ'ಯ **ಶ್ರೀರಂಗ**, ಹೈದರಾಬಾದಿನಿಂದ ಶಿವಮೊಗ್ಗೆಯವರೆಗಿನ ಪ್ರವಾಸ ವಿವರಿಸಿರುವ 'ಕನ್ನಡ ಯಾತ್ರೆ'ಯ ಕರ್ತೃ **ಮಾನ್ವಿ ನರಸಿಂಗರಾಯರು**, 'ಭಾರತ ಯಾತ್ರೆ' ಪ್ರವಾಸಕಥನ ರಚಿಸಿರುವ **ಡಿ.ಟಿ. ರಂಗಸ್ವಾಮಿ**, ಅಮೇರಿಕೆಯ ಅಂತರ್ಯವನ್ನೇ 'ನಾನೂ ಅಮೇರಿಕೆಗೆ ಹೋಗಿದ್ದೆ' ಕೃತಿಯಲ್ಲಿ ಬಿಚ್ಚಿ ತೋರಿಸಿರುವ **ಕೃಷ್ಣಾನಂದ ಕಾಮತರು**, 'ವಿದೇಶಿಯರು ಭಾರತ ಕಂಡ ಬಗ್ಗೆ ವಿವರಣೆ ನೀಡಿರುವ ಅಪೂರ್ವ ಕೃತಿ 'ಪ್ರವಾಸಿ ಕಂಡ ಇಂಡಿಯಾ'ದ ಕರ್ತೃ **ಎಚ್. ಎಲ್. ನಾಗೇಗೌಡ**, ಸೈನಿಕನೊಬ್ಬನ ಯುದ್ಧದ ಪ್ರವಾಸವನ್ನು ಮೈನವಿರೇಳುವಂತೆ ವರ್ಣಿಸಿರುವ ಕೃತಿ 'ಸೈನಿಕ ಉವಾಚ', ಇದರ ಕರ್ತೃ **ವೆಂ. ಮು. ಜೋಷಿ**, 'ಪ್ಯಾರಿಸ್ಸಿನಿಂದ ಪ್ರೇಯಸಿಗೆ' ವಿಶಿಷ್ಟ ಕೃತಿ ರಚಿಸಿರುವ **ನವರತ್ನರಾಮ್**, 'ಗೋವಾ ಯಾತ್ರೆ' ಮಾಡಿ

ಸಿರುವ **ಎನ್.ಎಸ್. ಗದಗಕರ್**, 'ಚಿನ್ನದ ಗಿರಿಯಾತ್ರೆ' ಚಿತ್ರಿಸಿರುವ **ಜಿ. ನೆಂಕಟಯ್ಯ**, 'ಸೌಂದರ್ಯದ ಸಾನ್ನಿಧ್ಯದಲ್ಲಿ' ಅಮೋಘ ಚಿತ್ರಣ ನೀಡಿರುವ **ಚಂದ್ರಶೇಖರ ಐತಾಳ**, 'ಭಾರತದ ಮಹಾನಗರಗಳ ದರ್ಶನ' ಮಾಡಿಸಿರುವ **ಟಿ. ಚಂದ್ರರಾಜಶೆಟ್ಟಿ**, 'ಗಷ್ಯಾ ಪ್ರವಾಸ'ಕ್ಕೆ ಕರೆದೊಯ್ಯುವ **ಬಸವರಾಜ ಕಟ್ಟೀಮನಿ** ಹಾಗೂ 'ನವರಷ್ಯದ ನೋಟ'ದ **ಹೆಚ್.ವಿ. ನಾಗರಾಜರಾವ್** (ಹಿಂದಿಗೆ ಅನುವಾದಗೊಂಡಿದೆ ಹಾಗೂ ರಾಜ್ಯ ಅಕಾಡೆಮಿ ಬಹುಮಾನ ಗಳಿಸಿದೆ) 'ಸೋವಿಯತ್ ದಿನಚರಿ' ಬರೆದಿರುವ **ಎಚ್.ವಿ. ಶ್ರೀರಂಗರಾಜ್**, 'ವಿದೇಶದಲ್ಲಿ ನಾಲ್ಕು ವಾರ' ದಿನಚರಿ ರೂಪಿಸಿರುವ **ದೇಜಗೌ**, ಕೈಲಾಸ–ಮಾನಸ ಸರೋವರ ಯಾತ್ರೆಗೆ ಕರೆದೊಯ್ದು 'ಹಿಮಾಲಯ ದರ್ಶನ' ಮಾಡಿಸಿರುವ **ಶ್ರೀಕೃಷ್ಣ ನಾರಾಯಣ ಗೋಸಾವಿ**, 'ಶ್ರೀ ಬದರಿ–ಕೇದಾರನಾಥ ದರ್ಶನ' ಮಾಡಿಸಿರುವ **ಶ್ರೀ ಹನುಮಂತಾಚಾರ್ಯ ರಾಘವೇಂದ್ರಾಚಾರ್ಯ ಪುರೋಹಿತರು**, 'ಇಟಾಲಿಯ–ನಾನು ಕಂಡಂತೆ' ಕೃತಿಯಲ್ಲಿ ಇಟಲಿಯ ರಮ್ಯ ಚಿತ್ರಣ ನೀಡಿರುವ **ಪ್ರೊ|| ಕೆ. ಎಸ್. ಹರಿದಾಸ ಭಟ್ಟ**, [ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ 1971]; 'ಗೆಜ್ಜೆಯ ಹೆಜ್ಜೆ ನುಡಿ' ವಿಶಿಷ್ಟ ಕೃತಿಯ ಕರ್ತೃ ಚಂದ್ರಭಾಗಾದೇವಿ [ರಾ. ಸಾ. ಅ. ಬಹುಮಾನ 1971]. 'ಅಮೇರಿಕಾದಲ್ಲಿ ನಾನು, ಶಾಂತಿ'ಯ ಲೇಖಕ **ಡಾ|| ಪ್ರಭುಶಂಕರ**, 'ಅಪರ ವಯಸ್ಕನ ಅಮೇರಿಕಾ ಯಾತ್ರೆ' ವೈಶಿಷ್ಟ್ಯಪೂರ್ಣ ಕೃತಿ ರಚಿಸಿರುವ **ಡಾ|| ಎ. ಎನ್. ಮೂರ್ತಿ ರಾವ್** [ರಾ. ಸಾ. ಅ. ಬಹುಮಾನ–1979]. 'ಜಗದಗಲ'ದ ಪರಿಚಯ ನೀಡಿರುವ **ಪ್ರೊ|| ಕು. ಶಿ. ಹರಿದಾಸಭಟ್ಟ** [ರಾ. ಸ. ಅ. ಬಹುಮಾನ–1981]. 'ಸಕ್ಕರೆಸೀಮೆ' ಎಂಬ ವಿಶಿಷ್ಟ ಕೃತಿ ರಚಿಸಿರುವ **ಕೆ. ಅನಂತರಾಮು** [ರಾ.ಸಾ.ಅ. ಬಹುಮಾನ-1982] 'ಕುಬೇರ ರಾಜ್ಯದ ಚಿತ್ರ-ವಿಚಿತ್ರ' ಚಿತ್ರಿಸಿರುವ **ರಂಜನಭಟ್ಟ** [ರಾ.ಸಾ.ಅ. ಬಹುಮಾನ 1983], 'ಯೂರೋಪ್ ನೆನಪುಗಳು' ಕೃತಿ ಕರ್ತೃ **ಪಿ. ಆರ್. ಭಟ್** [ರಾ.ಸಾ.ಅ. ಬಹುಮಾನ 1985]. 'ನಾ ಕಂಡ ಪ್ರಪಂಚ' ಬೃಹತ್ ಪ್ರವಾಸ ರಚಿಸಿರುವ **ಎಚ್. ಎಲ್. ನಾಗೇಗೌಡ**, [ರಾ.ಸಾ.ಅ. ಬಹುಮಾನ 1986] ಮುಂತಾದವರುಗಳು ಉಲ್ಲೇಖನೀಯರು.

## (೩) 'ಸಂಕೀರ್ಣ ಸಾಹಿತ್ಯ' ಸಂಪನ್ನಗೊಳಿಸಿರುವವರು

"ಇದುವರೆವಿಗೂ ಕನ್ನಡ ಸಾಹಿತ್ಯದ ಕಾವ್ಯ, ಕಥೆ/ಕಾದಂಬರಿ, ನಾಟಕ, ವಿಮರ್ಶೆ/ಸಂಪಾದನೆ/ಸಂಶೋಧನೆ, ಪತ್ರಿಕೆ, ಶಿಶುಸಾಹಿತ್ಯ, ಪ್ರಬಂಧ, ಪ್ರವಾಸ ಕ್ಷೇತ್ರಗಳಲ್ಲಿ ದುಡಿದಿರುವ ಬಹಳಷ್ಟು ಸಾಹಿತಿಗಳ ಪರಿಚಯುವನ್ನು ಮಾಡಿಕೊಂಡಾ ಯಿತು. ಈಗ ಇನ್ನುಳಿದ ಸಾಹಿತ್ಯ ಪ್ರಕಾರಗಳಾದ ಅನುವಾದ, ಜನಪದ, ಜೀವನ ಚರಿತ್ರೆ, ವಿಜ್ಞಾನ, ಮಾನವಿಕ ಮುಂತಾದ ವಿಭಾಗಗಳಲ್ಲಿ ವಿಶೇಷ ಸೇವೆ ಸಲ್ಲಿಸಿದ, ಸಲ್ಲಿಸುತ್ತಿರುವ ಸಾಹಿತಿಗಳ ಪರಿಚಯುವನ್ನು ಈ 'ಸಂಕೀರ್ಣ ವಿಭಾಗ' ದಡಿ ಮಾಡಿ ಕೊಳ್ಳೋಣ." ಎಂದು ಅಂದಿನ ಪ್ರವಚನ ಪ್ರಾರಂಭಿಸಿದರು ವ್ಯಾಸರಾಯರು.

ಅಂದು ಭಾನುವಾರವಾಗಿದ್ದುದರಿಂದ ವಾಸುದೇವರಾಯರು ಉತ್ಸಾಹದಿಂದ ಹುಡುಗರ ಪಕ್ಕದಲ್ಲೆ ಒಂದು ಕುರ್ಚಿಯನ್ನು ಹಾಕಿಕೊಂಡು ಕುಳಿತುಕೊಂಡರು.

**ಚುರಮುರಿ ಶೇಷಗಿರಿರಾಯರು**[1] **:** ಪ್ರಸಿದ್ಧ ಅನುವಾದಕರು. ಇವರು ಸರಕಾರದ ಲೋಕೋಪಯೋಗಿ ಇಲಾಖೆಯಲ್ಲಿ ಓವರ್‌ಸಿಯರ್ ಆಗಿ ಕೆಲಸ ಮಾಡು ತ್ತಿದ್ದರು. (1870) ಅನುವಾದಕ್ಕೆ ಇವರು ಉಪಯೋಗಿಸಿರುವ ಶೈಲಿ 'ದೇಸಿ ಮತ್ತು ಮಾರ್ಗ'. ಶೂದ್ರ ಕವಿಯ 'ಮೃಚ್ಛ ಕಟಿಕ' ವನ್ನು ಗದ್ಯ ರೂಪದಲ್ಲೂ ಅನು ವಾದ ಮಾಡಿದ್ದಾರೆ. ಲಕ್ಷ್ಮೀಶನ 'ಭಾರತ' ವನ್ನು ಮರಾಠಿಗೆ ಭಾಷಾಂತರಿಸಿದ್ದಾರೆ.

**ಧೋಂಡೊ ನರಸಿಂಹ ಮುಳಬಾಗಲ**[2] **:** ಕನ್ನಡ, ಸಂಸ್ಕೃತಗಳ ಉದ್ದಾಮ ಪಂಡಿತರು. ಸಂಸ್ಕೃತದಿಂದ ಹಲವಾರು ಉತ್ಕೃಷ್ಟ ಕೃತಿಗಳನ್ನು ಕನ್ನಡಕ್ಕೆ ಅನುವಾದಿ ಸಿದ್ದಾರೆ. ಕನ್ನಡದ ಅಭ್ಯಾಸಿಗಳ ಅನುಕೂಲತೆಗಾಗಿ 'ಕನ್ನಡ ನುಡಿಗಟ್ಟು', 'ಕನ್ನಡ ಕೈಪಿಡಿ', 'ಛಂದಸ್ಸಾರ', 'ಪದ್ಯಾರ್ಥ ಸಾರ' ಮುಂತಾದ ಉದ್ಗ್ರಂಥಗಳನ್ನು ರಚಿಸಿ ದ್ದರು. ಉತ್ತರ ಕರ್ನಾಟಕದ ಜನರಿಗೆ ಮುಳಬಾಲಗರ 'ನುಡಿ ಕಟ್ಟುಗಳು' ಹಲವಾರು ವರ್ಷ ಭಗವದ್ಗೀತೆಯಾಗಿದ್ದವು.

ಇತರ ಕೃತಿಗಳು : ಭವಭೂತಿ ಕೃತ 'ಉತ್ತರರಾಮ ಚರಿತ್ರ', ಶೂದ್ರಕಕೃತ 'ಮೃಚ್ಛ ಕಟಿಕ', ಭಟ್ಟನಾರಾಯಣನ 'ವೇಣಿ ಸಂಹಾರ', ಕಾಲಿದಾಸ ಕೃತ 'ಮಾಲವಿ ಕಾಗ್ನಿ ಮಿತ್ರ' (ಅನುವಾದಗಳು).

---

1 ಜೀವಿತಕಾಲ : (1827-1884) ತಂದೆ : ರಾಮಚಂದ್ರ ಚುರಮುರಿ. ಪುಟ 256 ನೋಡಿ.

2 ಜೀವಿತಕಾಲ : (1848-1898). ಶಾಲೆಯ ಮಾಸ್ತರು. ಅನಂತರ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು.

**ಗುರುಬಸಪ್ಪ ಹಳಿಕಟ್ಟಿ**[1]**:** ಶಿಕ್ಷಕರು ಹಾಗೂ ಉತ್ತಮ ಲೇಖಕರು.

ಕೃತಿಗಳು: ಸಿಕಂದರ ಬಾದಶಹನ ಚರಿತ್ರೆ, ಇಂಗ್ಲೇಂಡ್ ದೇಶದ ಇತಿಹಾಸ, ಯುಕ್ಲಿಡನ ಆರು ಪುಸ್ತಕಗಳು, ಏಕನಾಥ ಸಾಧುಗಳ ಚರಿತ್ರೆ, ಡ್ಯೂಕ್ ಆಫ್ ವೆಲಿಂಗ್ಟನ್, ಗ್ಲಾಡ್‌ಸ್ಟನ್, ಚಿಂತಾಮಣಿ ಅಥವಾ ಟಾಲಿಸ್ಮನ್, ನೆಪೋಲಿಯನ್ ಬೋನಾಪಾರ್ಟ, ಫ್ರಾನ್ಸಿನ ರಾಜ್ಯಕ್ರಾಂತಿ ಮುಂತಾದವುಗಳು.

**ಎಂ. ಶಾಮರಾವ್**[2]**:** ಎಂ. ಎ. ಪದವಿ ಪಡೆದ ನಂತರ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯಿಂದ ಜೀವನ ಪ್ರಾರಂಭಿಸಿದರು. ಬಹುಬೇಗ ಅದನ್ನು ಬಿಟ್ಟು ಸರ್ಕಾರದಲ್ಲಿ ನೌಕರಿ ಹಿಡಿದರು. ಅಸಿಸ್ಟೆಂಟ್ ಕಮಿಷನರ್, ಉಪಕಾರ್ಯದರ್ಶಿ, ಡೆಪ್ಯುಟಿ ಕಮಿಷನರ್, ವಿದ್ಯಾ ಇಲಾಖೆಯ ಮುಖ್ಯಸ್ಥ ಮುಂತಾಗಿ ಪ್ರತಿಷ್ಠಿತ ಹುದ್ದೆಗಳನ್ನು ನಿರ್ವಹಿಸಿದರೂ ಸಾಹಿತ್ಯ ಆಸಕ್ತಿ ಕಂದಿರಲಿಲ್ಲ. ಸದಾಕಾಲವೂ ಒಂದಲ್ಲ ಒಂದು ರೀತಿಯಲ್ಲಿ ಈ ಸೇವೆಯಲ್ಲಿ ತೊಡಗಿದ್ದರು. ಮೈಸೂರು ವಿಶ್ವವಿದ್ಯಾನಿಲಯ 1922ರಲ್ಲಿ ಇವರಿಗೆ 'ಫೆಲೋ'ಶಿಪ್ ನೀಡಿ ಗೌರವಿಸಿತ್ತು. ಬ್ರಿಟಿಷ್ ಸರ್ಕಾರ ಇವರಿಗೆ 'ರಾವಬಹದ್ದೂರ್' ಪ್ರಶಸ್ತಿಯನ್ನೂ, ಮೈಸೂರು ಸರ್ಕಾರ 'ರಾಜಕಾರ್ಯಪ್ರಸಕ್ತ' ನೀಡಿದ್ದವು.

ಇವರು ನಡೆಸಿದ್ದ ಪತ್ರಿಕೆ 'ವಿದ್ಯಾದಾಯಿನಿ'.

'ಕರ್ಣಾಟಕ ಗ್ರಂಥಮಾಲೆ' ಸಾಹಿತ್ಯಮಾಲೆ ಸಹ ನಡೆಸಿದ್ದರು. ಪರಿಷತ್ತಿನ ಸ್ಥಾಪನೆ (1914) ಇವರ ಮಹತ್ತರ ಕೊಡುಗೆ.

ಕೃತಿಗಳು: ಮಹಿಶೂರ ಸಂಸ್ಥಾನದ ಚರಿತ್ರೆ, ಮೈಸೂರು ಸಂಸ್ಥಾನದ ಚರಿತ್ರೆಸಾರ (ಕನ್ನಡ ಕೃತಿಗಳು), ಟೆನ್ ಇಯರ್ಸ್ ಆಫ್ ನೇಟೀವ್ ರೂಲ್ಸ್ ಇನ್ ಮೈಸೂರ್, ದಿ ಇಂಡಿಯನ್ ಹೀರೋಸ್, ಮಾಡರ್ನ್ ಮೈಸೂರು (ಇಂಗ್ಲೀಷ್ ಕೃತಿಗಳು).

**ರಾ. ಹ. ದೇಶಪಾಂಡೆ**[3]**:** ಉಪಾಧ್ಯಾಯರಾಗಿದ್ದು ಅನಂತರ ಕೆಲವರ್ಷ ವಿದ್ಯಾಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದರು.

ಇವರ ಕೃತಿಗಳ ಸಂಖ್ಯೆ ಸುಮಾರು 30. ಹೆಚ್ಚಾಗಿ ಇವು ಭಾರತ ಮತ್ತು ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟವುಗಳಾಗಿವೆ.

ಚೈತನ್ಯ ಚರಿತ್ರ, ಚರಿತ್ರಸಂಗ್ರಹ (1ನೇ ಭಾಗ), ಚರಿತ್ರಸಂಗ್ರಹ (2ನೇ ಭಾಗ), 'ಗ್ರೇಟ್‌ಬ್ರಿಟನ್ ಅಯರ್ಲಂಡ್ ದೇಶಗಳ ಸಂಕ್ಷಿಪ್ತ ವರ್ಣನೆಯು', ಅಕಬರ ಚರಿತ್ರೆ

---

1 ಜೀವಿತಕಾಲ: (1854–1936). ಬೆಳಗಾವಿ ಜಿಲ್ಲೆಯ ಹುಲಿ ಗ್ರಾಮದಲ್ಲಿ ಜನನ.

2 ಜನನ: ಸು. 1860. ಮೈಸೂರು ಜಿಲ್ಲೆಯ ಗುಂಡ್ಲುಪೇಟೆಯಲ್ಲಿ. ತಂದೆ: ನಾರಾಯಣರಾಯರು.

3 ಜೀವಿತಕಾಲ: (1861–1930). ಜನನ: ಧಾರವಾಡದ ಸಮೀಪದ ನರೇಂದ್ರ ಗ್ರಾಮದಲ್ಲಿ. ಕರ್ನಾಟಕ ವಿದ್ಯಾವರ್ಧಕ ಸಂಘದ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದರು.

ಮೊಗಲ್ ಬಾದಶಾಹಿ ಪೂರ್ವಾರ್ಧ, ಬಾಯಿಲೆಕ್ಕದ ಮೊದಲನೆಯ ಪುಸ್ತಕ, ಛತ್ರಪತಿ ಶಿವಾಜಿ ಮಹಾರಾಜ, ಕರ್ನಾಟಕ ಸಾಮ್ರಾಜ್ಯ (ಭಾಗ 1, 2) ಮುಂತಾದವುಗಳು.

**ಹಟ್ಟಿಯಂಗಡಿ ನಾರಾಯಣರಾಯರು[1] :** ಬಿ.ಎ., ಬಿ.ಎಲ್., ಓದಿನ ನಂತರ ವಕೀಲರಾಗಿದ್ದರು. ಸಾಹಿತ್ಯದಲ್ಲಿ ಆಸಕ್ತಿಯಿದ್ದ ಇವರು ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಷೆಲ್ಲಿ, ಗ್ರೇ, ಟೇಲರ್, ವಿಲಿಯಂ ಕಾಲಿನ್ಸ್, ಮಿಲ್ಟನ್, ಜೇಮ್ಸ್ ಥಾಮ್ಸನ್ ಮುಂತಾದವರ ಕವಿತೆಗಳನ್ನು ಕನ್ನಡಕ್ಕೆ ಬಹು ಚೆನ್ನಾಗಿ ಅನುವಾದಿಸಿದ್ದಾರೆ. 'ಆಂಗ್ಲ ಕವಿತಾವಳಿ' ಇಂತಹ ಅನುವಾದಗಳನ್ನೊಳಗೊಂಡ ಒಂದು ಕವನ ಸಂಕಲನ. (1919). ಕನ್ನಡ ಕವಿತೆ ಹೊಸ ಹಾದಿ ಹಿಡಿಯಬೇಕಾದ ಬಗ್ಗೆ ಹಟ್ಟಿಯಂಗಡಿ ಶಿವಪ್ರ ಕಳಕಳಿ ಉಳ್ಳವರಾಗಿದ್ದರು. ಆದರೆ ಪ್ರಾಸ ತ್ಯಜಿಸದೆ ಹಳೆಯ ಮಾದರಿಯಲ್ಲಿ ಕವನಗಳನ್ನು ರಚಿಸಿದರು. ಆದರೆ ಭಾಷೆಯ ಬಳಕೆಯಲ್ಲಿ, ಅಭಿರುಚಿಯಲ್ಲಿ ಕ್ರಾಂತಿ ಕಾರಕ ಮನೋಭಾವ ಎದ್ದು ಕಾಣುತ್ತಿತ್ತು. ಹಟ್ಟಿಯಂಗಡಿಯವರಿಗೆ ಪತ್ರಿಕೋದ್ಯಮ ದಲ್ಲೂ ಅತೀವ ಆಸಕ್ತಿಯಿತ್ತು. ಅವರು ಸಂಪರ್ಕ ಇರಿಸಿಕೊಂಡಿದ್ದು ಲೇಖನ, ಕವಿತೆ ಗಳನ್ನು ಬರೆಯುತ್ತಿದ್ದ ಪತ್ರಿಕೆಗಳು 'ಇಂಡಿಯನ್ ಸೋಶಿಯಲ್ ರಿಫಾರ್ಮರ್' 'ಇಂಡಿಯನ್ ಸ್ಪೆಕ್ಟೇಟರ್.' 'ಈಸ್ಟ್ ಅಂಡ್ ವೆಸ್ಟ್'. 'ಟೈಮ್ಸ್ ಆಫ್ ಇಂಡಿಯಾ.

ಇಂಗ್ಲೀಷ್‌ನಲ್ಲಿ ಪಾಂಡಿತ್ಯ ಹೊಂದಿದ್ದ ಅವರು ಅನುವಾದದ ಮೂಲಕ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ ಆದ್ಯರಲ್ಲಿ ಒಬ್ಬರು.

ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ ಸ್ವದೇಶಾಭಿಮಾನಿ ವಾಗ್ಭೂಷಣ ಮುಂತಾದ ಪತ್ರಿಕೆಗಳಲ್ಲಿ ವಿದ್ವತ್ಪೂರ್ಣ ಲೇಖನಗಳನ್ನು ಪ್ರಕಟಿಸಿದ್ದಾರೆ.

**ಕಾವ್ಯಾನಂದ ಪುಣೇಕರ[2] :** (ನರಸಿಂಹಾಚಾರ್ಯ ಭೀಮಾಚಾರ್ಯ ಕಿತ್ತೂರು). ಪಂಡಿತ ಮನೆತನದಲ್ಲಿ ಜನ್ಮ ತಾಳಿದ ಕಾವ್ಯಾನಂದರು ಉಪಾಧ್ಯಾಯ ರಾಗಿದ್ದುಕೊಂಡು ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ಅವರ ಕೃತಿಗಳಲ್ಲಿ ಸರಳ ಶೈಲಿ, ಉದಾತ್ತ ವಿಚಾರ, ಉಜ್ವಲ ಪ್ರತಿಭೆ ಹಾಗೂ ಲಘು ಹಾಸ್ಯ ಪ್ರವೃತ್ತಿಯನ್ನು ಕಾಣಬಹುದು.

ಅವರ ಕೃತಿಗಳು : ಸಭಾರಂಜನ ಶತಕ (1911) ಸತ್ಯನಾರಾಯಣ ಕಥೆಯು (ಹಾಡಿನ ರೂಪದಲ್ಲಿದೆ), ಗೃಹ ವೈದ್ಯಕವು, ಬಾಲ ರಂಜನ, ಮಗನಿಗೆ ತಂದೆಯ ಪತ್ರ, ಪ್ರಶ್ನೋತ್ತರ ಮಾಲಿಕಾ ಮುಂತಾದವು.

---

1 ಜೀವಿತಕಾಲ : (1863–1921). ಜನನ : ಕುಂದಾಪುರ ತಾಲ್ಲೂಕಿನ ಹಟ್ಟಿ ಯಂಗಡಿಯಲ್ಲಿ. ತಂದೆ : ಪರಮೇಶ್ವರಯ್ಯ.

2 ಜೀವಿತಕಾಲ : (1870–1929). ಚೆನ್ನಮ್ಮನ 'ಕಿತ್ತೂರು' ಜನ್ಮಸ್ಥಳ. ತಂದೆ : ಭೀಮಾಚಾರ್ಯ. ತಾಯಿ : ಭಾರತೀಬಾಯಿ.

ಇವರ ಬಹಳಷ್ಟು ಬಿಡಿ ಸಂಶೋಧನಾತ್ಮಕ ಲೇಖನಗಳು ವಾಗ್ಭೂಷಣದಲ್ಲಿ ಪ್ರಕಟಗೊಂಡಿದ್ದವು. (ತಾಮ್ರ ಶಾಸನ, ಪ್ರಾಚೀನ ನಾಗರೀಕತೆ, ಸಂಗೊಳ್ಳಿ ರಾಯಣ್ಣ, ನಮಃ ಪಂಚಮ ರಸಾಯ ಮುಂತಾದವುಗಳು).

ಪ್ರಖರವಾದ 'ಶ್ಲೇಷ' ಕಾವ್ಯಾನಂದರ ಬತ್ತಳಿಕೆಯಲ್ಲಿದ್ದ ಹಿರಿಯ ಬಾಣ.

ಉದಾ : (1) Committee→ Come and Eat ಎನ್ನುತ್ತಿದ್ದರು. ಎತ್ತುಗಳು ಯಾತಕ್ಕೆ ಬೇಕು ? (ಉತ್ತರ : 'ಯಾತಕ್ಕೆ' ಬೇಕು) ಕೊಡದವರು ಕೊಡಲಿಲ್ಲ ; ನಗದವರು ನಗಲಿಲ್ಲ (ಅಂದರೆ ಕೊಡವಿದ್ದವರು, ಯೋಗ್ಯತೆಯಿದ್ದವರು ಕೊಡಲಿಲ್ಲ ; ನಗದವರು ಅಂದರೆ ಹತ್ತಿಯ ಅಂಡಿಗೆಯವ (ನಗದವರು) ನಗಲಿಲ್ಲ).

**ದೇವಶಿಖಾಮಣಿ ಅಳಸಿಂಗರಾಚಾರ್ಯ**[1] **:** ಸಂಸ್ಕೃತ ಹಾಗೂ ಕನ್ನಡದಲ್ಲಿ ಮಹಾಪಂಡಿತರು. ಮೈಸೂರಿನ ಮರಿಮಲ್ಲಪ್ಪ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ಅನಂತರ ಮದರಾಸಿನ ವಿಶ್ವವಿದ್ಯಾಲಯದ ಡಿಗ್ರಿ ಗಳಿಸಿದರು. ಅನೇಕ ಕೃತಿಗಳನ್ನು ಸಂಶೋಧಿಸಿ ಸಂಪಾದಿಸಿದ್ದಾರೆ. ಸಂಸ್ಕೃತದಿಂದ ಅನೇಕ ಉತ್ಕೃಷ್ಟ ಕೃತಿಗಳನ್ನು ಅನುವಾದಿಸಿದ್ದಾರೆ.

ಮುಖ್ಯ ಕೃತಿಗಳು : ಚೆಲ್ವನಾರಾಯಣ ಶತಕಂ, ಪದ್ಯಾಗ್ರಂಥ ಶ್ರೀಮದ್ರಾಮಾಯಣ, ಶ್ರೀಮನ್ಮಹಾಭಾರತ, ಶ್ರೀಮದ್ಭಾಗವತಾ, ಸ್ವಪ್ನವಾಸವದತ್ತಾ, ಪಂಚರಾತ್ರ [ಸಂಸ್ಕೃತದಿಂದ ಕನ್ನಡಕ್ಕೆ ಗದ್ಯರೂಪದಲ್ಲಿ ಅನುವಾದ]

**ಕೊಳ್ಳೇಗಾಲದ ವೆಂಕಟಸುಬ್ಬಾಶಾಸ್ತ್ರಿ**[2] **:** ಸುಪ್ರಸಿದ್ಧ ಕೊಳ್ಳೇಗಾಲ ಪಂಚಾಗದ ಕರ್ತೃ. ಆಸ್ಥಾನ ವಿದ್ವಾನ್, ಜ್ಯೋತಿಶ್ಶಾಸ್ತ್ರವಿದುಷ, ಜ್ಯೋತಿಷ ಸಿದ್ಧಾಂತ ಕೇಸರಿ ವೆಂಕಟಸುಬ್ಬಾಶಾಸ್ತ್ರಿಗಳದು ವಿದ್ವಾಂಸರ ವಂಶ. ತಂದೆ ಹಾಗೂ ತಾತ ಕೃಷ್ಣಶಾಸ್ತ್ರಿಗಳು ವೇದವಿದ್ಯಾಪಾರಂಗತರುಗಳು.

ವೆಂಕಟಸುಬ್ಬಾಶಾಸ್ತ್ರಿಗಳು ಮೈಸೂರಿನ ಸಂಸ್ಕೃತ ಪಾಠಶಾಲೆಯಿಂದ ಜ್ಯೋತಿಷ ವಿದ್ವಾನ್ ಪರೀಕ್ಷೆ ಪಾಸು ಮಾಡಿ ಮದರಾಸಿನ ಖಗೋಳ ವೀಕ್ಷಣಾಲಯದಲ್ಲಿ ನಕ್ಷತ್ರ ಕಾಲ ಮಾನ ಅಭ್ಯಸಿಸಿ ಆರ್ಷೇಯವಾದ ಸೂರ್ಯ ಸಿದ್ಧಾಂತವನ್ನು ಅನುಸರಿಸಿ ಪಂಚಾಂಗ ನಿರ್ಮಿಸುತ್ತಿದ್ದಾರೆ.

ಇವರ ಕೃತಿಗಳು : ಉಪರಾಗ ಮೀಮಾಂಸಾ ವಿಕಾಸ, ಜ್ಯೋತಿಶಾಸ್ತ್ರ ನ್ಯಾಯಮಾಲ, ಕುಜದೋಷ ನಿರ್ಣಯ, ಆಯನಾಂಶ ವಿಮರ್ಶೆ ಮುಂತಾದವುಗಳು.

---

1 ಜೀವಿತಕಾಲ : (1877-1940). ಮೇಲುಕೋಟೆಯಲ್ಲಿ ಜನನ. ತಂದೆ : ತಿರುಮಲೈ ಅಯ್ಯಂಗಾರ್ಯರು.

2 ಜನನ : ಡಿಸೆಂಬರ್ 29, 1886. ಕೊಳ್ಳೇಗಾಲದಲ್ಲಿ. ತಂದೆ : ತಮ್ಮಯ್ಯ ಶಾಸ್ತ್ರಿ.

**ಸುಬ್ಬಾಶಾಸ್ತ್ರಿ ಗುರುಜಾಲಂ ನರಸಿಂಹಯ್ಯ**[1] **:** ಇವರು 20ಕ್ಕೂ ಹೆಚ್ಚು ಕೃತಿಗಳನ್ನು ಸಾಹಿತ್ಯದ ನಾನಾ ವಿಭಾಗಗಳಲ್ಲಿ ರಚಿಸಿದ್ದಾರೆ.

ಮುಖ್ಯವಾದವುಗಳು : ಗಣಪತಿ ತತ್ವವಿಚಾರ, ಏಳು ಕೀರ್ತನೆಗಳು, ಭಾರತೀಯ ಚಾವುಟ, ದೇಶಿಯ ರಂಗಮಂಟಪ.

**ಶ್ರೀನಿವಾಸ ವೆಂಕಟೇಶ ಕಟ್ಟಿ**[2] **:** ಉತ್ತರ ಕರ್ನಾಟಕದಲ್ಲಿದ್ದ ಹೆಸರಾಂತ ಲೇಖಕರು 'ಪ್ರಿಯದರ್ಶಿಕಾ' ನಾಟಕವನ್ನು ಸಂಸ್ಕೃತದಿಂದ 'ಸಂಗೀತ ಪ್ರಿಯದರ್ಶಿನಿ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. 'ಗೋಪಿಗೀತ' (ಅನುವಾದ)

**ಮ. ಪ್ರ. ಪೂಜಾರ**[3] **:** (ಮಹದೇವ ಪ್ರಭಾಕರ ಶಾಸ್ತ್ರಿ ಪೂಜಾರ) ಪ್ರಕಾಂಡ ಪಂಡಿತರು, ಅಧ್ಯಾಪಕರು.

ಕೃತಿಗಳು : ಅಶೋಕ ಅಥವಾ ಪ್ರಿಯದರ್ಶಿ, ಜೈನಧರ್ಮ ಪರಿಭಾಷೆ, ರಾಮಾಶ್ವಮೇಧ ಸಾರಸಂಗ್ರಹ, ಪಂಚತಂತ್ರಸಾರ, ಜೈನಧರ್ಮ ಪುರಾಣ ಸಾರ, ನುಡಿಗನ್ನಡಿ (2 ಭಾಗಗಳು), ನುಡಿಗನ್ನಡಿ ಮತ್ತು ಛಂದೋಮಂಜರಿ, ಹಜರತ ಮುಹಮ್ಮದ್ ಪೈಗಂಬರರು, ಕೆಲವು ಕನ್ನಡ ವ್ಯಾಕರಣ ವಿಚಾರವು ಇತ್ಯಾದಿ.

'ಸೊಗಸಿನ ಓದು' ಸರಕಾರವು ಪ್ರಕಟಿಸುತ್ತಿದ್ದ ವಾಚನಮಾಲೆಯ ಸಂಪಾದಕರಾಗಿದ್ದರು.

**ಭೀಮಾಜಿ ಜೀವಾಜಿ ಹುಲಕವಿ**[4] **:** ಪಂಡಿತರು ಶಾಲಾಮಾಸ್ತರು. 'ಶಾರದೆಯ ಮುತ್ತಿನ ಸರ' ಗ್ರಂಥಮಾಲೆಯ ಸಂಚಾಲಕರಾಗಿದ್ದರು. ಇವರ ಗ್ರಂಥಗಳು 'ವಾಗ್ಭೂಷಣ' ದಲ್ಲಿ ಧಾರವಾಹಿಯಾಗಿ ಪ್ರಕಟಗೊಂಡಿದ್ದವು.

ಕೃತಿಗಳು : ಪದ್ಮಾವತಿ ಪ್ರೇಮಮಂದಿರ (1919), ಶ್ರೇಯಃ ಸಾಧನ (1920) ; ಪತಿತ ಪರವರ್ತನ (1920), ಶುದ್ಧಿ ಸಂಘಟನೆ, ಹತಭಾಗಿನಿಯಾದ ವಿಮಲೆ (1924), ಶ್ರೀವಿದ್ಯಾರಣ್ಯ ಸ್ವಾಮಿಗಳು (1922), ಕರ್ನಾಟಕ ಸ್ವಪ್ನ ವಾಸವದತ್ತೆ (1925), ಅತ್ತೆಯ ಮನೆಯಕಾಟ ಅಥವಾ ಸುಶೀಲಾ ವಸಂತರ ದುರ್ದೈವ, ದುಷ್ಕರ್ಮ ಪರಿಪಾಕ ಅಥವಾ ಉನ್ಮಾದಿನಿಯಾದ ಮೋಹಿನಿ, ದೇವನಂದಿನಿ, ನನ್ನ ಕನಸು, ನರಗುಂದ ಬಂಡಾಯ ಮುಂತಾದವು.

---

1 ಜನನ: ಏಪ್ರಿಲ್ 1, 1897. ಬೆಂಗಳೂರಿನಲ್ಲಿ. ತಂದೆ: ಸುಬ್ಬಾಶಾಸ್ತ್ರಿ, ತಾಯಿ: ನರಸಕ್ಕ.

2 ಜೀವಿತಕಾಲ: (1872–1922). ತಂದೆ: ವೆಂಕಟರಂಗೊಕಟ್ಟಿ. ತಾಯಿ: ತುಳಜಾಬಾಯಿ.

3 ಜೀವಿತಕಾಲ: (1884–1962).

4 ಜೀವಿತಕಾಲ: (1893–1959).

**ರೆವರೆಂಡ್ ಫೆಡ್ರಿಕ್ ರಿಟ್ಟೆಲ್**[1] **:** ಡಾ॥ ಕಿಟ್ಟೆಲ್‌ಗೆ ಮೊದಲೇ ಒಂದು ಶಬ್ದಕೋಶವನ್ನು ರಚಿಸಿದ್ದ ಶ್ರೇಯಸ್ಸು ಇವರದು. ಧರ್ಮಗುರುಗಳಾಗಿದ್ದ ಇವರು ಕನ್ನಡ ಸಾಹಿತ್ಯಕ್ಕಾಗಿ ನೀಡಿರುವ ಕೊಡುಗೆಗಳು ಅಪಾರ ಹಾಗೂ ಅಮೂಲ್ಯ.

ಕೃತಿಗಳು : ಗೀತೆಗಳು (ಬೈಬಲ್ ಗೀತೆಗಳು). ಎ ಪ್ರಾಕ್ಟಿಕಲ್ ಕೀ ಟು ಧಿ ಕ್ಯಾನರೀಸ್ ಲಾಂಗ್ವೇಜ್ (1872)– ಇದರಲ್ಲಿ ವಿದೇಶಿಯರು ಕನ್ನಡ ಕಲಿಯುವಾಗ ವಹಿಸಬೇಕಾದ ಜಾಗ್ರತೆಗಳನ್ನು ಸೂಚಿಸಲಾಗಿದೆ ; ಕನ್ನಡ ವ್ಯಾಕರಣಬೋಧಿನಿ ; A School Dictionary (1876) ; ಕನ್ನಡ ಬಾಲ ವ್ಯಾಕರಣ. (1877). ಕನ್ನಡ ಶಾಲಾ ವ್ಯಾಕರಣ (1880)

**ಜಾರ್ಜ್ ವರ್ಥ್**[2] **:** ಇವರ ಕೃತಿಗಳು : ಈಸೋಪನ ಕಥೆಗಳು, ಕಥಾ ದೃಷ್ಟಾಂತ ಮಂಜರಿ, ಪ್ರಾಕ್ಕಾವ್ಯ ಮಾಲೆ (1868–ಕಾವ್ಯ ಸಂಕಲನ)

**ಗುಂಡೂರು ಹನುಮಂತರಾವ್**[3] **:** ಮೈಸೂರು ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದ ಅಧ್ಯಾಪಕರಾಗಿದ್ದು ಅನಂತರ ಗ್ರಂಥ ಭಂಡಾರ ಮತ್ತು ಪ್ರಚಾರೋಪ ನ್ಯಾಸ ಶಾಖೆಯ ಕಾರ್ಯದರ್ಶಿಯಾಗಿದ್ದರು. ಇವರದು ಬಹುಮುಖ ಪ್ರತಿಭೆ. ಕೃತಿಗಳ ಸಂಖ್ಯೆ ಸುಮಾರು 40.

ಮುಖ್ಯವಾದವು : ಆಧುನಿಕ ತತ್ವಶಾಸ್ತ್ರ, ಸಮಸ್ಯೆಗಳು, ತರ್ಕಶಾಸ್ತ್ರ. ಕುಟುಂಬ ಜೀವನ, ಚಾರ್ವಾಕ ದರ್ಶನ, ಉಪನಿಷತ್ತುಗಳು, ಕಾಶ್ಮೀರ ಶೈವದರ್ಶನ, ಭಾರತೀಯ ತತ್ವಶಾಸ್ತ್ರ ಸಮೀಕ್ಷೆ, ಸಮಾಜದ ರೋಗರುಜಿನಗಳು. ಕುಟುಂಬ ಜೀವನ ವಿಜ್ಞಾನ. ಧರ್ಮ ದೀಪಕರು ಮುಂತಾದವು.

ಇಂಗ್ಲೀಷಿನಲ್ಲೂ ಕೆಲವು ಕೃತಿಗಳನ್ನು ರಚಿಸಿದ್ದಾರೆ,

**ತಿರುಮಲೆ ರಾಜಮ್ಮ**[4] **:** ಪ್ರಸಿದ್ಧ ಪತ್ರಿಕೋದ್ಯಮಿ ತಿ. ತಾ. ಶರ್ಮರವರನ್ನು ಮದುವೆ ಆಗಿದ್ದ ರಾಜಮ್ಮ ಒಳ್ಳೆಯ ಕಲಾವಿದೆ. ಸಂಗೀತ ಪ್ರವೀಣೆ ಹಾಗೂ ಸಾಹಿತ್ಯ ಪ್ರಿಯೆ. 13ನೇ ವಯಸ್ಸಿನಲ್ಲಿ ಈಕೆಯ ಮದುವೆ ಬಳಗದ ತಾತಾಚಾರ್ಯ ಶರ್ಮ ರೊಡನೆ ನಡೆಯಿತು. ಸಂಗೀತದಲ್ಲಿ ಆಸಕ್ತಿಯಿದ್ದ ರಾಜಮ್ಮ ವೀಣೆ ಶೇಷಣ್ಣ ನವರಲ್ಲಿ ಶಿಷ್ಯವೃತ್ತಿ ಸಹ ಮಾಡಿದ್ದರು. ಪ್ರಾವಿಣ್ಯತೆ ಗಳಿಸಿದ್ದ ಈಕೆ ಗಾಂಧೀಜಿ ಸಮ್ಮುಖದಲ್ಲಿ ವೀಣೆ ನುಡಿಸಿ ಮೆಚ್ಚುಗೆ ಗಳಿಸಿದ್ದರು. ಇವರ ಕಾವ್ಯನಾಮ ಭಾರತಿ.

---

1 ಜೀವಿತಕಾಲ : (1832–1906). ಧಾರವಾಡ, ಹುಬ್ಬಳ್ಳಿಯಲ್ಲಿ ಧರ್ಮಗುರು ಗಳಾಗಿ ಸುಮಾರು 35 ವರ್ಷ ಇದ್ದರು.

2 ಜೀವಿತಕಾಲ : (1820–1869).

3 ಜನನ : ಏಪ್ರಿಲ್ 12, 1898. ತುಮಕೂರಿನಲ್ಲಿ. ತಂದೆ : ರಾಮಾಶಾಸ್ತ್ರಿ. ತಾಯಿ : ಭಾಗೀರಥಮ್ಮ.

4 ಜೀವಿತ ಕಾಲ : ನವೆಂಬರ್ 1900 ರಿಂದ ನವೆಂಬರ್ 1984. ಜನಿಸಿದ್ದು : ತುಮಕೂರಿನಲ್ಲಿ. ತಂದೆ : ರಾಘವಾಚಾರ್ಯ.

'ಸುಖಮಾರ್ಗ' ಎಳೆಯ ವಯಸ್ಸಿನಲ್ಲೇ ಬರೆದ ಮೂರು ಅಂಕಗಳ ಸಾಮಾಜಿಕ ನಾಟಕ, ನಾಟಕ ರಚನೆಯೇ ಇವರಿಗೆ ಹೆಚ್ಚು ಪ್ರಿಯ. ಇವರು ರಚಿಸಿರುವ ಇತರ ನಾಟಕಗಳು : ಕಪಟ ನಾಟಕ, ತಪಸ್ವಿನಿ, ಮಹಾಸತಿ, ಸ್ವರ್ಗ ನಿರಸನ, ದುಂಧುಭಿ, ಉನ್ಮತ್ತ ಭಾವಿನೀ,

'ಬಿಂದು .ಸುಂದರ' (ಮಕ್ಕಳಿಗಾಗಿ ಕವನ ಸಂಕಲನ) 'ವಾತ್ಸಲ್ಯ ತರಂಗಲೀಲೆ, ಇತ್ತೀಚೆಗೆ ನಿರ್ಮಿತಗೊಂಡಿದ್ದ ರೂಪಕ 'ಆರ್ಯ ಕೈಲಾಸಂ' ಕೈಲಾಸಂ ವ್ಯಕ್ತಿತ್ವ, ವಿಚಾರಗಳನ್ನು ವಿಶ್ಲೇಷಿಸುವ ವಿಚಾರಪೂರಿತ ಕೃತಿ.

'ಜ್ವಾಲಾಮುಖಿ', 'ದಿವ್ಯತೆಯ ದರ್ಶನ', 'ವೇದನೆ-ನೀವೇದನೆ', ಜೀವನ ಜಿಜ್ಞಾಸೆ, ಲೋಕಾಭಿರಾಮ, (ಇತರ ಕೃತಿಗಳು).

ಈಕೆ ತೆಲುಗಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ.

ಇವರ ಅಪಾರ ಸೇವೆಯನ್ನು ಗುರುತಿಸಿ ರಾಜ್ಯ ಸಾಹಿತ್ಯ ಅಕಾಡೆಮಿ 1969 ರಲ್ಲಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

**ಡಿ. ಶೇಷಗಿರಿರಾವ್**[1] **:** (ದೇವರಾಯನ ದುರ್ಗ ಶೇಷಗಿರಿ ರಾವ್) ಕೃಷಿ ಇಲಾಖೆಯಲ್ಲಿ ದುಡಿದು ಮುಖ್ಯಸ್ಥರಾಗಿ ನಿವೃತ್ತಗೊಂಡಿದ್ದಾರೆ. ಕೃಷಿ ಶಾಸ್ತ್ರದಲ್ಲಿ ಬಹು ಉಪಯುಕ್ತ ಕೃತಿಗಳನ್ನು ರಚಿಸಿದ್ದಾರೆ. ಇವರ ಹಲವಾರು ಕೃತಿಗಳಿಗೆ ಮಂಜಯ್ಯ ಉಡುಪ ಚಿನ್ನದ ಪದಕ, ವಿಶ್ವ ಕೃಷಿಮೇಳದ ಚಿನ್ನದಪದಕ, ಮುಂತಾದವು ಲಭಿಸಿವೆ.

ಮುಖ್ಯ ಕೃತಿಗಳು : ಶ್ರೀಗಂಧ, ಜೇನು ಸಾಕಣೆ, ಗೃಹ ಕೀಟಗಳು. ಮೂಷಕ ಪ್ರಕರಣ, ಯಾರಿಗುಂಟು ಯಾರಿಗಿಲ್ಲ, ಸಸ್ಯ ಸಂರಕ್ಷಣೆ ಕೈಪಿಡಿ, ಮನುಷ್ಯ ದೇಹಾವಲಂಬಿ ಪರೋಪ ಜೀವಿ ಪ್ರಾಣಿಗಳು ಮುಂತಾದವು.

ಇಂಗ್ಲೀಷಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ.

**ನಂಗಪುರಂ ವೆಂಕಟೇಶ ಅಯ್ಯಂಗಾರ್ :** ವಿಜ್ಞಾನ ಸಾಹಿತ್ಯದ ಮೊದಲಿಗರು. ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಕೋಶಾಧಿಕಾರಿಗಳು ಆಗಿದ್ದರು. ವಿಜ್ಞಾನಕ್ಕೆ ಸಂಬಂಧಿಸಿದಂತೆ ಉತ್ಕೃಷ್ಟ ಕೃತಿಗಳನ್ನು ರಚಿಸಿದ್ದಾರೆ.

**ಎನ್. ಎಸ್. ವೀರಪ್ಪ**[2] **:** ವಿದ್ವಾಂಸರು, ಬಹುಮುಖ ಪ್ರತಿಭಾವಂತರು, ದೇವರಾಜ ಬಹದ್ದೂರ್ ಪ್ರಶಸ್ತಿ ವಿಜೇತರು. ಇವರ ಕೃತಿಗಳ ಸಂಖ್ಯೆ ಸುಮಾರು 50.

ಮುಖ್ಯ ಕೃತಿಗಳು : ಸಾಮಾನ್ಯ ಜೀವಶಾಸ್ತ್ರ, ದಿನಬಳಕೆಯ ಜೀವವಿಜ್ಞಾನ, ಭಾರತೀಯ ಶಿಕ್ಷಣದ ಆಡಳಿತ ವ್ಯವಸ್ಥೆ, ಭಾರತೀಯ ಶಿಕ್ಷಣದ ಇತಿಹಾಸ (ಕ್ರಿ. ಪೂ.

---

1 ಜನನ : ಅಕ್ಟೋಬರ್ 29, 1907. ಕೋಲಾರ ಜಿಲ್ಲೆಯ ಕೊತ್ತಮಂಗಲದಲ್ಲಿ. ತಂದೆ : ವೆಂಕಟನಾರಣಪ್ಪ. ತಾಯಿ : ಲಕ್ಷ್ಮಮ್ಮ.

2 ಜನನ : ಜುಲೈ 7, 1910. ಬೆಂಗಳೂರು ಜಿಲ್ಲೆಯ ಹಾತನೂರಿನಲ್ಲಿ. ತಂದೆ : ನಿರ್ವಾಣಶೆಟ್ಟಿ. ತಾಯಿ : ನಂಜಮ್ಮ.

800 ರಿಂದ ಕ್ರಿ. ಶ. 1983, ಶಿಕ್ಷಣದ ತತ್ವ ಪ್ರದರ್ಶನ, ಶಿಕ್ಷಣದ ಪಾರಿಭಾಷಿಕ ನಿಘಂಟು, ಬಾಳಿನ ಸೆರಗು, ಸೆರಗಿನ ಗಂಟು, ಪುಣ್ಯ ಭೂಮಿ, ಫಲ ಸಂಚಯ, ಕನ್ನಡ ಗದ್ಯ ಸಾಹಿತ್ಯ, ಮಕ್ಕಳ ಮನಸ್ಸು ಇತ್ಯಾದಿ.

**ಜಿ. ವಿ. ನಾರಾಯಣಮೂರ್ತಿ**[1] **:** ಗಾಂಧೀವಾದಿ, ಸಾಹಿತಿ, ಸಮಾಜ ಸೇವಾಕರ್ತ, ಹಾಗೂ ನಿಷ್ಠ ಸ್ವಾತಂತ್ರ್ಯ ಚಳುವಳಿಗಾರ. ಸರ್ವೋದಯ ತತ್ವದಲ್ಲಿ ಅಭಿರುಚಿ ಬೆಳೆಸಿಕೊಂಡಿದ್ದ ಇವರು ಈ ತತ್ವ ಪ್ರತಿಸ್ಥಾಪನೆಗಾಗಿ ಅನೇಕ ಅಧ್ಯಯನ ಕೇಂದ್ರ, ಕಾರ್ಯಶಿಬಿರಗಳನ್ನು ನಡೆಸಿದ್ದರು, ಚಿಕ್ಕನಾಯ್ಕನಹಳ್ಳಿಯಲ್ಲಿ ಇವರು ಸ್ಥಾಪಿಸಿ ರುವ 'ದೇಶಿಯ ವಿದ್ಯಾಪೀಠ' ಇಂಥವುಗಳಲ್ಲಿ ಒಂದು. ಇವರ ಸಾಹಿತ್ಯ ಸೇವೆಯೂ ವಿಫುಲ. ಗಾಂಧಿತತ್ವ ಪ್ರತಿಪಾದನೆಗಾಗಿ ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆಗಾಗಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ತೆಂಡೊಲ್ಕರ ರವರ ಬೃಹತ್ ಕೃತಿ ಗಾಂಧಿ ಜೀವನ ಚರಿತ್ರೆಯ ಕೆಲವು ಭಾಗಗಳನ್ನು ಇವರು ಅನುವಾದಿಸಿದ್ದಾರೆ. ಡಾ॥ ಅಪ್ಪಾದೊರೈ ರವರ ರಾಜ್ಯಶಾಸ್ತ್ರಸಾರ ವೆಂಬ ಬೃಹತ್ ಶಾಸ್ತ್ರ ಗ್ರಂಥವನ್ನು ಡಾ॥ ಪಣಿಕ್ಕರವರ ಭಾರತೀಯ 'ಇತಿಹಾಸ ಸಮೀಕ್ಷೆ' ಯನ್ನು, ಜಯಸ್ವಾಲರ 'ಹಿಂದೂ ಪಾಲಿಟಿ' ಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಇವರ 'ವಿನೋಬಾ ಜೀವನ ದರ್ಶನ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. [1975]

ಇತರ ಮುಖ್ಯ ಕೃತಿಗಳು : ಶರಣರ ಸಂಗ. ಗೀತ ಪತ್ರಗಳು, ಹಿಂದೂ ಧರ್ಮ, ಸಾಧನ ಪಥ, ಗಾಂಧೀಜಿಯವರ ಸರ್ವಧರ್ಮ ಸಮನ್ವಯ, ಗಾಂಧೀ ಸಾಹಿತ್ಯ, ಸಂತ ವಿನೋಬಾ, ಭಗವದ್ಗೀತ- ಒಂದು ಪ್ರಸ್ತಾವನೆ, ನಾರಾಯಣ ಗುರು, ಮಹಾತ್ಮಾಗಾಂಧಿ. ಗೋಪಾಲಕೃಷ್ಣ ಗೋಖಲೆ, ಥಕ್ಕರ್ ಬಾಬಾ, ಎಲ್. ಎಸ್. ಹರ್ಡಿಕಲ್, ಜಯಪ್ರಕಾಶ ನಾರಾಯಣ; ರಾಜ್ಯ ಶಾಸ್ತ್ರಸಾರ, ಭಾರತೀಯ ಇತಿಹಾಸ ಸಮೀಕ್ಷೆ. ತೆಂಡೊಲ್ಕರವರ ಮಹಾತ್ಮ ಗಾಂಧಿ. ಗಾಂಧೀಜಿ ಪತ್ರಗಳು, ಸತ್ಯಾಗ್ರಹ, ಮಹಿಳೆಯರು, ಧರ್ಮ–ನೀತಿ. ಸಮಾಜಧರ್ಮ ಗಾಂಧೀ ರಾಜ್ಯಾಂಗ [ಅನುವಾದಗಳು].

ಇಂಗ್ಲೀಷ್‌ನಲ್ಲೂ ಕೆಲ ಕೃತಿಗಳನ್ನು ರಚಿಸಿದ್ದಾರೆ.

**ಮತಿಘಟ್ಟ ಕೃಷ್ಣಮೂರ್ತಿ**[2] **:** ಪತ್ರಿಕಾ ಕ್ಷೇತ್ರದಲ್ಲಿ ಕೇಳಿಬರುವ ಬಹು ಹಳೆಯ ಹೆಸರು. ಈ ಕ್ಷೇತ್ರಕ್ಕೆ ಅಮೋಘ ಸೇವೆ ಸಲ್ಲಿಸಿದ್ದಾರೆ. ಇವರು ಸಂಪಾದಕ ಮಂಡಲಿಯಲ್ಲಿದ್ದು ಸೇವೆ ಸಲ್ಲಿಸಿರುವ ಪತ್ರಿಕೆಗಳು ವಿಶ್ವಕರ್ನಾಟಕ, ಜನವಾಣಿ, ತಾಯಿ ನಾಡು, ಕನ್ನಡ ಪ್ರಭ, ಮಯೂರ ಮುಂತಾದವುಗಳು.

---

1 ಜನನ: ಮೇ 2, 1912ರಂದ. ಗೂಳೂರಿನಲ್ಲಿ. ತಂದೆ: ವೆಂಕಣ್ಣಾಚಾರ್. ತಾಯಿ: ಶೇಷೀಬಾಯಿ.

2 ಜನನ: ನೋ 10, 1913. ಹಾಸನ ಜಿಲ್ಲೆಯ ಮತಿಘಟ್ಟದಲ್ಲಿ. ತಂದೆ: ಲಿಂಗಣ್ಣಯ್ಯ; ತಾಯಿ: ಚೆನ್ನಮ್ಮ.

ಇವರು ಒಳ್ಳೆಯ ಲೇಖಕರೂ ಹೌದು. ಕೃತಿಗಳ ಸಂಖ್ಯೆ ಸುಮಾರು 20, [ಕಥೆ, ಕಾದಂಬರಿ, ನಾಟಕ, ವಿಮರ್ಶೆ ಜನಪದ ಮುಂತಾದ ವಿಭಾಗಗಳು]. ಜನಪದ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ.

ಮುಖ್ಯವಾದವುಗಳು : ಕಳಸಾಪುರದ ಹುಡುಗರು, ಸರ್ವೋದಯ, ಪಚ್ಚೆತೆನೆ, ಕಲ್ಯಾಣಿ. ತ್ರಿಪದಿ ಛಂದಸ್ಸು, ಒಂದು ಸಮೀಕ್ಷೆ, ನಾಡ ಪದಗಳು, ಏಳು ಕೊಲ್ಲದ ಎಲ್ಲಮ್ಮ, ನಮ್ಮ ಹಳ್ಳಿಯ ಹಾಡುಗಳು, ಗೀತೆಗಳು, ಶಕುನದ ಹಕ್ಕಿ ಮತ್ತು ಇತರ ಜನಪದ ಕಥೆಗಳು ಮುಂತಾದವು.

**ಚಿ. ವೆಂಕಟಯ್ಯ**[1] **:** ಕೇಂದ್ರ ಸರ್ಕಾರದ ಲೆಖ್ಖತನಿಖಾ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದು ನಿವೃತ್ತರಾಗಿದ್ದಾರೆ. ಸಾಹಿತ್ಯಾಸಕ್ತರು, ಪ್ರತಿಭಾವಂತರು, ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆಯ ಬಹುಮಾನ, ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ. ರಾಜ್ಯ ಪ್ರಶಸ್ತಿ ಬಹುಮಾನ ಗಳಿಸಿದ್ದಾರೆ. ಕೃತಿಗಳ ಸಂಖ್ಯೆ ಸುಮಾರು–15.

ಮುಖ್ಯವಾದವುಗಳು : ಚಿನ್ನದ ಗಿರಿಯಾತ್ರೆ, ನಿಸರ್ಗದ ಮಡಿಲು, ಬನದ ಸೆರಗು [ಪ್ರವಾಸ ಸಾಹಿತ್ಯ] ಶಾರದಾ ಮಣಿದೇವಿ, ಬುದ್ಧದೇವ, [ಜೀವನ ಚರಿತ್ರೆಗಳು], ಮಂಗಳ ಮಾಂಗಲ್ಯ [ಕಥಾಸಂಕಲನ]. ನೊಂದ ಜೀವ, ಮುರಿದ ಮದುವೆ, ಚಂದನದ ಕೊರಡು, [ಕಾದಂಬರಿಗಳು].

**ಟಿ. ವಿ. ವೆಂಕಟರಮಣಯ್ಯ**[2] **:** ಗ್ರಂಥಾಲಯ ವಿಜ್ಞಾನದಲ್ಲಿ ವಿಶೇಷ ಮಾಹಿತಿಗಳಿಸಿ ಹಲವು ವರ್ಷ ಬೆಂಗಳೂರಿನ ವಿಶ್ವವಿದ್ಯಾಲಯದ ಗ್ರಂಥ ಪಾಲಕ ರಾಗಿದ್ದರು. ಮಹತ್ವದ ಗ್ರಂಥಗಳನ್ನು ರಚಿಸಿದ್ದಾರೆ. ಇವರ ಕೃತಿ ಸಂಖ್ಯೆ ಸುಮಾರು 10.

ಮುಖ್ಯವಾದವುಗಳು : ಕನ್ನಡಭಾಷಾ ಸಾಹಿತ್ಯಲೇಖನ ಸೂಚಿ, ಕನ್ನಡ ಲೇಖಕರ ಕಾವ್ಯನಾಮ ನಿಜನಾಮಗಳು. [ಸೂಚಿಗಳು] ಹಾಸ್ಯ ರಸಾಯನ ; ಕನ್ನಡ ಗಾದೆಗಳ.ಕೋಶ. ಕನ್ನಡ ಪಡೆನುಡಿ ಕೋಶ, ನುಡಿರತ್ನ ಕೋಶ [ಕೋಶಗಳು]

**ಡಾ|| ಬಿ. ಜಿ. ಎಲ್. ಸ್ವಾಮಿ**[3] **:** [ಬೆಂಗಳೂರು ಗುಂಡಪ್ಪ ಲಕ್ಷ್ಮೀ ನಾರಾಯಣಸ್ವಾಮಿ] ಕನ್ನಡ ಸಾಹಿತ್ಯದ ದಿಗ್ಗಜರಾದ ಡಿ. ವಿ. ಜಿ ಯವರ ಮಗ. ತಂದೆಯ ಕೀರ್ತಿಯ ಛಾಯೆಯಡಿಯಲ್ಲಿ ಇವರು ಪ್ರಸಿದ್ಧಿಗೆ ಬರಲಿಲ್ಲ. ತಮ್ಮ ಸ್ವಶಕ್ತಿ.

---

1 ಜನನ : ಏಪ್ರಿಲ್ 10, 1916. ಮದ್ದೂರು ತಾಲ್ಲೂಕು ಹೆಮ್ಮನಹಳ್ಳಿಯಲ್ಲಿ. ತಂದೆ : ಗಿರಿಯಯ್ಯ. ತಾಯಿ : ಸಿದ್ದಮ್ಮ. ಕೆಲಕಾಲ ಇವರು ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು.

2 ಜನನ : ಅಕ್ಟೋಬರ್ 8, 1933. ಮಂಡ್ಯ ಜಿಲ್ಲೆಯ ತೊಣ್ಣೂರಿನಲ್ಲಿ. ತಂದೆ : ವೆಂಕಟರಮಣಯ್ಯ, ತಾಯಿ : ತಿಮ್ಮಮ್ಮ.

3 ಜೀವಿತಕಾಲ : 5–2–1918ರಿಂದ 2–11–1980. ಜನಿಸಿದ್ದು ಬೆಂಗಳೂರು. ತಂದೆ : ಡಿ. ವಿ. ಗುಂಡಪ್ಪ.

ಸಾಮರ್ಥ್ಯದಿಂದ ಉಜ್ವಲ ಬೆಳಗಿದ ಬಹುಮುಖಿ ಪ್ರತಿಭೆಯ ವ್ಯಕ್ತಿ, ಸಂಶೋಧಕ. ಸಾಹಿತಿ.

ಹುಟ್ಟಿದ್ದು ಬೆಳೆದದ್ದು ಬೆಂಗಳೂರಿನಲ್ಲಿ ಆದರೆ ದುಡಿದದ್ದು ತಮಿಳುನಾಡಿನಲ್ಲಿ. ಪರಿಣತಿಗಳಿಸಿದ್ದು ಸಸ್ಯಶಾಸ್ತ್ರದಲ್ಲಿ. ಬರೆದಿದ್ದು ಇಂಗ್ಲೀಷ್, ಕನ್ನಡ, ಹಾಗೂ ತಮಿಳಿನಲ್ಲಿ. 25 ವರ್ಷಕ್ಕೂ ಹೆಚ್ಚುಕಾಲ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸಸ್ಯ ಶಾಸ್ತ್ರದ ಅಧ್ಯಾಪಕ/ಪ್ರಾಧ್ಯಾಪಕರಾಗಿ ದುಡಿದು ನಿವೃತ್ತರಾದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಸಸ್ಯಶಾಸ್ತ್ರ ವಿಭಾಗದಲ್ಲಿ ಸಂದರ್ಶನ ಪ್ರಾಧ್ಯಾಪಕರಾಗಿದ್ದರು. 'ಹಸಿರು ಹೊನ್ನು' ಅವರ ಅಪೂರ್ವ ಗ್ರಂಥ. ಕೇಂದ್ರ ಸಾಹಿತ್ಯ ಅಕಾಡೆಮಿ ಇದಕ್ಕೆ ಬಹುಮಾನವಿತ್ತು ಪುರಸ್ಕರಿಸಿದೆ. 'ದೌರ್ಗಂಧಿಕಾ ಅಪಹರಣ',. ನಮ್ಮ ಹೊಟ್ಟೆಯಲ್ಲೊಂದು 'ದಕ್ಷಿಣ ಅಮೆರಿಕ', ಸಸ್ಯಶಾಸ್ತ್ರಕ್ಕೆ ಸಂಬಂಧಿಸಿದ ಇತರ ಕೃತಿಗಳು. 'ಪಂಚ ಕಳಸಗೋಪುರ', ಕಾಲೇಜು ರಂಗ 'ಕಾಲೇಜು ತರಂಗ' ಹಾಸ್ಯ ವಿಡಂಬನೆಗಳಿಂದ ಕೂಡಿದ ವಿಶಿಷ್ಟ ಕೃತಿಗಳು. ಇವರಿಗೆ ಚಿತ್ರಕಲೆ ಹಾಗೂ ಸಂಗೀತದಲ್ಲೂ ಅಮಿತ ಅಭಿರುಚಿ.

ಪ್ರಶಸ್ತಿಗಳು : ಬೀರಬಲ್ ಸಹಾನಿ ಚಿನ್ನದ ಪದಕ (1977) 'ಅಮೇರಿಕದಲ್ಲಿ ನಾನು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ರಷ್ಯಾದ ಲೆನಿನ್‌ಗ್ರೇಡ್ ಪ್ರಶಸ್ತಿ 1977), ಸಾಕ್ಷಾತ್ಕಾರದ ದಾರಿಯಲ್ಲಿ (ವಿಜ್ಞಾನ ಸಾಹಿತ್ಯ) ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (1980).

**ಡಾ|| ಕೆ. ಟಿ. ಪಾಂಡುರಂಗಿ*** : (ಕೃಷ್ಣಾಚಾರ್ಯ ತಮ್ಮಣ್ಣಾಚಾರ್ಯ ಪಾಂಡುರಂಗಿ). ಸಂಸ್ಕೃತ ವಿದ್ವಾಂಸರು. ವಾಗ್ಮಿಗಳು, ಹೆಸರಾಂತ ಉಪನ್ಯಾಸಕರು. ಪೂರ್ಣಪ್ರಜ್ಞ ವಿದ್ಯಾಪೀಠ (ಬೆಂಗಳೂರು) ದ ಉಪಕುಲಪತಿಗಳು.

ವೇದಾಂತ ವಿದ್ವಾನ್, ಮೀಮಾಂಸ ಶಿರೋಮಣಿ, ದರ್ಶನರತ್ನ. ಮೀಮಾಂಸ ಭೂಷಣ ಮುಂತಾದ ಉಪಾಧಿಗಳು ದೊರೆತಿವೆ.

ಕೇಂದ್ರೀಯ ಸಂಸ್ಕೃತ ಮಂಡಲಿಯ ಸದಸ್ಯರು. ಚೀಣೀ ಭಾಷೆಯ ಪರಿಚಯ ಸಹ ಇವರಿಗಿದೆ. ಸ್ವಗೃಹದಲ್ಲಿ 1200ಕ್ಕೂ ಹೆಚ್ಚಿನ ಪ್ರಾಚೀನ ಹಸ್ತಲಿಖಿತ ಗ್ರಂಥಗಳನ್ನು ಸಂಗ್ರಹಿಸಿಟ್ಟಿದ್ದಾರೆ.

ಕೃತಿಗಳು : ಸಂಸ್ಕೃತ ಕವಯಿತ್ರಿಗಳು, ಕಾವ್ಯಶಾಸ್ತ್ರ ವಿನೋದ, ಕಾಳಿದಾಸನ ಸೌಂದರ್ಯ ದೃಷ್ಟಿ, ಉಪನಿಷದ್ ದರ್ಶನ ಮುಂತಾದವು.

ಇಂಗ್ಲೀಷ್ ಹಾಗೂ ಸಂಸ್ಕೃತದಲ್ಲೂ ಪ್ರೌಢ ಗ್ರಂಥಗಳನ್ನು ರಚಿಸಿದ್ದಾರೆ.

---

* ಜನನ: ಡಿಸೆಂಬರ್ 1, 1918. ಧಾರವಾಡ ಜಿಲ್ಲೆಯ 'ತುಮ್ಮಿನಕಟ್ಟೆ' ಗ್ರಾಮದಲ್ಲಿ.

**ವಿದ್ವಾನ್ ರಾಮಚಂದ್ರ ಉಚ್ಚಿಲ್**[1] **:** ಔಪಚಾರಿಕ ವಿದ್ಯಾಭ್ಯಾಸ ಇಲ್ಲದಿದ್ದರೂ ಸ್ವಸಾಮರ್ಥ್ಯದಿಂದ ಮುಂದೆ ಬಂದ ಪ್ರಾಮಾಣಿಕ ವ್ಯಕ್ತಿ. ಉದ್ಯೋಗಿಯಾಗಿ ಮುಂದುವರಿದುದಲ್ಲದೆ ರಾತ್ರಿ ಶಾಲೆ ನಡೆಸಿ ಕನ್ನಡ ಬೋಧಿಸಿದರು. ಇದರೊಂದಿಗೆ ಸ್ವಂತ ಸಾಂಸ್ಕೃತಿಕ ಮೇಲ್ಮೆಗೂ ಪ್ರಯತ್ನ ನಡೆಸಿದ್ದರು. ಕನ್ನಡ ವಿದ್ವಾನ್ ಪರೀಕ್ಷೆ ಪಾಸು ಮಾಡಿದರು. ಅಂತೆಯೇ ಸಾಹಿತ್ಯಾಭ್ಯಾಸ ಮುಂದುವರಿಸಿದರು. ಮುದ್ದಣ, ಪಂಪ, ಕುಮಾರವ್ಯಾಸ, ನಾಘವಾಂಕ, ಕೇಶಿರಾಜ, ಲಕ್ಷ್ಮೀಶ ಮುಂತಾದವರುಗಳ ಬಗ್ಗೆ ಪೂರ್ಣ ಮಾಹಿತಿ ಗಳಿಸಿದರು.

ಕೃತಿಗಳು : ಗುಂಡಪ್ಪನವರೊಡನೆ ಕೂಡಿ ಇವರು ಬರೆದ 'ಸುಲಭ ವ್ಯಾಕರಣ' ಮತ್ತು 'ವ್ಯಾಕರಣ ಮತ್ತು ಛಂದೋಲಂಕಾರ' ಹಲವು ಮುದ್ರಣ ಕಂಡಿವೆ.

ಇತರ ಕೃತಿಗಳು : ಮುದ್ದಣ ಮಹಾಕವಿ, 'ಯಕ್ಷಗಾನ ಚರಿತ್ರೆ' ಕೃತಿಗಳನ್ನು ಶ್ರೀನಿವಾಸ ಹಾವನೂರ್ ಮತ್ತು ಭೀಮರಾವ್ ಚಿಟಗುಪ್ಪಿಯವರೊಡನೆ ಸೇರಿ ರಚಿಸಿದ್ದಾರೆ. 'ಕೃಷ್ಣಾರ್ಜುನ ಗರ್ವಭಂಗ' (ಯಕ್ಷಗಾನ ಕೃತಿ), 'ಕಡಲಕರೆಯ ಚಿತ್ರಗಳು' (ವಿಶಿಷ್ಟ ಪ್ರಕಾರಕ್ಕೆ ಸೇರತಕ್ಕ ಕೃತಿ. ಕಥೆ, ಪ್ರಬಂಧಕ್ಕೆ ಸೇರದ ಅವರ ಹುಟ್ಟೂರಿನ ಸುತ್ತಲಿನ ಜನಜೀವನ ಚಿತ್ರಣ)

ಪತ್ರಿಕೋದ್ಯಮದಲ್ಲಿ ಶ್ರೀಯುತರು ಶ್ರಮಿಸಿದ್ದಾರೆ. ಮುಂಬಯಿಯ 'ನುಡಿ', 'ತಾಯಿನುಡಿ'ಗೆ ಅಪಾರ ಸಂಖ್ಯೆಯ ಲೇಖನಗಳನ್ನು ಅಂಕಣಕಾರರಾಗಿ ಬರೆದಿದ್ದರು.

**ಜಿ. ವಿ. ಬಿ. ನಾಯುಡು**[2] **:** (ಗೋಣಿಕೊಪ್ಪಲು ವೆಂಕಟಸ್ವಾಮಿ ಭಕ್ತವತ್ಸಲ) ಸರಕಾರದ ವ್ಯವಸಾಯ ಇಲಾಖೆಯಲ್ಲಿ ನಿರ್ದೇಶಕರಾಗಿ ನಿವೃತ್ತಿ. ಸಾಹಿತ್ಯದಲ್ಲಿ ಅಮಿತಾಸಕ್ತಿ. ಇವರು ರಚಿಸಿದ 'ವ್ಯವಸಾಯ ಕೈಪಿಡಿ'ಗೆ ಸರ್ಕಾರದ ಬಹುಮಾನ ಬಂದಿದೆ. ವೈಜ್ಞಾನಿಕ ವಿಭಾಗದಲ್ಲಿ ಬಹಳ ಉಪಯುಕ್ತ ಕೃತಿಗಳನ್ನು ರಚಿಸಿದ್ದಾರೆ.

ಮುಖ್ಯವಾದವುಗಳು : ವನ್ಯಮೃಗ ನಮ್ಮ ಸಂಪತ್ತು, ಕಬ್ಬು, ತೆಂಗು, ತರಕಾರಿಗಳು, ಪಕ್ಷಿಗಳು, ತಾಂಬೂಲ ಮಂಜರಿ, ಸಸ್ತನಿಗಳು, ಜಲೋದ್ಯಾನಗಳು, ಸರೀಸೃಪಗಳು, (ಅಕ್ವೇರಿಯಮ್ಸ್), ವ್ಯವಸಾಯ ಪ್ರಗತಿ ಸಾಧನಯ ಸೂತ್ರಗಳು, ಗುಲಾಬಿ, ವ್ಯವಸಾಯ ಕೈಪಿಡಿ.

ಹಲವಾರು ಕಥೆಗಳನ್ನು ರಚಿಸಿದ್ದಾರೆ. ದೆವ್ವದ ಕಥೆಗಳು, ತಿರುಗು ಮುರುಗು ಕಥೆಗಳು (ಸಂಕಲನಗಳು)

---

1 ಜನನ : 1920, ಮಂಗಳೂರು ತಾಲ್ಲೂಕಿನ ಸೋಮೇಶ್ವರ ಉಚ್ಚಿಲ ಗ್ರಾಮದಲ್ಲಿ.

2 ಜನನ : ಜುಲೈ 10, 1920. ತಮಿಳುನಾಡಿನ ತಿರುವಣ್ಣಾಮಲೈ. ತಂದೆ : ವೆಂಕಟಸ್ವಾಮಿ ನಾಯುಡು, ತಾಯಿ : ಗಜರಾಜಮ್ಮ.

**ಚಾಚವಾಡ ದೇವಯ್ಯ ಗಣಪತಿ**[1] : ಇವರ 'ಕೊಡಗು ಮತ್ತು ಕೊಡವರು' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಹಾಗೂ ಲೋಕ ಶಿಕ್ಷಣ ವಿಶ್ವಸ್ಥನಿಧಿ ಬಹುಮಾನ ಸಹ ದೊರೆತಿವೆ.

ಬಹುಮುಖ ಪ್ರತಿಭೆಯ ಶ್ರೀಯುತರ ಕೃತಿಗಳ ಸಂಖ್ಯೆ ಸುಮಾರು 25.

ಮುಖ್ಯ ಕೃತಿಗಳು : ಕುಸುಮಚಯ, ಪತಾವಳಿ, ಪ್ರತಿಧ್ವನಿ, ಕೊಡಗರು ಅವರ ಸಂಸ್ಕೃತಿ.

**ಜಗಲೂರು ರಾಘವೇಂದ್ರರಾವ್ ಲಕ್ಷ್ಮಣರಾವ್**[2] : ಬೆಂಗಳೂರು ವಿಶ್ವವಿದ್ಯಾಲಯದ ರಸಾಯನ ಶಾಸ್ತ್ರದ ಪ್ರಾಧ್ಯಾಪಕರಾಗಿದ್ದು ನಂತರ ಮೈಸೂರು ವಿಶ್ವ ವಿದ್ಯಾನಿಲಯದ ಇಂಗ್ಲೀಷ್-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಅಲ್ಲಿಂದ ನಿವೃತ್ತಿಗೊಂಡು ಸಾಹಿತ್ಯ ಸೇವೆಯಲ್ಲಿ ಮುಖ್ಯವಾಗಿ ವಿಜ್ಞಾನ ಕ್ಷೇತ್ರದ ಕೃತಿರಚನೆಯಲ್ಲಿ ತೊಡಗಿದ್ದಾರೆ. ಪರಮಾಣು ಕುರಿತ ಒಂದು ಕೃತಿಗೆ ಮದರಾಸು ವಿಶ್ವವಿದ್ಯಾಲಯದ ಬಹುಮಾನ, ಗೆಲಿಲಿಯೋ ಕೃತಿಗೆ ಅಖಿಲ ಭಾರತ ಮಕ್ಕಳ ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನ. 'ವಿಜ್ಞಾನ ವಿಚಾರ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿವೆ.

ಕೃತಿಗಳ ಸಂಖ್ಯೆ ಸುಮಾರು 20.

ಮುಖ್ಯವಾದವುಗಳು : ಆಹಾರ, ಪರಮಾಣು ಚರಿತ್ರೆ, ವಿಜ್ಞಾನ ವಿಚಾರ, ಇಂದಿನ ವಿಜ್ಞಾನ ಮತ್ತು ನೀವು, ನಮ್ಮ ರೈಲ್ವೆಗಳು, ಜಗತ್ತನ್ನು ಬದಲಾಯಿಸಿರುವ ವೈಜ್ಞಾನಿಕ ಸಾಧನೆಗಳು, ಆರ್ಕಿಮಿಡೀಸ್, ಲೂಯಿಪಾಶ್ಚರ್, ಗೆಲಿಲಿಯೊ, ವಿಜ್ಞಾನಿಗಳೊಡನೆ ರಸನಿಮಿಷಗಳು, ರಸಾಯನ ಶಾಸ್ತ್ರ, ಭಾರತದ ಪರಮಾಣು ಶಕ್ತಿ.

**ಡಾ|| ಕೆ. ಕೃಷ್ಣಮೂರ್ತಿ**[3] : ಸಂಸ್ಕೃತದ ಅನರ್ಘ್ಯ ರತ್ನಗಳ ಪರಿಚಯ ಕನ್ನಡಕ್ಕೆ ಮಾಡಿಸಿರುವ ವಿದ್ವಾಂಸರು. ಹಲವು ಕಾಲೇಜುಗಳಲ್ಲಿ ಉಪನ್ಯಾಸಕರಾಗಿದ್ದು ಕರ್ನಾಟಕ ವಿಶ್ವವಿದ್ಯಾನಿಲಯದ ಸಂಸ್ಕೃತ ಇಲಾಖೆಯ ಮುಖ್ಯಸ್ಥರಾಗಿ ನಿವೃತ್ತರಾಗಿದ್ದಾರೆ. ಸಂಶೋಧನೆಯಲ್ಲಿ ಆಸಕ್ತಿ ಇರುವ ಶ್ರೀಯುತರು ಇನ್ನೂ ಇದರಲ್ಲೆ ನಿರತರಾಗಿದ್ದಾರೆ. ಕನ್ನಡ ಕಾವ್ಯಗಳ ಮೇಲೆ ವಿಮರ್ಶೆಗಳನ್ನು ಬರೆದಿದ್ದಾರೆ. ಆನಂದವರ್ಧನನ 'ಧ್ವನ್ಯಾಲೋಕ'ವನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ. ಕಾಳಿದಾಸನನ್ನು ಕುರಿತು ಗ್ರಂಥವೊಂದನ್ನು ಇಂಗ್ಲೀಷಿನಲ್ಲಿ ಪ್ರಕಟಿಸಿದ್ದಾರೆ. ಇವರು ಸಂಸ್ಕೃತದ

---

1 ಜನನ : ಜೂನ್ 16, 1920. ಪೊನ್ನಂಪೇಟೆಯಲ್ಲಿ. ತಂದೆ : ದೇವಯ್ಯ ; ತಾಯಿ : ಮಾಚವ್ವ.

2 ಜನನ : ಜನವರಿ 21, 1921. ಚಿತ್ರದುರ್ಗ ಜಿಲ್ಲೆಯ ಜಗಲೂರಿನಲ್ಲಿ. ತಂದೆ : ರಾಘವೇಂದ್ರರಾವ್, ತಾಯಿ : ನಾಗಮ್ಮ.

3 ಜನನ : 1923. ಹಾಸನ ಜಿಲ್ಲೆಯ 'ಕೇರಳಾಪುರ'ದಲ್ಲಿ.

ಅಲಂಕಾರ ಗ್ರಂಥಕರ್ತೃಗಳಾದ ಭಾಮಹ, ದಂಡಿ, ವಾಮನ, ರಾಜಶೇಖರ, ಕ್ಷೇಮೇಂದ್ರ, ಅಭಿನವ ಗುಪ್ತ, ಮಮ್ಮಟರ ಗ್ರಂಥಗಳನ್ನು ಅನುವಾದಿಸಿರುವುದಲ್ಲದೆ ಭಾಸ, ಭಾರವಿ, ಶೂದ್ರಕ, ಕಾಳಿದಾಸ ಭವಭೂತಿ, ಶಕ್ತಿಭದ್ರ ಮುಂತಾದವರುಗಳ ಕೃತಿಗಳನ್ನು ಅನುವಾದಿಸಿದ್ದಾರೆ.

ಕೃತಿಗಳು : ಕನ್ನಡ ಔಚಿತ್ಯ ವಿಚಾರಚರ್ಚೆ, ಕನ್ನಡ ಕಾವ್ಯಾಲಂಕಾರ, ಕನ್ನಡದಲ್ಲಿ ಕಾವ್ಯತತ್ವ, ಕನ್ನಡ ಕಾವ್ಯಾಲಂಕಾರ ಸೂತ್ರವೃತ್ತಿ, ಧ್ವನ್ಯಾಲೋಕ, ಕಾವ್ಯಮೀಮಾಂಸೆ, ಕನ್ನಡ ಉತ್ತರ ರಾಮ ಚರಿತೆ, ಆನಂದವರ್ಧನನ ಕಾವ್ಯಮೀಮಾಂಸೆ, ಮುದ್ರಾರಾಕ್ಷಸ ಕಥಾಸಾರ, ಕನ್ನಡ ಶಕುಂತಲ, ಕರ್ನಾಟಕ ಇತಿಹಾಸ ದರ್ಶನ, ಕನ್ನಡ ಭಾಷಾ ಸ್ವರೂಪ, ಹರಿಕಥಾ ಮೃತಸಾರ, ಗೊಮ್ಮಟ ದರ್ಶನ, ಪರ್ವತಪ್ರಿಯತೇನ್ ಸಿಂಗ್, ಮಹಾ ಭಾರತ, ಕಾಳಿದಾಸನ ನಾಟಕಗಳು ಮುಂತಾದವುಗಳು.

ರಾಜ್ಯ ಸಾಹಿತ್ಯ ಅಕಾಡೆಮಿ 1984 ರಲ್ಲಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

**ವೀರಭದ್ರಪ್ಪ ಚನವೀರಪ್ಪ ಹಿತ್ತಲಮನಿ**[1] **:** ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಕೃಷಿವಿಜ್ಞಾನದಲ್ಲಿ ಬಹಳಷ್ಟು ಕೃತಿಗಳನ್ನು ರಚಿಸಿರುವುದಲ್ಲದೆ ಸಾಹಿತ್ಯದ ಇತರ ಪ್ರಕಾರಗಳಲ್ಲೂ ಕೃಷಿ ಮಾಡಿ ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ.

ಇವರ ಕೃತಿಗಳ ಸಂಖ್ಯೆ ಸುಮಾರು 25,

ಮುಖ್ಯ ಕೃತಿಗಳು : ಗೊಬ್ಬರ, ಗೋಮಾತೆ, ಮಣ್ಣು ಮತ್ತು ನೀರು, ಸಂರಕ್ಷಣಾ ಕೈಪಿಡಿ (ಕೃಷಿ ವಿಜ್ಞಾನ), ಶರಾವತಿಯಿಂದ ಸಾಬರಮತಿ (ಪ್ರವಾಸ ಸಾಹಿತ್ಯ), ಚೆಂದುಟಿಯ ಮುತ್ತು, ಭೂಮಿಗಿಳಿದ ತಾರೆ (ಕಥಾ ಸಂಕಲನ), ಅನ್ನದಾತ, ಮದುವೆಯ ಗುರಿ (ಅನುವಾದ), ಮೈಸೂರು ರಾಜ್ಯದಲ್ಲಿ ಕೃಷಿ (ಸಂಪಾದನೆ)

**ಡಾ|| ವಸಂತ ಮಧ್ವರಾವ್ ಕೋರವಾರ**[2] **:** ಪ್ರಾಧ್ಯಾಪಕರು ರಷ್ಯ ಭಾಷೆಯಲ್ಲಿ ಪ್ರೌಢಿಮೆ ಪಡೆದಿದ್ದಾರೆ. ವಿಜ್ಞಾನ ಸಾಹಿತ್ಯ ರಚನೆಯಲ್ಲಿ ಆಸಕ್ತರು.

ಮುಖ್ಯ ಕೃತಿಗಳು : ವೇಗೋತ್ಕರ್ಷಕಗಳು, ಸಾಪೇಕ್ಷತಾವಾದ (ವೈಜ್ಞಾನಿಕ ಕೃತಿಗಳು), ಇಂಗ್ಲೀಷಿನಲ್ಲೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

**ಕೃಷ್ಣಗುರುನಾಥ ಜೋಶಿ**[3] **:** ಸಮಾಜಶಾಸ್ತ್ರದ ಅಧ್ಯಾಪಕರು. ಸಾಹಿತ್ಯಾಸಕ್ತರು. ಇವರು ರಚಿಸಿರುವ ಮುಖ್ಯ ಕೃತಿಗಳು : ಸಾಮಾಜಿಕ ಸಮಸ್ಯೆಗಳು.

---

1 ಜನನ : ಆಗಸ್ಟ್ 1, 1924. ಧಾರವಾಡ ಜಿಲ್ಲೆಯ ಮೋಟೆಬೆನ್ನೂರಿನಲ್ಲಿ. ತಂದೆ : ಚನ್ನವೀರಪ್ಪ ಮಲ್ಲಪ್ಪ ಹಿತ್ತಲಮನಿ. ತಾಯಿ : ಬಸಮ್ಮ.

2 ಜನನ : ನವಂಬರ್ 7, 1924, ಧಾರವಾಡ ಜಿಲ್ಲೆಯ ಮುಂಡರಗಿಯಲ್ಲಿ. ತಂದೆ : ಗೋಪಾಳರಾವ್, ತಾಯಿ : ಪದ್ಮಾವತಿ.

3 ಜನನ : ಮಾರ್ಚ್ 1, 1944. ಧಾರವಾಡ ಜಿಲ್ಲೆಯ ಮೊಳೆಮಣ್ಣೂರಿನಲ್ಲಿ.

ಸಾಮಾಜಿಕ ಬದಲಾವಣೆ ಮತ್ತು ಪ್ರಗತಿ, ಸಂಧಿಕಾಲದ ಹಿಂದೂ ಸ್ವಮಾಜ, ಸಮಾಜ ಶಾಸ್ತ್ರದ ಮೂಲ ಸಿದ್ಧಾಂತಗಳು ಮುಂತಾದವುಗಳು.

**ಡಾ|| ವಸಂತ ರಂಗನಾಥ ಮುತಾಲಿಕ ದೇಸಾಯಿ[1] :** ಬ್ಯಾಂಕಿನಲ್ಲಿ ಉದ್ಯೋಗಿ. ಆದರೆ ಸಾಹಿತ್ಯದಲ್ಲಿ ಅಪಾರ ಆಸಕ್ತಿ ಉಳ್ಳವರು. ಸುಮಾರು 50 ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ಮುಖ್ಯವಾದವುಗಳು : ಶ್ರೀ ಗುರುರಾಜ ವಾಙ್ಮಯ ದರ್ಶನ, ಶ್ರೀ ಚಿದಂಬರ ಭಕ್ತಿಗೀತೆಗಳು, ಮಂತ್ರಾಲಯ ಕ್ಷೇತ್ರ, ಬಾಲಕರಿಗಾಗಿ ಭಗವದ್ಗೀತೆ, ಅರಳೆಬಟ್ಟೆ ಉದ್ಯಮ, ಕೃಷಿ ಮತ್ತು ಆಹಾರ, ವಸಂತಾಂತರಂಗ ಮುಂತಾದವು.

**ದೇವಚಂದ್ರ ಜೋಯಿಸ್ ಪದ್ಮನಾಭಶರ್ಮ[2] :** ಕನ್ನಡ ಮತ್ತು ಹಿಂದಿ ಪಂಡಿತರು. ಕಾಲೇಜಿನ ಶಿಕ್ಷಕರಾಗಿ ನಿವೃತ್ತರಾಗಿದ್ದಾರೆ.

'ಕರ್ನಾಟಕ ಶಬ್ದಾನುಶಾಸನ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ. ಜೈನಸಾಹಿತ್ಯ ಭೂಷಣ ಬಿರುದು ಸಹ ದೊರೆತಿದೆ. ಇವರ ಕೃತಿಗಳ ಸಂಖ್ಯೆ ಸುಮಾರು 70.

ಮುಖ್ಯವಾದವುಗಳು : ಗೋಮಟೇಶ್ವರ ಲಾವಣಿ, ಮ್ಯಾಜಿಸ್ಟ್ರೇಟರ ಮಡದಿ, ಆತ್ಮದರ್ಶನ, ಭಗವಾನ್ ಮಹಾವೀರ. ಸಾಹಸೀ ಸುಭಾಸ್. ಅಭಿನವ ವಾಗ್ದೇವಿ ಕಂತಿ ಮುಂತಾದವು.

**ಜಿ. ಟಿ. ನಾರಾಯಣರಾವ್[3]** (ಗುಡ್ಡೆ ಹಿತ್ಲು ತಿಮ್ಮಪ್ಪಯ್ಯ ನಾರಾಯಣ ರಾವ್) : ವಿಜ್ಞಾನ ಸಾಹಿತ್ಯರಚನೆಯಲ್ಲಿ ಹೆಸರಿಸಬೇಕಾದ ವ್ಯಕ್ತಿ. ಮಂಗಳೂರು, ಮದರಾಸಿನಲ್ಲಿ ವಿದ್ಯಾರ್ಥಿಯಾಗಿದ್ದು ಗಣಿತದಲ್ಲಿ ಸ್ನಾತಕೋತ್ತರ ಡಿಗ್ರಿ ಪಡೆದು ಅಧ್ಯಾಪಕರಾಗಿ, ಎನ್.ಸಿ.ಸಿ. ಅಧಿಕಾರಿಯಾಗಿ, ವಿಶ್ವವಿದ್ಯಾನಿಲಯದ ಕನ್ನಡ ವಿಶ್ವ ಕೋಶದ ವಿಜ್ಞಾನ ವಿಭಾಗದ ಸಂಪಾದಕರಾಗಿ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದಾರೆ.

ಜೀವನವೆಂಬುದು ಸಮೀಕರಣವಲ್ಲ ಎನ್ನುವ ಇವರು ಅದನ್ನು ಒಂದು ಸಮೀಕರಣರೂಪದಲ್ಲಿ ವ್ಯಕ್ತಪಡಿಸುತ್ತಾರೆ.

(ಕರ್ತವ್ಯ)—(ಸ್ವಾರ್ಥ) >=< 0

ಸ್ವಾರ್ಥವೇ ಹೆಚ್ಚಾದಾಗ ಬಾಳು ಸೊನ್ನೆಗಿಂತ ಕೀಳು ಎಂಬುದೇ ಅವರ ಜೀವನ ಸೂತ್ರ.

---

1 ಜನನ : ಮೇ 14, 1933, ಧಾರವಾಡದಲ್ಲಿ.

2 ಜನನ : ನವೆಂಬರ್ 27, 1925. ಮೈಸೂರು ಜಿಲ್ಲೆಯ ಭುವನಹಳ್ಳಿಯಲ್ಲಿ. ತಂದೆ : ದೇವಚಂದ್ರ ಜೋಯಿಸ್. ತಾಯಿ : ಚಂದ್ರಾವತಮ್ಮ.

3 ಜನನ : ಸೆಪ್ಟೆಂಬರ್ 14, 1926. ಮಡಕೇರಿಯಲ್ಲಿ. ತಂದೆ : ತಿಮ್ಮಪ್ಪಯ್ಯ. ತಾಯಿ : ವೆಂಕಟಲಕ್ಷ್ಮಿ.

ಸಾಹಿತಿಯ ಮನವನ್ನೊಳಗೊಂಡಿರುವ ಈ ವಿಜ್ಞಾನಿ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ. ಕಥೆ ರಚಿಸಿದ್ದಾರೆ. ಅಣಕವಾಡು ಹೆಣೆದಿದ್ದಾರೆ. ಜೀವನಚರಿತ್ರೆಯಲ್ಲದೆ ವೈಜ್ಞಾನಿಕ ವಿಷಯ ಕುರಿತ ಹಲವಾರು ಕೃತಿ ರಚಿಸಿದ್ದಾರೆ. ಕೆಲವು ರಾಜ್ಯ ಅಕಾಡೆಮಿ ಬಹುಮಾನ ಸಹ ಗಳಿಸಿವೆ.

ಮುಖ್ಯ ಕೃತಿಗಳು: ಬಲವಿಜ್ಞಾನ ತತ್ವಗಳು (ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ – 1975). ನಕ್ಷತ್ರ ವೀಕ್ಷಣೆ, (ರಾ. ಸಾ. ಅ. ಬಹುಮಾನ–1982); ಬೀಜ ರೇಖಾಗಣಿತ ಮತ್ತು ತ್ರಿಕೋಣಮಿತಿ, ದ್ರವಚಲನೆ, ನಕ್ಷತ್ರಲೋಕ, ಶ್ರೀನಿವಾಸ ರಾಮಾನುಜನ್, ಕುದುರೆಮುಖದೆಡೆಗೆ, ಜಾಮಿತಿ ವನಸುಮ, ಕೊಡಗಿನ ಕಥೆಗಳು, ಎನ್.ಸಿ.ಸಿ. ದಿನಗಳು, ಮಾನವ ಚಂದ್ರನ ಮೇಲೆ, ಐನ್‌ಸ್ಟೈನ್, ಕೋಪರ್ನಿಕಸ್.

**ಎಸ್. ಕೆ. ರಾಮಚಂದ್ರರಾವ್[1] :** (ಸಾಲಿಗ್ರಾಮ ಕೃಷ್ಣರಾವ್ ರಾಮಚಂದ್ರರಾವ್) ಮನಶ್ಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದಾರೆ. ವಿದ್ಯಾಲಂಕಾರ ಪ್ರಶಸ್ತಿ ಲಭಿಸಿದೆ. ಇವರು ಪ್ರಸಿದ್ಧ ಸಂಶೋಧಕರು, ವಿಚಾರವಾದಿಗಳು, ಹಾಗೂ ನಿಷ್ಣಾತ ಕಲಾವಿದರು. ಚಿತ್ರಕಲೆ, ಶಿಲ್ಪಕಲೆ ಮತ್ತು ಸಂಗೀತ ಶಾಸ್ತ್ರಗಳಲ್ಲಿ ಬಹು ನೈಪುಣ್ಯತೆ ಗಳಿಸಿದ್ದಾರೆ. ಭಾರತೀಯ ಸಾಂಸ್ಕೃತಿಕ ಅಧ್ಯಯನ ಕ್ಷೇತ್ರದಲ್ಲಿ ಇವರದು ಶಾಶ್ವತ ಸ್ಥಾನ. ಭಾರತೀಯ ಸಂಸ್ಕೃತಿಯ ಅಧ್ಯಯನಕ್ಕಾಗಿ ಟಿಬೆಟನ್, ಪಾಲಿ ಭಾಷೆಗಳನ್ನು ಅಭ್ಯಸಿಸಿ ಇಂಗ್ಲೀಷಿನಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಕನ್ನಡ ಸಾರಸ್ವತ ಲೋಕಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿರುವ ಶ್ರೀಯುತರು ಮಕ್ಕಳ ಸಾಹಿತ್ಯವನ್ನೂ ಸಂಪನ್ನಗೊಳಿಸಿದ್ದಾರೆ.

ಮುಖ್ಯ ಕೃತಿಗಳು : ವಿವಾಹ ಪದ್ಧತಿಗಳು, ಪ್ರಾಚೀನ ಸಂಸ್ಕೃತಿ, ಪರಾಮಾನಸ ಶಾಸ್ತ್ರ, ಮೂರ್ತಿ ಶಿಲ್ಪ, ನೆಲೆ ಹಿನ್ನೆಲೆ, ತಿರುಪತಿ ತಿಮ್ಮಪ್ಪ, ಕನ್ನಡ ನಾಡಿನ ಧಾರ್ಮಿಕ ಪರಂಪರೆ, ಆಯುರ್ವೇದದಲ್ಲಿ ನಾಡಿ ವಿಜ್ಞಾನ, ಟಿಬೆಟ್ಟಿನ ಯೋಗಿ ಮಿಲರೇಪ, ಬೋಧಿಯ ಬೆಳಕಿನಲ್ಲಿ, (ಸಂಕೀರ್ಣ ಕೃತಿಗಳು) ಪ್ರೊ॥ ಎಂ. ಹಿರಿಯಣ್ಣ, ಕನಕದಾಸರು, ದೀಪಂಕರ, ಪುರಂದರದಾಸರು, ಭದ್ರಬಾಹು ಸ್ವಾಮಿ, ಮಹರ್ಷಿ ದೈವರಾತರು, ತ್ಯಾಗರಾಜ, ಶ್ರೀಮಧ್ವಾಚಾರ್ಯ, ಬೆಂಗಳೂರಿನ ಕರಗ (ಮಕ್ಕಳ ಸಾಹಿತ್ಯ).

**ಡಾ॥ ಕೆ. ಪುಟ್ಟಸ್ವಾಮಯ್ಯ[2] :** ಬಹು ಪ್ರತಿಭಾವಂತರು, ಶ್ರೇಷ್ಠ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರು.

---

1 ಜನನ : ಫೆಬ್ರವರಿ 9, 1927. ಹಾಸನದಲ್ಲಿ. ತಂದೆ : ಎಸ್. ಕೆ. ನಾರಾಯಣರಾವ್. ತಾಯಿ : ಕಮಲಾಬಾಯಿ.

2 ಜನನ : ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ಕೊಂಡಜ್ಜಿಯಲ್ಲಿ.

ಆರ್ಥಿಕಶಕ್ತಿ ಯೋಜನೆ, ಮಾನವಶಕ್ತಿ ಯೋಜನೆ, ಸಮುದಾಯ ಅಭಿವೃದ್ಧಿ, ಮೌಲ್ಯಮಾಪನ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಮಾಹಿತಿ ಪಡೆದಿರುವ ಶ್ರೀಯುತರು ಈ ದಿಸೆಯಲ್ಲಿ ಬಹು ಉಪಯುಕ್ತ ಗ್ರಂಥಗಳನ್ನು ರಚಿಸಿದ್ದಾರೆ.

ನೋಬಲ್ ಬಹುಮಾನ ಪಡೆದ ಅರ್ಥಶಾಸ್ತ್ರಜ್ಞರ ಜೀವನಸಾಧನೆಗಳ ಪರಿಚಯಿಸುವ ಪುಸ್ತಕ, ಭಾರತದ ನಿರುದ್ಯೋಗ ಹಾಗೂ ಮಾನವಶಕ್ತಿಯ ಬಳಕೆ ಕುರಿತ ಕೃತಿ, ಭಾರತದ ನೀರಾವರಿ ಯೋಜನೆ ಕುರಿತ ಪುಸ್ತಕ, 'ಮೌಲ್ಯ ಮತ್ತು ಬಂಡವಾಳ' ಈ ದಿಸೆಯಲ್ಲಿ ಹೆಸರಿಸಬಹುದಾದ ವಿಶಿಷ್ಟ ಕೃತಿಗಳು.

'ಕರ್ನಾಟಕ ಗೆಜಿಟಿಯರ್'ನ ಸಂಪಾದಕರಾಗಿದ್ದು ಹನ್ನೊಂದು ಜಿಲ್ಲಾ ಗೆಜೆಟಿಯರ್‌ಗಳನ್ನು ಸಂಪಾದಿಸಿದ್ದಾರೆ.

ಕರ್ನಾಟಕದ ಆರ್ಥಿಕ ಅಭಿವೃದ್ಧಿ -- 'ನಿರಂತರತೆ ಮತ್ತು ಸ್ಥಿತ್ಯಂತರತೆ' (ಕರ್ನಾಟಕ ಪ್ರಾದೇಶಿಕ ಆರ್ಥಿಕತೆ ಕುರಿತ 600 ಪುಟಗಳ ವಿಶಿಷ್ಟ ಕೃತಿ)

ಶ್ರೀಯುತರು ಸರಕಾರದ ಯೋಜನಾ ಇಲಾಖೆಯಲ್ಲಿ ದುಡಿದು ಉಪಯುಕ್ತ ಕೊಡುಗೆಗಳನ್ನು ನೀಡಿದ್ದಾರೆ. ವಿಶ್ವಸಂಸ್ಥೆಯ ಸಹಯೋಗದಲ್ಲಿ ಹಲವು ದೇಶಗಳನ್ನು ಸುತ್ತಿ ಬಂದಿದ್ದಾರೆ. ಆ ಅನುಭವವನ್ನು ಭಾರತಕ್ಕೆ ಉಪಯುಕ್ತವಾಗುವಂತೆ ಯೋಜನೆಗಳನ್ನೂ ರೂಪಿಸಿದ್ದಾರೆ.

**ಡಾ|| ಪ್ರಭುಶಂಕರ**[1] **:** ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರು.

'ಭಾರತೀಯ ತತ್ವಶಾಸ್ತ್ರದ ರೂಪರೇಖೆಗಳು' (ಅನುವಾದ) ಕೃತಿಗೆ 1973 ರಲ್ಲೂ 'ಅಮೇರಿಕಾದಲ್ಲಿ ನಾನು, ಶಾಂತಿ' (ಪ್ರವಾಸ ಸಾಹಿತ್ಯ) ಕೃತಿಗೆ 1978 ರಲ್ಲೂ 'ಬೆರಗು' (ಜೀವನ ಚರಿತ್ರೆ) 1982ರಲ್ಲೂ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನಗಳು ದೊರೆತಿವೆ.

ಇತರ ಕೃತಿಗಳು : ನಿವೇದಿತ, ಅಂಗುಲಿಮಾಲ, ಕನ್ನಡದಲ್ಲಿ ಭಾವಗೀತೆ, ಸಾಹಿತ್ಯ ಮತ್ತು ಆಧುನಿಕತೆ, ಉಪನಿಷತ್ತುಗಳ ಸಂದೇಶ, ಆಮ್ರಪಾಲಿ, ಚಿಂತೆ ಚಿಂತನ ಇತ್ಯಾದಿ.

**ಟಿ. ಎಸ್. ರಾಜಪ್ಪ**[2] **:** ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಿಭಾಗದಲ್ಲಿ ಸಂಶೋಧಕರಾಗಿದ್ದಾರೆ.

ಕೃತಿಗಳು : ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು, ಧಾರವಾಡ ಜಿಲ್ಲೆಯ ಜಾನಪದ ಕಥೆಗಳು, ರಾಯಚೂರು ಜಿಲ್ಲೆಯ ಜಾನಪದ ಕಥೆಗಳು,

---

1 ಜನನ : ಫೆಬ್ರವರಿ 15, 1929. ಚಾಮರಾಜನಗರದಲ್ಲಿ. ತಂದೆ : ಕರಿಬಸಪ್ಪ. ತಾಯಿ : ರುದ್ರಮ್ಮ.

2 ಜನನ : ಮೇ 9, 1942, ಮೈಸೂರು ಜಿಲ್ಲೆ ತಗಡೂರಿನಲ್ಲಿ.

ರಾಯಚೂರು ಜಿಲ್ಲೆಯ ಜನಪದ ಗೀತೆಗಳು. ಧಾರವಾಡ ಜಿಲ್ಲೆಯ ಲಾವಣಿಗಳು. ಕಲ್ಗಿ ಮತ್ತು ತುರಾ ಲಾವಣಿಗಳು, ಬಳ್ಳಾರಿ ಜಿಲ್ಲೆಯ ಜಾನಪದ ಕಥೆಗಳು. ದಾಳಿಂಬೆ ರಾಣಿ ಮತ್ತು ಇತರ ಕಥೆಗಳು, ಮುಂತಾದ ಸುಮಾರು 20 ಕೃತಿಗಳು.

**ಕೆ. ಎಸ್. ಆಮೂರ[1] :** (ಕೃಷ್ಣ ಶಾಮಾಚಾರ್ಯ ಆಮೂರ) ಕರ್ನಾಟಕ ವಿಶ್ವವಿದ್ಯಾಲಯದ ಗಣಿತ ವಿಭಾಗದಲ್ಲಿ ಪ್ರಾಧ್ಯಾಪಕ. ಶಾಸ್ತ್ರೀಯ ಗ್ರಂಥಗಳನ್ನು ರಚಿಸಿದ್ದಾರೆ.

ಕೃತಿಗಳ ಸಂಖ್ಯೆ ಸುಮಾರು 30.

ಮುಖ್ಯವಾದವುಗಳು : ಕಲನ ಶಾಸ್ತ್ರ ಪರಿಚಯ, ತ್ರಿಕೋನಮಿತಿ, ಬೀಜಗಣಿತ, ಭೂಮಿತಿ.

**ಹ. ವೆಂ. ಸೀತಾರಾಮಯ್ಯ[2] :** ಜೀವನ ಪರ್ಯಂತ ಪತ್ರಿಕಾಕರ್ತರಾಗಿಯೇ ಇದ್ದರೂ ಇವರು ನಾಟಕರಂಗ ಹಾಗೂ ನಾಟಕ ಕಲಾವಿದರ ಬಗ್ಗೆ ಬಹಳ ಕಾಳಜಿ ಇರಿಸಿ ಕೊಂಡಿದ್ದವರು. ಈ ಬಗ್ಗೆಯೇ ಇವರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. 'ಕರ್ನಾಟಕ ರಂಗ ಕಲಾವಿದರು' ಇಂತಹದೊಂದು ಬೃಹತ್ ಕೃತಿ.

ಕೃತಿಗಳು: ಕನ್ನಡ ರಂಗಭೂಮಿ ಕಲಾವಿದರು, ಇದು ನನ್ನ ಕಥೆ, ಅಭಿನಯ ಶಾರದೆ, ಪ್ರತಿಭಾನ್ವಿತರು, ನಟ ಭಯಂಕರ ಗಂಗಾಧರರಾಯರು, ಅಭಿನಯ ಕಲಾ ಧೀಮಂತ ಸುಬ್ಬಯ್ಯನಾಯ್ಡು, ಸಿ. ಬಿ. ಮಲ್ಲಪ್ಪ ಮುಂತಾದವು.

**ಈಶ್ವರ ಕಮ್ಮಾರ[3] :** (ಈಶ್ವರಪ್ಪ ಶಂಕರಪ್ಪ ಕಮ್ಮಾರ) ಕನ್ನಡ ಹಾಗೂ ಹಿಂದಿಯಲ್ಲಿ ಸ್ನಾತಕೋತ್ತರ ಪದವೀಧರ. ಅಧ್ಯಾಪಕ ವೃತ್ತಿಯಿಂದ ನಿವೃತ್ತಿಗೊಂಡಿದ್ದಾರೆ. ಆದರ್ಶಶಿಕ್ಷಕ ಪ್ರಶಸ್ತಿವಿಜೇತರು. ಶಿಶು ಸಾಹಿತ್ಯ, ನಾಟಕ, ಕವನ, ಜಾನಪದ ಮುಂತಾಗಿ ಸಾಹಿತ್ಯದ ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರ 'ಮಕ್ಕಳ ಲೋಕ' (ಶಿಶು ಸಾಹಿತ್ಯ) ಕೃತಿಗೆ 1968ರ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ.

ಕೃತಿಗಳ ಸಂಖ್ಯೆ ಸುಮಾರು 12.

ಮುಖ್ಯವಾದವುಗಳು : ಮೊರಬರ ತವರ (ಜಾನಪದ). ಚೂಡಾರತ್ನ. ದಾರಿ ದೀಪ, ಮಂಗಲ ಗೌರಿ (ನಾಟಕಗಳು) ಗೀತಾಂಜನ (ಕವನ) ; ಪಾಪಾ (ಶಿಶುಸಾಹಿತ್ಯ) ಇತ್ಯಾದಿ.

---

1 ಜನನ: ಆಗಸ್ಟ್ 23, 1931. ಧಾರವಾಡ ಜಿಲ್ಲೆಯ ಸೊರಣಗಿ.

2 ಜೀವಿತಕಾಲ: (1932–1987), ತುಮಕೂರು. ತಂದೆ: ಹರುವೆ ವೆಂಕಟರಾವ್. ತಾಯಿ: ರಾಜಮ್ಮ. ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಸದಸ್ಯರಾಗಿದ್ದರು.

3 ಜನನ: ಜನವರಿ 4, 1933. ಬೆಳಗಾವಿ ಜಿಲ್ಲೆಯ 'ಹಿರೇನಂದಿಹಳ್ಳಿ'ಯಲ್ಲಿ.

**ನೀಲತ್ತಹಳ್ಳಿ ಕಸ್ತೂರಿ**[1] : ಅಂಚೆ ಇಲಾಖೆಯಲ್ಲಿ ಕೆಲಸದಲ್ಲಿದ್ದಾರೆ. ಗಾಂಧಿ ಸಾಹಿತ್ಯದಲ್ಲಿ ಅಪಾರ ಆಸಕ್ತಿ. ಒಳ್ಳೆಯ ಅನುವಾದಕರು. ನುರಿತ ಸಾಹಿತಿ.

ಇವರ ಕೃತಿಗಳ ಸಂಖ್ಯೆ ಸುಮಾರು 15.

ಮುಖ್ಯವಾದವುಗಳು : ಚೀನಾ ಜಪಾನ್ ಕತೆಗಳು (ಅನುವಾದ) ಕರುಣಾಳುಹರಿ (ಕಾದಂಬರಿ), ಇದು ಭಾರತದ ದಾರಿ (ನಾಟಕ) ರಾಜೇಂದ್ರ ಪ್ರಸಾದ್ (ಬಾಲಸಾಹಿತ್ಯ). ಡಾ॥ ಡಿ. ವಿ. ಗುಂಡಪ್ಪ ಜೀವನ ಮತ್ತು ಸಾಧನೆ (ಜೀವನ ಚರಿತ್ರೆ).

**ಶಿವಪುತ್ರಪ್ಪ ರಾಯಪ್ಪ ಗುಂಜಾಳ**[2] **:** ಹೆಸರಾಂತ ಭಾಷಾ ವಿಜ್ಞಾನಿ ಹಾಗೂ ಗ್ರಂಥಾಲಯ ವಿಜ್ಞಾನದಲ್ಲಿ ನಿಷ್ಣಾತರು. 'ಕರ್ನಾಟಕ ಗ್ರಂಥಾಲಯ' ತ್ರೈಮಾಸಿಕದ ಸಂಪಾದಕರು.

ಬಸವಣ್ಣನವರ ವಚನ ಪದ ಪ್ರಯೋಗಕೋಶಕ್ಕೆ ದೇವರಾಜ ಬಹದ್ದೂರ್ ಪ್ರಶಸ್ತಿ ಲಭಿಸಿದೆ.

ಕೃತಿಗಳು : 'ಗ್ರಂಥಾಲಯದ ಅಂತರಂಗ', 'ಸೂಚೀಕರಣದ ಜ್ಞಾನ, ಮತ್ತು ಕ್ರಿಯೆ', 'ಗ್ರಂಥಾಲಯ ದಿಗ್ಗಜಗಳು', 'ಐವರು ಪಾಶ್ಚಿಮಾತ್ಯ ತತ್ವ ಜ್ಞಾನಿಗಳು', 'ಗ್ರಂಥಾಲಯ ವಿಜ್ಞಾನ ದರ್ಶನ', 'ಸಾಹಿತ್ಯ ಶಾಲ್ಮಲಾ' ಮುಂತಾದವು.

**ಎ. ಎಸ್. ಧರಣೇಂದ್ರಯ್ಯ**[3] **:** (ಆಡುಗೂರು ಸಿಂದಪ್ಪಶೆಟ್ಟಿ ಧರಣೇಂದ್ರಯ್ಯ) ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಸಾಹಿತ್ಯ ರಚನೆಯಲ್ಲಿ ಬಹಳ ಆಸಕ್ತಿ.

'ವಿಕಾಸ ಮನೋವಿಜ್ಞಾನ' ಕೃತಿಗೆ ಮೈಸೂರು ವಿಶ್ವವಿದ್ಯಾಲಯದ ಬಹುಮಾನ ಬಂದಿದೆ.

ಇತರ ಕೃತಿಗಳು : ಮಾನಸಿಕ ಆರೋಗ್ಯ, ಸಾಮಾನ್ಯ ಮನೋವಿಜ್ಞಾನ, ಮನೋವಿಶ್ಲೇಷಣೆ ನಡೆದು ಬಂದ ದಾರಿ, ಮನೋ ವೈಜ್ಞಾನಿಕ ಪಾರಿಭಾಷಿಕ ಶಬ್ದಕೋಶ.

**ಡಾ॥ ಜೀ. ಶಂ. ಪರಮಶಿವಯ್ಯ**[4] **:** (ಜೀರಹಳ್ಳಿ ಶಂಕರೇಗೌಡ ಪರಮಶಿವಯ್ಯ) ಮೈಸೂರು ವಿಶ್ವವಿದ್ಯಾಲಯದ ಜಾನಪದ ವಿಭಾಗದ ಮುಖ್ಯಸ್ಥರು.

---

1 ಜನನ: ಸೆಪ್ಟೆಂಬರ್ 29, 1931. 'ಮಾಗಡಿ'ಯಲ್ಲಿ. ತಂದೆ: ವೆಂಕಟಾಚಾರ್ಯ. ತಾಯಿ: ಸೀತಮ್ಮ.

2 ಜನನ: ಜೂನ್ 1932. ಧಾರವಾಡ ಜಿಲ್ಲೆಯ 'ಕೋಳಿವಾಡ' ಗ್ರಾಮದಲ್ಲಿ. ತಂದೆ: ರಾಯಪ್ಪ, ತಾಯಿ: ರುದ್ರಮ್ಮ.

3 ಜನನ: ಜೂನ್ 14, 1933. ಹಾಸನ ಜಿಲ್ಲೆ ಆಡುಗೂರು ಗ್ರಾಮದಲ್ಲಿ. ತಂದೆ: ಸಿಂದಪ್ಪಶೆಟ್ಟಿ; ತಾಯಿ: ಪದ್ಮಾವತಮ್ಮ.

4 ಜನನ: ನವೆಂಬರ್ 12, 1933. ಮಂಡ್ಯ ಜಿಲ್ಲೆ ಉಂಬಲ ಜೀರಹಳ್ಳಿ. ತಂದೆ: ಶಂಕರೇಗೌಡ, ತಾಯಿ: ರಂಗಮ್ಮ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು.

ಬ್ರಿಟನ್, ಫ್ರಾನ್ಸ್, ಜರ್ಮನಿ, ಜೆಕೋಸ್ಲೋವಾಕಿಯಾ, ಅಮೇರಿಕಾ, ಸ್ವೀಡನ್ ಮುಂತಾದ ದೇಶಗಳನ್ನು ಸುತ್ತಿ ಜಾನಪದ ಸಂಸ್ಕೃತಿ, ಸಾಹಿತ್ಯವನ್ನು ಅಭ್ಯಸಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಸುವರ್ಣ ಮಹೋತ್ಸವದಲ್ಲಿ ಇವರ ಅಪಾರ ಸಾಹಿತ್ಯ ಸೇವೆಯನ್ನು ಗುರುತಿಸಿ ಸನ್ಮಾನಿಸಿದೆ. ಒಳ್ಳೆಯ ಕವಿಗಳು, ಕಥೆಗಾರರು, ವಿಮರ್ಶಕರು, ಪ್ರಬಂಧಕಾರರು, ಸಂಶೋಧಕರು ಹಾಗೂ ಗ್ರಂಥ ಸಂಪಾದಕರು. ರಾಜ್ಯ ಸಾಹಿತ್ಯ ಅಕಾಡೆಮಿಯಿಂದಲೂ ಪುರಸ್ಕೃತರು. ಕೃತಿಗಳ ಸಂಖ್ಯೆ ಸುಮಾರು 60.

ಮುಖ್ಯ ಕೃತಿಗಳು : ಅವರ ನೆನೆದೇನು ಜಾನಪದ ಸಾಹಿತ್ಯ ಸಮೀಕ್ಷೆ ಜಾನಪದ ಸಂಗಮ, ಜಾನಪದ ಸಮಾವೇಶ, ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ ಪ್ರಕಾರಗಳು, ಕನ್ನಡ ಒಗಟುಗಳು, (ಜಾನಪದ) ಆಯ್ದ ಜನಪದ ಕಥೆಗಳು, ಕನ್ನಡ ವೃತ್ತಿಗಾಯಕ ಕಾವ್ಯಗಳು, ಸಹ್ಯಾದ್ರಿ, ಕಬ್ಬಿನ ಹಾಲು, ನಾಗವಲ್ಲಿ (ಸಂಪಾದನೆ) ಮೇದರಕಲ್ಲು (ಪ್ರಬಂಧ) ; ಜೀತದ ಗೀತ, ದಿಬ್ಬದಾಚೆ (ಕವನ) ಕಾವಲುಗಾರ, ಮಬ್ಬು ಜಾರಿದ ಕಣಿವೆಯಲ್ಲಿ (ಕಥಾ ಸಂಕಲನ) ಉಕ್ಕಿನ ಮನುಷ್ಯ, ಬೆಳಗೊಳದ ಗೊಮ್ಮಟೇಶ (ಇತರೆ) ಮುದ್ದು ಪದ್ದು (ಕವಿತೆ), ಸಿಡಿಲ ಮರಿಗಳು (ಕಾದಂಬರಿ), ಸೋಲು ತಂದ ಸ್ವಯಂವರ (ನಾಟಕ), ಸಾಹಿತ್ಯ ಸಮೀಕ್ಷೆ, ಜ್ಞಾನೋಪಾಸಕ, ಇಕ್ಷುಗಂಗಾ.

**ಪ್ರೊ|| ಹೆಚ್. ಆರ್. ದಾಸೇಗೌಡ*** : ಶಿಕ್ಷಣ ಕ್ಷೇತ್ರದಲ್ಲಿ ಬಹಳ ಪ್ರಸಿದ್ಧವಾದ ಹೆಸರು. ಆಚಾರ್ಯ ಪಾಠಶಾಲೆ, ಮಹಾರಾಜ ಕಾಲೇಜು, ಲಾ ಕಾಲೇಜುಗಳಲ್ಲಿ ಉಪನ್ಯಾಸಕರು, ಪ್ರಾಧ್ಯಾಪಕರಾಗಿದ್ದು, ಬೆಂಗಳೂರುವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರಾಗಿದ್ದು, ಪ್ರಸ್ತುತ ಕಾಲೇಜು ಅಭಿವೃದ್ಧಿ ಸಮಿತಿಯ ನಿರ್ದೇಶಕರಾಗಿದ್ದಾರೆ.

ಇವರದು ಬಹುಮುಖ ಪ್ರತಿಭೆ. ವಿಮರ್ಶೆ, ಸಂಪಾದನೆ, ಪತ್ರಿಕೋದ್ಯಮ, ಶಿಕ್ಷಣ ಕ್ಷೇತ್ರದಲ್ಲಿ ಬಹು ಉಪಯುಕ್ತ ಹಾಗೂ ಪ್ರೌಢ ಕೃತಿಗಳನ್ನು ರಚಿಸಿದ್ದಾರೆ. ಆಕಾಶವಾಣಿಯ 'ಚಿಂತನ' ಕಾರ್ಯಕ್ರಮದಲ್ಲಿ ಒಂದು ದಶಕಕ್ಕೂ ಹಿಂದಿನಿಂದ ಭಾಗವಹಿಸಿ ವಿಚಾರಪೂರ್ಣ, ಪ್ರಬುದ್ಧ ಚಿಂತನಧಾರೆ ಹರಿಸಿದ್ದಾರೆ. ಈ ಚಿಂತನಗಳ ಸಂಕಲನವೇ ಅವರ ಇತ್ತೀಚಿನ ಕೃತಿ 'ಮೆಲುಕು'.

ಇತರ ಕೃತಿಗಳು : ರಾಜ್ಯ ಶಾಸ್ತ್ರ ಪರಿಚಯ, ಸರ್ಕಾರದ ಸ್ವರೂಪ ಪರಿಚಯ, ರಾಜ್ಯಶಾಸ್ತ್ರ ಪ್ರವೇಶಿಕಾ, ಸಂವಿಧಾನ ಮತ್ತು ಸರ್ಕಾರ, ಸಂವಿಧಾನ (ಮಕ್ಕಳಿಗಾಗಿ), ಸಿಕಲೊಮೆಕಿಯಾವಲ್ಲಿ ಮುಂತಾದವು.

'ಶಿಕ್ಷಣ ಸುಧಾರಕ' ಪತ್ರಿಕೆಯ ಸಂಪಾದಕರು. ಅಖಿಲ ಭಾರತ ಉಪಾಧ್ಯಾಯರ ಸಂಘಗಳ ಒಕ್ಕೂಟದ ಸಲಹಾ ಸಮಿತಿಯ ಅಧ್ಯಕ್ಷರಾಗಿ ಪ್ರಪಂಚದಾದ್ಯಂತ ನಡೆದ ವಿಚಾರ ಸಂಕಿರಣ, ಗೋಷ್ಠಿಗಳಲ್ಲಿ ಭಾಗವಹಿಸಿ ವಿಚಾರ ಮಂಡಿಸಿದ್ದಾರೆ.

ಕುವೆಂಪು ಅಧ್ಯಯನ ಕೇಂದ್ರದ ಅಧ್ಯಕ್ಷರು.

---

* ಜನನ: ಜುಲೈ 1, 1934.

**ಡಾ|| ನಂ. ತಪಸ್ವೀಕುಮಾರ್**[1] **:** (ನಂಜುಂಡಯ್ಯ ತಪಸ್ವೀಕುಮಾರ್) ಮೈಸೂರು ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಕನ್ನಡ ಅಧ್ಯಾಪಕ. ಜನಪದ ಸಾಹಿತ್ಯದಲ್ಲಿ ಅಪಾರ ಆಸಕ್ತಿ, ಕವಿಗಳು ಹೌದು, ಅನೇಕ ಉತ್ಕೃಷ್ಟ ಕೃತಿಗಳನ್ನು ಸಂಪಾದಿಸಿದ್ದಾರೆ. ವಿಮರ್ಶೆಯಲ್ಲೂ ಇವರಿಗೆ ಅತೀವ ಆಸಕ್ತಿ.

ಕೃತಿಗಳ ಸಂಖ್ಯೆ ಸುಮಾರು 10.

ಪ್ರಮುಖ ಕೃತಿಗಳು : ಬಾಳ ಗೀತೆ (ಕವನ), ಜನಪದ ಸಂಸ್ಕೃತಿ, (ವಿಮರ್ಶೆ), ಕನ್ನಡ ಗಾದೆಗಳ ಸಮೀಕ್ಷೆ (ಜಾನಪದ) ಕನ್ನಡ ಜಾನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ.

**ವೆಂಕಟೇಶ ಕುಲಕರ್ಣಿ**[2] **:** ವಕೀಲರು ಸಾಹಿತ್ಯದಲ್ಲೂ ಬಹಳ ಆಸಕ್ತಿ ಉಳ್ಳವರು. ನ್ಯಾಯಶಾಸ್ತ್ರದ ಬಗ್ಗೆ ಹಲವು ಕೃತಿಗಳನ್ನು ರಚಿಸಿದ್ದಾರೆ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 35.

ಮುಖ್ಯವಾದವುಗಳು : ವರದಕ್ಷಿಣೆ ನಿಷೇಧ ಕಾನೂನು, ಜನನ ಮರಣ ನೋಂದಣಿ ಕಾನೂನು, ಜೀತ ನಿರ್ಮೂಲನ ಕಾನೂನು (ನ್ಯಾಯಶಾಸ್ತ್ರ), ಸಾಲಿಸಂಪು ಹಾಗೂ ಗೃಹ ಲೀಲಾ, ಆತ್ಮಹತ್ಯೆ (ನಾಟಕಗಳು)

**ಶ್ರೀವತ್ಸ (ದುದ್ದ ಕೃಷ್ಣಯ್ಯಂಗಾರ್**[3] **:** ಸರ್ಕಾರಿ ಇಲಾಖೆಯಲ್ಲಿ (ರಿಜಿಸ್ಟ್ರಾರ್) ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಸಾಹಿತ್ಯದಲ್ಲಿ ಅಪಾರ ಆಸಕ್ತಿ. ಸುಮಾರು 30 ಕೃತಿಗಳನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. 'ರೈತ ಪ್ರಪಂಚ' ದೇವರಾಜ ಬಹದ್ದೂರ್ ಬಹುಮಾನ, ಗಳಿಸಿದ್ದರೆ 'ವೇದಾಂತ ದೇಶಕರು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ.

ಇತರ ಮುಖ್ಯ ಕೃತಿಗಳು : ರೈತನ ಬಾಳು, ರೈತನ ಸಮಾಜ ಮುಂತಾದವು.

**ನೀಲನಹಳ್ಳಿ ನಡ್ಲೇಗೌಡ ಭದ್ರಯ್ಯ**[4] **:** (ನ ಭ) ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ಅಪಾರ ಸೇವೆ ಮಾಡಿದ್ದಾರೆ. ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿದ್ದರು. ಅಮೇರಿಕಾ, ಇರಾನ್, ಕೆನ್ಯಾ ಮುಂತಾದೆಡೆ ವಯಸ್ಕ ಶಿಕ್ಷಣತಜ್ಞರಾಗಿ ದುಡಿದಿದ್ದಾರೆ. ಇವರ 'ಆಕಾಶದ ಆಶ್ಚರ್ಯ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. ಇವರ ಕೃತಿಗಳ ಸಂಖ್ಯೆ ಸುಮಾರು 15.

---

1 ಜನನ: ಸೆಪ್ಟೆಂಬರ್ 27, 1934. ತುಮಕೂರು ಜಿಲ್ಲೆ ಮುತ್ತುಗದಹಳ್ಳಿಯಲ್ಲಿ. ತಂದೆ: ನಂಜುಂಡಯ್ಯ, ತಾಯಿ: ಬೋರಮ್ಮ.

2 ಜನನ: ಜುಲೈ 23, 1936. ಬಿಜಾಪುರದಲ್ಲಿ. ತಂದೆ: ಭೀಮರಾವ್, ತಾಯಿ: ಲಕ್ಷ್ಮೀಬಾಯಿ.

3 ಜನನ: ಡಿಸೆಂಬರ್ 16, 1905. ಮಂಡ್ಯ ಜಿಲ್ಲೆಯ 'ದುದ್ದ' ಗ್ರಾಮದಲ್ಲಿ.

4 ಜನನ: ಮಂಡ್ಯ ಜಿಲ್ಲೆಯ 'ನೀಲನಹಳ್ಳಿ' ಗ್ರಾಮದಲ್ಲಿ. ತಂದೆ: ನಡ್ಲೇಗೌಡ. ತಾಯಿ: ತಾಯಮ್ಮ.

ಮುಖ್ಯವಾದವುಗಳು : ನಿಮ್ಮ ದೇಹ, ಜೀವಸಂತಾನ ಸಾಗಿದಬಗೆ, ನಡೆದು ನೋಡಲಿ ಕೆಸ್ಲಿಡಗಿನ ಬೆಡಗು, ಗಾಂಧೀಜಿ ಪ್ರಮಾಣ ವಚನಗಳು, ಅರ್ಪಣೆ, ಕುಮಾರ ವ್ಯಾಸನ ಕರ್ಣ, ಅಶೋಕ ಚಕ್ರವರ್ತಿ ಮುಂತಾದವುಗಳು.

**ಕೆ. ಟಿ. ವೀರಪ್ಪ* :** ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರು. ಗ್ರಂಥ ಸಂಪಾದನೆ, ವಿಮರ್ಶೆ, ಸಂಶೋಧನೆಯಲ್ಲಿ ಬಹಳ ಆಸಕ್ತಿ.

ಒಟ್ಟು ಕೃತಿಗಳ ಸಂಖ್ಯೆ ಸುಮಾರು 15.

ಮುಖ್ಯವಾದವುಗಳು : ಲೋಕ ಪಾವನಿ, ಇಕ್ಷು ಕಾವೇರಿ, ಯದುಗಿರಿ, ಶ್ರೀಕಂಠಿಕಾ, ಕಾಜಾಣ, ಶ್ರೀಕಂಠೇಶ್ವರ ಗೌಡರ ಕೃತಿಗಳು. ಶಿಕ್ಷಕಠಾಕೂರ್, ಭಾರತ ವಾರ್ಷಿಕ 1981 ಮುಂತಾದವು.

**ಹ. ಕ. ರಾಜೇಗೌಡ[1] :** (ಹನುಮನಹಳ್ಳಿ ಕಪನೀಗೌಡ ರಾಜೇಗೌಡ) ಮೈಸೂರು ವಿಶ್ವವಿದ್ಯಾಲಯದ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧಕರಾಗಿದ್ದಾರೆ. ಕೆಲದಿನ ಎನ್.ಜಿ.ಇ.ಎಫ್.ನಲ್ಲೂ ಭಾಷಾಂತರಕಾರರಾಗಿ ಸೇವೆ ಸಲ್ಲಿಸಿದ್ದಾರೆ.

ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಒಳ್ಳೆಯ ಕಥೆಗಾರರು ನಾಟಕಕಾರರು ಹಾಗು ಪ್ರಸಿದ್ಧ ಗ್ರಂಥ ಸಂಪಾದಕರು.

ಕೃತಿಗಳ ಸಂಖ್ಯೆ ಸುಮಾರು 50.

ಮುಖ್ಯ ಕೃತಿಗಳು : ಕಥಾ ಭಾರತಿ, ಜಗತ್ತಿನ ಜಾನಪದ ಕಥೆಗಳು, ಕಲ್ಯಾಣ ಕೀರ್ತಿಯ ಕೃತಿಗಳು, (ಸಂಕಲನಗಳು) :

ಲೋಕಪಾವನಿ. ಶ್ರೀಕಂಠೇಶಗೌಡರ ಕೃತಿಗಳು. ಪರೋಪಕಾರಿ. ರಾಷ್ಟ್ರಕವಿ. ಕಲ್ಯಾಣ ಕೀರ್ತಿಯ ಕೃತಿಗಳು. ಶ್ರೀಪಾಲಚರಿತೆ. ಕೊಡಗದ ವೀರಯ್ಯನ ಚರಿತ್ರೆ ಸುವಿಚಾರ ಮತ್ತು ಜ್ಞಾನ ಭಾಸ್ಕರ ಚರಿತ್ರೆ. ಸರಣಿಯ ಬಸವಲಿಂಗ ವಿರಚಿತ ಬಸವೇಶ್ವರ ಕಾವ್ಯ. ಗಾನ ಗಂದರ್ವ ಭೈರವಿ ಕೆಂಪೇಗೌಡರು. ಸಾವನದುರ್ಗ. ಜಗತ್ತಿನ ಜಾನಪದ ಕಥೆಗಳು.

**ಸೋಮಶೇಖರ ಇಮ್ರಾಪುರ[2] :** ಪ್ರಾಧ್ಯಾಪಕರು. 'ದಲಿತ' ದ್ವೈಮಾಸಿಕ ಸಂಪಾದಕರು. ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ವಿಜೇತರು. ಒಳ್ಳೆಯ ಕವಿ, ವಿಮರ್ಶಕರು, ಜಾನಪದ ಸಂಶೋಧಕರು, ಹಾಗೂ ಕೃತಿ ಸಂಪಾದಕರು.

---

* ಜನನ : ಮೇ 22, 1936. ಮಂಡ್ಯ ಜಿಲ್ಲೆಯ 'ಕೀಲಾರ'ದಲ್ಲಿ. ತಂದೆ : ತಮ್ಮೇಗೌಡ, ತಾಯಿ : ತಾಯಮ್ಮ.

1 ಜನನ : ಆಗಸ್ಟ್ 7, 1938. ನಾಗಮಂಗಲ ತಾಲ್ಲೂಕಿನ ಹನುಮನಹಳ್ಳಿ. ತಂದೆ : ಕಪಿನೀಗೌಡ, ತಾಯಿ : ನಿಂಗಮ್ಮ.

2 ಜನನ : ಫೆಬ್ರವರಿ 14, 1940. ರೋಣ ತಾಲ್ಲೂಕು ಅಬ್ಬಿಗೇರಿಯಲ್ಲಿ. ತಂದೆ : ಗುರಪ್ಪ, ತಾಯಿ : ಸಂಗವ್ವ.

ಮುಖ್ಯ ಕೃತಿಗಳು: ಜಾನಪದ ವ್ಯಾಸಂಗ, ಜಾನಪದ ವಿಜ್ಞಾನ, ಜನಪದ ಕಥನ ಕವನಗಳು (ಜನಪದ) ಬಿಸಿಲ ಹೂ, ಬಿರುಗಾಳಿ, ಗಂಡ ಹೆಂಡತಿ ಜಗಳ ಗಂಧ ತೀಡಿದ್ಹಾಂಗ (ಕವನ), ಇತ್ತೀಚಿನ ಕನ್ನಡ ಕಾವ್ಯ ಮತ್ತು ಪರಿಸರ, ಜನಪದ ಕಿತ್ತೂರಿನ ವೀರ ಶಿರೋಮಣಿಗಳು (ವಿಮರ್ಶೆ), ಮೂವತ್ತಾರು ಮುಖ ಆರನತ್ತೂರು ಕವನ (ಸಂಪಾದನೆ). ಒಟ್ಟು ಕೃತಿಗಳ ಸಂಖ್ಯೆ ಸುಮಾರು 25.

**ಶ್ರೀಕಂಠ ಕೂಡುಗೆ**[1] **:** ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರು. ಜನಪದ ಸಾಹಿತ್ಯ, ವಿಮರ್ಶಾ ಕ್ಷೇತ್ರದಲ್ಲಿ ಹೆಚ್ಚು ಆಸಕ್ತಿ. ಕೆಲವು ಸಣ್ಣ ಕಥೆಗಳನ್ನು ಬರೆದಿದ್ದಾರೆ. ಜನಪ್ರಿಯ ಸಾಹಿತಿ.

ಒಟ್ಟು ಕೃತಿಗಳ ಸುಮಾರು—15.

ಮುಖ್ಯವಾದವುಗಳು: ಅಂಟಿಗೆ ಪಂಟಿಗೆ ಪದಗಳು, ಭೂಮಿ ಹುಣ್ಣಿಮೆ (ಜನಪದ), ಒದೆಗೆ (ವಿಮರ್ಶೆ), ನಮ್ಮಿಬ್ಬರ ನಡುವೆ (ಕಥಾ ಸಂಗ್ರಹ).

**ಕ್ಯಾತನಹಳ್ಳಿ ರಾಮಣ್ಣ**[2] **:** ಮೈಸೂರು ವಿಶ್ವವಿದ್ಯಾಲಯದ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧಕರಾಗಿದ್ದಾರೆ. ಸಾಹಿತ್ಯದಲ್ಲಿ ಇವರಿಗೆ ಅಮಿತ ಆಸಕ್ತಿಯಿದೆ. ಸಣ್ಣ ಕಥೆಗಳನ್ನು ರಚಿಸಿರುವುದಲ್ಲದೆ ಯುವಕರಿಗೆ ಉಪಯುಕ್ತವಾಗುವ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಜಾನಪದ ಪ್ರಕಾರದಲ್ಲೂ ಇವರಿಗೆ ಅತ್ಯಂತ ಆಸಕ್ತಿ.

ಕೃತಿಗಳು: ತಿಳಿಜಲ, ವಜ್ರವರ್ತುಲ (ಕಥಾ ಸಂಕಲನ) ಬದುಕು ಬಂಗಾರ, ಭಗತ್‌ಸಿಂಗ್, ಹಲಗಲಿಯ ಶೂರರು, ಜಾನಪದ ವಿಹಾರ, ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕಥೆಗಳು, ಬೀದರ್ ಜಿಲ್ಲೆಯ ಜನಪದ ಕಥೆಗಳು, ಬೀದರ್ ಜಿಲ್ಲೆಯ ಜನಪದ ಗೀತೆಗಳು, ಬಿಜಾಪುರ ಜಿಲ್ಲೆಯ ಲಾವಣಿಗಳು, ಕಬ್ಬಾಳುಕುಳಿಯಲ್ಲಿ ಹುಲಿ, ಗೊಂದಲಿಗರು, ಜನಪದ ಸಾಹಸ ಕತೆಗಳು.

**ರಾಮೇಗೌಡ (ರಾಗೌ)**[3] **:** ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಉಪನ್ಯಾಸಕರಾಗಿದ್ದಾರೆ. ಪ್ರತಿಭಾವಂತರು. ಕೇಂ. ಸಿದ್ದಪ್ಪ ಚಿನ್ನದ ಪದಕ. ಅಂಬಳೆ ರಾಮಕೃಷ್ಣ ಶಾಸ್ತ್ರಿ ಬಹುಮಾನ. ಪಂಡಿತ ತಿರುವಳ್ಳೂವರ್ ಶ್ರೀನಿವಾಸ ರಾಘವಾಚಾರ್ ಬಹುಮಾನ, ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (ನಮ್ಮ ಒಗಟುಗಳು—1970) : ಜಾನಪದ ಸಂಕೀರ್ಣ—(1974) ಲಭಿಸಿವೆ.

---

1 ಜನನ: ಸೆಪ್ಟೆಂಬರ್ 5, 1948. ಶಿವಮೊಗ್ಗ ಜಿಲ್ಲೆಯ 'ಕೂಡುಗೆ'ಯಲ್ಲಿ. ತಂದೆ: ಕೃಷ್ಣಯ್ಯಗೌಡ. ತಾಯಿ: ಚಿನ್ನಮ್ಮ.

2 ಜನನ: ಆಗಸ್ಟ್ 12, 1942. ಕ್ಯಾತನಹಳ್ಳಿಯಲ್ಲಿ. ತಂದೆ: ಹಾಸೇಗೌಡ, ತಾಯಿ: ಸಿದ್ದಮ್ಮ.

3 ಜನನ: ಏಪ್ರಿಲ್ 3, 1942. ಮಂಡ್ಯ ಜಿಲ್ಲೆ 'ಈರೇಗೌಡನದೊಡ್ಡಿ' ಗ್ರಾಮದಲ್ಲಿ. ತಂದೆ: ಮಾಸ್ತಿಗೌಡ, ತಾಯಿ: ಸಿಂಗಮ್ಮ.

ಇತರ ಕೃತಿಗಳು: ನಮ್ಮ ಗಾದೆಗಳು, ಕುಮಾರ ರಾಮ, ಕನ್ನಡ ಶಿಶು ಪ್ರಾಸಗಳು, ಕಂದನ ಕವನಗಳು, ಕಾವ್ಯಾನುಶಾಸನ, ಅವಗಾಹನ, ಕರ್ನಾಟಕ ಜನಪದ ಕಥೆಗಳು, ಯಾತ್ರೆ, ತೆಪ್ಪ, ರಾಘವಾಂಕ ಮುಂತಾದ ಸುಮಾರು 20 ಕೃತಿಗಳು.

**ಹೊರಯಾಲಾ ದೊರೆಸ್ವಾಮಿ**[1]**:** ಕಥೆ, ಕಾದಂಬರಿ, ಬಾಲಸಾಹಿತ್ಯ, ಅನುವಾದ ಮುಂತಾಗಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃತಿಗಳನ್ನು ನೀಡಿದ್ದಾರೆ.

ಕೃತಿಗಳು: ಅರ್ನೆಸ್ಟ್ (ಕಥಾ ಸಂಕಲನ). ಕೇಳು ಒಂದು ಕತೆಯ, ನಾಗನ ಕಥೆ (ಬಾಲ ಸಾಹಿತ್ಯ), ಕೊಳೆ (ಕಾದಂಬರಿ), ಚೀನಿ ಜನತೆಯ ಪದ್ಯಗಳು (ಅನುವಾದ) ಮುಂತಾಗಿ ಸುಮಾರು 10 ಕೃತಿಗಳು.

**ಡಾ|| ತಾಳ್ಳಪಳ್ಳಿ ವೆಂಕಟಸುಬ್ಬ ಸುಂದರಂ**[2]**:** ಮೈಸೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರು. ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಆಸಕ್ತಿ. ಒಳ್ಳೆಯ ವಿಮರ್ಶಕರು, ಗ್ರಂಥ ಸಂಪಾದಕರು. ತೆಲುಗಿನಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

ಮುಖ್ಯವಾದವುಗಳು: ಜನಪದ ಸಾಹಿತ್ಯದ ಮೂಲ ತತ್ವಗಳು, ಗೊರಿಲ್ಲಾ, ತೆಲುಗು ಸಾಹಿತ್ಯ ಚರಿತ್ರೆ. ಧ್ವನಿ ವಿಜ್ಞಾನ. ಪಿಟೀಲು ರಾಗಗಳ ಡಜನ್, ಪಟ್ಟಾಭಿ ಸೀತಾರಾಮಯ್ಯ. ಮುಂತಾದವುಗಳು.

**ಡಾ|| ಹೆಚ್. ಆರ್. ರಘುನಾಥ್ ಭಟ್**[3]**:** (ಹರೀಶ ರಾಮಚಂದ್ರ ರಘುನಾಥ ಭಟ್). ಮೈಸೂರು ವಿಶ್ವವಿದ್ಯಾಲಯದಲ್ಲಿ ಇತಿಹಾಸ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ.

ಇವರ 'ಕರ್ನಾಟಕ ಶಾಸನಕಲೆ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ದೇವರಾಜ ಬಹದ್ದೂರ್ ಬಹುಮಾನಗಳು ಲಭಿಸಿವೆ.

ಇತರ ಕೃತಿಗಳು: ವಿದೇಶದಲ್ಲಿ ಗಣಪತಿ, ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಮೈಸೂರು ಜಿಲ್ಲೆ ದರ್ಶನ. ಪುರಾತತ್ವ ಪರಿಚಯ.

**ಡಾ|| ಶಾಲಿನಿ ರಘುನಾಥ್**[4]**:** ಮೈಸೂರು ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ. ವಿದ್ಯಾರ್ಥಿಗಳಿಗೆ ಅಚ್ಚು

---

1 ಜನನ: ಏಪ್ರಿಲ್ 28, 1945. ಗುಂಡ್ಲುಪೇಟೆ ತಾಲ್ಲೂಕಿನ 'ಹೊರೆಯಾಲ' ದಲ್ಲಿ. ತಂದೆ: ರಾಮಚಂದ್ರಯ್ಯ, ತಾಯಿ: ಸುಬ್ಬಲಕ್ಷ್ಮಮ್ಮ.

2 ಜನನ: ಏಪ್ರಿಲ್ 21, 1948. ಆಂಧ್ರಪ್ರದೇಶದ 'ನೆಲ್ಲೂರು' ಗ್ರಾಮದಲ್ಲಿ. ತಂದೆ: ಪಿಚ್ಚಯ್ಯ, ತಾಯಿ: ಸುಶೀಲಮ್ಮ.

3 ಜನನ: ಅಕ್ಟೋಬರ್ 21, 1946. ಶಿವಮೊಗ್ಗ ಜಿಲ್ಲೆಯ 'ಹರೀಶ' ಗ್ರಾಮದಲ್ಲಿ. ತಂದೆ: ರಾಮಚಂದ್ರ ಶರ್ಮ, ತಾಯಿ: ಭವಾನಿಬಾಯಿ. 'ರಘು' ಕಾವ್ಯನಾಮ.

4 ಜನನ: ಫೆಬ್ರವರಿ 14, 1951. ಉತ್ತರ ಕನ್ನಡ ಜಿಲ್ಲೆಯ 'ಕಿಲಾರ'ದಲ್ಲಿ, ತಂದೆ: ರಾಮಚಂದ್ರ ಗಣೇಶ ಹೆಗ್ಗಡೆ, ತಾಯಿ: ವೇಣೂಬಾಯಿ. ಪತಿ: ಡಾ|| ರಘುನಾಥ ಭಟ್.

ಮೆಚ್ಚಿನ ಗುರು. ಸಂಶೋಧನೆ ಹಾಗೂ ಗ್ರಂಥ ಸಂಪಾದನೆಯಲ್ಲಿ ಹೆಚ್ಚು ಆಸಕ್ತಿ.

'ಮಹಿಳೆ ಮತ್ತು ಶಿಕ್ಷಣ' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ ಸಂದಿದೆ. ಉತ್ತರ ಕನ್ನಡ ಜಿಲ್ಲೆಯ ಹವ್ಯಕರ ಹಾಡುಗಳು (ಜನಪದ), ಉಪ ಭಾಷಾ ಅಧ್ಯಯನ (ಭಾಷಣ). ಇತರ ಕೃತಿಗಳು.

**ಪ್ರೊ|| ಚಿ. ನ. ಮಂಗಳಾ:** ಪ್ರಾಂಶುಪಾಲರು, ಎನ್.ಎಂ.ಕೆ.ಆರ್.ವಿ. ಪ್ರಥಮದರ್ಜೆ ಕಾಲೇಜು, ಜಯನಗರ, ಬೆಂಗಳೂರು.

ಎಂ.ಎ. (ಇಂಗ್ಲೀಷ್), ಡಾ|| ಜೇಮ್ಸ್ ಹೆಚ್. ಕಜಿನ್‌ರವರ ಸಾಹಿತ್ಯ ಕೊಡುಗೆಗಳ ಬಗ್ಗೆ ಸಂಶೋಧನಾ ಪ್ರಬಂಧ ರಚಿಸಿದ್ದಾರೆ.

ಆಚಾರ್ಯ ಪಾಠಶಾಲೆಯಲ್ಲಿ (1959) ಉಪನ್ಯಾಸಕರಾಗಿ ಸೇರಿ ನಾಲ್ಕು ವರ್ಷಗಳ ನಂತರ ನ್ಯಾಷನಲ್ ಕಾಲೇಜು ಸೇರಿದರು, ಅಲ್ಲಿ 5 ವರ್ಷ ದುಡಿದು 1971ರಲ್ಲಿ ಎನ್.ಎಂ.ಕೆ.ಆರ್.ವಿ. ಕಾಲೇಜು ಸೇರಿ ಅದರ ಪ್ರವರ್ಧಮಾನಕ್ಕೆ ಕಾರಣರಾಗಿದ್ದಾರೆ. ಈಗ ಶ್ರೀಮತಿಯವರು ಇಂಗ್ಲೀಷ್ ವಿಭಾಗ ಮುಖ್ಯಸ್ಥೆ ಆಗಿರುವುದಲ್ಲದೆ ಎನ್.ಎಂ.ಕೆ.ಆರ್.ವಿ. ಪ್ರಾಂಶುಪಾಲಕರಾಗಿಯೂ ಇದ್ದಾರೆ.

1975ರಲ್ಲಿ 'ಶಾಶ್ವತಿ' ಎಂಬ ಮಹಿಳಾ ಅಧ್ಯಯನ ಕೇಂದ್ರ ಹಾಗೂ ಮಹಿಳಾ ವಸ್ತುಸಂಗ್ರಹಾಲಯ ಸ್ಥಾಪಿಸಿ ಅದರ ಪ್ರಗತಿಗಾಗಿ ಅಹರ್ನಿಶಿ ಶ್ರಮಿಸುತ್ತಿದ್ದಾರೆ. 'ಶಾಶ್ವತಿ' ಕಾಲೇಜಿನ ಒಂದು ಭಾಗವಾದರೂ ಅದು ಸಾರ್ವಜನಿಕರಿಗಾಗಿಯೇ ಇರುವ ಒಂದು ಕೇಂದ್ರ.

ಶ್ರೀಮತಿಯವರು ಪ್ರಸಿದ್ಧ ಸಾಹಿತಿ, ಒಳ್ಳೆಯ ವಾಗ್ಮಿಯೂ ಹೌದು.

ಇವರ ಕೃತಿ 'ಎಲ್ಲರೂ ನನ್ನವರೇ'ಗೆ ಮಲ್ಲಿಕಾ ಸಾಹಿತ್ಯ ಪ್ರಶಸ್ತಿ ಲಭಿಸಿದೆ.

'ಅಭಾಗಿನಿ'–ಕಾದಂಬರಿ.

'ಮಹಾತ್ಮರ ಬರವಿಗಾಗಿ'–ಆರ್. ಕೆ. ನಾರಾಯಣ್‌ರವರ ಕೃತಿಯ ಅನುವಾದ.

'ಮಾರ್ಗದರ್ಶಿ' – ಸಾಹಿತ್ಯ ಅಕಾಡೆಮಿ ದೆಹಲಿಗಾಗಿ ಅನುವಾದಿಸಿಕೊಟ್ಟಿರುವ ಕೃತಿ. (ಆರ್. ಕೆ. ನಾರಾಯಣ್)

'ಹುಲಿಯ ಬೆನ್ನೇರಿದಾಗ' – ಕಾದಂಬರಿ.

'ಹೆಲೆನ್ ಕೆಲರ್' – ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದೆ.

'ಕಾವ್ಯಕಲ್ಪನ' – ಪ್ರಬಂಧ ಸಂಕಲನ.

'ಫ್ಲಾರೆನ್ಸ್ ನೈಟಿಂಗೇಲ್' – ಜೀವನ ಚರಿತ್ರೆ.

ಇದಲ್ಲದೆ ನೂರಾರು ಪ್ರಬುದ್ಧ ಲೇಖನಗಳನ್ನು ರಚಿಸಿದ್ದಾರೆ.

ಅನೇಕ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ನಿಯೋಗದ ಸದಸ್ಯೆಯಾಗಿ ಮಲೇಶಿಯಾ, ಅಮೇರಿಕಾ ಇಂಗ್ಲೆಂಡ್ ಮುಂತಾದ ದೇಶಗಳಿಗೆ ಭೇಟಿ ನೀಡಿದ್ದಾರೆ.

**ತಿರುಕ (ರಾಘವೇಂದ್ರಸ್ವಾಮಿ ಬಾರಕೂರು):** ಸಾಂಪ್ರದಾಯಿಕ ವಿದ್ಯಾಭ್ಯಾಸ ಕಡಿಮೆಯಾದರೂ ಆಯುರ್ವೇದ ಹಾಗೂ ಯೋಗಾಭ್ಯಾಸ ವಿಭಾಗಗಳಲ್ಲಿ ಪ್ರೌಢಿಮೆ ಗಳಿಸಿದ್ದಾರೆ. ಮಲ್ಲಾಡಿಹಳ್ಳಿಸೇವಾಶ್ರಮ ಹಾಗೂ ವಿಶ್ವಸ್ಥಸಮಿತಿ ಸಂಸ್ಥಾಪಕ ಅಧ್ಯಕ್ಷರು. ಇವರು ಒಳ್ಳೆಯ ಸಾಹಿತಿ ಕೂಡ. ಕೃತಿಗಳ ಸಂಖ್ಯೆ ಸುಮಾರು 60.

ಮುಖ್ಯವಾದವುಗಳು : ಷಟ್ಕರ್ಮ ವಿಧಿ, ಹಣ್ಣು ಕಾಯಿ, ಅಂತರ್ವಾಣಿ, ದೇಹ ಸ್ವಾಸ್ಥ್ಯಕ್ಕಾಗಿ ಯೋಗಾಸನಗಳು ; ಮೂರು ನಾಟಕಗಳು, ಮಹಾಶಿಲ್ಪಿ, (ನಾಟಕಗಳು), ಕೊನೆಯ ಗುಟುಕು, ತ್ಯಾಗಜೀವಿ (ಕಾದಂಬರಿಗಳು) ಸ್ವಯಂ ವೈದ್ಯಾ ವೈದ್ಯಶಾಸ್ತ್ರ.

ಇಂಗ್ಲೀಷಿನಲ್ಲೂ ಕೃತಿ ರಚಿಸಿದ್ದಾರೆ.

**ಎಸ್. ವೆಂಕಟೇಶಮೂರ್ತಿ :** ನ್ಯಾಷನಲ್ ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ಉಪನ್ಯಾಸಕರು. ಜನಪ್ರಿಯ ವಿಜ್ಞಾನ ಲೇಖಕರು, ಕವಿಗಳೂ ಹೌದು. ಇವರ ಹಲವಾರು ಲೇಖನಗಳು ಧಾರವಾಹಿಯಾಗಿ ಪ್ರಜಾಮತ, ಸುಧಾ, ಮುಂತಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಮಕ್ಕಳಿಗಾಗಿ ವಿಜ್ಞಾನ ಪರಿಚಯ ಮಾಡಿಕೊಟ್ಟಿದ್ದಾರೆ. ಇವರ ಕೃತಿಗಳು ಸುಮಾರು 15. ಇದರಲ್ಲಿ 8 ಮಕ್ಕಳಿಗಾಗಿಯೇ ಬರೆದವುಗಳು. ಆಕಾಶವಾಣಿಯಲ್ಲೂ ಹಲವು ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ.

ಮುಖ್ಯ ಕೃತಿಗಳು : ವಿಜ್ಞಾನ ವಿಸ್ಮಯ, ಎಕ್ಸ್‌ರೇ, ಮಾನವ ನಿರ್ಮಿತ ಧಾತುಗಳು. ಜನಜೀವನದಲ್ಲಿ ರಸಾಯನ ಶಾಸ್ತ್ರ. ಆಲ್ಬರ್ಟ್ ಐನ್‌ಸ್ಟೈನ್, ಮೇರಿಕ್ಯೂರಿ, ಲೂಯಿ ಪಾಶ್ಚರ್, ಗಾಜು, ಕಾಗದ.

**ಮ. ಗ. ಶೆಟ್ಟಿ :** ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದಲ್ಲಿ ಸಹಾಯಕ ಅಭಿವೃದ್ಧಿ ಅಧಿಕಾರಿಯಾಗಿದ್ದು ನಿವೃತ್ತರಾಗಿದ್ದಾರೆ. ಪರ್ಣಕುಟಿ ಗ್ರಂಥ ಮಾಲೆಯ ಪ್ರಕಾಶಕರು. ಗಾಂಧಿ ಸಾಹಿತ್ಯದಲ್ಲಿ ಹೆಚ್ಚು ಶ್ರದ್ಧೆಯಿದೆ. ಹಿಂದಿ, ಮರಾಠಿ ಮುಂತಾದ ಭಾಷೆಗಳಿಂದ ಅನೇಕ ಗ್ರಂಥಗಳನ್ನು ಅನುವಾದ ಮಾಡಿದ್ದಾರೆ. 'ನಾಗರೀಕ' ವಾರಪತ್ರಿಕೆ (ಹೊನ್ನಾವರ) ದ ಗೌರವ ಸಂಪಾದಕರು.

**ಕೆ. ಆರ್. ಕಮಲೇಶ್ * :** ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಗಳಿಸಿರುವ ಈ ತರುಣ ಕಾನೂನು ಹಾಗೂ ಕನ್ನಡದಲ್ಲಿ ಹೆಚ್ಚಿನ ಅಧ್ಯಯನ ನಡೆಸಿದ್ದಾರೆ. ಪತ್ರಿಕೋದ್ಯಮಿಯ ಅನುಭವವೂ ಉಂಟು (ಲೋಕವಾಣಿ, ಸಂಯುಕ್ತ ಕರ್ನಾಟಕ, ಆಂದೋಲನ), ಜೀವನ ಚರಿತ್ರೆ, ಸಣ್ಣಕತೆ, ವಿಮರ್ಶೆ, ಪ್ರವಾಸ ಕಥನಗಳ ಬಗ್ಗೆ ಆಸಕ್ತಿ.

ಕೃತಿಗಳು : ರಸಸೃಷ್ಟಿ, ಸರ್ವೋದಯ ಪಥ (ಸಂಪಾದನೆ). ಗುಡಿಸಿಲಿನಿಂದ

---

* ಜನನ : ಮೇ 1956. ತುಮಕೂರು ತಾಲ್ಲೂಕಿನ ಸಾಸಲು ಗ್ರಾಮದಲ್ಲಿ. ತಂದೆ : ರಾಮಾಚಾರ್. ತಾಯಿ : ಸರೋಜಮ್ಮ. ಪ್ರಸ್ತುತ ಇವರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ಇದ್ದಾರೆ.

ಗಂಗೋತ್ರಿಗೆ, ಕರ್ಮಯೋಗಿ, ಗಂಗರ ವಾಸ್ತುಶಿಲ್ಪ, ಪಾಳೇಗಾರ, ಧಾರ್ಮಿಕ ನೀತಿ (ಇತರ ಕೃತಿಗಳು).

ಪತ್ರಿಕೆಗಳಿಗೆ ನೂರಾರು ಲೇಖನಗಳನ್ನು ಬರೆದಿದ್ದಾರೆ. ಆಕಾಶವಾಣಿಯಲ್ಲಿ ಹಲವಾರು ಕಾರ್ಯಕ್ರಮ ನಡೆಸಿಕೊಟ್ಟಿದ್ದಾರೆ. ಕೆಲಕಾಲ ಉಪನ್ಯಾಸಕರಾಗಿದ್ದು ಈಗ 'ಯುವ ಕರ್ನಾಟಕ' ದ ಸಂಪಾದಕರಾಗಿದ್ದಾರೆ.

**ಎಂ. ವಿ. ನಾಗರಾಜರಾವ್** [1] **:** ಚಿಕ್ಕನಾಯ್ಕನಹಳ್ಳಿಯಲ್ಲಿ ಕಾಲೇಜಿನ ಉಪನ್ಯಾಸಕರು. ಕನ್ನಡ, ಹಿಂದಿಯಲ್ಲಿ ಸ್ನಾತಕೋತ್ತರ ಪದವೀಧರರು. ಅನುವಾದ ದಲ್ಲಿ ಅತೀವ ಆಸಕ್ತಿ. ಹಿಂದಿ ಹಾಗೂ ಇಂಗ್ಲೀಷಿನಿಂದ ಹಲವಾರು ಪ್ರಸಿದ್ಧ ಕೃತಿ ಗಳನ್ನು ಅನುವಾದಿಸಿದ್ದಾರೆ. ಐ.ಬಿ.ಹೆಚ್. ಪ್ರಕಾಶನಕ್ಕೂ ಹಲವಾರು ಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. ಕೆಲವು ಕಾದಂಬರಿಗಳು 'ಸುಧಾ', 'ತರಂಗ', 'ಪ್ರಜಾಮತ' ಗಳಲ್ಲಿ ಪ್ರಕಟಗೊಂಡಿವೆ.

ಕೃತಿಗಳು : ಶೃಂಗಾರದ ಶಯ್ಯೆಯಲ್ಲಿ, ಅಘೋರಿಗಳ ನಡುವೆ, ಕಂಪನ, ಲಕ್ಷ್ಮಣ ರೇಖೆ, ಪುನರ್ಮಿಲನ, ನಾಲ್ಕನೆಯ ಆಯಾಮ, 'ನೆಲವೆಲ್ಲಾ ಕಿವಿ' ಮುಂತಾದ ಜೇಮ್ಸ್ ಹ್ಯಾಡ್ಲಿಚೇಸ್‌ನ ಹತ್ತು ಕಾದಂಬರಿಗಳು (ಅನುವಾದಗಳು) ; ಟ್ರೋಪಾಜ್(ಕಾದಂಬರಿ).

**ಡಾ|| ಬಿ. ಷೇಕ್ ಆಲಿ** [2] **:** ರಾಷ್ಟ್ರದ ಪ್ರಮುಖ ಚರಿತ್ರಕಾರರಲ್ಲಿ ಮುಖ್ಯರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಚರಿತ್ರೆ ವಿಭಾಗದ ಮುಖ್ಯಸ್ಥರಾಗಿದ್ದು ಈಗ ಗೋವಾ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದಾರೆ.

ಇವರು ಪ್ರಸಿದ್ಧ ಚರಿತ್ರೆಗಾರರಾಗಿರುವುದಲ್ಲದೆ ಒಳ್ಳೆಯ ವಿಮರ್ಶಕರು, ಗ್ರಂಥ ಸಂಪಾದಕರು.

ಪ್ರಸಿದ್ಧ ಕೃತಿಗಳು : ಟಿಪ್ಪು ಅಂಡ್ ಹೈದರಾಲಿ, ದಿ ಹೊಯ್ಸಳಾಸ್, (ಇಂಗ್ಲೀಷ್ ಕೃತಿಗಳು). ದಕ್ಷಿಣ ಭಾರತದ ಇತಿಹಾಸ, ಇತಿಹಾಸ ಪರಿಚಯ ಭಾಗ 1, 2, ಆಧುನಿಕ ಏಷ್ಯಾ, ಮುಂತಾದವು. ತಲಕಾಡಿನ ಗಂಗರ ಮೇಲೂ ಒಂದು ಉಪಯುಕ್ತ ಗ್ರಂಥ ರಚಿಸಿದ್ದಾರೆ.

**ಡಾ|| ಎಂ. ವಿ. ಕೃಷ್ಣರಾವ್ :** ಇತಿಹಾಸ ಹಾಗೂ ಸಂಶೋದನಾ ಕ್ಷೇತ್ರ ದಲ್ಲಿ ಹೆಸರಿಸಲೇಬೇಕಾದ ವ್ಯಕ್ತಿ. 'ಕರ್ನಾಟಕ ಇತಿಹಾಸ ದರ್ಶನ', 'ಗಂಗಾಸ್ ಆಫ್ ತಲಕಾಡು', 'ಅರಿಸ್ಟಾಟಲ್', 'ಬೆಂಗಳೂರು ಕೆಂಪೇಗೌಡ' ಮುಂತಾದ 25ಕ್ಕೂ ಹೆಚ್ಚು ಉಪಯುಕ್ತ ಗ್ರಂಥಗಳನ್ನು ರಚಿಸಿದ್ದಾರೆ.

**ಎನ್. ಮಲ್ಲಪ್ಪ** [3] **:** 'ಕಳೆದ ಆ ದಿನಗಳು' (ಜೀವನ ಚರಿತ್ರೆ) ಕೃತಿಯ ಕರ್ತೃ.

---

1 ತಂದೆ : ವೆಂಕಟರಮಣಯ್ಯ, ತಾಯಿ : ಸಾವಿತ್ರಮ್ಮ.

2 ಹುಟ್ಟಿದೂರು : ಸಕಲೇಶಪುರ.

3 ಜನನ : 1907. ತುಮಕೂರು ಸಮೀಪದ ಅರ್ಜಿ ರಂಗಣ್ಣನ ಪಾಳ್ಯದಲ್ಲಿ. ತಂದೆ : ಬಂಡಿನಂಜಪ್ಪ. ತಾಯಿ : ಚಿಕ್ಕಮ್ಮ.

**ಡಾ|| ಸಾ. ಶ. ಶ್ರೀನಿವಾಸ*:** ಕನ್ನಡ–ತಮಿಳು ಸಾಹಿತ್ಯ ಪರಂಪರೆಯ ಸೇತುಬಂಧವಾಗಿದ್ದಾರೆ. ಫೋರ್ಡ್ ಫೌಂಡೇಶನ 'ಭಾಷಾ ಪುಸ್ತಕ ಸಂಸ್ಥೆ'ಯಲ್ಲಿ ಕನ್ನಡ ವಿಭಾಗದ ಸಂಪಾದಕರಾಗಿದ್ದು ಮದರಾಸು ವಿಶ್ವವಿದ್ಯಾನಿಲಯ, ಮಧುರೈ ಕಾಮರಾಜ ವಿಶ್ವವಿದ್ಯಾನಿಲಯಗಳಲ್ಲಿ ದುಡಿದಿದ್ದಾರೆ. ಕಿಟ್ಟೆಲ್ ನಿಘಂಟಿನ ಪರಿಷ್ಕರಣ ಇವರ ಅಮೋಘ ಸಾಧನೆ.

'ತಿರುಕ್ಕುರಳ್' ಸಮಗ್ರ ಅನುವಾದಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (1982) ಲಭಿಸಿದೆ.

ಪ್ರಸಿದ್ಧ ಕೃತಿಗಳು: ಕಾವ್ಯಾನುಶೀಲನ (ವಿಮರ್ಶೆ), ಹಾರಾಡುವ ತರಗತಿ, ಜರ್ಮನ್ ಸಂಪ್ರದಾಯ ಸಾಹಿತ್ಯ ದರ್ಪಣ, ಆಧುನಿಕ ಜರ್ಮನ್ ಕತೆಗಳು, ತಿರುಕ್ಕುರಳ್ (ಅನುವಾದಗಳು), ನಾಲ್ವರು ಸ್ನೇಹಿತರು, ನಾಗಣ್ಣನ ನಾಟ್ಯ (ಮಕ್ಕಳ ಪುಸ್ತಕಗಳು), 'ಸಾಹಿತ್ಯ ಕಾವೇರಿ' (ತೌಲನಿಕ ಅಧ್ಯಯನ).

ಈ ಸಂಕೀರ್ಣ ವಿಭಾಗದಲ್ಲೂ ಬಹಳಷ್ಟು ಪ್ರಮುಖ ಸಾಹಿತಿಗಳನ್ನು ನಾನು ಹೆಸರಿಸಿಲ್ಲ ಎಂದು ನಂಗೆ ಚೆನ್ನಾಗಿ ಅರಿವಿದೆ. ಅವರೆಲ್ಲರ ವಿಷಯ ಸಂಗ್ರಹಿಸಲು ನಾನು ಅಸಮರ್ಥನಾಗಿದ್ದೇನೆ. ಮುಂದಿನ ಸಾರಿ ರಜದಲ್ಲಿ ನಿಮ್ಮನ್ನು ಭೇಟಿ ಮಾಡಿದ್ರೆ, ನಿಮ್ಗೆ ಈ ವಿಷಯದಲ್ಲಿ ಇನ್ನು ಆಸಕ್ತಿ ಉಳಿದಿದ್ರೆ, ಖಂಡಿತಾ ಸಾಕಷ್ಟು ವಿವರ ಕೊಡಲು ಪ್ರಯತ್ನಿಸ್ತೇನೆ. ಈಗ ಕೆಲವು ಸಾಹಿತಿಗಳು ಈ ಮೇಲ್ಕಂಡ ವಿಭಾಗಗಳಲ್ಲಿ ನಮ್ಮ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಆ ವಿವರ ನನ್ನ ಬಳಿ ಇದೆ. ಸದ್ಯಕ್ಕೆ ಅದನ್ನೇ ಹೇಳ್ತೀನಿ", ಎಂದು ತಮ್ಮ ಚೀಲದಿಂದ ಸಣ್ಣ ಪುಸ್ತಕವೊಂದನ್ನು ತೆಗೆದು ಕೆಲವು ಹಾಳೆಗಳನ್ನು ತಿರುವಿ ಹಾಕಿ ಓದಲು ಪ್ರಾರಂಭಿಸಿದರು.

**ಅನುವಾದ ವಿಭಾಗ :** ಎಚ್. ಎಲ್. ನಾಗೇಗೌಡ (ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ-1966); ಎನ್. ಬಾಲಸುಬ್ರಮಣ್ಯಂ (ಹೊರೇಸನ ಸಾಹಿತ್ಯ ವಿಮರ್ಶೆ 1969/70); ಡಾ|| ಕೆ. ಕೃಷ್ಣಮೂರ್ತಿ (ಕನ್ನಡ ಕಾವ್ಯ ಮೀಮಾಂಸೆ –1969/70); ಡಾ|| ಸಿ. ಪಿ. ಕೃಷ್ಣಕುಮಾರ್ (ಪಾಶ್ಚಾತ್ಯ ಕಾವ್ಯ ಚಿಂತನ–1969/70); ಡಾ|| ಎನ್. ಎಸ್. ಅನಂತ ರಂಗಾಚಾರ್ (ಯತೀಂದ್ರ ಮತ ದೀಪಿಕೆ–1971): ಶಂಭುಶರ್ಮ ನಾಜಗಾರ (ಧರ್ಮಸಿಂಧು-1971); ಎನ್. ಕೆ. ನರಸಿಂಹ ಮೂರ್ತಿ (ಭೀಷ್ಮ ಉವಾಚ–1972); ಡಿ. ಕೃಷ್ಣಅಯ್ಯಂಗಾರ್ (ಶರಣಾಗತಿ ತತ್ವ–1972); ಡಾ|| ಪ್ರಭುಶಂಕರ್ (ಭಾರತೀಯ ತತ್ವಶಾಸ್ತ್ರದ ರೂಪರೇಖೆಗಳು-1973); ಪಿ. ವಿ. ನಾರಾಯಣ (ಸಮಾಜದ ಮೇಲೆ ವಿಜ್ಞಾನದ ಪ್ರಭಾವ–1973); ಡಾ|| ಕೆ. ಕೃಷ್ಣಮೂರ್ತಿ (ಭಾರತೀಯ ಸಾಹಿತ್ಯ ಚರಿತ್ರೆ-1974); ಎ. ಪಿ. ಶ್ರೀನಿವಾಸ ಮೂರ್ತಿ (ಜಪಾನಿನ ಆರ್ಥಿಕ ಪುನರುದಯ–1974): ಜಿ. ಟಿ. ನಾರಾಯಣ ರಾವ್

* ಜನನ: 1939. ದಕ್ಷಿಣ ಕನ್ನಡ ಜಿಲ್ಲೆಯ ಪಾಂಡೇಶ್ವರದಲ್ಲಿ.

(ಬಲ ವಿಜ್ಞಾನ ತತ್ವಗಳು-1975); ಎಚ್. ಕೆ. ರಾಮಚಂದ್ರಮೂರ್ತಿ ಮತ್ತು ಜೆ. ಆರ್. ಲಕ್ಷ್ಮಣರಾವ್ (ಗೆಲಲಿಯೋ–1976); ಪ್ರೊ॥ ವಿ. ಎಂ. ಇನಾಂದಾರ್ (ಯಯಾತಿ–1977); ಆರ್. ಎಲ್. ಅನಂತರಾಮಯ್ಯ (ಟಾಲ್ ಸ್ಟಾಯ್–1978); ಪಿ. ನಟರಾಜ್ (ವಿಕಾಸ ಮನೊವಿಜ್ಞಾನ-1978); ಎಚ್. ಕೆ. ರಾಮಚಂದ್ರಮೂರ್ತಿ (ಕಲೆ ಮತ್ತು ಸಮಾಜಿಕ ಜೀವನ-1979) : ಸುಮತೀಂದ್ರ ನಾಡಿಗ್ (ಮಾನವೀಯ ಅರ್ಥಶಾಸ್ತ್ರ-1979); ಡಾ॥ ವಾಮನಬೇಂದ್ರೆ (ಮಹಾರಾಷ್ಟ್ರದ ಜನಪದ ಸಾಹಿತ್ಯ–1980); ಎ. ಎನ್. ಮೂರ್ತಿ ರಾವ್ (ಚಂಡಮಾರುತ-1981); ಸತ್ಯವ್ರತ (ಆಧ್ಯಾತ್ಮ ವಿಚಾರ–1981); ಡಾ॥ ಪಾ. ಶ. ಶ್ರೀನಿವಾಸ (ತಿರುಕ್ಕುರಳ್-1982); ಕೆ. ವಿ. ಸುಬ್ಬಣ್ಣ (ರಂಗದಲ್ಲಿ ಅಂತರಂಗ-1982); ಸಿದ್ದಲಿಂಗ ಪಟ್ಟಣಶೆಟ್ಟಿ (ಅಂಜಿ–1983); ರವಿಬೆಳಗೆರೆ (ವಿವಾಹ–1983); ಎಸ್. ದಿವಾಕರ್ (ಕಥಾಜಗತ್ತು-1984); ಹೆಚ್. ಎಸ್. ಶ್ರೀಮತಿ (ಜೇನು ಮತ್ತು ಮಾನವ-1984); ಎಮ್. ದಸ್ತಗೀರ್ (ಬಹಳ ತಡಮಾಡಿದಿ-1985); ಆದ್ಯರಂಗಾಚಾರ್ (ನಾಟ್ಯಶಾಸ್ತ್ರ-1985); ಡಾ॥ ಎಚ್. ಎಸ್. ಸುಜಾತಾ (ಸೀತೆಯ ಭವಿಷ್ಯ-1987); ಹಸನ್ ಸಯೀಂ ಸುರಕೋಡ (ಜಾತಿ ಪದ್ಧತಿ-1987).

**ಜನಪದ ಸಾಹಿತ್ಯ** : ಡಾ॥ ಜೀ. ಶಂ. ಪರಮಶಿವಯ್ಯ (ಕನ್ನಡ ಜನಪದ ಕತೆಗಳು-1969); ಗುಂಡ್ಮಿ ಚಂದ್ರಶೇಖರ ಐತಾಳ (ಕೈಲಿ ಕರೆದ ನೊರೆಹಾಲು-1969); ಎಚ್. ಎಲ್. ನಾಗೇಗೌಡ (ಸೋಬಾನೆ ಚಿಕ್ಕಮ್ಮನ ಪದಗಳು-1972); ಪಿ. ಕೆ. ರಾಜಶೇಖರ (ಮಲೆಯ ಮಾದೇಶ್ವರ-1973); ಡಿ. ಲಿಂಗಯ್ಯ (ಬಯಲು ಸೀಮೆಯ ಜನಪದ ಗೀತೆಗಳು-1973): ಕಾಳೇಗೌಡ ನಾಗವಾರ (ಬಯಲು ಸೀಮೆಯ ಲಾವಣಿಗಳು-1973) ಡಾ॥ ಜೀ. ಶಂ. ಪ (ನಾಲ್ಕು ಜನಪದ ಮೇಳಗಳು-1974); ನಂ. ನಾರಾಯಣ ಗೌಡ (ಚೌಡಿಕೆ ಕಾವ್ಯಗಳು-1974); ಕಾರ್ಕಡ ಶ್ರೀನಿವಾಸ ಉಡುಪ (ನಾಲ್ಕು ಯಕ್ಷಗಾನ ರೂಪಕಗಳು-1974); ಡಾ॥ ಎಂ.ಎಸ್. ಲಠ್ಠೆ (ಉತ್ತರ ಕರ್ನಾಟಕದ ಒಡಪು-1974) : ಮತಿಘಟ್ಟ ಕೃಷ್ಣಮೂರ್ತಿ (ಕನ್ನಡ ಜಾನಪದ ಸಾಹಿತ್ಯ ಭಂಡಾರ-1975); ಎಚ್. ಎಲ್. ನಾಗೇಗೌಡ (ಪದವವೆ ನಮ್ಮ ಎದೆಯಲ್ಲಿ-1976); ಎಂ. ಎ. ಜಯಚಂದ್ರ (ಜಾನಪದ ಕಿರುಕತೆಗಳು-1977); ಡಾ॥ ಡಿ. ಕೆ. ರಾಜೇಂದ್ರ (ಕರಿಪಾಲ ಮೇಳ 1978); ಶಿವಾನಂದ ಗುಬ್ಬಣ್ಣನವರ (ದೇವೀರ್ ಬಂದಾವ್ ಬನ್ನೀರೆ-1979);

**ಶಾಸ್ತ್ರ/ವಿಜ್ಞಾನ :** ಹಂಪ ನಾಗರಾಜಯ್ಯ [ದ್ರಾವಿಡ ಭಾಷಾ ವಿಜ್ಞಾನ–1966] ; ಡಾ॥ ಎ. ವಿ. ನರಸಿಂಹಮೂರ್ತಿ [ಕನ್ನಡ ಲಿಪಿಯ ಉಗಮ ಮತ್ತು ವಿಕಾಸ–1968]; ಡಾ॥ ಕೆ. ಎಂ. ಕೃಷ್ಣರಾವ್ [ಕನ್ನಡ ಭಾಷಾ ಸ್ವರೂಪ—1968] ; ಎ. ನಾಗಭೂಷಣ ರಾವ್ [ಜೀವ-ಜೀವನ—1969] ; ಡಾ॥ ಅನುಪಮಾ ನಿರಂಜನ [ಆರೋಗ್ಯ

ದರ್ಶನ—1969]; ಡಿ. ಆರ್. ರಾವ್ [ಅನ್ವಯಿಕ ಮನಃಶಾಸ್ತ್ರ—1970]; ಜಿ. ಆರ್. ಲಕ್ಷ್ಮಣರಾವ್ [ವಿಜ್ಞಾನ ವಿಚಾರ—1971]; ಡಾ॥ ಪಿ. ಎಸ್. ಶಂಕರ್ [ಹೃದಯ ರಕ್ತನಾಳಗಳು—1971]; ಜಯಲಕ್ಷ್ಮಿ ಶ್ರೀನಿವಾಸನ್ [ವೈಭವದ ಮನೆ—1972]; ಕೆ. ಎನ್. ಶಿವಶಂಕರರಾವ್ [ಇಂಜನಿಯರಿಂಗ್ ವಸ್ತುಗಳು—1972]; ಡಾ॥ ಎಂ. ಶಿವರಾಂ [ಮನ ಮಂಥನ—1974]; ಡಾ॥ ಎ. ನಾರಾಯಣಪ್ಪ [ನೆನಪು—1974]; ಡಾ॥ ಕೃಷ್ಣಾನಂದ ಕಾಮತ್ [ಪ್ರಾಣಿ ಪರಿಸರ—1975]; ಕೆ. ವಿ. ಸರಳಾಯ [ಕ್ಯಾನಿಂಗ್—1975]; ಎನ್. ಎಚ್. ನರಸಿಂಹಮೂರ್ತಿ [ಮಾನವನ ಮೇಲೆ ಗ್ರಹಗಳ ಪ್ರಭಾವ ಉಂಟೆ—1976]; ಎ. ನಾರಾಯಣಪ್ಪ [ಸಿಹಿಮೂತ್ರ ರೋಗ—1977]; ಜಿ. ಜಿ. ಹಿರೇಮಠ [ಮೀನು ಮತ್ತು ಇತರ ಸಾಗರೋತ್ಪನ್ನ ಆಹಾರಗಳ ಶೀತ ಜೋಪಾಸನೆ—1978]; ಟಿ. ಆರ್. ನಾಗಪ್ಪ [ವಯಸ್ಕರ ಶಿಕ್ಷಣ ಕೈಪಿಡಿ–ಸಮಾಜ ವಿಜ್ಞಾನ—1979]; ಡಾ॥ ಸಿ. ಆರ್. ಚಂದ್ರಶೇಖರ [ಮಗು, ಮನಸ್ಸು ಮತ್ತು ಆರೋಗ್ಯ—1980 [ಸಮಾಜ ವಿಜ್ಞಾನ] ಡಾ॥ ಬಿ. ಜಿ. ಎಲ್. ಸ್ವಾಮಿ [ಸಾಕ್ಷಾತ್ಕಾರದ ದಾರಿಯಲ್ಲಿ—1980]; ಬಿ. ಹರೀಶ್ [ನಾಯಿ—1981]; ಕೆ. ತಿಮ್ಮಯ್ಯ [ಸಂತಾನೋತ್ಪತ್ತಿ ಶರೀರ ಕ್ರಿಯಾಶಾಸ್ತ್ರ—1982]; ಜಿ. ಟಿ. ನಾರಾಯಣರಾವ್ [ನಕ್ಷತ್ರ ವೀಕ್ಷಣೆ—1982]; ಶ್ರೀಕಂಠ ರಾವ್ [ಮಕ್ಕಳು ಮತ್ತು ಕಾನೂನು—1983]; [ಸಮಾಜ ವಿಜ್ಞಾನ]; ಡಿ. ಎಸ್. ಜಯಪ್ಪ ಗೌಡ [ಕರ್ನಾಟಕದ ಕಡಲಾಚೆಯ ಸಂಪರ್ಕ—1982]; ಅನಂತರಾಮು [ಹಿಮದ ಸಾಮ್ರಾಜ್ಯದಲ್ಲಿ—1974]; ಡಾ॥ ಬಿ. ಜಿ. ಎಲ್. ಸ್ವಾಮಿ [ಫಲಶ್ರುತಿ—1985]; ವಿ. ಎಸ್. ನಾರಾಯಣರಾವ್ [ಭಾರತದ ಸ್ವಾತಂತ್ರ್ಯ ಸಂಗ್ರಾಮ—1986].

**ಜೀವನ ಚರಿತ್ರೆ:** ವಿ. ಸೀತಾರಾಮಯ್ಯ [ಮಹನೀಯರು—1969]; ಶಂಬಾ ಮನಗೋಳಿ [ಮಾಗಿದರೂ ಮೊಗ್ಗು—1970]; ಡಾ॥ ಎಸ್. ವಿ. ಜಾಮು [ಶ್ರೀರಂಗ ಮಹಾಗುರು—1972]; ಮರಗಲವಾಡಿ ಲಕ್ಷ್ಮೀನರಸಿಂಹಶಾಸ್ತ್ರಿ [ಸ್ವಾಮಿ ವಿವೇಕಾನಂದ ಅಳಸಿಂಗ ಪೆರುಮಾಳು—1972]; ಬಾಬು ಕೃಷ್ಣಮೂರ್ತಿ [ಅಜೇಯ—1974]; ಮ. ಶ್ರೀ. ದೇಶಪಾಂಡೆ [ಶ್ರೀ ಗುರುದೇವ ರಾನಡೆ—1974]; ಡಾ॥ ಎಚ್. ಕೆ. ರಂಗನಾಥ್ [ಬಣ್ಣ ಬೆಳಕು—1974]; ನೀಲತ್ತಹಳ್ಳಿ ಕಸ್ತೂರಿ [ಸಿದ್ಧವನಹಳ್ಳಿ ಕೃಷ್ಣಶರ್ಮ ವ್ಯಕ್ತಿ ಮತ್ತು ಶಕ್ತಿ—1976]; ಡಾ॥ ವಿ. ಸೀತಾರಾಮಯ್ಯ [ಮುಂಬೈ ವಾಸದ ನೆನಪುಗಳು—1977]; ಕೆದಂಬಾಡಿ ಜತ್ತಪ್ಪರೈ [ಬೇಟೆಯ ನೆನಪುಗಳು—1978]; ವಿ. ಎಸ್. ನಾರಾಯಣರಾವ್ [ಮಹಾತ್ಮರ ಮಾರ್ಗ–1979]; ಡಾ॥ ಎಸ್. ಎಸ್. ಕೋತಿನ [ಸೋನಾಬಾಯಿ ದೊಡ್ಡಮನಿ–1980]; ಪ್ರೊ॥ ವಿ. ಎಂ. ಇನಾಂದಾರ್ [ಡಾ॥ ಅಂಬೇಡ್ಕರ್–1981]:

ಡಾ॥ ಪ್ರಭುಶಂಕರ [ಬೆರಗು–1982] ; ಮಲ್ಲಿಕಾರ್ಜುನ ಮನಸೂರ್ [ನನ್ನ ರಸ ಯಾತ್ರೆ–1982] ; ಡಿ. ಬಿ. ಬಸವೇಗೌಡ [ನಾ ಕಂಡ ಪುಟ್ಟಣ್ಣ–1984] ; ಬಾಬು ಕೃಷ್ಣಮೂರ್ತಿ [ಅದಮ್ಯ–1985] ; ಬಿ. ವಿ. ಕಕ್ಕಿಲ್ಲಾಯ [ಫ್ರೆಡರಿಕ್ ಎಂಗೆಲ್ಸ್ –1986].

**ಮಾನವಿಕ ಸಾಹಿತ್ಯ :** ಡಾ॥ ಸೂರ್ಯನಾಥ ಕಾಮತ್ (ಕರ್ನಾಟಕದ ಸಂಕ್ಷಿಪ್ತ ಇತಿಹಾಸ–1973) ; ಕೆ. ವೆಂಕಟಸ್ವಾಮಿ (ನನ್ನ ಹಳ್ಳಿ–1973) ; ಕೆ. ಎಸ್. ಮಲ್ಲೇಗೌಡ (ಭಾರತ ಎತ್ತ ಸಾಗಿದೆ–1973) ; ಕೆ. ಎಸ್. ಸದಾಶಿವಯ್ಯ (ವಿಶ್ವ ವಿದ್ಯಾನಿಲಯಗಳಲ್ಲಿ ಸ್ವಾಯತ್ತತೆ–1974) ; ಸಿ. ಹೆಚ್. ಮರಿದೇವರು (ಮುನ್ನಡೆದ ಶಿಕ್ಷಣ ಮನಶ್ಶಾಸ್ತ್ರ–1974) ; ಡಾ॥ ಪಿ. ಎಸ್. ರಾಮಾನುಜಂ (ಕೊಡುಮರು–1975) ; ಶ್ರೀಮತಿ ಎಂ. ಜಿ. ಗೌಡರ್ (ಶಿಶುವಿಹಾರ–1975) ; ಬಿ. ಎಸ್. ಚಂದ್ರಶೇಖರ (ಸಮೂಹ ಮಾಧ್ಯಮಗಳು–1976) ; ಟಿ. ಆರ್. ನಾಗಪ್ಪ (ಭಾರತದ ಗ್ರಾಮೀಣ ಗ್ರಂಥಾಲಯಗಳು–1977) ; ದೇಜಗೌ (ಕುವೆಂಪುರವರ ಶಿಕ್ಷಣ ತತ್ತ್ವ ವಿಚಾರ–1977) ; ಡಾ॥ ಡಿ. ವಿ. ಸೀತಾರಾಮಯ್ಯ (ಮಹಾಭಾರತದ ಕೃಷ್ಣಚಾರಿತ್ರ-1978) ; ಡಾ॥ ಜಿ. ರಾಮಕೃಷ್ಣ (ಮುನ್ನೋಟ–1980) ; ಶ್ರೀಮತಿ ಎ. ಪಿ. ಮಾಲತಿ (ಸುಖದ ಹಾದಿ–1981) ; ಹೊ. ವೆ. ಶೇಷಾದ್ರಿ (ತೋರ್‌ಬೆರಳ್–1981) ; ಹೆಚ್. ಜೆ. ರಾಮಯ್ಯಂಗಾರ್ (ರಾಮಾನುಜ ಸಿದ್ಧಾಂತ ದರ್ಪಣ–1982) ; ಶಶಿಧರ ವಿಶ್ವಾಮಿತ್ರ (ಕಡೆಯ ಚಿರತೆ–1985).

## ಉಪಸಂಹಾರ

"ಮಕ್ಕಳೇ, ಇಷ್ಟು ದಿನ, ಇಷ್ಟು ಅಸಕ್ತಿಯಿಂದ ನನ್ನ ಪ್ರವಚನ ಕೇಳಿದ್ದೀರಿ. ನಿಮ್ಮಲ್ಲಿರೊ ಶ್ರದ್ಧೆ, ಉತ್ಸಾಹ ಕಂಡು ನಂಗೆ ತುಂಬಾ ಸಂತೋಷವಾಗಿದೆ. ವಿದ್ಯಾರ್ಥಿ ಗಳಲ್ಲಿ ಕಥೆ, ಕಾದಂಬರಿ ಓದೋದ್ರಲ್ಲಿ ಆಸಕ್ತಿ ಇರೋದು ವಾಸ್ತವ. ಆದ್ರೆ ಇಂಥಾ ನೀರಸ ವಿಷಯದಲ್ಲೂ ನೀವು ತೋರಿಸಿರೊ ಆಸ್ಥೆ ನಿಜಕ್ಕೂ ಪ್ರಶಂಸನೀಯ. ಎಂಥೆಂಥಾ ಮಹಾನುಭಾವರು ನಮ್ಮ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಲು ಶ್ರದ್ಧಾಪೂರ್ವಕ ವಾಗಿ ಶ್ರಮಿಸಿದ್ದಾರೆ ಎಂಬುದು ನಿಮ್ಗೆ ಅರ್ಥವಾಗಿದೆ ಅನ್ಕೊಂಡಿದ್ದೀನಿ. ನಾನು ಎಷ್ಟೋ ವರ್ಷದಿಂದ ಎಷ್ಟೇ ಶ್ರಮವಹಿಸಿ ವಿಷಯ ಸಂಗ್ರಹಿಸಿದ್ರೂ ಪರಿಪೂರ್ಣ ವಾಗಿಲ್ಲ ಎಂಬುದು ನನಗೇ ಗೊತ್ತಿದೆ. ಬಹಳ ಮುಖ್ಯರಾದ ಸಾಹಿತಿಗಳನ್ನೇ ಉದ್ಧ ರಿಸದೆ ಇರಬಹುದು. ಸಾಹಿತಿಯನ್ನು ಉದ್ಧರಿಸಿದ್ದರೂ ಅವರ ಮುಖ್ಯ ಕೊಡುಗೆ ಯನ್ನೇ ಉದಾಹರಿಸದೆ ಬಿಟ್ಟಿರಬಹುದು.

ಇದಕ್ಕೆ ಕಾರಣ ಅವು ನನ್ನ ಗಮನಕ್ಕೆ ಬಾರದೇ ಹೋಗಿರುವುದೇ ಹೊರತು ಉದ್ದೇಶಪೂರ್ವಕವಾಗಿ ಬಿಟ್ಟವುಗಳಲ್ಲ. ಎಷ್ಟೋ ಜನ ಸಾಹಿತಿಗಳಿಗೆ ತಮ್ಮ ವಿಷಯ

ತಿಳಿಸಲ್ಲ ಕಾಗದ ಬರೆದಿದ್ದೇನೆ. ಉತ್ತರ ಬಂದಿಲ್ಲ. ಎಷ್ಟೋ ವಿಷಯಗಳನ್ನು ನಾನು ಓದಲು, ಸಂಗ್ರಹಿಸಲು ಅಸಫಲನಾಗಿದ್ದೇನೆ. ಇದು ನನ್ನ ಅಸಾಮರ್ಥ್ಯ. ಇದನ್ನು ಬಹು ವಿಷಾದದಿಂದ ಒಪ್ಕೊಂಡು ಇದನ್ನು ಮುಂದಿನ ವರ್ಷದ ಬೇಸಗೆ ರಜದ ಹೊತ್ಗೆ ಸರಿಪಡಿಸೊ ಪ್ರಯತ್ನ ಮಾಡ್ತೀನಿ ಅಂತಾ ಆಶ್ವಾಸನೆ ಕೊಡ್ಬಲ್ಲೆ. ಇದಕ್ಕೆ ನಿಮ್ಮೆಲ್ಲರ ಸಹಕಾರ ಅತ್ಯಗತ್ಯ. ನಾನು ಬಿಟ್ಟಿರೊ ಸಾಹಿತಿಗಳನ್ನು ಗುರುತಿಸಿ ಅವರ ವಿಷಯಾನು ಆದ್ರೆ ಸಂಗ್ರಹಿಸಿ ನಂಗೆ ತಿಳಿಸಿದ್ರೆ ಬಹಳ ಉಪಕಾರವಾಗುತ್ತೆ.

ಅಂದ್ಹಾಗೆ ಈ ಬಗ್ಗೆ ನಾನೂ ಈ ಮಧ್ಯದಲ್ಲಿ ಕೊಂಚ ವಿಷಯ ಸಂಗ್ರಹಿಸಿದ್ದೇನೆ. ಅದನ್ನು 'ಅನುಬಂಧ'ದ ರೂಪದಲ್ಲಿ ಈಗ ನಿಮ್ಮುಂದಿಡ್ತಿದ್ದೇನೆ,'' ಎಂದು ನುಡಿದು ಗುರ್ತು ಹಾಕಿಕೊಂಡಿದ್ದ ಟಿಪ್ಪಣಿಯನ್ನು ತೆರೆದು ಮುಂದಿರಿಸಿಕೊಂಡು ಓದಲು ಪ್ರಾರಂಭಿಸಿದರು.

# ಅನುಬಂಧ

## (ಅ) ಕವಿಗಳು

**ಶಿಶುನಾಳ ಶರೀಫ ಸಾಹೇಬರು *:** ಇವರು ಭಾವುಕರು, ಅನುಭಾವಿಗಳು, ಜಾನಪದ ಕವಿಗಳು. ಇವರ ಕವಿತೆಗಳು ಅತ್ಯಂತ ಜನಪ್ರಿಯ. ಇವುಗಳಲ್ಲಿ ಹಲವು ಕ್ಯಾಸೆಟ್‌ಗಳಲ್ಲಿ ಧ್ವನಿಮುದ್ರಿತಗೊಂಡಿವೆ. ವೇದಾಂತ, ನೀತಿ ಹಾಸುಹೊಕ್ಕಾಗಿ ಇವರ ಪದಗಳಲ್ಲಿ ಕಾಣಸಿಗುತ್ತವೆ.

ಉದಾ : ಸದ್ಗುರು ಸಾಕಿದ ಮದ್ದಾನಿ ಬರುತಿದೆ
ಎದ್ದು ಹೋಗಿರಿ ಇದ್ದ ನಿಂದಕರು ॥ ಪ ॥
ಬಿದ್ದು ಈ ಭವದೊಳು ಹೊರಳಾಡೋ ಜನರನ್ನು
ಉದ್ಧಾರ ಮಾಡುತ ಬರುತಲಿದೆ.

●

ಹಾವು ತುಳಿದು ಹಾರಿ ನಿಂತೆ
ಜೀವ ಕಳವಳಿಸಿತು ಗೆಳತಿ
ದೇಹತ್ರಯದ ಸ್ಮೃತಿಯು ತಪ್ಪಿ
ದೇವಾ ನೀನೆ ಗತಿಯು ಎಂದು
ಹಾವು ತುಳಿದೆನೇ....

●

* ಜೀವಿತಕಾಲ: (1818-1889). ಧಾರವಾಡ ಜಿಲ್ಲಾ ಶಿಗ್ಗಾಂವ ತಾಲ್ಲೂಕಿನ 'ಶಿಶುವಿನ ಹಾಳ' ಎಂಬ ಗ್ರಾಮದಲ್ಲಿ ಜನಿಸಿದರು. ತಂದೆ: ಇಮಾಮ್ ಸಾಹೇಬ, ತಾಯಿ: ಹಜ್ಜುಮಾ. ಕಳಸದ ಗೋವಿಂದಭಟ್ಟರು, ಶರೀಫಸಾಹೇಬರ ಗುರುಗಳು. ಪುಟ 151 ನೋಡಿ.

ಅಳಬೇಡ ತಂಗಿ ಅಳಬೇಡ
ನಿನ್ನ ಕಳುಹ ಬಂದವರಿಲ್ಲಿ ಉಳುಹಿಕೊಂಬುವರಿಲ್ಲ
ಅಳಬೇಡ ತಂಗಿ ಅಳಬೇಡ.

ಖಡಕೀಲೆ ಉಡಿಯಕ್ಕಿ ಹಾಕಿದರವ್ವಾ ಒಳ್ಳೆ
ದುಡುಕಿಲೆ ಮುಂದಕ್ಕೆ ನೂಕಿದರವ್ವಾ

ಮಿಡಿಕ್ಯಾಡಿ ಮದುವ್ಯಾದಿ ಮೋಜು ಕಾಣವ್ವ—ಮುಂದ
ಹುಡುಕ್ಯಾಡಿ ಮಾಯದ ಮದವೇರಿದೆವ್ವಾ

**ಕನ್ನಡ ವಾಮನ** (1870–1925) (ಉಪೇಂದ್ರ ಹಣಮಂತ ಕುಲಕರ್ಣಿ)– ಬಿಜಾಪುರ ಜಿಲ್ಲೆಯ ಬಾಗಿಲುಕೋಟೆಯ ಸಮೀಪದ 'ತೋಳ ಮಟ್ಟಿ' ಹಳ್ಳಿಯಲ್ಲಿ ಜನನ.

ಕನ್ನಡ ಪ್ರಾಥಮಿ ಶಾಲಾ ಶಿಕ್ಷಕರು.

ಇವರ ಲೇಖನಗಳು ಶುಭೋದಯ, ವಾಗ್ಭೂಷಣ, ಪ್ರಭಾತ ಮತ್ತು ಕರ್ನಾಟಕ ವೈಭವಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಇವರ ಬಹಳಷ್ಟು ಕವಿತೆಗಳಲ್ಲಿ ಹಳಗನ್ನಡ ಹಾಸು ಹೊಕ್ಕಾಗಿದೆ. 'ನವ ಕವಿತೆಗಳು' ಎಂಬ ಕವಿತಾ ಮಾಲೆಯಲ್ಲಿ ಹಿರಿಯರ ಶಕ್ತಿ ತಮಗೆ ದೊರಕಲೆಂದು ಪ್ರಾರ್ಥಿಸಿದ್ದಾರೆ.

ಬರಲಿ ನನ್ನಯ ಕಾವ್ಯದಲಿ ತೂ
ರ್ವಿರಿಯ ಜಾಣ್ಮೆಯು ವೆಂಕಟನ ಪದ
ಸರಸವಾ ಮುಳಬಾಗಲನ ಪದ ಪ್ರೌಢತನವೈದೆ
ಕರಿಬಸವ ಪಂಡಿತನ ಪದಗಳ
ವರ ಮಧುರತನ ವೈದೆ ಗೌರೀ
ಶ್ವರನ ಶೈಲಿಯು ಸುಲಭತನವಾ ಗಳಗನಾಥನದು ॥

●

'ಪೆದ್ದ ಶರ್ಮ ಮಾಧವ ಭಟ್ಟರ ಸಂವಾದ' ಎಂಬ ಕವಿತೆಯಿಂದ.

"ಗಡಿಬಿಡಿಯೇಕೆ ಮಾಡುವಿರಿ ಮಾಧವ ಭಟ್ಟರೆ ನೀವು ಸ್ನಾನಕೆ ?"
"ವಿಧವೆಯರೆಲ್ಲ ಬಂದಿಹರು ವೇಳೆಯದಾಯಿತು ಕೇಳ್ ಪುರಾಣಕೇ"
"ಅಡಚಣೆಯಾಗಲೊಂದು ದಿನ ಸ್ನಾನವ ಬಿಟ್ಟಿರದೇನು ಪಾಪವೇ"
"ಮರುಳನೆ ಕೇಳು, ನಾಲ್ಕು ದಿನದಿಂ ನಡೆದಿರ್ಪುದು ಮಂತ್ರಸ್ನಾನವೇ"

ಕೃತಿಗಳು : ಅಲಂಕಾರ ದರ್ಪಣ (ಕುವಲಯಾ ನಂದದ ಅನುವಾದ)
ಇವರು ಬರೆದದ್ದು ಬಹಳವಾಗಿದ್ದರೂ ಅಚ್ಚಾಗಿರುವುದು ಬಹು ಕಡಿಮೆ.

**ಭೂವೀಶ ಕವಿ** (ಫಕೀರಪ್ಪಾ ಬಿನ್ ಬಸಪ್ಪಾ ಕರಡೀಗುಡ್ಡಿ) (ಸು : 1883) ಇವರು 'ಬರಗಾಲ ವರ್ಣನೆ' ಎಂಬ 25 ಭಾಮಿನಿ ಷಟ್ಪದಿಗಳುಳ್ಳ ಚಿಕ್ಕ ಪುಸ್ತಕ ಹಾಗೂ ಹರಿಲೀಲಾಮೃತ ಸಾರ ಅಥವಾ ದಶಾವತಾರ ಸ್ತೋತ್ರ (28 ಪುಟದ) ಪುಸ್ತಕ ಬರೆದಿದ್ದಾರೆ.

ಶೈಲಿಗೆ ಉದಾಹರಣೆ :

ಭುವನದೊಳಗತಿ ಕೀರ್ತಿ ಹೊಂದಿದ ಕವಿಗಳೆಲ್ಲರ ಕಬ್ಬವನು ನಾ
ಲವಲವಿಕೆಯಿಂದೋದಿ ತೋಷಿತನಾಗಿ ಭಕ್ತಿಯಲೀ
ಅವರ ಪಾದಂಗಳನು ಭಜಿಸುತ ತವಕದಿಂದಲೇ ಸಾರ್ದೆ ನಾನೀ
ಕವಿತೆಯನು ನೋಡುವುದು ಸುಮನರು ಮಮತೆಯಿಂದೀಗಾ ‖

**ಅಚ್ಯುತಗೌಡ ಕಿನ್ನಿಗೋಳಿ :** ಈ ಶತಮಾನದ 6, 7ನೇ ದಶಕದಲ್ಲಿ ಪ್ರಸಿದ್ಧಿಯಲ್ಲಿದ್ದ ಸಾಹಿತಿ, ಅಧ್ಯಾಪಕ, ಪತ್ರಿಕಾ ಬರಹಗಾರ. ಇವರು ಸಾಹಿತ್ಯಕ್ಷೇತ್ರಕ್ಕೆ ನೀಡಿರುವ ಕೃತಿಗಳು ಅಪಾರ. ಇವರ ಖಂಡ ಕಾವ್ಯಗಳು ಬಹಳ ಹೆಸರುಗಳಿಸಿವೆ.

ಕೃತಿಗಳು : 'ಯೋಗಲಹರಿ' (3 ಖಂಡ ಕಾವ್ಯಗಳ ಸಂಕಲನ) 'ಸರಸ–ವಿರಸ' (ನಾಲ್ಕು ವಿನೋದ ಸಂಕಲನಗಳು); 'ಶಿವಲೇಶ್ಯೆ' (ಐತಿಹಾಸಿಕ ಘಟನೆಯನ್ನು ಆಧರಿಸಿದ ಖಂಡಕಾವ್ಯ), 'ದಾರಾ' ಮತ್ತು ಬಿಡುಗಡೆಯ ನಾಂದಿ (ಐತಿಹಾಸಿಕ ಕಾದಂಬರಿಗಳು), ಪರಾಶರ ಸತ್ಯ, ಪತನ, ಪ್ರಾಯಶ್ಚಿತ್ತ, ಮಂತ್ರರಹಸ್ಯ, ಅಜ್ಞಾತ ಸಂಹಾರ, ಗುಪ್ತತೀರ್ಥಾಟನೆ (ದೃಶ್ಯ ಲಹರಿಗಳು), ಒಡ್ಡಿದ ಉರುಳು, ವತ್ಸವಿಜಯ (ಸಾಮಾಜಿಕ ಕಾದಂಬರಿಗಳು) ಮುಂತಾದ ಕೃತಿಗಳನ್ನು ರಚಿಸಿರುವುದಲ್ಲದೆ 85ಕ್ಕೂ ಹೆಚ್ಚು ಬಿಡಿಕವನ, 40 ಇತರ ಸ್ವತಂತ್ರ ಕೃತಿ, 15 ಪುಸ್ತಕ ವಿಮರ್ಶೆ, ಮುಂತಾದವುಗಳನ್ನು ರಚಿಸಿದ್ದಾರೆ.

'ಉಮರನ ಒಸಗೆ' 172 ಚೌಪದಿಗಳ ವಿಶಿಷ್ಟ ಸಂಕಲನ.

## (ಆ) ಕವಿ/ಕಾದಂಬರಿಕಾರರು

**ಗುಲ್ವಾಡಿ ವೆಂಕಟರಾಯರು[1] :** ಕಳೆದ ಶತಮಾನದ ಅಂತ್ಯದಲ್ಲಿ ಅಂದರೆ ಸು 1899 ರಲ್ಲಿ 'ಇಂದಿರಾ ಬಾಯಿ' ಕಾದಂಬರಿ ರಚಿಸಿದ ಹೆಗ್ಗಳಿಕೆ ಇವರದು. ಇವರು 'ಭಾಗೀರಥಿ' ಮತ್ತು 'ಸೀಮಂತಿನಿ' ಕಾದಂಬರಿಗಳನ್ನೂ ಬರೆದಿದ್ದರೆಂದು ಹೇಳ ಲಾಗುತ್ತದೆ. ಆದರೆ ಅವು ಇಂದು ಲಭ್ಯವಿಲ್ಲ.

ಇವರು ಕನ್ನಡ ಸಾಹಿತ್ಯದ ಆದ್ಯಪುರುಷರಲ್ಲಿ ಒಬ್ಬರು.

---

1 ಜೀವಿತಕಾಲ : (1844–1913). ಮಡಕೇರಿಯಲ್ಲಿ ವಾಸವಾಗಿದ್ದರು.

**ಬಾಗಲೋಡಿ ದೇವರಾಯರು**[1] : ಹಳೆಯ ಪೀಳಿಗೆಯ ಸೃಜನಶೀಲ ಸಾಹಿತಿಗಳಲ್ಲಿ ಇವರೂ ಒಬ್ಬ ಪ್ರಮುಖರು. ಹಲವು ಕಾಲೇಜುಗಳಲ್ಲಿ ಕೆಲಕಾಲ ಉಪ ನ್ಯಾಸಕರು, ಪ್ರಾಧ್ಯಾಪಕರೂ ಆಗಿದ್ದರು. ಭಾರತದ ರಾಯಭಾರಿಯಾಗಿ ಹಲವು ದೇಶ ಗಳಲ್ಲಿ ಸೇವೆಸಲ್ಲಿಸಿದ್ದಾರೆ. ಮಾಸ್ತಿಯವರಿಂದ ಪ್ರಭಾವಿತರಾಗಿ ಕಥಾ ಮಾಧ್ಯಮ ಸ್ವೀಕರಿಸಿದರು. ಅವರ ಮೆಚ್ಚುಗೆ ಸಹ ಗಳಿಸಿದ್ದರು.

ಕೃತಿಗಳು ; ಹುಚ್ಚ ಮುನಸೀಫ ಮತ್ತು ಇತರ ಕಥೆಗಳು, 'ಆರಾಧನಾ' : 'ರುದ್ರಪ್ಪನ ರೌದ್ರ ಮತ್ತು ಇತರ ಕಥೆಗಳು' ಈ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ-1986 ಲಭಿಸಿದೆ.

**ಕಾಶಿವಿಶ್ವನಾಥಶೆಟ್ಟಿ**[2] : ಚಿಕ್ಕಮಗಳೂರಿನಲ್ಲಿ ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಇವರು ಕಾವ್ಯ, ಕಥೆ, ಕಾದಂಬರಿ, ನಾಟಕ," ಜೀವನಚರಿತ್ರೆ ಗಳನ್ನು ರಚಿಸಿದ್ದಾರೆ, ವಿಮರ್ಶಕರು ಹಾಗೂ ಸಂಶೋಧಕರೂ ಹೌದು. ಅನುವಾದ ಸಹ ಮಾಡಿದ್ದಾರೆ.

'ಮಲೆನಾಡ ಕವಿತಿಲಕ', 'ಕವಿಕುಲಾವಸಂತ', 'ಸಾಹಿತ್ಯ ಸುಧಾರತ್ನ' ಬಿರುದು ಗಳನ್ನು ಹಲವು ಸಂಘ ಸಂಸ್ಥೆಗಳು ಇವರಿಗೆ ನೀಡಿವೆ.

ಇವರ ಕೃತಿಗಳ ಸಂಖ್ಯೆ ಸುಮಾರು 70.

ಮುಖ್ಯ ಕೃತಿಗಳು : ಸೀತಕ್ಕನ ಸವತಿ, ಕಾಶಿ ಕಾವೇರಿ, ಮಾವು ಮಲ್ಲಿಗೆ, ಸಮಾಗಮ, ಸ್ವಾಮಿ ಶಿವಾನಂದ, ಸರಸ್ವತಿ, ಸೋದರಿ ನಿವೇದಿತೆ, ಗೃಹದೇವತೆ, ಬ್ರಹ್ಮ ಗಂಟು, ಧರ್ಮನಂದನ, ಉತ್ತಿಷ್ಠ ಭಾರತ ಮುಂತಾದವು.

## (ಇ) ಪ್ರವಾಸ ಸಾಹಿತ್ಯ

**ರಾಜಾಮಣಿ ನಾಗರಾಜರಾವ್**[3] : ಕರ್ನಾಟಕದ ಪ್ರಸಿದ್ಧ ಗಮಕಿ. ಸಾಹಿತ್ಯದಲ್ಲಿ ಮುಂಚಿನಿಂದಲೂ ಆಸಕ್ತಿ ಇದ್ದರೂ ಬರವಣಿಗೆ ಪ್ರಾರಂಭಿಸಿದ್ದು ಇಳಿ ವಯಸ್ಸಿನಲ್ಲಿ. ಪತಿ, ಪ್ರಸಿದ್ಧ ಸಾಹಿತಿ ಸಿ. ಕೆ. ನಾಗರಾಜ ರಾವ್‌ರವರೊಡನೆ ಯುರೋಪ್ ಅಮೇರಿಕಾ ಹಾಗೂ ಕೆನಡ ದೇಶಗಳನ್ನು ಸಂದರ್ಶಿಸಿ (1984) ಭಾರತಕ್ಕೆ

---

1 ಜನನ : (1927-1985). ಇಟಲಿ, ನೇಪಾಳಗಳಲ್ಲಿ ಕಾರ್ಯದರ್ಶಿಗಳಾಗಿ, ನೈಜೀರಿಯಾ, ಫಿಲಿಫೈನ್ಸ್, ಲಾವೋಸ್, ನ್ಯೂಜಿಲೆಂಡ್, ಬಲ್ಗೇರಿಯಾ ಮುಂತಾದೆಡೆ ಭಾರತದ ರಾಯಭಾರಿಯಾಗಿದ್ದರು. ಬಹುಭಾಷಾ ಪಾರಂಗತರು.

2 ಜನನ : ಫೆಬ್ರವರಿ 24, 1928. ತುಮಕೂರು. ತಂದೆ : ಕೃಷ್ಣಶೆಟ್ಟಿ, ತಾಯಿ : ಸೀತಾಲಕ್ಷ್ಮಮ್ಮ.

3 ಜನನ : ಜೂನ್ 28. 1921. ಪ್ರಸಿದ್ಧ ಸಾಹಿತಿ ಸಿ. ಕೆ. ನಾಗರಾಜರಾವ್‌ರವರ ಧರ್ಮಪತ್ನಿ.

ಹಿಂತಿರುಗಿದ ನಂತರ ಬರೆದ ಪ್ರಥಮ ಕೃತಿ. 'ಸುವರ್ಣ ಮಧುಚಂದ್ರ' (ಪ್ರವಾಸ ಸಾಹಿತ್ಯ). ಪ್ರವಾಸ ಅನುಭವ ಬಹುಸುಂದರವಾಗಿ ಚಿತ್ರಿತಗೊಂಡಿದೆ.

**ಪ್ರೊ॥ ಸಿ. ಹೆಚ್. ಮರಿದೇವರು**[1] **:** ಜನಪ್ರಿಯ ಸಾಹಿತಿ. ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಉಪನ್ಯಾಸಕರಾಗಿದ್ದು ಅದರಿಂದ ನಿವೃತ್ತಿ ಹೊಂದಿ ಕೃಷಿಕರಾಗಿದ್ದಾರೆ. ಇವರ 'ಶಿಕ್ಷಣ ತತ್ವಶಾಸ್ತ್ರ' ಮತ್ತು 'ಮುನ್ನಡೆದ ಶಿಕ್ಷಣ ಮನಶ್ಶಾಸ್ತ್ರ' ವಿದ್ಯಾರ್ಥಿಗಳಿಗೆ ಬಹು ಉಪಯುಕ್ತವಾಗಿರುವ ಕೃತಿಗಳು. ಮೊದಲನೆಯದಕ್ಕೆ ದೇವರಾಜ ಬಹದ್ದೂರ್ ಪ್ರಶಸ್ತಿ, ಎರಡನೆಯದಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿವೆ (1974).

'ಆಗ್ನೇಷಿಯಾ ಮತ್ತು ಜಪಾನ್ ರಾಷ್ಟ್ರಗಳಲ್ಲಿ ಮರಿದೇವರು' ಇವರು ರಚಿಸಿರುವ ಉತ್ತಮ ಪ್ರವಾಸ ಕಥನ.

## ( ಈ ) ನಾಟಕಕಾರರು

**ಕವಿತಾ ಕೃಷ್ಣ**[2] **:** ಕವಿ, ನಾಟಕಕಾರ, ಕಥೆಗಾರ ಹಾಗೂ ಸಂಶೋಧಕ. 'ಕವಿತಾ ಪ್ರಕಾಶನ' ಮಾಲೆಯ ಮೂಲಕ ಪ್ರಕಾಶಕರೂ ಆಗಿದ್ದಾರೆ. ಇವರ ಕೃತಿಗಳ ಸಂಖ್ಯೆ ಸುಮಾರು 35.

ಮುಖ್ಯ ಕೃತಿಗಳು : ಬಾಳೆಬಂಗಾರ, ಮಮತೆಯ ಮನೆ, ತ್ಯಾಗಮಯಿ, ರಾಮರಾಜ್ಯ, ಸಂಗೊಳ್ಳಿ ರಾಯಣ್ಣ, ವಸ್ತ್ರಾಪಹರಣ. ಚಂಡಶಾಸನ, ರಾಧಾನಿವಾಸ, ಶಕುಂತಳ (ನಾಟಕಗಳು) ; ಕವನ ತರಂಗ, ಕವನ ಮಂಜರಿ, ಕಂದನವಾಣಿ, ಕಾವ್ಯ ಮಂಜರಿ, ಕನ್ನಡ ಕಿನ್ನರಿ, ಕನ್ನಡ ಕಹಳೆ, ಕೃಷ್ಣನ ಕೊಳಲು, ಕನ್ನಡಾಂಬೆಗಾರತಿ, ತೇರ ನೇರು ಬಾ (ಕವನ ಸಂಕಲನಗಳು) ; ನಾದಯೋಗಿ ನಾರಣಪ್ಪ, ರುದ್ರಮುನಿ ಚರಿತ (ಜೀವನ ಚರಿತ್ರೆಗಳು) ; ಕರ್ನಾಟಕದ ತಿಗಳರು, ಗಂಗರ ಮಾನ್ಯಪುರ (ಸಂಶೋಧನಾತ್ಮಕ ಕೃತಿಗಳು) ; ಆವರ್ತನ (ಕಾದಂಬರಿ) ; ವಿಜಯ ವಂದನ (ಸಂಪಾದನೆ).

## (ಉ) ವಿಮರ್ಶೆ/ಸಂಪಾದನೆ/ಸಂಶೋಧನೆ ನಿಪುಣರು

**ಕಂಬಿ ಬಸವಾಚಾರ್ಯ**[3] **:** ಶಾಲಾ ಉಪಾಧ್ಯಾಯರು, ಪಂಡಿತರು, ಕವಿಗಳು ಹಾಗೂ ಬಹುಮುಖ ಪ್ರತಿಭೆಯ ಲೇಖಕರು.

---

1 ಜನನ: ಮಾರ್ಚ್ 10, 1938. ಚಿಕ್ಕನಾಯ್ಕನಹಳ್ಳಿ ತಾಲ್ಲೂಕು ಸಿದ್ಧರಾಮನಗರದಲ್ಲಿ. ತಂದೆ: ಹಂಜೇಗೌಡ. ತಾಯಿ: ಪಂಚಮ್ಮ.

2 ಪ್ರೌಢಶಾಲೆ ಮಟ್ಟದಲ್ಲಿ ಕನ್ನಡ ಪಂಡಿತರು. ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಸಹ ಗಳಿಸಿದ್ದಾರೆ. ಅಖಿಲ ಕರ್ನಾಟಕ ನಾಟಕಕಾರ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳು. ತಂದೆ: ಯಜಮಾನ್ ಕಾಳಯ್ಯ. ಪುಟ 382 ನೋಡಿ.

3 ಜೀವಿತಕಾಲ : (1875–1920).

ಕೃತಿಗಳು : ಲಿಂಗರಾಜ ನಾಮಾವಳಿ, ವೀರಶೈವ ಸಮಾಜ ಗುಣ ದರ್ಪಣ, ವಿಷಯವಿವಾಹ, ಚಂದ್ರಿಕಾವಿಜಯ (ನಾಟಕ) ; ಮುರುಘೇಂದ್ರಾಷ್ಟಕ, ಸಮಾಜಾದರ್ಶ ಅಥವಾ ರುದ್ರಪ್ರಭು ನೀತಿ, ಗಜಪತ್ನೀ ಪ್ರಲಾಪ ಮುಂತಾದವು.

**ಉಗ್ರಾಣ ಮಂಗೇಶರಾಯರು**[1] **:** ವೃತ್ತಿಯಲ್ಲಿ ಶಿಕ್ಷಕರಾದರೂ ಪ್ರವೃತ್ತಿಯಲ್ಲಿ ಸಾಹಿತಿ. ಹಳಗನ್ನಡ ಸಾಹಿತ್ಯದ ಉಗ್ರಾಣವೆಂದು ಖ್ಯಾತನಾಮರಾಗಿದ್ದರು. ಇಂಗ್ಲೀಷ್ ಮತ್ತು ಹಳಗನ್ನಡದಲ್ಲಿ ಅಪಾರ ಪ್ರೌಢಿಮೆಗಳಿಸಿದ್ದ ಇವರು ಸವ್ಯೋದಯ ಸಾಹಿತ್ಯ ಹರಿಕಾರರೆಂದು ಪ್ರಸಿದ್ಧರಾಗಿದ್ದರು. ಜೈನ ಕಾವ್ಯಗಳನ್ನು ಇವರಷ್ಟು ಓದಿ ಅರಗಿಸಿಕೊಂಡವರು ಇಂದೂ ದೊರೆಯುವುದು ದುರ್ಲಭ. ಭರತೇಶವೈಭವದಂಥ ಮೇರು ಕೃತಿಯನ್ನು ತಮ್ಮ 28ನೇ ವಯಸ್ಸಿನಲ್ಲಿ ಸಂಪಾದಿಸಿದ ಹೆಗ್ಗಳಿಕೆ ಇವರದು.

ಇವರ ಸಾಹಿತ್ಯ ಸೇವೆ ವೈವಿಧ್ಯಪೂರ್ಣ. ಕವನ ರಚಿಸಿದ್ದಾರೆ; ವಿಮರ್ಶೆ ಮಾಡಿದ್ದಾರೆ. ಶಿಶು ಸಾಹಿತ್ಯ ಹಾಗೂ ಗ್ರಂಥ ಸಂಪಾದನಾ ಕ್ಷೇತ್ರವನ್ನೂ ಸಂಪನ್ನಗೊಳಿಸಿದ್ದಾರೆ. ಮಕ್ಕಳಿಗೆ ಪಠ್ಯ ಪುಸ್ತಕಗಳನ್ನೂ ರಚಿಸಿದ್ದಾರೆ. 'ವೀರ ಚೌಪದಿ' ರಚನೆ ಇವರ ಇನ್ನೊಂದು ವೈಶಿಷ್ಟ್ಯ.

ಇವರು ಬರೆಯುತ್ತಿದ್ದ ಅಂದಿನ ಪ್ರಸಿದ್ಧ ಪತ್ರಿಕೆಗಳು : ವಾಗ್ಭೂಷಣ, ಕರ್ನಾಟಕ ಕೇಸರಿ, ಸ್ವದೇಶಾಭಿಮಾನಿ, ಬೋಧಿನಿ, ಕನ್ನಡ ಕೋಟಿ, ಕಂಠೀರವ ಮುಂತಾದವು.

**ಕ. ವೆಂ. ರಾಘವಾಚಾರ್**[2] **:** ಹಳಗನ್ನಡ ಭಾಷೆಯ ಪಂಡಿತರು, ತೌಲನಿಕ ದ್ರಾವಿಡ ಭಾಷಾ ವ್ಯಾಕರಣಗಳ ತಜ್ಞರು, ಗ್ರಂಥ ಸಂಪಾದಕರು. ಕನ್ನಡದಲ್ಲಿ ಗ್ರೀಕ್ ಸಾಹಿತ್ಯ ಪ್ರಸಾರಕರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಾಹಿತ್ಯ ಸಹಾಯಕರಾಗಿ ಸೇರಿ, ನಿಘಂಟು ಕಛೇರಿಯಲ್ಲಿ ದುಡಿದು, ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆಸಲ್ಲಿಸಿದ್ದಾರೆ. ಕೆಲಕಾಲ 'ಕನ್ನಡ ನುಡಿ'ಯ ಸಂಪಾದಕರಾಗಿದ್ದರು.

ಕೃತಿಗಳು : ಅಂತಿಗೊನೆ, ಯಶೋಧರ ಚರಿತ್ರೆ (ಪರಿಷ್ಕರಿಸಿ ಸಂಪಾದಿಸಿದ ಕೃತಿಗಳು) ; ಆಗಮೆಮ್ನಾನ್, ಒಯ್ದಿಪೌಸ್ ದೊರೆ, ಕಪ್ಪೆಗಳು (ಗ್ರೀಕ್ ನಾಟಕಗಳ ಅನುವಾದಕಗಳು) ; ಸಂದಾ ಸೆನಪು (ಸಂಶೋಧನಾತ್ಮಕ ಲೇಖನಗಳು).

**ಡಿ. ಎನ್. ಕೃಷ್ಣಯ್ಯ**[3] **:** ಉಪಾಧ್ಯಾಯ ವೃತ್ತಿ ನಡೆಸುತ್ತಲೇ ಬಿ.ಎ. ಹಾಗೂ ಬಿ.ಎಡ್. ಗಳಿಸಿದರು. 1935ರಲ್ಲಿ ಮದರಾಸಿನ ಎಂ.ಎ. ಪದವಿ ಪಡೆದರು.

---

1 ಜೀವಿತಕಾಲ : (1893–1973). ಜನನ : ಕುಂದಾಪುರದಲ್ಲಿ.

2 ಜೀವಿತಕಾಲ : (1904–1977). ಹುಟ್ಟಿದ್ದು ಬೇಲೂರು. ತಂದೆ : ವೆಂಕಟಾಚಾರ್ಯ. ತಾಯಿ : ತಿರುಮಲಮ್ಮ.

3 ಜೀವಿತಕಾಲ : (ಕ್ರಿ. ಶ. 1904–1973). ಕೊಡಗಿನಲ್ಲಿ ಜನನ.

ಇತಿಹಾಸದಲ್ಲಿ ಮೊದಲಿನಿಂದಲೂ ಆಸಕ್ತಿಯಿದ್ದ ಇವರು ಕೊಡಗಿನ ಬಗ್ಗೆ ಬಹಳ ಸಂಶೋಧನೆ ನಡೆಸಿದ್ದಾರೆ.

'ಕೊಡಗಿನ ಇತಿಹಾಸ' ಒಂದು ಅಪೂರ್ವ ಕೃತಿ. ಕೊಡಗು ದೇಶದ ರಾಜಕೀಯ ಮತ್ತು ಸಾಮಾಜಿಕ ಚರಿತ್ರೆಯನ್ನು ವಿಸ್ತಾರವಾಗಿ ರಚಿಸಿರುವ ಪ್ರಯತ್ನ ನಿಜವಾಗಿ ಸ್ತುತ್ಯಾರ್ಹ. ಇದು ಮೊದಲು ಮಡಕೇರಿಯ 'ಶಕ್ತಿ' ಪತ್ರಿಕೆಯಲ್ಲಿ ಧಾರಾವಾಹಿ ಪ್ರಕಟಗೊಂಡು ಅನಂತರ ಪರಿಷ್ಕರಿಸಿದ ರೀತಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯ (ಪ್ರಸಾರಾಂಗ) ದಿಂದ ಪ್ರಕಟಗೊಂಡಿದೆ.

ಇತರ ಕೃತಿಗಳು: ಸುಂದರನಾಡು ಕೊಡಗು, ವೀರರಾಜ ವಿಜಯ (ಕಾದಂಬರಿ).

**ಮಳಿದ ಗಂಗಾಧರಯ್ಯ ನಂಜುಂಡಾರಾಧ್ಯ**[1]: ಮಹಾ ಪಂಡಿತರು, ಆಸ್ಥಾನ ವಿದ್ವಾನ್, ವಿದ್ಯಾವಿಭೂಷಣ, ವಿದ್ಯಾವಾರಿಧಿ ಬಿರುದುಗಳಿಂದ ಶೋಭಿತರಾಗಿದ್ದ ಈ ಪಂಡಿತರಿಗೆ 1970ರಲ್ಲಿ ರಾಷ್ಟ್ರಪ್ರಶಸ್ತಿ. 1979ರಲ್ಲಿ ರಾಜ್ಯಪ್ರಶಸ್ತಿಗಳು ಲಭಿಸಿದ್ದುವು. ಇವರ ಕೃತಿಗಳ ಸಂಖ್ಯೆ ಸುಮಾರು 90.

ಮುಖ್ಯವಾದವುಗಳು: ವಿಜಯನಾದ, ಪಕ್ಷ್ಮಲಾಕ್ಷಿ (ಕಾವ್ಯ); ಮಾದಾರಚೆನ್ನ (ನಾಟಕ): ಶ್ರೀ ಶೈಲ ಪಂಡಿತಾರಾಧ್ಯ ಸುಪ್ರಭಾತಂ, ಮಗ್ಗೆ ಮಾಯಿದೇವರು ಮತ್ತು ಅವರ ಕೃತಿಗಳು, ಹಿಂದೂ ಧರ್ಮ ಮತ್ತು ವೀರಶೈವ ಸಂಸ್ಕೃತಿ. ವಿಭೂತಿ, ಅರ್ಜುನ ವಿಜಯ, ಬಸವ ವಚನಾಮೃತಂ, ವೈದಿಕಷಟ್‌ಸ್ಥಲ, ಲಿಂಗಪೂಜಾವಿಧಿ, ಭಟ್ಟ ನಾರಾಯಣ, ಜೀವಜ್ಯೋತಿ ಮುಂತಾದವು.

**ಕೆಳದಿ ಗಣಪತಿ ಭಟ್ಟ**[2]: ವಿದ್ವಾಂಸರು. ಮಹೋಪಾಧ್ಯಾಯ, ವಿದ್ಯಾಲಂಕಾರ, ವ್ಯಾಖ್ಯಾನವಿಚಕ್ಷಣ ಬಿರುದಾಂಕಿತರು. 'ಅಮರಗಾಥಾ' ಕೃತಿಗೆ ಕೇಂದ್ರ ಸರ್ಕಾರದಿಂದ. 'ಕೌಂತೇಯ' ಕೃತಿಗೆ ರಾಜ್ಯ ಸರ್ಕಾರದಿಂದ ಬಹುಮಾನ ಪಡೆದಿದ್ದಾರೆ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 35.

ಮುಖ್ಯ ಕೃತಿಗಳು: ಕನ್ನಡದ ಪ್ರಖ್ಯಾತ ಕಾದಂಬರಿಗಳು (ವಿಮರ್ಶೆ); ನವಯುಗ, ಶಂಖಧ್ವನಿ (ಕವನ); ಪ್ರೇಮಪಾಶ (ಸಂಕಲನ); ಸ್ವರ್ಗಾರೋಹಣ (ಕಾದಂಬರಿ): ಮಹಾಶ್ವೇತೆ (ನಾಟಕ) ಮುಂತಾದವು.

**ಬಿ. ಎಸ್. ಸಣ್ಣಯ್ಯ**[3]: (ಭೋಗನಹಳ್ಳಿ ಸಣ್ಣೇಗೌಡ ಸಣ್ಣಯ್ಯ) ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಹ ನಿರ್ದೇಶಕರಾಗಿ

---

1 ಆಗಸ್ಟ್ 1, 1914. ಕೋಲಾರ ಜಿಲ್ಲೆಯ ಗುಂಡ್ಲಹಳ್ಳಿಯಲ್ಲಿ. ತಂದೆ: ಗಂಗಾಧರಯ್ಯ. ತಾಯಿ: ವೀರಮ್ಮ.

2 ಜನನ: ಫೆಬ್ರವರಿ 10, 1924, ಕೆಳದಿಯಲ್ಲಿ. ತಂದೆ: ಅರ್ಚಕ ಸುಬ್ಬಾಭಟ್ಟ.

3 ಜನನ: ಜೂನ್ 18, 1928. ಬೆಂಗಳೂರು ಜಿಲ್ಲೆಯ ಭೋಗನಹಳ್ಳಿಯಲ್ಲಿ. ತಂದೆ: ಸಣ್ಣೇಗೌಡ, ತಾಯಿ: ಬೋರಮ್ಮ.

ದ್ದಾರೆ. ಸಾಹಿತ್ಯದ ಹಲವು ಪ್ರಕಾರಗಳಿಗೆ ಸಮೃದ್ಧ ಕೊಡುಗೆಗಳನ್ನು ನೀಡಿದ್ದಾರೆ. ಪ್ರತಿಭಾವಂತರು. ನೇಮಿಚಂದ್ರನ 'ನೇಮಿನಾಥ ಪುರಾಣ' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, 'ವರ್ಧಮಾನ ಪುರಾಣ' ಕೃತಿಗೆ ನಂಜರಾಜ ಬಹದ್ದೂರ್ ಪ್ರಶಸ್ತಿ, ಶೀ.ನ.ಶ್ರೀ ಬಹುಮಾನ ಲಭಿಸಿವೆ. ಇವರ ಕೃತಿಗಳ ಸಂಖ್ಯೆ ಸುಮಾರು 35.

ಮುಖ್ಯವಾದವುಗಳು : ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ, ಗ್ರಂಥ ಸಂರಕ್ಷಣೆ, ಕೋಲ ಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು, ಸೊಬಗಿನ ಸೋನೆ, ಅರವಿನಮಾರಿ, ತಂದೆಗಳ ವಚನಗಳು, ಮದನಮೋಹಿನಿಯ ಕಥೆ, ಹರಿವಂಶಾಭ್ಯುದಯಂ, ಕಾವ್ಯಾವಲೋಕನಂ ಇತ್ಯಾದಿ.

**ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ[1] :** ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ. ಸಂಸ್ಕೃತ ವಿದ್ವಾಂಸರು. ಬಹುಮುಖ ಪ್ರತಿಭಾವಂತರು. 'ದರ್ಶನ ಕಲಾರತ್ನ', 'ದರ್ಶನ ವಿಶಾರದ' ಬಿರುದುಗಳಿಸಿದ್ದಾರೆ. ಇವರ ಕೃತಿಗಳ ಸಂಖ್ಯೆ ಸುಮಾರು 20.

ಮುಖ್ಯವಾದವುಗಳು : ಮಾನವ ಮತ್ತು ಪ್ರಕೃತಿ, ಗೀತಾಮಾತೆ, ಶಕ್ತಿ ವಿಕಾಸ, ಷಟ್ಸ್ಥಲ ಸಿದ್ಧಾಂತ, ಶಕ್ತಿ ವಿಶಿಷ್ಟಾದ್ವೈತ ವೇದಾಂತ, ಪ್ರಸಾದ ಜೀವನ, ಅರ್ಥಶಾಸ್ತ್ರ, ಸಾಹಿತ್ಯ ದರ್ಪಣ, ರಸಗಂಗಾಧರ ಮುಂತಾದವು.

**ಸಿ. ಸಂ. ಭೂಸರೆಡ್ಡಿ[2] :** ಕರ್ನಾಟಕ ವಿಶ್ವವಿದ್ಯಾಲಯದ ಪಠ್ಯಪುಸ್ತಕ ನಿರ್ದೇಶನಾಲಯದಲ್ಲಿ ಸಂಶೋಧಕರಾಗಿದ್ದಾರೆ. ಒಳ್ಳೆಯ ವಿಮರ್ಶಕರು. ಗ್ರಂಥ ಗಳನ್ನೂ ಸಂಪಾದಿಸಿದ್ದಾರೆ. ಜೀವನ ಚರಿತ್ರೆ ಹಾಗೂ ಶಿಶು ಸಾಹಿತ್ಯ ವಿಭಾಗಗಳಲ್ಲೂ ಕೃಷಿ ಮಾಡಿದ್ದಾರೆ. ಕೃತಿಗಳ ಸಂಖ್ಯೆ ಸುಮಾರು 25.

ಮುಖ್ಯವಾದವುಗಳು : ಸರ್ವಜ್ಞ ವೀರಶೈವನೇ (ವಿಮರ್ಶೆ) ; ಮೃತ್ಯುಂಜಯ (ಸಂಪಾದನೆ) ; ರಾಯಚೂರು. ವಚನಕಾರ ಅಂಬಿಗರ ಚೌಡಯ್ಯ (ಶಿಶು ಸಾಹಿತ್ಯ) : ನವಿಲುಗುಂದದ ಪುಣ್ಯಮೂರ್ತಿ ಹರ್ದೇಕರ ಮಂಜಪ್ಪ. ಉರಿಲಿಂಗ ಪೆದ್ದಿ (ಜೀವನ ಚರಿತ್ರೆ).

**ಕೆಳದಿ ಗುಂಡಾಜೋಯಿಸ್[3] :** ವಿದ್ವಾಂಸರು. 'ಕನ್ನಡರತ್ನ', 'ಕನ್ನಡ ಪಂಡಿತ್' ಮುಂತಾದ ಬಿರುದುಗಳಿಸಿದ್ದಾರೆ. ಕೆಳದಿ ವಸ್ತು ಸಂಗ್ರಹಾಲಯದ ಗೌರವ

---

1 ಜನನ : ಸೆಪ್ಟೆಂಬರ್ 30, 1914, ತುಮಕೂರಿನಲ್ಲಿ. ತಂದೆ : ಗುಬ್ಬಯ್ಯ. ತಾಯಿ : ಸಂಗಮ್ಮ.

2 ಜನನ : ಮೇ 5, 1930. ಧಾರವಾಡ ಜಿಲ್ಲೆ ಕೊಣ್ಣೂರು. ತಂದೆ : ಸಂಗಪ್ಪ. ತಾಯಿ : ತಿಪ್ಪಮ್ಮ.

3 ಜನನ : ಸೆಪ್ಟೆಂಬರ್ 27, 1931, ಶಿವಮೊಗ್ಗ ಜಿಲ್ಲೆ 'ಹುರಳಿ ಗ್ರಾಮ'ದಲ್ಲಿ. ತಂದೆ : ನಂಜುಂಡ ಜೋಯಿಸ್, ತಾಯಿ : ಮೂಕಮ್ಮ.

ಕ್ಯೂರೇಟರ್. ಕೃತಿಗಳ ಸಂಖ್ಯೆ ಸುಮಾರು 10.

ಮುಖ್ಯವಾದವುಗಳು: ಇಕ್ಕೇರಿ ಅರಸರು, ಕೆಳದಿಯ ಸಂಕ್ಷಿಪ್ತ ಇತಿಹಾಸ (ಇತಿಹಾಸ); ಶ್ರೀರಾಮಕರ್ಣಾಮೃತಂ, ಪಾರ್ವತಿ ವಲ್ಲಭ ಶತಕ (ಸಂಪಾದನೆ): ಬೆಂಗಳೂರಿನ ಕೆಂಪೇಗೌಡ ಮುಂತಾದವುಗಳು.

**ಪ್ರೊ|| ಎಂ. ಎಚ್. ಕೃಷ್ಣಯ್ಯ**[1]: ಅತ್ಯಂತ ಜನಪ್ರಿಯ ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಉಪನ್ಯಾಸಕರಲ್ಲಿ ಒಬ್ಬರು, ನುರಿತ ಸಾಹಿತಿಗಳು. ಸಂಪಾದನಾ ಕ್ಷೇತ್ರದಲ್ಲಿ ಅಮೋಘ ಸೇವೆ ಸಲ್ಲಿಸಿದ್ದಾರೆ, ಸಲ್ಲಿಸುತ್ತಿದ್ದಾರೆ. ಒಳ್ಳೆಯ ವಿಮರ್ಶಕರೂ ಹೌದು. 'ಯುವ ಕರ್ನಾಟಕ' ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಪತ್ರಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ 'ಕರ್ನಾಟಕ ಕಲಾ ವಾರ್ತೆ'ಯ ಸಂಪಾದಕರು.

ಕೃತಿಗಳು: ಅಜಿತಪುರಾಣ ಸಂಗ್ರಹ, ಹಳಗನ್ನಡ ಗದ್ಯ ಸಾಹಿತ್ಯ, ಬಿರಿಮೊಗ್ಗು, ಹೊಳಪು-ಝಳಪು (ಸಂಪಾದನೆ): ರೂಪಶಿಲ್ಪಿ ಬಸವಯ್ಯ (ಲಲಿತಕಲೆ); ಐತಿಹಾಸಿಕ ಕಾದಂಬರಿ - ಒಂದು ಸಮೀಕ್ಷೆ, ಕಲೆಯ ಭಾಷೆ ಮುಂತಾದವು.

**ಡಾ|| ಎನ್. ಎಸ್. ತಾರಾನಾಥ**[2]: (ನಂಜನಗೂಡು ಸೀತಾರಾಮ ತಾರಾನಾಥ) ಪ್ರತಿಭಾನ್ವಿತ ಉಪನ್ಯಾಸಕರಾದ ಇವರು ವಿದ್ಯಾರ್ಥಿಗಳ ಮಧ್ಯೆ ಅತ್ಯಂತ ಜನಪ್ರಿಯರಾಗಿದ್ದಾರೆ. ಸಂಶೋಧನೆಯಲ್ಲಿ ಬಹಳ ಆಸಕ್ತಿವುಳ್ಳವರು. ಒಳ್ಳೆಯ ಲೇಖಕರೂ ಹೌದು. ತಮ್ಮ ವಿದ್ಯಾಭ್ಯಾಸದ ಎಲ್ಲ ಹಂತಗಳಲ್ಲೂ ಪ್ರಥಮ ರ್‍ಯಾಂಕ್ ಗಳಿಸಿರುವುದು ಇವರ ಹೆಗ್ಗಳಿಕೆ. ಕೆನಿ ಸಿದ್ದಪ್ಪ ಗೋಲ್ಡ್ ಮೆಡಲ್, ದೇವರಾಜ ಬಹದ್ದೂರ್ ಪ್ರಶಸ್ತಿ, ಟಿ. ಎನ್. ಶ್ರೀಕಂಠಯ್ಯ ಗೋಲ್ಡ್ ಮೆಡಲ್. ನಾರಾಯಣ ಶಾಸ್ತ್ರಿ ಗೋಲ್ಡ್ ಮೆಡಲ್ ಮುಂತಾಗಿ ಹಲವಾರು ಬಹುಮಾನ ಗಳಿಸಿರುವ ಹಿರಿಮೆ ಇವರದು.

ಬಹುಮುಖ ಪ್ರತಿಭೆಯ ಇವರು ರಚಿಸಿರುವ ಕೃತಿಗಳು: ಶೋಧನ ಲೋಕ (1978), ಪರಿಶೋಧನೆ (1981), ಸಾಹಿತ್ಯಲೋಕ [(1978) ಎಂ. ಆರ್. ಶ್ರೀನಿವಾಸ ಮೂರ್ತಿ ಲೇಖನಗಳ ಸಂಪಾದನೆ].

---

1 ಜನನ: 1937 ಮೈಸೂರಿನಲ್ಲಿ. ಪ್ರಸ್ತುತ ಶ್ರೀಯುತರು ಸರ್ಕಾರಿ ವಿಜ್ಞಾನ ಕಾಲೇಜಿನಲ್ಲಿ ಕನ್ನಡ ಪ್ರವಾಚಕರಾಗಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿ.

2 ಜನನ: ನವಂಬರ್ 8, 1953. ತಂದೆ: ಎಸ್. ಎಸ್. ಸೀತಾರಾಮು. ತಾಯಿ: ಲೀಲಾವತಿ. ಉಪನ್ಯಾಸಕರು, ಅಂಚೆ ತೆರಪಿನ ಶಿಕ್ಷಣ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು. ಕನ್ನಡದಲ್ಲಿ ಸ್ನಾತಕೋತ್ತರ ಡಿಗ್ರಿ ಗಳಿಸಿರುವುದಲ್ಲದೆ ಹಲವಾರು ಡಿಪ್ಲೋಮಾ ಸಹ ಗಳಿಸಿದ್ದಾರೆ.

## (ಉ) ಪತ್ರಿಕೋದ್ಯಮಿಗಳು

ಗಣನೀಯ ಸೇವೆ ಮಾಡಿರುವ ಪತ್ರಿಕೋದ್ಯಮಿಗಳು: 'ವಿಜಯವಾಣಿ' ಪತ್ರಿಕೆಯ **ಹೆಚ್. ಆರ್. ಗುಂಡೂರಾವ್** (ನಾಲ್ಕು ದಶಕಕ್ಕೂ ಹೆಚ್ಚು ಕಾಲದಿಂದ ಪತ್ರಿಕೆ ನಡೆಸುತ್ತಿರುವ ಹೆಗ್ಗಳಿಕೆ ಇವರದು). 'ತುಮಕೂರು ವಾರ್ತೆ'ಯ **ಹೆಚ್. ಎಸ್. ರಾಮಣ್ಣ**; 'ಜನಪದ'ದ **ಸಿ. ಕೆ. ಪರಶುರಾಮಯ್ಯ**; 'ಮಾರ್ಚ್ ಆಫ್ ಕರ್ನಾಟಕ'ದ **ಡಾ|| ಕೆ. ಕೃಷ್ಣಮೂರ್ತಿ**; 'ಕರ್ನಾಟಕ ವಿಕಾಸ'ದ **ಮಹದೇವನ್**; 'ಕುಟುಂಬ'ದ **ಗೊರೂರು ಚೆನ್ನಬಸಪ್ಪ** ಮುಂತಾದವರುಗಳು ಮುಖ್ಯರು.

## (ಊ) ಶಿಶು ಸಾಹಿತ್ಯ ರಚನಕಾರರು

**ಉಳುವೀಶ**[1]: (ಉಳುವಯ್ಯ ವೀರಯ್ಯ ಹುಲ್ಲಿಪ್ಪನವರಮಠ) ಹಿಂದಿಯಲ್ಲಿ ರಾಷ್ಟ್ರಭಾಷಾ ಪ್ರವೀಣರು. ಕನ್ನಡದಲ್ಲೂ ವಿದ್ವಾಂಸರು. ವೃತ್ತಿಯಲ್ಲಿ ಉಪಾಧ್ಯಾಯರು. 18ನೇ ರಾಷ್ಟ್ರೀಯ ಬಹುಮಾನ ಸ್ಪರ್ಧೆಯಲ್ಲಿ, 'ಮಕ್ಕಳ ಮಂದಿರ' ಶಿಶು ಗೀತೆಗಳ ಸಂಕಲನಕ್ಕೆ ಬಹುಮಾನ ಗಳಿಸಿದ್ದಾರೆ. ಒಟ್ಟು ಕೃತಿಗಳ ಸಂಖ್ಯೆ ಸುಮಾರು 10.

ಮುಖ್ಯವಾದವುಗಳು: ಬಾಲತಪಸ್ವಿ, ಗೊಂಬವ್ವ, ನನ್ನ ಮನೆ (ಶಿಶು ಸಾಹಿತ್ಯ): ಶುಭವಾಣಿ, ಜೀವನ ಜೋಕಾಲಿ (ಕವನ): ಮಹಾಂತರ ಮಹಿಮೆ (ಸಂಪಾದನೆ); ಸವಿಚೇನು (ಪ್ರಬಂಧ) ಮುಂತಾದವುಗಳು.

**ಶಿವರಾಮು ಕಾಡನಕುಪ್ಪೆ**[2]: ಮೈಸೂರಿನ ವಿದ್ಯಾವರ್ಧಕ ಕಾಮರ್ಸ್ ಕಾಲೇಜಿನಲ್ಲಿ ಅಧ್ಯಾಪಕರು. ಚಿಂತಕರ ಚಾವಡಿ, ಸಮಾಜವಾದಿ ಯುವಜನ ಸಭಾ ಮುಂತಾದೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದಾರೆ. ಬಂಡಾಯ ಸಾಹಿತ್ಯ ಸಂಘಟಕರೂ ಹೌದು. ಒಳ್ಳೆಯ ವಿಮರ್ಶಕರು, ಶಿಶು ಸಾಹಿತ್ಯ ಲೇಖಕರು ಹಾಗೂ ಗ್ರಂಥ ಸಂಪಾದಕರು.

ಮುಖ್ಯ ಕೃತಿಗಳು: ಮೂರು ಹಿತನುಡಿಗಳು. ಸಾಗರ ಚಕ್ರವರ್ತಿಯ ಕಥೆ. ಅತಿಯಾಸೆ ಗತಿಕೇಡು (ಶಿಶು ಸಾಹಿತ್ಯ): ಚಂಪಾ ಆಯ್ದ ಕವನಗಳು (ಸಂಪಾದನೆ): ಸಮನ್ವಯ, ಸಂವಹನ (ವಿಮರ್ಶೆ).

---

1 ಜನನ: ಮಾರ್ಚ್ 29, 1926. ಬೆಳಗಾವಿ ಜಿಲ್ಲೆ ಹಿರೇನಂದಿಹಳ್ಳಿಯಲ್ಲಿ. ತಂದೆ: ವೀರಯ್ಯ ಶಿವಬಸಯ್ಯ. ತಾಯಿ: ವೀರವ್ವ.

2 ಜನನ: ಆಗಸ್ಟ್ 9, 1953. ಬೆಂಗಳೂರಿನ 'ಕಾಡನಕುಪ್ಪೆ'ಯಲ್ಲಿ. ತಂದೆ: ಲಿಂಗೇಗೌಡ, ತಾಯಿ: ಶಿವಮ್ಮ.

# ಲೇಖಕರ ವರ್ಣಾನುಕ್ರಮಣಿಕೆ

## ಪರಿಶಿಷ್ಟ

### ಲೇಖಕರ ವರ್ಣಾನುಕ್ರಮಣಿಕೆ (ಮುಂದುವರಿದದ್ದು)

## ವಿವರಣೆ-ವಿಸ್ತರಣೆ

ಊರಿಗೆ ಹೊರಟಿದ್ದ ವ್ಯಾಸರಾಯರು ಮಾರನೇದಿನವೇ ಹಿಂತಿರುಗಿದಾಗ ದಿನಕರ, ದಿನೇಶ, ಮುಕುಂದರಿಗೆ ಬಹಳ ಆಶ್ಚರ್ಯವಾಯಿತು, ಅಷ್ಟೇ ಆನಂದವೂ ಆಯಿತು. ಮಂತ್ರಮುಗ್ಧರಂತೆ ನಿಂತರು.

ವ್ಯಾಸರಾಯರೇ ಮಕ್ಕಳ ಮುಂದೆಬಂದು ನಿಂತು ಎಲ್ಲರನ್ನೂ ಅಪ್ಪಿಹಿಡಿದು ಕೊರಳಮೇಲೆ ನಲ್ಮೆಯಿಂದ ಬೆರಳಾಡಿಸಿದರು.

'ವ್ಯಾಸಣ್ಣಾ.... ಬಂದ್ರಾ.....? ನಿನ್ನೆ ನೀವು ಊರ್ಗೆ ಹೊರ್ಟಿದ್ದೇ ಯಾರ್ಗೂ ಇಷ್ಟ ವಿರಲಿಲ್ಲ, ನೋಡಿ ನಿಮ್ಮನ್ನು ನೋಡಿದ ತಕ್ಷಣಾ ಹ್ಯಾಗೆ ಹಿಗ್ತಾ ಇವೆ ಮಕ್ಳು !' ಅಡಿಗೆ ಮನೆಯಿಂದ ಹೊರಬಂದ ಪದ್ದಮ್ಮ ವ್ಯಾಸರಾಯರಿಗೆ ಪಾನಕ ತರಲು ಪುನಃ ಒಳಗೆ ಹೋದರು.

"ನೋಡಿ ಮಕ್ಳಾ.... ಕೆಲವು ಮುಖ್ಯ ಸಾಹಿತಿಗಳ ವಿಷಯ ತಿಳ್ಸೋದೇ ಬಿಟ್ಟು ಬಿಟ್ಟಿದ್ದೆ. ನನ್ನ ಟಿಪ್ಪಣಿಯಲ್ಲಿ ಕೆಲ ಹಾಳೆಗಳು ಕಳಚಿ ಬಿದ್ದು ಹೋಗಿದ್ವು. ರೈಲ್ವೆ ಬೋಗೀಲಿ ಪುಸ್ತಕ ತಿರ್ವಿ ಹಾಕ್ತಾ ಇದ್ದಾಗ ಸಿಕ್ತು. ತುಮಕೂರತನ್ಕ ಹೋಗಿದ್ದೋನು ಪುನಃ ಹಾಗೇ ಹಿಂತಿರುಗಿ ಬಂದ್ಬಿಟ್ಟೆ. ಅಷ್ಟೊಂದು ದಿನ ನಿಮ್ಗೆ ಸಾವಿರಾರು ಸಾಹಿತಿಗಳ ಪರಿಚಯ ಮಾಡ್ಸಿ ಮುಖ್ಯರಾದ ಕೆಲ್ವರನ್ನೇ ಬಿಟ್ರೆ ಚೆನ್ನಾಗಿರುತ್ತಾ ? ಯಾರಾದ್ರೂ ಇವರ ಹೆಸ್ರು ಹೇಳಿದ್ರೆ ನೀವು ಬೆಪ್ಪಾಗಿ ನಿಲ್ಬಾರ್ದಲ್ಲ....? ಅದಕ್ಕೆ ಇವ್ರನ್ನೆಲ್ಲಾ ನಿಮ್ಗೆ ತಿಳ್ಸೇ ಹೋಗೋಣ ಅಂತಾ ಹಿಂತಿರ್ಗಿ ಬಂದೇ ಬಿಟ್ಟೆ."

"ಒಳ್ಳೇ ಕೆಲಸ ಮಾಡಿದ್ರಿ ತಾತ.... ನಮ್ಗೆ ಒಂದಿನದಲ್ಲೇ ಬೇಜಾರಾಗೋಗಿತ್ತು. ಉಳಿದೋರನ್ನೂ ಕರ್ಕೊಂಡು ಬಂದ್ಬಿಡ್ತೀನಿ...." ಉತ್ತರಕ್ಕೂ ಕಾಯದೆ ದಿನಕರ ಹೊರಗೆ ಓಡಿದ.

"ಹುಡುಗರೆಲ್ಲಾ ಸೇರೋಹೊತ್ಗೆ ನೀವೂ ಕೈಕಾಲು ತೊಳ್ಕೊಂಡು ಬನ್ನಿ.... ಸ್ವಲ್ಪ ಉಪಹಾರಮಾಡಿ ಪಾನಕ ಕುಡೀವಂತ್ರಿ.... ಪುನಃ ನೀವು ಬಾಯಿ ಒಣಗಿಸ್ಕೊಳ್ಬೇ ಕಲ್ಲಾ"

"ಹೌದು.... ತಾತ.... ಉಪಹಾರ ಮಾಡ್ಕೊಂಡು ಬೇಗ್ಬನ್ನಿ...." ಮುಕುಂದ, ದಿನೇಶ ಕುಣಿದಾಡಿದರು.

ವ್ಯಾಸರಾಯರು ಉಪಹಾರ ಪೂರೈಸಿಬರುವ ಹೊತ್ತಿಗೆ ದಿನಕರ ತನ್ನ ಸ್ನೇಹಿತ ರನ್ನೆಲ್ಲ ಕರೆತಂದಿದ್ದ. ಚಾಪೆಯ ಮೇಲೆ ಕುಳಿತು ತೃಪ್ತಿಯಿಂದ ಹುಡುಗರತ್ತ ದೃಷ್ಟಿ ಹರಿಸಿ ತಮ್ಮ ಟಿಪ್ಪಣಿಯಿಂದ ಕೆಲಹಾಳೆಗಳನ್ನು ಹೊರತೆಗೆದು ಪ್ರವಚನ ಪ್ರಾರಂಭಿಸಿದರು.

**ಬೆಳಗೆರೆ ಜಾನಕಮ್ಮ**[1] ನಾಲ್ಕು ದಶಕಗಳ ಹಿಂದಿದ್ದ ಪ್ರಸಿದ್ಧ ಕವಯಿತ್ರಿ. ಅವರ ಕವಿತೆಗಳು ಜೀವನ, ಜಯ ಕರ್ನಾಟಕ, ಪ್ರಬುದ್ಧ ಕರ್ನಾಟಕ ಮುಂತಾದವುಗಳಲ್ಲಿ ಬೆಳಕು ಕಂಡಿದ್ದವು. ಅವರು ಬರೆದದ್ದು ಅಪಾರ. ಪ್ರಕಟನೆಗೊಂಡದ್ದು ಅಲ್ಪ, ಆದರೂ ಅವರ ಸಾಧನೆ ಪ್ರಶಂಸಾರ್ಹ 'ಕಲ್ಯಾಣ' ಪ್ರಥಮ ಕವನ ಸಂಕಲನ.

**ಶಾಂತಾದೇವಿ ಮ್ಹಾಳವಾಡ**[2]: ಕನ್ನಡ ಸಾಹಿತ್ಯ ಪರಿಷತ್ತು 1980ರಲ್ಲಿ, ರಾಜ್ಯ ಸಾಹಿತ್ಯ ಅಕಾಡೆಮಿ 1977ರಲ್ಲಿ ಇವರನ್ನು ಉತ್ತಮ ಸಾಹಿತಿಯೆಂದು ಸನ್ಮಾನಿಸಿವೆ. ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿಯ ಸದಸ್ಯೆಯಾಗಿ ಸೇವೆ ಸಲ್ಲಿಸಿದ್ದಾರೆ. 'ಸಾಹಿತ್ಯ ಸುಮ' ಜ.ಚ.ನಿ. ಪ್ರಶಸ್ತಿ ಗಳಿಸಿದೆ.

ಪ್ರಮುಖ ಕೃತಿಗಳು : ಕುಂಕುಮಬಲ (ಕಥಾಸಂಕಲನ); ಮಹಿಳಾ ಚೇತನ. ಮಹಿಳೆಯರ ಆತ್ಮಶ್ರೀ, ರಸಪಾಕ, ವಧುವಿಗೆ ಉಡುಗೊರೆ (ಪ್ರಬಂಧಗಳು) ಬಸವ ಯುಗದ ಶಿವಚರಣೆಯರು, ನೀಲಾಂಬೆ (ಜೀವನಚರಿತ್ರೆಗಳು)

ಇತರ ಕೃತಿಗಳು: ಮೊಗ್ಗೆಯಮಾಲೆ, ಕನ್ನಡತಾಯಿ, ಕೆಳದಿಚೆನ್ನಮ್ಮ, ಅಕ್ಕನಾಗ ಲಾಂಬಿಕೆ, ಸ್ವಾಭಿಮಾನಿ ಬೆಳವಡಿರಾಣಿ, ಸರದಾರ ವೀರನಗೌಡರು, ಹರಿಹರನ ಪ್ರಾರ್ಥನೆಗಳು, ಅಕ್ಕನಭಾವಸೌರಭ, ಧಾರವಾಡ ಜಿಲ್ಲೆ, ನಂದಾದೀಪ, ದಾಂಪತ್ಯ ಯೋಗ ಮುಂತಾದವುಗಳು.

**ಗೀತಾ ನಾಗಭೂಷಣ**[3] : ಉಪಾಧ್ಯಾಯಿನಿಯಾಗಿರುವ ಈಕೆ ಒಳ್ಳೆಯ ಕತೆ ಗಾರ್ತಿ, ಜನಪ್ರಿಯ ಹಲವಾರು ಕಾದಂಬರಿಗಳನ್ನು ರಚಿಸಿದ್ದಾರೆ.

ಕೃತಿಗಳು ; ತಾವರೆಯಹೂವು, ಚಂದನದ ಚಿಗುರು. ಮಹಾಮನೆ, ಮರಳಿನ ಮನೆ, ಆಘಾತ.

**ಲಲಿತಾಂಬಾ ಚಂದ್ರಶೇಖರ್**[4] ; ಬಹುಕಾಲ ಹೈದರಾಬಾದ್‌ನಲ್ಲಿದ್ದು ಈಗ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಅಧ್ಯಾಪಕಿಯಾಗಿದ್ದು ಗಳಿಸಿದ ಅನುಭವವನ್ನು ತಮ್ಮ ಕತೆ, ಕಾದಂಬರಿಗಳಲ್ಲಿ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ.

'ಸ್ವೀಕಾರ' ಕಾದಂಬರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ವರ್ಷದ ಉತ್ತಮ ಪುಸ್ತಕ (1979) ಬಹುಮಾನ ಲಭಿಸಿದೆ. 'ಅಖಿಲ ಭಾರತ ಮಹಾಭಾರತ' ಕತೆಗೆ ಬೊಂಬಾಯಿಯ ವಿದ್ಯಾಭವನದ ಕಥಾ ಸ್ಪರ್ಧೆಯಲ್ಲಿ ಬಹುಮಾನ ದೊರೆತಿದೆ.

---

1 ಜೀವಿತಕಾಲ: (1912–1948), ಚಳ್ಳಕೆರೆ ತಾಲ್ಲೋಕಿನ ಬೆಳಗೆರೆಯಲ್ಲಿ ಜನನ. ತಂದೆ: ಚಂದ್ರಶೇಖರಶಾಸ್ತ್ರಿ; ತಾಯಿ: ಅನ್ನಪೂರ್ಣಮ್ಮ; ಪತಿ: ಕೃಷ್ಣಶಾಸ್ತ್ರಿ.

2 ಜನನ : ಸು 1922, ಬೆಳಗಾಮ್‌ನಲ್ಲಿ, ಪತಿ : ಪ್ರೊ॥ ಸ. ಸ. ಮಾಳವಾಡ.

3 ಜನನ : 1942 ಕಲಬುರ್ಗಿಯಲ್ಲಿ.

4 ಜನನ : ದಾವಣಗೆರೆಯಲ್ಲಿ. ಇಂಗ್ಲೀಷ್‌ನಲ್ಲಿ ಸ್ನಾತಕೋತ್ತರ ಪದವಿಯ ಜೊತೆಗೆ ಪಿ. ಜಿ. ಡಿಪ್., ಪಿ. ಜಿ. ಟಿ. ಇ. ಡಿಪ್ಲಮೋ ಸಹ ಪಡೆದಿದ್ದಾರೆ.

ಕೃತಿಗಳು : ರೇಖಾ, ಮುಕುಂದ ಚಂದ್ರ, ಸರಸ್ವತಿ ಸಂಹಾರವೇ, ಪುನರ್‌ದತ್ತಾ, ಸುಕನ್ಯೆಯರು (ಕಾದಂಬರಿಗಳು) ವಿಮೋಚನೆ, ಬಿಡಿಹೂಗಳೂ (ಕಥಾಸಂಕಲನ). ಮುಕುಂದಚಂದ್ರ, ಪುನರ್‌ದತ್ತಾ ಕಾದಂಬರಿಗಳು ಚಲನಚಿತ್ರಗಳಾಗಿವೆ.

**ಡಾ|| ಎಚ್. ಎಸ್. ಸುಜಾತಾ**[1] **:** ಕನ್ನಡ ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಪ್ರಶಸ್ತಿ (ಎಂ.ಎಸ್. ಪುಟ್ಟಣ್ಣ–ಒಂದು ಅಧ್ಯಯನ) ಗಳಿಸಿರುವ ಈಕೆ ಒಳ್ಳೆಯ ಸಂಶೋಧಕಿ. ಮೈಸೂರಿನಲ್ಲಿ ಕನ್ನಡ ಉಪನ್ಯಾಸಕಿಯಾಗಿದ್ದಾರೆ. ಶಿಶುಸಾಹಿತ್ಯಕ್ಕೆ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ.

ಇತರ ಕೃತಿಗಳು : ಪುಟ್ಟಣ್ಣ ಹೇಳಿದ ಕತೆಗಳು (ಸಂಪಾದನೆ) ನ್ಯಾಯಾಧಿಪತಿಯ ಯುಕ್ತಿ ಮತ್ತು ಇತರ ಏಳು ಕತೆಗಳು, ಹಕ್ಕಿಯ ಬುದ್ಧಿ ಮತ್ತು ಇತರ ಐದು ಕತೆಗಳು, ಹಸು ಮತ್ತು ಹೆಗ್ಗಣ ಮತ್ತು ಇತರ ಏಳು ಕತೆಗಳು ಮುಂತಾದವು.

**ಸುನೀತಿ ಕೃಷ್ಣಸ್ವಾಮಿ :** ಆಕಾಶವಾಣಿ ಹಾಗೂ ದೂರದರ್ಶನದಲ್ಲಿ ಹಲವು ಕಾರ್ಯಕ್ರಮಗಳು ಪ್ರಸಾರಗೊಂಡಿವೆ. ಇವರ 'ಶ್ರವಣಕುಮಾರ' ಮಕ್ಕಳಕಥೆ ಬಹುಮಾನ ಗಳಿಸಿದೆ.

ಇತರ ಕೃತಿಗಳು : ಅದೃಷ್ಟಚಕ್ರ, ಸ್ಮೃತಿತರಂಗ, ಡಾ|| ರಮ್ಯ, ಪಚ್ಚೆಮನೆ. ಮಂದಾರ, ಆಸರೆ ಮುಂತಾದ ಕಾದಂಬರಿಗಳು.

**ಹೇಮಲತಾ ಪರಶುರಾಂ :** ಹೈದರಾಬಾದ್‌ನಲ್ಲಿ ನೆಲೆಸಿರುವ ಕನ್ನಡ ಸಾಹಿತಿ. ಉಪಾಧ್ಯಾಯಿನಿ.

ಕೃತಿಗಳು : ಪುಣ್ಯಸ್ಮರಣೆ, ಸುರೂಪಿ (ಕವನ ಸಂಗ್ರಹಗಳು) ; ಗೃಹಿಣಿ, ಗೆಳತಿ. ಆದರ್ಶಗೃಹಿಣಿ, ಭೂತನ ಭ್ರಂಗ (ಇತರ ಕೃತಿಗಳು)

**ವಿಜಯಶ್ರೀ ಸಬರದ**[2] : ಕನ್ನಡ ಪ್ರಾಧ್ಯಾಪಕಿ ಆಗಿರುವ ಈಕೆ ಕಥೆ ಕಾದಂಬರಿ ಕ್ಷೇತ್ರಗಳಿಂದ ಭಿನ್ನವಾದ ಕವನ ರಚನೆ ಹಾಗೂ ವಿಮರ್ಶಾ ಕ್ಷೇತ್ರಗಳಲ್ಲಿ ಕೊಡುಗೆಗಳನ್ನು ನೀಡಿದ್ದಾರೆ. 'ಜ್ವಲಂತ' ವಿದ್ಯಾವರ್ಧಕ ಸಂಘದ ಬಹುಮಾನ ಗಳಿಸಿದೆ (1979). 'ಪಲ್ಲವಿ' ತ್ರೈಮಾಸಿಕ ಪತ್ರಿಕೆ ನಡೆಸಿದ ಅನುಭವ ಉಂಟು.

ಕೃತಿಗಳು : ಇತ್ತೀಚಿನ ಮಹಿಳಾ ಸಾಹಿತ್ಯ, ತ್ರಿವೇಣಿಯವರ ಕಾದಂಬರಿಗಳು ; ಶೂದ್ರ ವಚನಗಾರ್ತಿಯರು (ವಿಮರ್ಶಾ ಗ್ರಂಥಗಳು)

**ಡಾ|| ವಿಜಯಾದಬ್ಬೆ**[3] **:** ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ, ಹೆಸರಾಂತ ವಿಮರ್ಶಕರು ಜನಪ್ರಿಯ ಉಪನ್ಯಾಸಕರು, ನಂಜನಗೂಡು ತಿರುಮಲಾಂಬಾ, ಆರ್. ಕಲ್ಯಾಣಮ್ಮ ಅವರ ಸಾಹಿತ್ಯ ಕುರಿತು ಸಂಶೋಧನೆ ಮಾಡುತ್ತಿದ್ದಾರೆ.

---

1 ಪುಟ 428 ನೋಡಿ. ಜನ್ಮಸ್ಥಳ : ಬೆಂಗಳೂರು.

2 ಜನನ : ಬೀದರ್.

3 ಜನನ : ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ 'ದಬ್ಬೆ' ಗ್ರಾಮದಲ್ಲಿ.

ಪ್ರಮುಖ ಕೃತಿಗಳು : ಇರುತ್ತವೆ (ಕವನ ಸಂಕಲನ) ; ಸಾನಂದ ಗಣೇಶ ಸಾಂಗತ್ಯ (ಸಂಪಾದನೆ); ಮೇರಿ ಮೆಕೆಲಿಯಾಡ್ ಬೆಥೂನೆ (ವ್ಯಕ್ತಿಚಿತ್ರ) ; ಸಂಪ್ರೀತಿ (ವಿಮರ್ಶೆ)

**ವಿಮಲಾ**[1] : ವಿದೇಶದಲ್ಲಿದ್ದು ಕನ್ನಡ ಸೇವೆ ಮಾಡುತ್ತಿರುವ ಈಕೆ ಗೃಹ ವಿಜ್ಞಾನದಲ್ಲಿ 'ಎಂ.ಎಸ್.' ಪದವಿ ಗಳಿಸಿದ್ದಾರೆ. ಅಮೇರಿಕಾದ ವಾಷಿಂಗ್‌ಟನ್‌ನಲ್ಲಿರುವ 'ಕಾವೇರಿ' ಸಾಂಸ್ಕೃತಿಕ ಸಂಸ್ಥೆಯ ಅಧ್ಯಕ್ಷರು. ಆಕಾಶವಾಣಿಯಲ್ಲಿ ಅಲ್ಲದೆ ವಾಯ್ಸ್ ಆಫ್ ಅಮೇರಿಕಾದಲ್ಲೂ ಸಂದರ್ಶನಗಳು ಪ್ರಸಾರಗೊಂಡಿವೆ. 'ಮಲ್ಲಿಗೆ ಅರಳ್ಯಾವ' ಕವನ ಸಂಕಲನ ವಿದ್ಯಾವರ್ಧಕ ಸಂಘದ ಬಹುಮಾನ ಗಳಿಸಿದೆ.

ಕೃತಿಗಳು : ನುಡಿ ಎನ್ನ ವೀಣೆ, ಚೆನ್ನ (ಕವನ ಸಂಕಲನಗಳು)

**ಶಾಂತಾದೇವಿ ಕಣವಿ**[2] : ಒಳ್ಳೆಯ ಕಥೆಗಾರ್ತಿ, 'ಬಯಲು ಆಲಯ' ಕಥಾಸಂಗ್ರಹಕ್ಕೆ 1974ರ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ.

ಇತರ ಕೃತಿಗಳು : ಸಂಜೆಮಲ್ಲಿಗೆ, ಮರುವಿಚಾರ, ಜಾತ್ರೆ ಮುಗಿದಿತ್ತು ಮತ್ತು ಮಕ್ಕಳಪುಸ್ತಕ 'ನಿಜಗುಣ ಶಿವಯೋಗಿ' ಮುಂತಾದವು.

**ಲೀಲಾದೇವಿ, ಆರ್. ಪ್ರಸಾದ್**[3] : ಪ್ರಸಿದ್ಧ ಸಮಾಜ ಸೇವಾಕರ್ತೆ, ಪತ್ರಿಕಾರಂಗದಲ್ಲೂ ದುಡಿದಿದ್ದಾರೆ, 'ಪ್ರತಿಭಾ' ಇವರೇ ಸಂಪಾದಿಸುತ್ತಿದ್ದ ಮಾಸ ಪತ್ರಿಕೆ (1954-58)

ಇವರ ಕೃತಿಗಳು : ಮಹಿಳೆ ಮತ್ತು ಉಳಿತಾಯ–ಕನ್ನಡ ಸಾಹಿತ್ಯ ಪರಿಷತ್ತಿನ ಮಹಿಳಾ ವರ್ಷದ ಬಹುಮಾನ ಗಳಿಸಿದೆ.

ಮಹಿಳೆ ಮತ್ತು ಸಹಕಾರ–ಕರ್ನಾಟಕ ರಾಜ್ಯ ಸಹಕಾರ ಯೂನಿಯನ್ ಪ್ರಶಸ್ತಿ ಪಡೆದಿದೆ.

ಸಂಜೀವಿನಿ (ಕಿರುನಾಟಕ) ; ಹೆಣ್ಣು ಮೇಲಿನ ಹೆಣ್ಣು (ಕಾದಂಬರಿ) ಕನ್ನಡತಿ (ಪ್ರಬಂಧಗಳು) ;

**ಲಲಿತಾ ಬಿ. ಟಿ. ನಾಯಕ್**[4] : ಸಂಗೀತ. ನಾಟಕ, ಸಾಹಿತ್ಯದಲ್ಲಿ ಅಪಾರ ಆಸಕ್ತಿ ಉಳ್ಳವರು. ಇವರ 'ನೆಲೆ-ಬೆಲೆ' ಕಾದಂಬರಿ 'ಸುಧಾ' ಕಾದಂಬರಿ ಸ್ಪರ್ಧೆಯಲ್ಲಿ (1981ರಲ್ಲಿ) ಬಹುಮಾನ ಗಳಿಸಿತ್ತು.

ಇತರ ಕೃತಿಗಳು : ಚಂದ್ರಪರಾಭವ (ರೇಡಿಯೊ ನಾಟಕ ಸಂಕಲನ) ; ಭಟ್ಟನ ಕನಸು (ಮಕ್ಕಳ ಕಥಾಸಂಕಲನ)

---

1 ಜನನ : 1932 ಧಾರವಾಡದಲ್ಲಿ.
2 ಕವಿ ಚೆನ್ನವೀರಕಣವಿಯವರ ಪತ್ನಿ, ಜನ್ಮಸ್ಥಳ : ವಿಜಾಪುರ.
3 ಹುಟ್ಟಿದೂರು ಧಾರವಾಡ, ಕೀರ್ತಿಶೇಷ ಶಿವಮೂರ್ತಿ ಶಾಸ್ತ್ರಿಗಳ ಸೊಸೆ, ಅಮೇರಿಕಾದ ನ್ಯೂಯಾರ್ಕ್‌ನಲ್ಲಿ ನಡೆದ 'ಇಂಟರ್‌ನ್ಯಾಷನಲ್ ಅಲಿಯನ್ಸ್ ಆಫ್ ವುಮೆನ್ಸ್ ಸಮ್ಮೇಳನದಲ್ಲಿ ಭಾಗವಹಿಸಿದ್ದರು.
4 ಜನನ : ಚಿಕ್ಕಮಂಗಳೂರು ಜಿಲ್ಲೆಯ ತಂಗಲಿ ತಾಂಡದಲ್ಲಿ, ರಾಜ್ಯವಿಧಾನ ಪರಿಷತ್ತಿನ ಸದಸ್ಯರು, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿ ಸದಸ್ಯರು.

**ಶೈಲಜಾ ಎಂ. ಭಟ್**[1] : ಇವರು ರಚಿಸಿರುವ 'ಬುದ್ಧಿವಂತರ ಕಥೆಗಳು, ಭೀಮಸೇನ, ಪಶುಪಕ್ಷಿಗಳ ಕಥೆಗಳು, ಪುಣ್ಯವಂತರ ಕಥೆಗಳು', ಪಠ್ಯಪುಸ್ತಕಗಳಾಗಿ ಬಹು ಜನಪ್ರಿಯವಾಗಿವೆ. ಮಕ್ಕಳಿಗಾಗಿ ರಚಿಸಿರುವ ಇತರ ಕೃತಿಗಳು : ಕನ್ನಡ ವ್ಯಾಕರಣ, ಸಾಹಸಿ ಗಲಿವರ, ಕಿರಿಯರ ಕಥೆಗಳು, ಭಾರತದ ವೀರಬಾಲಕರು, ಮಕ್ಕಳ ಮಧುಕರ ಮಾತುಕಥೆಗಳು.

ಇತರ ಪುಸ್ತಕಗಳು : ಕರ್ನಾಟಕದ ವೀರಮಹಿಳೆಯರು, ಗೃಹಾಲಂಕಾರಣ ಅಭಿರುಚಿಗಳು ಮುಂತಾದವು.

**ವಸಂತೀ ಚಂದ್ರ**[2] : ವೃತ್ತಿಯಲ್ಲಿ ಉಪಾಧ್ಯಾಯಿನಿ, ಸಾಹಿತ್ಯದಲ್ಲಿ ಬಹುಆಸಕ್ತಿ. ಕಥೆ, ಕಾದಂಬರಿ, ಕವನ, ಮಕ್ಕಳ ಸಾಹಿತ್ಯ, ಪ್ರವಾಸ ಸಾಹಿತ್ಯ ಮುಂತಾದ ಬಹುಮುಖಿ ಸಾಹಿತ್ಯ ಸಂಪನ್ನಗೊಳಿಸುತ್ತಿದ್ದಾರೆ. ಕಸೂತಿ ಚಿತ್ರಕಲೆಯಲ್ಲೂ ಈಕೆಗೆ ಆಸಕ್ತಿ.

ಮುಖ್ಯ ಕೃತಿಗಳು : ವೇಣುವನ, ವೃಂದಾವನ, ಅಂತರಕ್ಷಿ (ಕವನ ಸಂಕಲನಗಳು) ನಿನ್ನಡಿಗಳಲ್ಲಿ, ಅಗ್ನಿ, ಉತ್ಥಾನ, ಧರ್ಮ (ಕಾದಂಬರಿಗಳು) ; ಸತ್ಯಕಾಮ, ಸೌಗಂಧಿಕಾ ಪುಷ್ಪ, ಕಿಶೋರಿ ಜಾಗೃತಿ (ಮಕ್ಕಳ ಸಾಹಿತ್ಯ) ; ಕ್ಷಮಾಮೂರ್ತಿ (ನಾಟಕ)

**ವಿಜಯಶ್ರೀ**[3] (ವಿಜಯಕುಮಾರಿ, ಕೆ. ಜಿ.) : ಕನ್ನಡದಲ್ಲಿ ಸ್ನಾತಕೊತ್ತರ ಪದವಿ ಗಳಿಸಿರುವ ಈಕೆ ಕಾದಂಬರಿ ಕ್ಷೇತ್ರದಲ್ಲಿ ಬಹು ಜನಪ್ರಿಯತೆ ಗಳಿಸಿದ್ದಾರೆ.

ಮುಖ್ಯ ಕೃತಿಗಳು : ಹೃದಯಕುಂಜ, ಗಗನಚುಂಬಿ, ಚಂದ್ರಿಕಾಚಕೋರಿ (ಭಾಗ 1, 2,) ಜೋಡಿಹಂಸ, ಸುಮಂಗಲಿ, ದೂರದ ಲೋಕ, ಸ್ನೇಹಪಂಜರ, ಅಲೆಗಳ ನಡುವೆ, ನಾವಿಕನಿಲ್ಲದ ನೌಕೆ ಮುಂತಾದ ಸುಮಾರು 20 ಕಾದಂಬರಿಗಳು ; ಗೋರಿಯಿಂದೆದ್ದು ಬಂದವರು (ಕವನ ಸಂಕಲನ)

**ಎಂ. ಪಿ. ಪ್ರಕಾಶ್**[4] ಕರ್ನಾಟಕ ಸರ್ಕಾರದಲ್ಲಿ ಮಂತ್ರಿಯಾಗಿ ಹಲವು ಪ್ರಮುಖ ಖಾತೆಗಳನ್ನು ನಿರ್ವಹಿಸುತ್ತಿದ್ದಾರೆ, ಇವರು ಒಳ್ಳೆಯ ಸಾಹಿತಿಯೂ ಹೌದು. ಕಥೆ, ಕಾದಂಬರಿ, ನಾಟಕ ಮುಂತಾದವುಗಳನ್ನು ರಚಿಸಿದ್ದಾರೆ. ಉತ್ತಮ ನಾಟಕಾಭಿನಯಕ್ಕೆ ಹಲವಾರು ಪ್ರಶಸ್ತಿ ಗಳಿಸಿದ್ದಾರೆ. ಕೃತಿಗಳು : ವಿಜಯನಗರ ಸಾಮ್ರಾಜ್ಯ ; ಸೂರ್ಯ ಶಿಕಾರಿ ಮುಂತಾದ ನಾಲ್ಕು ನಾಟಕಗಳು.

---

1 ಜನನ : ಸು. 1955. ತಂದೆ : ಡಾ॥ ಕೆ. ಗಣಪತಿಭಟ್.

2 ಜನನ : ಸು. 1942. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಪಿಲಾರು ಗ್ರಾಮದಲ್ಲಿ.

3 ಜನನ : ಶಿವಮೊಗ್ಗ ಜಿಲ್ಲೆಯ ಈಸೂರಿನಲ್ಲಿ.

4 ಜನನ : 1940. ಹೊಸಪೇಟೆ ತಾಲೋಕಿನ ನಾರಾಯಣದೇವರ ಕೇರಿಗ್ರಾಮದಲ್ಲಿ. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮದ ಮಂತ್ರಿಯಾಗಿದ್ದರು. ಅನಂತರ ಕೆಲಕಾಲ ಗ್ರಾಮೀಣ ಬೆಳವಣಿಗೆ ಮತ್ತು ಪಂಚಾಯಿತಿ ರಾಜ್ಯ ಖಾತೆಯ ಮಂತ್ರಿಯಾಗಿದ್ದರು. ಕೆಲಕಾಲ ಜನತಾಪಾರ್ಟಿ ಹಾಗೂ ಜನತಾದಳದ ಅಧ್ಯಕ್ಷರೂ ಆಗಿದ್ದರು.

**ಕಮಲಾ ಹೆಮ್ಮಿಗೆ**[1] ಕನ್ನಡದಲ್ಲಿ ಸ್ನಾತಕೋತ್ತರ ಪದವಿಗಳಿಸಿರುವ ಈಕೆ ಕತೆ, ಕವನ, ಕಾದಂಬರಿ, ನಾಟಕ ಕ್ಷೇತ್ರಗಳಲ್ಲಿ ಕೃತಿ ರಚಿಸಿದ್ದಾರೆ.

ಪ್ರಶಸ್ತಿಗಳಿಸಿರುವ ಕೃತಿಗಳು :

'ಪಲ್ಲವಿ' (ಕವನ ಸಂಗ್ರಹ) ಸಾಹಿತ್ಯ ಪರಿಷತ್ತಿನ ಪ್ರಶಸ್ತಿ, 'ವಿಷಕನ್ಯೆ' (ಕವನ) ಕಡೆಂಗೋಡ್ಲು ಕಾವ್ಯ ಪ್ರಶಸ್ತಿ, 'ಮುಂಜಾನೆ ಬಂದವನು' (ಕವಿತಾ ಸಂಕಲನ) ಧಾರವಾಡದ ವಿದ್ಯಾವರ್ಧಕ ಸಂಘದ ಪ್ರಶಸ್ತಿ ಗಳಿಸಿವೆ.

ಇತರ ಕೃತಿಗಳು : ಆಖ್ಯಾನ (ಕಿರು ಕಾದಂಬರಿ), ನೀನೇ ನನ್ನ ಆಕಾಶ (ಗಜಲ್ ಸಂಕಲನ), 'ಮಾಘ ಮಾಸದ ದಿನ' (ಕಥಾ ಸಂಕಲನ)

**ಆರ್. ಭರತಾದ್ರಿ**[2] ಬೆಂಗಳೂರಿನ ವಿಶ್ವವಿದ್ಯಾನಿಲಯದಿಂದ ಎಂ. ಎ. ಪದವಿ ಗಳಿಸಿರುವ ಶ್ರೀಯುತರು ಕತೆ, ಕಾದಂಬರಿ ಹಾಗೂ ಜಾನಪದ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ.

ಕೃತಿಗಳು : ಕರಗಿದವರು (ಕಥಾಸಂಕಲನ), ನಾಗ ಜನಪದ ಕತೆಗಳು, ನಾಗಾಲ್ಯಾಂಡಿನ ಜಾನಪದ ಕತೆಗಳು ಮುಂತಾದವು.

**ಚಿ. ಶ್ರೀನಿವಾಸರಾಜು**[3] ಕನ್ನಡದಲ್ಲಿ ಸ್ನಾತಕೋತ್ತರ ಪದವಿಗಳಿಸಿ ಇಂಡಾಲಜಿಯಲ್ಲಿ ಡಿಪ್ಲೊಮಾ ಮಾಡಿರುವ ಇವರು ವೃತ್ತಿಯಲ್ಲಿ ಉಪನ್ಯಾಸಕರು, ನುರಿತ ಸಾಹಿತಿ. ಮೂರು ಏಕಾಂಕಗಳು (ನಾಟಕ) (1984) ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಗಳಿಸಿದೆ.

ಕೃತಿಗಳು : ಜಿ. ಪಿ. ರಾಜರತ್ನಂ ಮತ್ತು ಕರ್ಣಾಟಕ ಸಂಘ. ಐದು ಮೂಕ ನಾಟಕಗಳು, ಹಳಿಯ ಮೇಲಿನ ಸದ್ದು (ನಾಟಕಗಳು) ಬಾವಿ ಕಟ್ಟೆಯ ಬಳಿ (ಅನುವಾದ), ಭಸನಾಲಬಂಧು (ಕವಿತೆಗಳು)

---

1 ಜನನ : 1952. ಹೆಮ್ಮಿಗೆ ಗ್ರಾಮದಲ್ಲಿ. ತಂದೆ : ರಂಗಾಚಾರ್ಯ ; ತಾಯಿ : ಶಾರದಾ ಹೆಮ್ಮಿಗೆ. ಆಕಾಶವಾಣಿಯಲ್ಲಿ ಪ್ರಸಾರಣಾಧಿಕಾರಿಯಾಗಿದ್ದು ಪ್ರಸ್ತುತ ಬೆಂಗಳೂರಿನ ದೂರದರ್ಶನ ಕೇಂದ್ರದಲ್ಲಿ ಕಾರ್ಯಕ್ರಮ ನಿರ್ವಾಹಣಾಧಿಕಾರಿಯಾಗಿದ್ದಾರೆ.

2 ಜನನ : ಸೆಪ್ಟೆಂಬರ್ 1953 ; ಮೈಸೂರು. ತಂದೆ : ರಜತಾದ್ರಿ, ತಾಯಿ : ನಾಗಲಾಂಬಿಕೆ. ಆಕಾಶವಾಣಿಯಲ್ಲಿದ್ದು ಪ್ರಸ್ತುತ ಬೆಂಗಳೂರಿನ ದೂರದರ್ಶನ ಕೇಂದ್ರದಲ್ಲಿ ಕಾರ್ಯಕ್ರಮನಿರ್ವಹಣಾಧಿಕಾರಿಗಳಾಗಿದ್ದಾರೆ.

3 ಜನನ : 1942. ಚಿಕ್ಕಬಳ್ಳಾಪುರದಲ್ಲಿ. ತಂದೆ : ವಿ. ಚಿಕ್ಕರಾಜು. ತಾಯಿ : ಸಾವಿತ್ರಮ್ಮ. ಕ್ರೈಸ್ಟ್ ಕಾಲೇಜಿನಲ್ಲಿ ರೀಡರ್ ಆಗಿದ್ದಾರೆ. ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಸ್ಥಾಪಕರು. ಪ್ರಸ್ತುತ (1989) ಶ್ರೀಯುತರು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳು.

**ಹೇಮಲತಾ ಮಹಿಷಿ**[1] ಎಂ. ಎ., ಎಲ್. ಎಲ್. ಬಿ. ಪದವೀಧರೆಯಾಗಿರುವ ಶ್ರೀಮತಿಯವರು ಒಳ್ಳೆಯ ಲೇಖಕಿ ಹಾಗೂ ಜನಪ್ರಿಯ ನ್ಯಾಯವಾದಿ.

ಕೃತಿಗಳು : ಜಾಯಮಾನ, ತ್ರಿಶಂಕು (ಕಥಾಸಂಕಲನಗಳು), ಅನುಕೂಲಕ್ಕೊಬ್ಬ ಹೆಂಡ್ತಿ (ಲಘು ಬರಹ), ಕಾನೂನು ಮಹಿಳೆ.

**ಸಂಧ್ಯಾಶರ್ಮ**[2] 'ಪವಿತ್ರ' ಕಾವ್ಯನಾಮ, ಕನ್ನಡದಲ್ಲಿ ಸ್ನಾತಕೋತ್ತರ ಪದವೀಧರೆ. ಪತ್ರಿಕಾರಂಗದಲ್ಲೂ ಕೆಲಕಾಲ ದುಡಿದಿದ್ದಾರೆ. ಜನಪ್ರಿಯ ಸಾಹಿತಿ 'ಮಹಿಳೆ ಮತ್ತು ಉದ್ಯೋಗ' ಕೃತಿ ಕನ್ನಡ ಸಾಹಿತ್ಯ ಪರಿಷತ್ತಿನ ಮಹಿಳಾ ಪುಸ್ತಕ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದೆ.

ಕೃತಿಗಳು : ಪರಿವೇಷ, ಕವಣೆಗಿಟ್ಟ ಕಲ್ಲು (ಕಾದಂಬರಿಗಳು) ಕಿರುಗುಟ್ಟುವ ದನಿಗಳು (ಕಥಾಸಂಕಲನ), ಅಹಲ್ಯಾಬಾಯಿ ಹೋಳ್ಕರ್ (ಮಕ್ಕಳ ಸಾಹಿತ್ಯ); ನಮ್ಮ ಲೇಖಕಿಯರು (ಸಂಪಾದಿತ ಕೃತಿ); ತಾಳ ತಪ್ಪಿದ ಮೇಳ (ಕಥಾಸಂಕಲನ)

**ಪದ್ಮಾ ಸೀತಾರಾಮ್**[3] 'ಸಹಸ್ರ ನವ್ಯ ಗಾದೆಗಳು' ಮತ್ತು 'ಅಮೃತಗಂಗಾ' ಎಂಬ ವಿಶಿಷ್ಟ ಕೃತಿಗಳಿಂದ ಇತ್ತೀಚೆಗೆ ಸಾಹಿತ್ಯರಂಗ ಪ್ರವೇಶಿಸಿರುವ ಶ್ರೀಮತಿಯವರು ಒಳ್ಳೆಯ ಉದಯೋನ್ಮುಖ ಲೇಖಕಿ.

**ಪಿ. ಎಸ್. ವಾಯಿಕರ್**[4] ಇವರ ಪೂರ್ಣ ಹೆಸರು ಪಾಂಡುರಂಗಾಚಾರ್ಯ ಶ್ರೀನಿವಾಸಾಚಾರ್ಯ ವಾಯಿಕರ್. ಎಲೆಕ್ಟ್ರಾನಿಕ್ಸ್ ವಿಜ್ಞಾನಿಯಾದರೂ ಸಾಹಿತ್ಯದಲ್ಲಿ ಅಪಾರಆಸಕ್ತಿ ಉಳ್ಳವರು. ಸಂಸ್ಕೃತ ವಿದ್ವಾಂಸರೂ ಹೌದು. 'ಗಾಯತ್ರೀ ವೈಭವ' ವಿಶಿಷ್ಟಅಧ್ಯಯನ ಹಾಗೂ ಪರಿಶ್ರಮದಿಂದ ರಚಿಸಿರುವ ಕೃತಿ.

**ಡಾ|| ಎಂ. ವಿ. ಕೃಷ್ಣಮೂರ್ತಿ**[5] **:** ಭಾರತದಲ್ಲಲ್ಲದೆ ಹೊರದೇಶಗಳಲ್ಲೂ ಪ್ರಖ್ಯಾತರಾಗಿರುವ ಬರಹಗಾರ, ವಾಣಿಜ್ಯೋದ್ಯಮಿ, ವಿಜ್ಞಾನ, ಉದ್ಯಮಗಳ ಸಲಹೆಗಾರರು.

---

1 ಪತಿ : ನಾರಾಯಣ ಮಹಿಷಿ. ಟಾಟಾ ವಿಜ್ಞಾನ ಕೇಂದ್ರದಲ್ಲಿ ವಿಜ್ಞಾನಿಯಾಗಿದ್ದಾರೆ. ಶ್ರೀಮತಿ ಹೇಮಲತಾ ಮಹಿಷಿ ಪ್ರಸ್ತುತ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರು. (1987 ರಿಂದ)

2 ಪತಿ : ಕೃಷ್ಣಶರ್ಮ. ಒಳ್ಳೆಯ ನಾಟಕಕಾರರು. ಪುಟ 253 ನೋಡಿ.

3 ಜನನ : ಆಗಸ್ಟ್ 26, 1944. ಚನ್ನಪಟ್ಟಣದಲ್ಲಿ. ತಂದೆ : ತಿರುನಾರಾಯಣ ಅಯ್ಯಂಗಾರ್, ತಾಯಿ : ರಾಧಮ್ಮ. ಪತಿ : ಎ. ಸೀತಾರಾಮ್.

4 ಜನನ : 1929.

5 ಜನನ : ಜೂನ್ 17, 1916. ತಂದೆ : ವ್ಯಾಸರಾವ್, ತಾಯಿ : ವೆಂಕಟಲಕ್ಷ್ಮಮ್ಮ. ಶ್ರೀಯುತರು 'ಅಥರ್ಸ್ ಗಿಲ್ಡ್–ಇಂಡಿಯಾ'ದ ಅಧ್ಯಕ್ಷರು. 'ಚೇಂಬರ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರಿ', 'ನ್ಯಾಷನಲ್ ಪ್ರೊಡಕ್ಟಿವಿಟಿ ಕೌನ್ಸಿಲ್', 'ಸೈನ್ಸ್ ಟೆಕ್ನಾಲಜಿ' – ಮುಂತಾದ ಸಂಸ್ಥೆಗಳ ಮಾಜಿ ಅಧ್ಯಕ್ಷರು.

ಇವರ ವಿಶಿಷ್ಟ ಕೃತಿಗಳು : ಶರಾವತಿ ವ್ಯಾಲಿಪ್ರಾಜೆಕ್ಟ್, ಇಂಡಿಯಾ ಆನ್ ಟು ನ್ಯೂ ಹೊರೈಜನ್ಸ್, ಧರ್ಮವೀರರ ಜೀವನಚರಿತ್ರೆ; ನೊ ಇವರ್ ಲೀಡರ್ಸ್ ಇನ್ ಇಂಡಸ್ಟ್ರಿ; ನೊ ಇವರ್ ಲೀಡರ್ಸ್ ಮುಂತಾದವುಗಳು. ಆಧುನಿಕಭಾರತ, ಕನ್ನಡ ವಾರ ಪತ್ರಿಕೆ ಮುಂತಾದ ಪತ್ರಿಕೆಗಳ ಸಂಪಾದಕತ್ವ ವಹಿಸಿದ್ದವರು.

**ಎ. ಎಚ್. ಶೆಣೈ**[1] ಕನ್ನಡ ನಾಡಿನಿಂದ ದೂರ ಇದ್ದು ಕನ್ನಡದ ಬಗ್ಗೆ ಹೆಚ್ಚಿನ ಕಳಕಳಿಯನ್ನು ಇಟ್ಟುಕೊಂಡಿರುವ ಸಾಹಿತಿ. ಇವರ ಕಾವ್ಯನಾಮ 'ಪ್ರಿಯತಮ'. 'ಕನ್ನಡ ಸಾಹಿತ್ಯ ಸಂಗಮ' ಇವರು ಶ್ರೀ ರತ್ನಾಕರಶೆಟ್ಟಿ ಮತ್ತು ಇತರ ಮಿತ್ರರ ಜೊತೆ ಸೇರಿ ಪ್ರಾರಂಭಿಸಿರುವ ಸಹಕಾರ ಪ್ರಕಟನಾ ಕೂಟ. ಇವರು ಒಳ್ಳೆಯ ಕಥೆಗಾರರು. ಪ್ರಬಂಧಕಾರರೂ.

ಕೃತಿಗಳು : ಸಮರ್ಪಯಾಮಿ, ಭಾವಭಂಗ, ಒಂಟಿ ವಿಪ್ಲವ (ಕಥಾಸಂಕಲನಗಳು) ಸಂಗಮ (ಸಂಪಾದನೆ) ಟೋಪಿ (ವ್ಯಂಗ ಬರಹ ಸಂಕಲನ)

**ಡಾ|| ನಳಿನಿಮೂರ್ತಿ :** ವೈಜ್ಞಾನಿಕ ಬರವಣಿಗೆಯಲ್ಲಿ ಹೆಸರಾಂತ ಹೆಸರು. ಕಂಪ್ಯೂಟರ್ ಸೈನ್ಸ್‌ನಲ್ಲಿ ಪಿ. ಹೆಚ್. ಡಿ. ಗಳಿಸಿರುವ ಈಕೆ ಹಲವು ಪಾಶ್ಚಾತ್ಯ ದೇಶಗಳಲ್ಲಿ ಪ್ರಾಧ್ಯಾಪಕಿಯಾಗಿದ್ದುಕೊಂಡು ಕನ್ನಡದ ಸೇವೆಯನ್ನು ಅವಿರತವಮಾಡುತ್ತಿದ್ದಾರೆ.

ಕೃತಿಗಳು : ಬಿಸಿಲುಮಳೆ, ಬೀಸಿ ಬಂದ ಬಿರುಗಾಳಿ, ಬಂಗಾರದ ಜಿಂಕೆ, ಗಣಕ ಯಂತ್ರ ಎಂದರೇನು ? ಗಣಕದ ಕತೆ ಮುಂತಾದವುಗಳು.

**ಗಂಡಸಿ ವಿಶ್ವೇಶ್ವರ**[2] **:** ಹೆಸರಾಂತ ಪತ್ರಕರ್ತ ಹಾಗೂ ನುರಿತ ಸಾಹಿತಿ.
ಕೃತಿಗಳು : ದೀಪಿಕಾ, ಭಗವಾನ್ ಯಾಜ್ಞವಲ್ಕ್ಯ, ಸಂಕೀರ್ಣ ಕಥೆಗಳು, ಆಶ್ರಮದ ಹುಡುಗರು, ಶಮಾ ಜತೆ ಒಂದು ಕಥೆ, ಗಾಯತ್ರಿ ಮಂತ್ರ ಶಕ್ತಿ, ಸಪ್ತಪದಿ, ಮುಂತಾದವು.

ವ್ಯಾಸರಾಯರು ತಮ್ಮ ಪ್ರವಚನ ಮುಗಿಸಿ ತೃಪ್ತಿಯ ನಗೆ ಬೀರಿದರು, ಸ್ವಲ್ಪ ಹೊತ್ತಿನ ಮುಂಚೆ ಆಗಮಿಸಿ ಪ್ರವಚನದಲ್ಲಿ ಭಾಗವಹಿಸಿದ್ದ ವಾಸುದೇವರಾಯರು ಮುಗುಳ್ನಕ್ಕು "ನೋಡಿ ವ್ಯಾಸಣ್ಣಾ ಸಾಹಿತ್ಯಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೇನಾ ಶೇಖರಿಸಿ ಇಟ್ಟಿದ್ದೀನಿ. ಪ್ರಶಸ್ತಿ, ಬಹುಮಾನ ಗಳಿಸಿರೋರು, ಸತ್ತಿರೋರ ವಿವರ ಮುಂತಾದವುಗಳಿವೆ, ಓದಿ ಹೇಳಿಬಿಡಿ ಹುಡುಗ್ರಿಗೆ...."

"ಒಳ್ಳೆದು ಕೊಡಿ...." ಕಾಗದವನ್ನು ಇಸಿದುಕೊಂಡು ವ್ಯಾಸಣ್ಣ ಓದಲು ಪ್ರಾರಂಭಿಸಿದರು.

---

1 ಜನನ: ಡಿಸೆಂಬರ್ 18, 1932. ಉಡುಪಿಯಲ್ಲಿ. 'ಮನುಕುಲ' ತ್ರೈಮಾಸಿಕ ಪತ್ರಿಕೆ ಕೆಲಕಾಲ ನಡೆಸಿದ್ದರು.

2 ಜನನ: ನವೆಂಬರ್ 11, 1942. ಅರಸೀಕೆರೆ ತಾಲ್ಲೂಕಿನ ಗಂಡಸಿಯಲ್ಲಿ. ತಂದೆ: ಜಿ. ಅನಂತರಾಮಯ್ಯ; ತಾಯಿ: ನಿಂಗಮ್ಮ. ಪ್ರಸ್ತುತ 'ಮಲ್ಲಿಗೆ' ಮಾಸಪತ್ರಿಕೆಯ ಸಂಪಾದಕರು.

## ಈಚಿನ ಬೆಳವಣಿಗೆಗಳು

ಕರ್ನಾಟಕ ಸಾಹಿತ್ಯ ಅಕಾಡೆಮಿ 1988ರ ಪ್ರಶಸ್ತಿ, ಬಹುಮಾನಗಳನ್ನು ಈ ಕೆಳ ಕಂಡವರಿಗೆ ನೀಡಿದೆ.

**ಶ್ರೀ ಯಶವಂತಚಿತ್ತಾಲ, ಡಾ|| ವೀಣಾಶಾಂತೇಶ್ವರ, ಶ್ರೀ ಚಂದ್ರ ಶೇಖರ ಪಾಟೀಲ, ಡಾ|| ಸಿ. ಪಿ. ಕೃಷ್ಣಕುಮಾರ್, ಪ್ರೊ|| ಅನಂತ ನಾರಾಯಣ** ರವರಿಗೆ ಗೌರವ ಪ್ರಶಸ್ತಿಗಳನ್ನು, **ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿ** ಅವರ 'ಕನ್ನಡ ಚಿತ್ರಕಾವ್ಯ' ಮತ್ತು **ತ. ಸು. ಶಾಮರಾಯರ** 'ಮೂರು ತಲೆಮಾರು' ಕೃತಿಗಳಿಗೆ ವರ್ಷದ ಶ್ರೇಷ್ಠ ಕೃತಿಗಳೆಂದು ಬಹುಮಾನ ನೀಡಿದೆ. 1988ರಲ್ಲಿ ವಿವಿಧ ಸಾಹಿತ್ಯ ವಿಭಾಗಗಳಲ್ಲಿ ಬಹುಮಾನಗಳಿಸಿದವರು : **ಸವಿತಾ ನಾಗಭೂಷಣ** (ನಾ ಬರುತ್ತೇನೆ ಕೇಳು–ಕವನ) ; **ಪ್ರಸನ್ನ** ('ಮಹಿಮಾಪುರ'–ನಾಟಕ) ; **ಎಂ.ಎನ್. ವ್ಯಾಸರಾವ್** (ಮಳೆಯಲ್ಲಿ ನೆನೆದ ಮರಗಳು–ಕಥಾ ಸಂಕಲನ) ; **ಡಾ|| ನು.ನ.ಜ.** (ಮಾಗಿ–ಕಾದಂಬರಿ) ; **ಡಾ|| ವಿ.ಎಸ್. ಸಂಪತ್ಕುಮಾರಾಚಾರ್ಯ** (ಸದ್ಗುರು ತ್ಯಾಗರಾಜರು–ಜೀವನಚರಿತ್ರೆ) ; **ವ್ಯಾಸರಾಯ ಬಲ್ಲಾಳ** (ನಾನೊಬ್ಬ ಭಾರತೀಯ ಪ್ರವಾಸಿ–ಪ್ರವಾಸ ಸಾಹಿತ್ಯ) ; **ಡಾ|| ಡಿ.ಕೆ. ರಾಜೇಂದ್ರ** (ಮಾತಿನ ಮಲ್ಲರು-ಲಲಿತ ಪ್ರಬಂಧ) ; **ವೈ. ಎನ್. ಕೃಷ್ಣಮೂರ್ತಿ** (ಇಷ್ಟು ಲೈಟ್ ಆದರೆ ಹೇಗೆ ಸ್ವಾಮಿ–ವಿನೋದ ಸಾಹಿತ್ಯ) ; **ಎಂ. ಜಿ. ಗೋವಿಂದರಾಜು** (ಆಕಾಶ ಅಂಚು–ಮಕ್ಕಳ ಸಾಹಿತ್ಯ) ; **ರಾಜೇಂದ್ರಚೆನ್ನಿ** (ಸಾಹಿತ್ಯವಿಮರ್ಶೆಅಧ್ಯಯನ–ಸಂಶೋಧನೆ) ; **ಡಾ|| ಚೆನ್ನಕ್ಕ ಎಲಿಗಾರ** (ಕರ್ನಾಟಕದ ರಾಣಿಯರು–ಸಂಶೋಧನೆ) ; **ಎಂ. ಶಿವ ಕುಮಾರ್** (ಯಂತ್ರಕಥೆ–ವಿಜ್ಞಾನ ಸಾಹಿತ್ಯ) ; **ಅಬ್ದುಲ್ ರೆಹಮಾನ್ ಪಾಷಾ** (ಸಿನಿಮಾ ಮತ್ತು ಪ್ರೇಕ್ಷಕ–ಸಮಾಜವಿಜ್ಞಾನ) ; **ಕೆ.ವಿ. ಸುಬ್ಬಣ್ಣ** (ಸೆಜುವಾನ್. ನಗರದಸಾಧ್ವಿ–ಅನುವಾದ) ; **ಡಾ|| ಸಿ.ಪಿ. ಕೃಷ್ಣಕುಮಾರ್** (ಪ್ರೇಮತತ್ವ–ಅನುವಾದ)

ಮೇಲೆ ಹೇಳಿದ ಡಾ|| ವೀಣಾಶಾಂತೇಶ್ವರ ಹಾಗೂ ಪ್ರೊ|| ಅನಂತನಾರಾಯಣ ರವರ ಬಗ್ಗೆ ಹೆಚ್ಚು ಮಾಹಿತಿ :

**ಡಾ|| ವೀಣಾಶಾಂತೇಶ್ವರ :** ಇಂಗ್ಲೀಷ್ ಬೋಧಿಸುವ ಪ್ರಾಧ್ಯಾಪಕಿ ಯಾದರೂ ಕನ್ನಡದತ್ತ ವಿಶೇಷ ಒಲುವು. ಕಥಾಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿ. ಹಲವು ಕಾದಂಬರಿ ರಚಿಸಿದ್ದಾರೆ. ಸಂಶೋಧನೆ, ಸಂಪಾದನೆ ಕ್ಷೇತ್ರದಲ್ಲೂ ಉತ್ತಮ ಕೃತಿ ಗಳನ್ನು ನೀಡಿದ್ದಾರೆ. ಅನೇಕ ಕೃತಿಗಳನ್ನು ಬೇರೆ ಭಾಷೆಗಳಿಗೆ ಅನುವಾದ ಸಹ ಮಾಡಿದ್ದಾರೆ. ಇವರಿಗೆ ಮಾಹಿತಿ ಇರುವ ಇತರ ಭಾಷೆಗಳು : ಮರಾಠಿ, ಹಿಂದಿ, ಗುಜರಾತಿ, ತಮಿಳು, ತೆಲುಗು ಹಾಗೂ ಮಲೆಯಾಳಂ.

ಇವರ 'ಕವಲು' ಕಥಾಸಂಕಲನಕ್ಕೆ 1967ರ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ. 'ಗಂಡಸರು' ಕಿರು ಕಾದಂಬರಿಗೆ ಪ್ರಜಾವಾಣಿಯ ದೀಪಾವಳಿ ಕಾದಂಬರಿ ಸ್ಪರ್ಧೆಯ ಬಹುಮಾನ ಬಂದಿದೆ. 1988ರಲ್ಲಿ ರಾಜ್ಯ ಅಕಾಡೆಮಿ ಇವರಿಗೆ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಿದೆ, 'ಅತಿಥಿ' ಕಿರುಗತೆ ಚಲನಚಿತ್ರವಾಗಿದೆ.

ಇತರ ಕೃತಿಗಳು : ಮುಳ್ಳುಗಳು, ಕೊನೆಯದಾರಿ, ಹಸಿವು, ಶೋಷಣೆ, ಬಂಡಾಯ ಅದೃಷ್ಟ.

**ಪ್ರೊ|| ಎಸ್. ಅನಂತನಾರಾಯಣ**[1] : ಬಹುಮುಖ ಪ್ರತಿಭೆಯ ಸಾಹಿತಿ. ಇವರನ್ನು ರಾಜ್ಯ ಸಾಹಿತ್ಯ ಅಕಾಡೆಮಿ ವಿಶೇಷ ಪ್ರಶಸ್ತಿ ನೀಡಿ (1988) ಗೌರವಿಸಿದೆ. ಇವರು ಕಥೆ, ಕಾದಂಬರಿ, ಪ್ರಬಂಧ, ನಾಟಕ, ಮಕ್ಕಳ ಸಾಹಿತ್ಯ ರಚಿಸಿರುವುದಲ್ಲದೆ ಕವನ ಸಂಗ್ರಹ ಸಹ ಹೊರತಂದಿದ್ದಾರೆ. ಜೀವನಚರಿತ್ರೆ ಬರೆದಿದ್ದಾರೆ. ಇತರ ಭಾಷೆಗಳಿಂದ ಅನೇಕ ಕೃತಿಗಳನ್ನು ಅನುವಾದ ಮಾಡಿದ್ದಾರೆ.

ಕೃತಿಗಳು : ಕಾದಂಬರಿಗಳು 6 ; ಕಥಾಸಂಕಲನ 3 ; ಕವನಸಂಗ್ರಹ 2 ; ವಿಮರ್ಶಾಗ್ರಂಥಗಳು 5 ; ಜೀವನಚರಿತ್ರೆ 3 ; ಪ್ರಬಂಧ 2 ; ನಾಟಕಗಳು 7 ; ಮಕ್ಕಳ ಸಾಹಿತ್ಯ 8 ; ಇತಿಹಾಸ 3 ; ಅನುವಾದ ಕೃತಿಗಳು 9 ; ಇತರೆ 5. ಇಂಗ್ಲಿಷ್‌ನಲ್ಲೂ ಕೃತಿಗಳನ್ನು ರಚಿಸಿದ್ದಾರೆ.

ಕೇಂದ್ರಸಾಹಿತ್ಯ ಅಕಾಡೆಮಿ ಪುರಸ್ಕಾರಗಳನ್ನು **ಪೂರ್ಣಚಂದ್ರ ತೇಜಸ್ವಿ**ಯವರು 1987ರಲ್ಲೂ ('ಚಿದಂಬರ ರಹಸ್ಯ' ಕಾದಂಬರಿ) **ಪ್ರೊ|| ಶಂಕರ ಮೊಕಾಶಿ** ('ಅವಧೇಶ್ವರಿ' ಕಾದಂಬರಿ–1988ರಲ್ಲಿ) ಗಳಿಸಿದ್ದಾರೆ.

ಅಖಿಲ ಭಾರತ ಬಾಲಶಿಕ್ಷಾ ಪರಿಷತ್ತಿನ ಗೌರವಪ್ರಶಸ್ತಿಯನ್ನು **ರಸಿಕಪುತ್ತಿಗೆ**ಯವರು (1987) ; ವರ್ಧಮಾನ ಸಾಹಿತ್ಯ ಬಹುಮಾನಗಳನ್ನು (1988) ಕ್ರಮವಾಗಿ **ಡಿ.ಆರ್. ನಾಗರಾಜ** (ಅಮೃತ ಮತ್ತು ಗರುಡ–ವಿಮರ್ಶಾ ಗ್ರಂಥ), ಮತ್ತು **ಕುಂ.. ವೀರಭದ್ರಪ್ಪ** (ಬೇಲಿ ಮತ್ತು ಹೊಲ–ಕಾದಂಬರಿ) ಅವರು ; ರಾಜಾಜಿ ಪ್ರಶಸ್ತಿಯನ್ನು (1986) **ಡಾ|| ವಿ.ಕೃ ಗೋಕಾಕರು** (ಭಾರತ ಸಿಂಧುರಶ್ಮಿ-ಮಹಾಕಾವ್ಯ) ಗ್ರಂಥಲೋಕದ ವರ್ಷದ ಲೇಖಕ ಪ್ರಶಸ್ತಿಗಳನ್ನು ಕ್ರಮವಾಗಿ **ಡಾ|| ಎಸ್. ಎಲ್. ಭೈರಪ್ಪ** (ಸಾಕ್ಷಿ (ಕಾದಂಬರಿ)–1986) ; ಮತ್ತು **ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು** (ಕನ್ನಡ ಚಿತ್ರಕಾವ್ಯ–1987) ; ಶಾಶ್ವತಿ ಪುರಸ್ಕಾರವನ್ನು **ಡಾ|| ಅನುಪಮ ನಿರಂಜನರು** (ನೆನಪು ಸಿಹಿ-ಕಹಿ) ಗಳಿಸಿದ್ದಾರೆ. ಐ.ಬಿ.ಎಚ್ ಸಂಸ್ಥೆಯ ಪ್ರಶಸ್ತಿಗಳು **ಡಾ|| ಟಿ. ವಿ. ವೆಂಕಟಾಚಲಶಾಸ್ತ್ರಿ**ಗಳಿಗೆ 1987ರಲ್ಲೂ, **ಡಾ|| ವಿ. ಕೃ. ಗೋಕಾಕ್** ಅವರಿಗೆ 1988ರಲ್ಲೂ, ಲಭಿಸಿವೆ.

---

1 ಜನನ : 1925. ಪುಟ 251, 322, 385 ನೋಡಿ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ.

**ಪ್ರೊ|| ಕುಶಾಲಪ್ಪಗೌಡರಿಗೆ** ಈ ವರ್ಷದ (1988) ಸೋವಿಯತ್‌ಲ್ಯಾಂಡ್ ಪ್ರಶಸ್ತಿ ಲಭಿಸಿದೆ.

**ಡಾ|| ಚೆನ್ನಕ್ಕ ಎಲಿಗಾರರು** (ಪ್ರಾಚೀನ ಕರ್ನಾಟಕದ ರಾಣಿಯರು) **ಪ್ರೊ** ಸ.ಸ. ಮಳವಾಡ ಸಾಹಿತ್ಯ ಪ್ರಶಸ್ತಿ ಗಳಿಸಿದ್ದಾರೆ (1987).

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು 1988ರ ಪ್ರಶಸ್ತಿ ಗಳನ್ನು **ಡಾ|| ದೇ.ಜ.ಗೌ** ಹಾಗೂ **ಡಾ|| ಎಂ.ಎಸ್. ಸುಂಕಾಪುರ** ಅವರುಗಳಿಗೆ ನೀಡಿದೆ.

**ಡಾ|| ಕುವೆಂಪು** ರವರಿಗೆ ಕರ್ನಾಟಕ ರಾಜ್ಯದ ಪ್ರಥಮ **'ಪಂಪ'** ಪ್ರಶಸ್ತಿ **ಡಾ|| ವಿ. ಕೃ. ಗೋಕಾಕ್** ರವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ **'ಫೆಲೊ ಶಿಪ್'** ಪ್ರಶಸ್ತಿಗಳು ದೊರೆತಿವೆ (1989). ಗುಲ್ಬರ್ಗಾ ವಿಶ್ವವಿದ್ಯಾನಿಲಯ **ಸಿಂಪಿ ಲಿಂಗಣ್ಣ**[1] ಅವರಿಗೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ (ಫೆಬ್ರುವರಿ 26, 1989) ಜಾನಪದ–ಯಕ್ಷಗಾನ ಅಕಾಡೆಮಿ ಅಧ್ಯಕ್ಷರಾದ **ಶ್ರೀ ಎಸ್. ಕೆ. ಕರೀಂಖಾನ್**‌ರವರಿಗೆ ಕಲಬುರ್ಗಿ ವಿಶ್ವವಿದ್ಯಾನಿಲಯ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿದೆ (1988).

**ಶ್ರೀಮತಿ ಜಗ್ಗು ಪ್ರಿಯದರ್ಶಿನಿ**[2] ತುಮಕೂರು, ಅವರ 'ಮಕ್ಕಳಮಧು' ಮಕ್ಕಳ ಪುಸ್ತಕಕ್ಕೆ ಕಾವ್ಯಾನಂದ ಪ್ರಶಸ್ತಿ ಲಭಿಸಿದೆ.

**ಡಾ|| ಶಾಂತಿನಾಥ ದೇಸಾಯಿ**[3] ಖ್ಯಾತಸಾಹಿತಿ, ವಿಮರ್ಶಕರು, ಇವರನ್ನು ಶಿವಮೊಗ್ಗ ಜಿಲ್ಲೆಯಲ್ಲಿರುವ ಕುವೆಂಪು ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಗಳ ನ್ನಾಗಿ ನೇಮಿಸಲಾಗಿದೆ.

ಉತ್ತರ ಪ್ರದೇಶದ ಸಂಸ್ಕೃತ ಅಕಾಡೆಮಿಯು **ಡಾ|| ಕೆ. ಕೃಷ್ಣಮೂರ್ತಿ**[4] ಅವರಿಗೆ ಅವರು ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಲೋಕಕ್ಕೆ ಇತ್ತಿರುವ ಅಮೋಘ ಸೇವೆಗಾಗಿ ವಿಶೇಷ ಪುರಸ್ಕಾರ ನೀಡಿ ಗೌರವಿಸಿದೆ (ಜೂನ್ 88)

---

1 ಪುಟ 395 ನೋಡಿ.

2 ಇಂದರಕಾಮಧೇನು (ಶಿಶುಸಾಹಿತ್ಯ); ಉಪಾಧ್ಯಾಯಿನಿಯಾಗಿ ರಾಜ್ಯ ಪ್ರಶಸ್ತಿ ಗಳಿಸಿದ್ದಾರೆ. ಲಂಬಾಣಿ ಲಕ್ಷ್ಮಿ–ಕಾದಂಬರಿ ಚಲನಚಿತ್ರವಾಗಿದೆ.

3 ಜನನ: 1929, ಉತ್ತರ ಕನ್ನಡ ಜಿಲ್ಲೆಯ ಹವಗಿಯಲ್ಲಿ. ಕೊಲ್ಲಾಪುರದ ಶಿವಾಜಿ ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿ ದ್ದರು. ಭಾರತೀಯ ಜ್ಞಾನಪೀಠ ಸಲಹಾ ಸಮಿತಿಯ ಸದಸ್ಯರಾಗಿದ್ದಾರೆ.

ಇವರ ಕೃತಿಗಳು: ಮಂಜುಗಡ್ಡೆ, ಕ್ಷಿತಿಜ, ದಂಡೆ, ಮುಕ್ತಿ, ಮುಂತಾದವು. ಇಂಗ್ಲೀಷಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ. ಪುಟ 251 ನೋಡಿ.

4 412 ನೋಡಿ.

ಈ ಕೆಳಕಂಡ ಸಾಹಿತಿಗಳ ಮರಣವಾರ್ತೆ ತಿಳಿಸಲು ವಿಷಾದವೆನಿಸುತ್ತದೆ.

ಮೈ. ಶೇ. ಅನಂತಪದ್ಮನಾಭರಾವ್[1] ನವಂಬರ್ 29, 1987.

ತವಗ ಭೀಮಸೇನರಾವ್[2] ಜನವರಿ 2, 1988.

ಎಚ್. ದೇವೀರಪ್ಪ[3] ಜನವರಿ 3, 1988.

ಖ್ಯಾತ ಲೇಖಕಿ ವಾಣಿ[4] (ಬಿ. ಎನ್. ಸುಬ್ಬಮ್ಮ) ಫೆಬ್ರುವರಿ 14, 1988.

ಟಿ. ಕೆ. ರಾಮರಾವ್[5] ನವೆಂಬರ್ 11, 1988.

ಡಾ|| ವಸಂತಕವಲಿ[6] ನವೆಂಬರ್ 17. 1988.

ವೆಂ. ಮು. ಜೋಶಿ[7] ನವೆಂಬರ್ 27, 1988.

ಬಿ. ಎ. ಅರಸುಕುಮಾರ್[8] ಡಿಸೆಂಬರ್ 7, 1988.

ಶ್ರೀಕೃಷ್ಣ ಆಲನಹಳ್ಳಿ[9]ಯವರು ಜನವರಿ 4, 1989.

ಹುಣಸೂರು ಕೃಷ್ಣಮೂರ್ತಿ[10] ಫೆಬ್ರುವರಿ 13, 1989.

—o—

1 ಹಿರಿಯ ಸಾಹಿತಿ, ಗಮಕಿ. 1983ರಲ್ಲಿ ನಡೆದ ಪ್ರಥಮ ಗಮಕ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಪುಟ 53 ನೋಡಿ.

2 ಹೈದರಾಬಾದ್ ಕರ್ನಾಟಕ ಪ್ರಾಂತದ ಕನ್ನಡ ಹೋರಾಟಗಾರರು ಹಾಗೂ ಸಾಹಿತಿಗಳಾಗಿದ್ದರು. 58ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರಾಗಿದ್ದರು.

3 ಹಿರಿಯ ಸಾಹಿತಿ, ಸಂಶೋಧಕ. ಶರಣ ಚರಿತ ಮಾನಸ, ಜೆಳುವಲ ಮಡಿಲಲ್ಲಿ (ಚಲನಚಿತ್ರವಾಗಿದೆ), ಹರಿಹರನ ರಗಳೆಗಳು, ಪಟ್ಸ್ಥಳ ವಲ್ಲಭ, ಮಹಾನುಭಾವಿ ಶ್ರೀ ಚೆನ್ನ-ಮಲ್ಲಿಕಾರ್ಜುನರು, ಅಜಿತ ತೀರ್ಥಂಕರ ಪುರಾಣ ತಿಲಕಂ, ಪ್ರಮುಖ ಕೃತಿಗಳು. ಬಸವಣ್ಣನವರ ವಚನಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ. ತುಂಗಭದ್ರಾ (ನಾಟಕ), ಹಳ್ಳಿಯ ಬದುಕು (ಕಥಾ ಸಂಕಲನ).

4 ಪುಟ 216 ನೋಡಿ.

5 ಪುಟ 227 ನೋಡಿ.

6 ಪುಟ 276 ನೋಡಿ.

7 ಪುಟ 399 ನೋಡಿ. 'ಅಭಯ' ಅವರ ಕೊನೆಯ ಕಾದಂಬರಿ. 'ಸುಧಾ'ದಲ್ಲಿ ಧಾರಾವಾಹಿಯಾಗಿ ಬಂದಿತ್ತು.

8 ಪುಟ 277 ನೋಡಿ.

9 ಪುಟ 244 ನೋಡಿ.

10 ಪುಟ 272 ನೋಡಿ.

## ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 7 | 8 | ವಧುರ್ಯಂ | ಮಾಧುರ್ಯಂ |
| 9 | 5 | ಗಾಡಿನೊಳ್ | ಗಂಡಿನೊಳ್ : |
| 9 | 19 | ಳ್ಳಾಗರವಾದ | ಳ್ಗಾಗರಮಾದ |
| 9 | 19 | ಮಾನಸರೆ | ಮಾನಿಸರೆ |
| 11 | 1 | ಕ್ರಿ. ಶ. 949 | ಕ್ರಿ. ಶ. 993 |
| 13 | 14,15 | ನೆನೆದಪೆ | ನೆನೆದಪೆ |
| 13 | 23 | ಚಿಂಪೂ | ಚಂಪೂ |
| 16 | 2 | ಕಲಬರು | ಕೆಲಬರು |
| 16 | 4 | ಕಲರಥವು | ಕೆಲರಥವು |
| 22 | 8 | ಸೂತ್ರದಾರ | ಸೂತ್ರಧಾರ |
| 22 | 14 | ಅವಲಂಭಿತ | ಅವಲಂಬಿತ |
| 24 | 1 | ವಾಲ್ಮೀಕ | ವಲ್ಮೀಕ |
| 24 | 23 | ಧಗ್ಧ | ದಗ್ಧ |
| 34 | 23 | ಆಪ್ಪಿತು | ಅಪ್ಪಿತು |
| 35 | 8 | ಕಳುಸಿಹಿದ | ಕಳುಹಿಸಿದ |
| 37 | 22 | ಪ್ರಧಾನ | ಪ್ರದಾನ |
| 37 | ಅಡಿಟಿಪ್ಪಣಿ | 29 ಡಿಸೆಂಬರ್ 1902 | 29 ಡಿಸೆಂಬರ್ 1904 |
| 42 | 2 | ಚಿರಿತ್ರೆ | ಚರಿತ್ರೆ |
| 46 | 14 | ಬೇಧ | ಭೇದ |
| 61 | 14 | ಸಜ್ಜೆ ವುಳ್ಳ | ಸಜ್ಜೆ ವಳ್ಳ |
| 74 | 10 | ವೊನಲಾಗಿ | ವೊಲನಾಗಿ |
| 82 | ಅಡಿಟಿಪ್ಪಣಿ | ಗುಹ್ಯೇಶ್ವರ | ಗುಹೇಶ್ವರ |
| 87 | 12 | ಯುಜ್ಞವಲ್ಕ್ಯ | ಯಾಜ್ಞವಲ್ಕ್ಯ |
| 108 | 22 | ಜಿ. ಎ. ಕವಲಿ | ಚೆ. ಎ. ಕವಲಿ |
| 111 | 19 | ಸೈಗೊಟ ಶಿವಮಾರ | ಸೈಗೊಟ್ಟ ಶಿವಮಾರ |
| 125 | 11 | ಬಂದು | ಒಂದು |
| 129 | 23 | ಸಿಂಚಿಲೈನ್ | ಸಿಂಬೆಲೈನ್ |
| 140 | 5 | ಟಿ. ಎಸ್. ವೆಂಕಟಣ್ಣಯ್ಯ | ಟಿ. ಎಸ್. ವೆಂಕಣ್ಣಯ್ಯ |

| ಪುಟ | ಪಂಕ್ತಿ | ತಪ್ಪು | ಒಪ್ಪು |
| --- | --- | --- | --- |
| 140 | 18 | ಎಂ. ಆರ್. ಕೃಷ್ಣಶಾಸ್ತ್ರಿ | ಎ. ಆರ್. ಕೃಷ್ಣಶಾಸ್ತ್ರಿ |
| 149 | 16 | ಚಿ. ಪುಟ್ಟಸ್ವಾಮಯ್ಯ | ಬಿ. ಪುಟ್ಟಸ್ವಾಮಯ್ಯ |
| 150 | 15 | ವೀ. ಸಿ. | ವಿ. ಸಿ. |
| 155 | 26 | ಕೊಳ್ಳೋಣ | ಕೊಳ್ಳೋಣ |
| 156 | 3 | ಬಿಂ. ಎಂ. ಶ್ರೀ | ಬಿ. ಎಂ. ಶ್ರೀ |
| 170 | 1 | ಎಂ. ಕೆ. ರಾಮಾನುಜನ್ | ಎ. ಕೆ. ರಾಮಾನುಜನ್ |
| 190 | 14 | ವೆಕಂಟೇಶಮೂರ್ತಿ | ವೆಂಕಟೇಶಮೂರ್ತಿ |
| 198 | 13 | ವೆಂಕಟೀಶ | ವೆಂಕಟೇಶ |
| 199 | 26 | ವೃಚ್ಛಕಟಿಕ | ಮೃಚ್ಛಕಟಿಕ |
| 201 | 28 | ಸೊಡಗು | ಸೊಗಡು |
| 202 | 17 | ನೆಡೆಸುತ್ತಿರುವ | ನಡೆಸುತ್ತಿದ್ದ |
| 227 | ಅಡಿಟಿಪ್ಪಣಿ | ಅಕ್ಟೋಬರ್ 7. 1931 | ಅಕ್ಟೋಬರ್ 7, 1929 |
| 228 | 13 | ಆಕಂದ್ರನ | ಆಕ್ರಂದನ |
| 233 | 21 | ಮಹಾಸ್ವೇತೆ | ಮಹಾಶ್ವೇತೆ |
| 241 | 8 | ಕೆಥ್ರಾಸಿಸ್ | ಕೆಥಾರ್ಸಿಸ್ |
| 253 | 10 | ಸುನೀತಿ ಕೃಷ್ಣಮೂರ್ತಿ | ಸುನೀತಿ ಕೃಷ್ಣಸ್ವಾಮಿ |
| 254 | 2 | ನಿಡಮಾನ್ವಿ | ನೀರಮಾನ್ವಿ |
| 256 | 4 | ಕ್ರಿಸ್ರ | ಕ್ರಿಸ್ತ |
| 256 | 7 | ಸಿಂಗರಾಯ | ಸಿಂಗರಾರ್ಯ |
| 284 | 6 | ಕೆ. ಸ್. ಸುಬ್ಬನರಸಿಂಹ | ಕೆ. ಎಸ್. ಸುಬ್ಬನರಸಿಂಹ |
| 284 | 7 | ಪಿಕ್‌ವಾಕೆಟ್ | ಪಿಕ್‌ಪಾಕೆಟ್ |
| 284 | 28 | ವುಣ್ಯಪ್ರಭಾ | ಪುಣ್ಯಪ್ರಭಾ |
| 287 | 10 | ಉಲ್ಲೇಖನೀಯರು | ಉಲ್ಲೇಖನೀಯರು |
| 289 | 20 | ಆರ್. ರಾಮಾಶಾಸ್ತ್ರಿ | ಆರ್. ಶಾಮಾಶಾಸ್ತ್ರಿ |
| 298 | ಅಡಿಟಿಪ್ಪಣಿ | ಲಕ್ಷ್ಮಿದೇಮ್ಮ | ಲಕ್ಷ್ಮಿದೇವಮ್ಮ |
| 299 | 14 | ಬಾಳು | ಬಾಳುರಿ |
| 303 | 18 | ಚಳ್ಕರೆ | ಚಕ್ಕರೆ |
| 312 | 24 | ಮುದ್ರೇಣದ | ಮುದ್ದಣನ |
| 316 | 3 | ಎ. ವಿ. ನರಸಿಂಹಮೂರ್ತಿ | ಎಂ. ವಿ. ನರಸಿಂಹಮೂರ್ತಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 325 | 7 | ಲಕ್ಷ್ಮಮ್ಮ | ಲಕ್ಷಮ್ಮ |
| 334 | ಅಡಿಟಿಪ್ಪಣಿ ಪಂಕ್ತಿ–2 | ಬಾಂಬೇಕ್ರಾನಿಕಲ್ | ಬಾಂಬೇ ಕ್ರಾನಿಕಲ್ |
| 344 | 7 | 'ಪ್ರಜಾವಾಣಿ'ಯ | 'ಶೂದ್ರ'ದ |
| 383 | 3 | ಗುಂಜಾಲ್ | ಗುಂಜಾಳ್ |
| 383 | 14 | ಕಳವಳಿ | ಕಳವಳ |
| 391 | ಅಡಿಟಿಪ್ಪಣಿ ಪಂಕ್ತಿ–3 | ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ | ಸರ್ಕಾರಿ ಕಾಲೇಜಿನಲ್ಲಿ |
| 441 (ಅಕಬರ ಅಲಿ ಡಾ॥) | 3 | ಪುಟ 84 | ಪುಟ 175 |
| 441 (ಅಕ್ಕಮಹಾದೇವಿ) | 4 | 175 | 84 |
| 449 | 16 | ....ಹಠಾರಿ | ....ಪಕಾರಿ |
| 452 | 29 | ಫ್ಲೀಟ್ ಜೆ. ಎಫ್. | ಫ್ಲೀಟ್ ಜೆ. ಎಫ್. |
| 463 | 16 | ಸುನೀತಿ ಕೃಷ್ಣಮೂರ್ತಿ | ಸುನೀತಿ ಕೃಷ್ಣಸ್ವಾಮಿ |



ಕನ್ನಡ ಸಾಹಿತಿ ದರ್ಶನ

## ಅಭಿಪ್ರಾಯಗಳು

'ಅನೇಕರು ಸೇರಿ ಹಲವಾರು ವರ್ಷಗಳ ದುಡಿಮೆಯಿಂದ ಸಾಧಿಸಬೇಕಾದ ಕಾರ್ಯ ಒಬ್ಬವ್ಯಕ್ತಿಯ ಶ್ರದ್ಧೆ, ನಿಷ್ಠೆ, ಪರಿಶ್ರಮಗಳಿಂದ ರೂಪುಗೊಂಡಿರುವುದು ಅತ್ಯಂತ ಶ್ಲಾಘನೀಯ'

—ತ.ಸು. ಶಾಮರಾಯ

'ಕನ್ನಡ ಸಾಹಿತಿ ದರ್ಶನ' ವಿಶಿಷ್ಟವಾಗಿದೆ. ಅಪೂರ್ವವಾದುದಾಗಿದೆ. ಮಕ್ಕಳಿರುವ ಮನೆಗೆ ಇದೊಂದು [illegible] ದೀಪವಾಗುತ್ತದೆ. ಈ ಕಾರಣಕ್ಕಾಗಿ ನಾನು ಗ್ರಂಥ ಕರ್ತರನ್ನು ಅಭಿನಂದಿಸುತ್ತೇನೆ.

—ಡಾ|| ದೇ.ಜ.ಗೌ.

'ಇದುವರೆಪಿಗಿನ ಕನ್ನಡ ಮಕ್ಕಳ ಸಾಹಿತ್ಯದಲ್ಲಿ ನಾನು ಮೆಚ್ಚಿರುವ ಈ ಮೌಲಿಕ ಕೃತಿಗೆ ಮನ್ನಣೆಯ ಸ್ಥಾನ ಮೀಸಲು, ಮಕ್ಕಳಿಗೆ ಮನೋರಂಜನೆಯೊಡನೆ ಕನ್ನಡ ಸಾಹಿತ್ಯದ ಪರಿಜ್ಞಾನ ಲೀಲಾಜಾಲವಾಗಿ ದೊರೆಯುವಂತೆ ಮಾಡಿರುವ ಗೆಳೆಯ ಶ್ರೀ ಶ್ರೀನಿವಾಸರಾಯರನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ'

—ಡಾ|| ಸಿದ್ಧಯ್ಯ ಪುರಾಣಿಕ

'ಪ್ರಾಥಮಿಕ ಶಾಲಾಮಕ್ಕಳಿಗೆ ಅವರ ಪಠ್ಯಕ್ರಮದ ಜೊತೆಗೆ ಉಪಾಧ್ಯಾಯರು ಈ ಗ್ರಂಥದಲ್ಲಿ ಪ್ರಸ್ತಾಪವಾಗಿರುವ ಕನ್ನಡ ಸಾಹಿತ್ಯ ಚರಿತ್ರೆಯನ್ನು ವ್ಯಾಸರಾಯರು ದಿನೇಶ ದಿನಕರನಿಗೆ ಹೇಳಿದಂತೆ ಮಕ್ಕಳಭಾಷೆಯಲ್ಲಿ ಸಣ್ಣ ಕಥೆಗಳಾಗಿ ತರಗತಿಯಲ್ಲಿ ಹೇಳಿದಲ್ಲಿ ನಮ್ಮ ಮಕ್ಕಳಿಗೆ ಕನ್ನಡ ಸಾಹಿತ್ಯಕಾರರ ಪರಿಚಯದ ಜೊತೆಗೆ ಭಾರತದ ಸಂಸ್ಕೃತಿಯ ನಾನಾ ಪ್ರಕಾರಗಳ ಪರಿಚಯವೂ ಆಗುತ್ತದೆ. ಈ ದೃಷ್ಟಿಯಿಂದ ಮಾನ್ಯ ಶ್ರೀನಿವಾಸರಾಯರು ಸಾಹಿತ್ಯಕ್ಕೆ ಮತ್ತು ಸಂಸ್ಕೃತಿಗೆ ಮಾಡಿರುವ ಸೇವೆ ವಿಶಿಷ್ಟವಾದುದು ಮತ್ತು ಸ್ತುತ್ಯವಾದುದು'

—ಎಂ. ಚಂದ್ರಶೇಖರ್
ಶಿಕ್ಷಣ ಸಚಿವರು, ಕರ್ನಾಟಕ ಸರಕಾರ